# National Referral Centre for Lead Poisoning (NRCLPI)

St. John's Medical College, Dept. of Biochemistry, Bangalore- 560034.
Ph. : 080-22065058. Telefax : 080-25502341

***In order to create awareness about LEAD poisoning among Students and General Public regularly conducts Nationwide Programmes.***

The National Referral Centre for Lead Poisoning Prevention in India (NRCLPI) established by The George Foundation with St.John's National Institute of Health Sciences, Bangalore has now become the nodal referral centre in India. Several sub centres are being setup in Andhra pradesh, Kerala and other states. NRCLPI conducts blood lead tests, awareness creation efforts and communication with lead-based industries to reduce lead contamination.

Lead ranks as one of the most serious environmental poisons amongst the heavy metals on earth. It poses serious health hazards to humans, especially to young children.1 The sources of exposure to lead include gasoline, leaded pipes, lead solders in water supply systems, and lead based paint, cosmetics, medicines, etc. 2,3,4 Studies conducted in various countries have uncovered the fact that lead poisoning and iron deficiency anemia are problems of major proportions in large cities throughout the world and more so in developing countries where environmental regulations are not effectively enforced, and where public awareness is extremely low.

In order to reduce lead poisoning in India, efforts have to be made to create public awareness through community involvement, comprehensive programmes and coordination at all levels. Raising public awareness about the dangers of lead poisoning from occupational and environmental sources is a crying need in Indian cities today.

Since the problem of lead poisoning in India still persists, continuous efforts are needed to deal with the problem. A developing country like India can tackle this preventable environmental health hazard only through proper public awareness, communication and education. Hence, following the international conference, The National Referral Center for Lead Poisoning in India (NRCLPI) was established as a joint project of St. John's National Academy of Health Sciences (SJNAHS) and The George Foundation, both from Bangalore. NRCLPI is a non-profit undertaking that carries out the following activities.



**Dr. Thuppil Venkatesh - Executive Director**

Dr. Thuppil Venkatesh is the Executive Director of the National Referral Centre for Lead Poisoning in India. In this capacity, he directed the "Project Lead Free," with support from the George Foundation to provide the first comprehensive characterization of the extent of lead poisoning in India.
e-mail : venkatesh.thuppil@gmail.com

***working towards leadsafe society in India***

For more details visit : elinksonlead.blogspot.com Contact : leadinf@gmail.com

# ನವಕರ್ನಾಟಕ ೫೦ರ ಸಂಭ್ರಮದಲ್ಲಿ
## ಚಿನ್ನದ ಹಬ್ಬಕ್ಕೆ ಚಂದದ ಕೊಡುಗೆ.

ಸಂಪಾದಕರು :
ಪ್ರೊ|| ಎಂ. ಎಚ್. ಕೃಷ್ಣಯ್ಯ
ಡಾ|| ವಿಜಯಾ
ಸಿ. ಆರ್. ಕೃಷ್ಣರಾವ್




1200 ಪುಟಗಳು.
ಆಕಾರ : ಡಿಮ್ಮೈ ¼
22 X 28 ಸೆಂ.ಮೀ).
ಎರಡು ಸಂಪುಟಗಳು,
ಸಂದರ್ಭಸೂಚಿ ಮತ್ತು
ಸಿಡಿ, ರಟ್ಟಿನ ಪೆಟ್ಟಿಗೆಯಲ್ಲಿ.
ಆರ್ಟ್ ಕಾಗದದ ಮೇಲೆ
ಬಹುವರ್ಣದಲ್ಲಿ
ಮುದ್ರಣವಾಗಿರುವ
ಮಹತ್ವದ ಕೃತಿ.

ಕರ್ನಾಟಕ ಕಲಾ ಪರಂಪರೆಯನ್ನು
ಅನಾವರಣಗೊಳಿಸುವ ಮಹಾಪ್ರಯತ್ನ.
4300 ಅಪೂರ್ವ ವರ್ಣ ಹಾಗೂ
ಕಪ್ಪುಬಿಳುಪು ಚಿತ್ರಗಳು. 9 ಅಧ್ಯಾಯಗಳು,
55 ಪರಿಣತರ 50 ಲೇಖನಗಳ ಬೃಹತ್ ಗ್ರಂಥ.

ಒಟ್ಟು ಬೆಲೆ
**₹3000**
'ಹೊಸತು' 3 ವರ್ಷಗಳ
ಚಂದಾ ನೀಡಿದವರಿಗೆ
20% ರಿಯಾಯಿತಿ
₹600 ಉಳಿತಾಯ

*ಅಂಚೆ ವೆಚ್ಚ ರೂ. 60 ಸೇರಿಸಿ ಬ್ಯಾಂಕ್ ಡ್ರಾಫ್ಟ್ ಕಳಿಸಿ :*

## ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೇಟ್ ಲಿಮಿಟೆಡ್

ಎಂಬೆಸಿ ಸೆಂಟರ್, 11, ಕ್ರೆಸೆಂಟ್ ರಸ್ತೆ, ಕುಮಾರ ಪಾರ್ಕ್ ಪೂರ್ವ, ಬೆಂಗಳೂರು - 560 001.
ದೂರವಾಣಿ : 30578022, 22203580. ಫ್ಯಾಕ್ಸ್ : 30578023.
e-mail : navakarnataka@gmail.com URL : www.navakarnataka.com blog : http://navakarnataka.blogspot.com

ಕರ್ನಾಟಕ ಕಲಾದರ್ಶನದ ಮಾದರಿ ಪುಟಗಳಿಗೆ ನೋಡಿ : http://navakarnataka.blogspot.com

ತಿಂಗಳ ಪತ್ರಿಕೆ
**ಹೊಸತು**
ನೆಮ್ಮದಿಯ ನಾಳೆ ನಮ್ಮದು
ನವಕರ್ನಾಟಕ ಪ್ರಕಾಶನ

ಸಂಪುಟ-೧೨ ಸಂಚಿಕೆ-೬ ಜನವರಿ ೨೦೧೧

**ಸಂಪಾದಕ**

ಜಿ. ರಾಮಕೃಷ್ಣ

**ಸಹಸಂಪಾದಕರು**

ಸಿ. ಆರ್. ಕೃಷ್ಣರಾವ್
ಎನ್. ಗಾಯತ್ರಿ
ಕೆ. ಎಲ್. ಗೋಪಾಲಕೃಷ್ಣಯ್ಯ
ಕೆ. ಎಸ್. ಪಾರ್ಥಸಾರಥಿ
ಕೆ. ಪಿ. ಸ್ವಾಮಿ
ಎಸ್. ಸುರೇಂದ್ರ

**ವ್ಯವಸ್ಥಾಪಕ**

ಎ. ಆರ್. ಉಡುಪ

**ಮುದ್ರಕ-ಪ್ರಕಾಶಕ**

ಆರ್. ಎಸ್. ರಾಜಾರಾಮ್
ವ್ಯವಸ್ಥಾಪಕ ನಿರ್ದೇಶಕ
ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈ. ಲಿ.

**ಮುದ್ರಣ**

ನವಕರ್ನಾಟಕ ಪ್ರಿಂಟರ್ಸ್
೧೬೭ ಮತ್ತು ೧೬೮, ೧೦ನೇ ಮುಖ್ಯ ರಸ್ತೆ
೩ನೇ ಘಟ್ಟ, ಪೀಣ್ಯ ಕೈಗಾರಿಕಾ ಪ್ರದೇಶ
ಬೆಂಗಳೂರು - ೫೬೦ ೦೫೮
ದೂರವಾಣಿ: ೨೮೩೯೭೪೨೬

**ಹೊಸತು ಕಚೇರಿಯ ವಿಳಾಸ**

ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೆಟ್ ಲಿಮಿಟೆಡ್
೧೫, ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಅಂ. ಪೆ. ೫೧೫೯
ಕುಮಾರ ಪಾರ್ಕ್ ಪೂರ್ವ, ಬೆಂಗಳೂರು - ೫೬೦ ೦೦೧
ದೂರವಾಣಿ: ೩೦೫೭೮೦೨೯, ೨೨೨೦೩೫೮೦
ಫ್ಯಾಕ್ಸ್: ೩೦೫೭೮೦೨೩
e-mail : navakarnataka@gmail.com
hosathu@gmail.com
URL : www.navakarnataka.com
http://navakarnataka.blogspot.com
http://hosathu.blogspot.com



# ಸಂಪಾದಕೀಯ

ನಮ್ಮ ಓದುಗರು ಮತ್ತು ಲೇಖಕರು ಪತ್ರಿಕೆಯನ್ನು ಹನ್ನೆರಡನೆಯ ವರ್ಷದಲ್ಲಿ ಮುನ್ನಡೆಸುತ್ತಿದ್ದಾರೆ. ಅವರಿಗೆಲ್ಲಾ ನಾವು ಕೃತಜ್ಞರು. ಪ್ರಸ್ತುತ 'ಹೊಸತು'ವಿನ ಹನ್ನೊಂದನೆಯ ವಿಶೇಷ ಸಂಚಿಕೆಯು ಓದುಗರ ಕೈ ತಲುಪಿದೆ. ಎಂದಿನಂತೆ ಅದನ್ನು ಸ್ವಾಗತಿಸಿ ತಮ್ಮ ವಿಮರ್ಶೆಯನ್ನು ತಿಳಿಸಬೇಕೆಂದು ವಿನಂತಿಸಿ ಕೊಳ್ಳುತ್ತೇವೆ. ವಿಶೇಷ ಸಂಚಿಕೆಯನ್ನು ಹೊರತರಲು ಸಹಕಾರ ನೀಡಿರುವ ಎಲ್ಲ ಲೇಖಕ ಮಿತ್ರರಿಗೆ ಹಾಗೂ ಜಾಹಿರಾತುದಾರರಿಗೆ ನಮ್ಮ ವಂದನೆಗಳು ಸಲ್ಲುತ್ತವೆ.

ಸಂಚಿಕೆಯ ಹೂರಣದ ಬಗ್ಗೆ ಓದುಗರು ಪ್ರತಿಕ್ರಿಯಿಸಬೇಕೆಂದು ನಿರೀಕ್ಷಿಸುವಾಗ ಅದರ ಬಗ್ಗೆ ನಾವೇ ಮೊದಲಿಗೆ ಹೇಳುವಂಥದೇನೂ ಇಲ್ಲ. ಓದುಗರ ನಿರೀಕ್ಷೆಯು ಹುಸಿಯಾಗಲಿಲ್ಲವಾದರೆ ಅದೇ ನಮ್ಮ ಪ್ರಯತ್ನದ ಯಶಸ್ಸು. ಅದೇ ಹಿಂದಿನ ಮಾದರಿ, ಅವೇ ವಿಷಯಗಳು, ಅಷ್ಟೇ ಗಾತ್ರ, ಇತ್ಯಾದಿ ಬೇಸರಿಕೆಯ ಭಾವನೆ ಬಾರದಿರಲೆಂದು ಅಪೇಕ್ಷಿಸುತ್ತೇವೆ. ಸುತ್ತಣ ವಿದ್ಯಮಾನಗಳು, ಸಾಂಸ್ಕೃತಿಕ ವಾತಾವರಣ, ನಾಡಿನ ನಾಳಿನ ತಲ್ಲಣಗಳು, ಇವೆಲ್ಲಾ ಬದಲಾಗುತ್ತಿವೆಯೆಂದು ಸಂತಸಪಡುವಂತಿಲ್ಲ; ಏಕೆಂದರೆ ಚಲನೆಯು ಹಿಮ್ಮುಖವಾಗುತ್ತಿದೆಯೆಂಬ ಭಾವನೆ ದಟ್ಟವಾಗುತ್ತಿದೆ. ೨೧ನೆಯ ಶತಮಾನದ ಒಂದು ದಶಕ ಕೊನೆಗೊಳ್ಳುತ್ತಿರುವಾಗ ನಮ್ಮ ವೈಜ್ಞಾನಿಕ ಮನೋಭಾವ, ಸಾಂಸ್ಥಿಕ ಮೌಲ್ಯಗಳು, ವೈಯಕ್ತಿಕ ಸಂಬಂಧಗಳು, ಸಾಮಾಜಿಕ-ಆರ್ಥಿಕ ವ್ಯವಸ್ಥೆ, ರಾಜಕೀಯ ಮುನ್ನೆಚ್ಚರಿಕೆ, ಎಲ್ಲಾ ಕುಸಿಯುತ್ತಿವೆಯೇನೋ ಎಂಬ ಆತಂಕ ಮೂಡುತ್ತಿದೆ. ವರ್ಷವಿಡೀ ದಿನನಿತ್ಯ ಹಗರಣಗಳ ಬಹುಮುಖೀ ಕುರೂಪಗಳನ್ನು ಕಂಡು ಕಂಡು ಸಾರ್ವಜನಿಕರಲ್ಲಿ ವ್ಯಸನವು ಎಲ್ಲೆಮೀರಿ ವ್ಯಾಪಿಸಿದೆ, ಮುಂದಿನ ಹಾದಿಯೇನೆಂಬ ತವಕವು ಆಳವಾಗಿ ಬೇರುಬಿಟ್ಟಿದೆ. ಹೊಸವರ್ಷವು ಇಂದಿನ ಸಂದರ್ಭದಿಂದ ಭಿನ್ನವಾದ ಉತ್ತಮ ಪರ್ಯಾಯವನ್ನು ಒದಗಿಸುತ್ತದೆಯೆಂಬ ಭರವಸೆ ಎಲ್ಲೂ ಕಾಣುತ್ತಿಲ್ಲ. ಕಾಮನ್‌ವೆಲ್ತ್ ಕ್ರೀಡೆಗಳಲ್ಲಿ ಮತ್ತು ಏಷ್ಯನ್ ಕ್ರೀಡೆಗಳಲ್ಲಿ ಸ್ವಾಗತಾರ್ಹ ವಿಜಯ ದೊರೆತಾಗ, ಅಥವಾ ಸೈನಾ ನೇವಾಲ್ ಅಂಥವರು ಕೀರ್ತಿಭಾಜನರಾದಾಗ ಒಂದಷ್ಟು ಹುರುಪು ಮೂಡುತ್ತದೆ; ಆದರೆ ಪತ್ರಿಕೆಗಳ ಮುಖಪುಟದ ಸಮಾಚಾರಗಳು ಆ ಹುರುಪನ್ನು ಹ್ರಸ್ವಗೊಳಿಸಿ ಬಿಡುತ್ತಿವೆ. ಮನಮೋಹನ ಸಿಂಗ್ ನಮ್ಮ ಪ್ರಧಾನಿಯೋ ಅಥವಾ ಪ್ರತಾಪ ಸಿಂಗ್ ಕೈರೋನ್ ಅವತರಿಸಿದ್ದಾರೋ ಎಂಬ ಸಂಶಯ ನಮ್ಮನ್ನು ಕಾಡುವಂತಾಗಿದೆ. ಮಾಧ್ಯಮಗಳ ಚಾರಿತ್ರ್ಯವು ಬೆತ್ತಲಾಗಿದ್ದು ಎಲ್ಲೆಲ್ಲೂ ಅನುಮಾನದ ಪಿಶಾಚಿಯದ್ದೇ ಅವಾಂತರವೆಂಬಂತಾಗಿದೆ. ಅಂತರರಾಷ್ಟ್ರೀಯವಾಗಿ ನಮ್ಮ ಸ್ವಕಪೋಲ ಕಲ್ಪಿತ ಸ್ಥಾನವು ಎಷ್ಟು ಭ್ರಾಮಕವಾದುದೆಂಬ ತಿಳುವಳಿಕೆಯು ಅಧಿಕಾರದಲ್ಲಿರುವವರನ್ನು ಮತ್ತು ನಾಳೆ ಅಧಿಕಾರಕ್ಕೆ ಬರುತ್ತೇವೆಂದು ಭಾವಿಸಿರುವವರನ್ನು

**ಸಮಾಲೋಚಕ ಮಂಡಲಿ**

ಟಿ. ಆರ್. ಅನಂತರಾಮು
ಸಿ. ಆರ್. ಚಂದ್ರಶೇಖರ್
ವಿ. ಚಂದ್ರಶೇಖರ ನಂಗಲಿ
ಕೆ. ಎಲ್. ಗೋಪಾಲಕೃಷ್ಣ ರಾವ್
ಎಚ್. ಎಸ್. ಗೋಪಾಲ ರಾವ್
ಜಿ. ಕೆ. ಗೋವಿಂದ ರಾವ್
ಎಂ. ಸಿ. ನರಸಿಂಹನ್
ನೇಮಿಚಂದ್ರ
ಪ್ರಕಾಶ್ ಸಿ. ರಾವ್
ಬರಗೂರು ರಾಮಚಂದ್ರಪ್ಪ
ಕೆ. ಮರುಳಸಿದ್ದಪ್ಪ
ಮಹಾಬಲೇಶ್ವರ ರಾವ್
ಮುರಳೀಧರ್
ವಿಜಯಾ
ಬಿ. ವಿ. ವೀರಭದ್ರಪ್ಪ
ಟಿ. ವೆಂಕಟೇಶ ಮೂರ್ತಿ
ಯು. ಎಸ್. ಶ್ರೀನಿವಾಸನ್
ಸಿದ್ದನಗೌಡ ಪಾಟೀಲ
ಎಲ್. ಹನುಮಂತಯ್ಯ

**ಚಂದಾ ವಿವರಗಳು**

| | |
|---|---|
| ಬಿಡಿ ಸಂಚಿಕೆ | ರೂ. ೧೨/- |
| ವಿಶೇಷ ಸಂಚಿಕೆ | ರೂ. ೩೫/- |
| ವಾರ್ಷಿಕ ಚಂದಾ | ರೂ. ೧೫೦/- |
| ಮೂರು ವರ್ಷಕ್ಕೆ | ರೂ. ೩೫೦/- |

**ನವಕರ್ನಾಟಕ ಶಾಖೆಗಳು**

೫ನೇ ಮುಖ್ಯ ರಸ್ತೆ, ಗಾಂಧಿನಗರ
ಬೆಂಗಳೂರು - ೫೬೦ ೦೦೯
✆ : ೦೮೦-೨೨೨೫೧೩೮೨

ಕೆ. ಎಸ್. ಆರ್. ರಸ್ತೆ
ಮಂಗಳೂರು - ೫೭೫ ೦೦೧
✆ : ೦೮೨೪-೨೪೪೧೦೧೬

ರಾಮಸ್ವಾಮಿ ವೃತ್ತ
ಮೈಸೂರು - ೫೭೦ ೦೨೪
✆ : ೦೮೨೧-೨೪೨೪೮೯೪

ಸ್ಟೇಷನ್ ರಸ್ತೆ
ಗುಲ್ಬರ್ಗಾ - ೫೮೫ ೧೦೨
✆ : ೦೮೪೭೨-೨೨೪೩೦೨

ತಿಂಗಳ ಪತ್ರಿಕೆ
**ಹೊಸತು**
ನೆಮ್ಮದಿಯ ನಾಳೆ ನಮ್ಮದು
ನವಕರ್ನಾಟಕ ಪ್ರಕಾಶನ

ಸಂಪಾದಕೀಯ

ಎಚ್ಚರಗೊಳಿಸಿಲ್ಲ, ಅದು ಅತ್ಯಂತ ಖೇದದ ಸಂಗತಿ. ಆಂತರಿಕ ಸಮಸ್ಯೆಗಳ ಪರಿಹಾರಕ್ಕೆ, ಸ್ಥಳೀಯ ಯೋಜನೆಗಳನ್ನು ಕಾರ್ಯಗತಗೊಳಿಸುವುದಕ್ಕೆ, ವಿದೇಶಗಳ ಆಸರೆ ಪಡೆಯುವಂತಹ ದೌರ್ಭಾಗ್ಯಕ್ಕೆ ನಾವು ಸಿಲುಕುತ್ತಿದ್ದೇವಲ್ಲಾ ಎಂಬ ಚಿಂತೆಯಾದರೂ ಬೇಡವೆ ? ಕಾಶ್ಮೀರ, ಅರುಣಾಚಲ ಪ್ರದೇಶ, ಈಶಾನ್ಯ ಭಾರತ, ಮುಂತಾದೆಡೆ ನಮ್ಮ ನೀತಿಗಳಿಂದಾಗಿ ತಲೆದೋರಿರುವ ಸಮಸ್ಯೆಗಳಿಗೆ ಅಮೆರಿಕಾದ ಸಖ್ಯದಿಂದ ಪರಿಹಾರ ಪಡೆಯುತ್ತೇವೆಂಬ ಮೂರ್ಖತನ ನಮ್ಮ ದೇಶದಲ್ಲೇಕೆ ಪಸರಿಸಿದೆ ? ಭಯೋತ್ಪಾದಕತೆಯನ್ನು ಹಿಮ್ಮೆಟ್ಟಿಸಲು ವಿಶ್ವದ ಅತ್ಯಂತ ಕಡು ಭಯೋತ್ಪಾದಕ ದೇಶವಾದ ಅಮೆರಿಕಾವನ್ನು ತಬ್ಬಿ ಕೂತರೆ ಆದೀತೆ ? ನಮ್ಮ ಸಂಪನ್ಮೂಲಗಳ ಗತಿ ಏನಾಗುತ್ತಿದೆ ? ಬಡತನದ ಭೀಕರತೆ ಯಾವ ಮಟ್ಟವನ್ನು ಮುಟ್ಟಿದೆ ? ದೇಶದಲ್ಲಿ ಅನ್ಯೋನ್ಯತೆ ಏಕೆ ಮಾಯವಾಗುತ್ತಿದೆ ? ನಮಗೆ ವಿಶ್ವಸಂಸ್ಥೆಯ ಭದ್ರತಾ ಮಂಡಲಿಯಲ್ಲಿ ಖಾಯಂ ಸ್ಥಾನ ಬೇಕೆ ? ಅದನ್ನು ಪಡೆದು ಅಮೆರಿಕಾದ ದುರುಳತೆಗೆ ಬೆಂಬಲ ನೀಡುವುದು ನಮ್ಮ ಏಕೈಕ ಗುರಿಯಾಗಬೇಕೆ ? ಯಾವ ಕ್ಷೇತ್ರದಲ್ಲೂ ಭ್ರಷ್ಟತೆಯ ಸುಳಿವಿಲ್ಲದಂತಿಲ್ಲವಲ್ಲ, ಇದೇನು ದೇಶ ? ಪುರಾತನ ಸಂಸ್ಕೃತಿಯ ಪ್ರಭಾವ ಇಷ್ಟೇ ಏನು ?

ಹೀಗೆ ನೂರಾರು ಪ್ರಶ್ನೆಗಳು ನಮ್ಮ ಮುಂದಿವೆ. ಅವುಗಳ ಹಿನ್ನೆಲೆಯಲ್ಲಿ ನಮ್ಮ ಚರ್ಚೆಗಳು ನಡೆಯಬೇಕಾಗಿದೆ. 'ಹೊಸತು' ಅವಕ್ಕೆಲ್ಲಾ ಪರಿಹಾರ ನೀಡಬಲ್ಲುದೆಂಬ ಭ್ರಾಂತಿ ನಮಗೂ ಬೇಡ, ನಮ್ಮ ಓದುಗರಿಗೂ ಬೇಡ. ಆದರೆ ಸಾಮುದಾಯಿಕವಾಗಿ ಇಂದಿನ ಸನ್ನಿವೇಶವನ್ನೆದುರಿಸಿ 'ನೆಮ್ಮದಿಯ ನಾಳೆ'ಗಳಿಗಾಗಿ ಐಕ್ಯತೆಯಿಂದ ಹೆಜ್ಜೆ ಇಡೋಣವೆಂದಷ್ಟೇ ನಮ್ಮ ಆಶಯ. ಅದಕ್ಕಾಗಿ ಚಿಂತನೆ ನಡೆಸೋಣ, ಸಂಸ್ಕೃತಿಯನ್ನು ವಿಶ್ಲೇಷಿಸಿಕೊಳ್ಳೋಣ, ಆತ್ಮಾವಲೋಕನ ಮಾಡಿಕೊಳ್ಳೋಣ, ಅಲ್ಪಸ್ವಲ್ಪವಾದರೂ ಪರಿಶುದ್ಧತೆಯನ್ನು ಕಾಪಾಡಿಕೊಳ್ಳೋಣ, ಹತಾಶೆಯಿಂದ ಪಾರಾಗೋಣ. ಈ ಬಾರಿಯ ವಿಶೇಷ ಸಂಚಿಕೆಯು, ಹಿಂದಿನ ಸಂಚಿಕೆಗಳಂತೆ, ಆ ಹಾದಿಯಲ್ಲಿ ಚಿಂತನೆ ನಡೆಸುತ್ತಿದೆ ಮತ್ತು ಕ್ರಿಯೆಗೆ ಒತ್ತಾಸೆ ನೀಡುತ್ತದೆ ಎಂಬ ಆಸೆಯನ್ನು ಹೊತ್ತಿದ್ದೇವೆ. ೨೦೧೧ ಸರ್ವಾಂಗವಾಗಿ ಸಮರ್ಪಕವಾಗಿರುತ್ತದೆಂದು ಸಂಭ್ರಮಿಸದೆ ಅದು ೨೦೧೦ಕ್ಕಿಂತಲೂ ಗುಣಾತ್ಮಕವಾಗಿ ಉತ್ತಮವಾಗುವಂತೆ ಶ್ರಮಿಸೋಣ. ''ಪರಿತಪಿಸು, ನನ್ನ ದೇಶವೇ'' ಎಂದು ಉದ್ಗರಿಸಬೇಕಾದ ಸಂಭವ ಉಂಟಾಗದಿರಲೆಂದು ಆಶಿಸೋಣ.

## ಕೊಳೆತು ನಾರುತ್ತಿರುವ ವ್ಯವಸ್ಥೆ!

ಟೆಲಿಕಾಂ ಹಗರಣವನ್ನು ವಿಚಾರಿಸುತ್ತಾ ಉಚ್ಚ ನ್ಯಾಯಾಲಯ ಉದ್ಗರಿಸಿದ್ದು ಹೀಗೆ : ಈ ಹಗರಣ ಹೊರಗೆಡಹುತ್ತಿರುವ ಭ್ರಷ್ಟಾಚಾರ ಕೇವಲ ಆ ಕ್ಷೇತ್ರಕ್ಕೆ ಮಾತ್ರ ಸೀಮಿತವಲ್ಲ, ಈ ಪ್ರಮಾಣದ ಭ್ರಷ್ಟಾಚಾರದ ಸುದ್ದಿಯೂ ಹೊಸದಲ್ಲ.

ಆರ್ಥಿಕ ಉದಾರೀಕರಣದ ಸೋಗಿನಲ್ಲಿ ಕಳೆದ ಎರಡು ದಶಕಗಳಿಂದ ನಡೆಯುತ್ತಿರುವ ಸಾರ್ವಜನಿಕ ಆಸ್ತಿಪಾಸ್ತಿಗಳ ಎಗ್ಗಿಲ್ಲದ ಲೂಟಿಯ ಒಂದು ಪರಮಾವಧಿಯ ಹಂತ ಈಗ ಅನಾವರಣವಾಗಿದೆ, ಅಷ್ಟೆ. ವಿಕಿಲೀಕ್, ರಾಡಿಯಾ ಟೇಪ್ ಲೀಕ್, ಇವೆಲ್ಲ ಯಾರದೋ ಒಪ್ಪಿಗೆಯಿಲ್ಲದೆ ಆಗುವಂಥವಲ್ಲ. ಎರಡು ವರ್ಷ ಕಾಲ ಟೆಲಿಫೋನ್ ಕದ್ದಾಲಿಸಿದ ಸರ್ಕಾರಕ್ಕೆ ಆಗಲೇ ಸಾಕಷ್ಟು ಪುರಾವೆ ಸ್ಪೆಕ್ಟ್ರಂ ರಾಜಾ ವಿರುದ್ಧ ಸಿಕ್ಕಿತ್ತು. ಆದರೂ ಏನೂ ಮಾಡಲಿಲ್ಲ! ಈ ಕದ್ದಾಲಿಸುವ ಕ್ರಮ ರಾಜಕೀಯ ಸಂಚೋ ವಾಣಿಜ್ಯ ಲೋಕದ ಭ್ರಷ್ಟಾಚಾರ ನಿಯಂತ್ರಣಕ್ಕೋ ಹೇಗೆ ಹೇಳುವುದು ? ರಾಜಾನ ರಾಜೀನಾಮೆ ಆಗುತ್ತಿದ್ದಂತೆಯೆ ರತನ್ ಟಾಟಾ ಟಿವಿಗೆ ಒಡಬಾರದಿತ್ತು. ಅದೇಕೆ ನೀರಾ ರಾಡಿಯಾ ಅವರಿಗೆ ಈ ಬಗ್ಗೆ ಸಲಹೆ ನೀಡಲಿಲ್ಲವೋ ! ಈ ಹಿಂದೆ ತಾನು ಹದಿನೈದು ಕೋಟಿ ರೂಪಾಯಿ ಲಂಚ ನೀಡಲು ಒಪ್ಪಲಿಲ್ಲವಾಗಿ ತನಗೆ ವಿಮಾನಯಾನ ಕ್ಷೇತ್ರ ಪ್ರವೇಶಿಸಲಾಗಲಿಲ್ಲವೆಂದು ಹೇಳಿ, ತಮ್ಮ ಕಂಪನಿ ಯಾವಾಗಲೂ ಲಾಭಕ್ಕೆ ಮುಂಚೆ ನೈತಿಕತೆಗೆ ಆದ್ಯತೆ ನೀಡಿದೆ ಎಂದಿದ್ದಾರೆ. ಒಳಗುಟ್ಟು ಬಲ್ಲವರು ಸುಮ್ಮನಿದ್ದಾರೆಯೇ ? ಎಲ್ಲವನ್ನೂ ಹೊರಚೆಲ್ಲಿದರು. ಈಗ ವಾಣಿಜ್ಯ ಲೋಕದಲ್ಲಿ ಎದ್ದ ಬಿರುಗಾಳಿ, ರಾಡಿಯಾ ಟೇಪು ಎರಚಿದ ರಾಡಿ, ಸಾರ್ವಜನಿಕ ಪ್ರಜ್ಞೆಯನ್ನು ಹೊಕ್ಕಿಬಿಟ್ಟಿದೆ. ಯಾವುದೇ ಲಂಗುಲಗಾಮಿಲ್ಲದ ಕಾರ್ಪೊರೇಟುಗಳ ನಡುವಿನ ವಾಗ್ಯುದ್ಧಗಳ ನಡುವೆ, ಈ ಹಗರಣದಲ್ಲಿ ಹೆಚ್ಚು ಲಾಭ ಗಿಟ್ಟಿಸಿಕೊಂಡ ರಿಲೈಯನ್ಸ್ ಗುಂಪು ಸಂಪನ್ನರಂತೆ ಇಲ್ಲಿವರೆಗೆ ಹೊರಬರದೆ, ತನ್ನ ಚಾಲಾಕಿಯನ್ನು ಪ್ರದರ್ಶಿಸಿದೆ. ಗಾಜಿನ ಮನೆಯಲ್ಲೆ ಎಲ್ಲರೂ ಇದ್ದರೂ ಪರಸ್ಪರ ಕಲ್ಲೆಸೆಯುತ್ತಿದ್ದಾರೆ. ಈ ನಾಡಿನ ರಾಜಕೀಯವನ್ನು, ಸರ್ಕಾರದ ನೀತಿಯನ್ನು, ಉದ್ಯಮಪತಿಗಳು ರೂಪಿಸುತ್ತಾರೆ, ನಿಯಂತ್ರಿಸುತ್ತಾರೆ ಎಂಬ ಸುದ್ದಿ ಹೊಸದೇನೂ ಅಲ್ಲ. ಜನ ಇನ್ನಾದರೂ ಅದನ್ನು ಚೆನ್ನಾಗಿ ಅಂತರ್ಗತ ಮಾಡಿಕೊಂಡರೆ ಸಾರ್ವಜನಿಕ ಜೀವನವನ್ನು ಸ್ವಚ್ಛಗೊಳಿಸುವ ಹೋರಾಟಗಳಿಗೆ ಪುನಃ ಚೇತನ ಬಂದೀತು.

ಸಾರ್ವಜನಿಕ ಕ್ಷೇತ್ರವನ್ನು ಕ್ರಮಕ್ರಮವಾಗಿ ಖಾಸಗಿಗೊಳಿಸುವ ನೀತಿಯನ್ನು ೧೯೯೧ರಲ್ಲಿ ಪ್ರತಿಪಾದಿಸಿದವರೆ ಇಂದಿನ ಪ್ರಧಾನಿ. ಸಾರ್ವಜನಿಕ ಬಂಡವಾಳ ಹಿಂತೆಗೆಯುವ ಮಂತ್ರಿಯಾಗಿ ಅರುಣ್ ಶೌರಿ ಪ್ರವೇಶಿಸಿದಂದಿನಿಂದ ಭ್ರಷ್ಟಾಚಾರವೂ ಗರಿಕೆದರಿಕೊಂಡು ವೃದ್ಧಿಯಾಗಿದೆ. ಬಾಲ್ಕೊ ಕಂಪನಿ ಮಾರುವುದಿರಲಿ, ಅಶೋಕ ಹೋಟೆಲ್‌ಗಳ ಮಾರಾಟದ ಭ್ರಷ್ಟಾಚಾರವಿರಲಿ, ರಿಲೈಯನ್ಸ್‌ಗೆ ಪೆಟ್ರೋಲ್ ಕ್ಷೇತ್ರದ ಆಸ್ತಿಯನ್ನು ಬಿಟ್ಟುಕೊಟ್ಟ ವಿಷಯವಿರಲಿ, ಅವರಿಗೆ ಸೆಲ್ಯೂಲರ್ ಲೈಸೆನ್ಸ್ ನೀಡುವಾಗಿನ ಪಕ್ಷಪಾತದ ವಿಷಯವೆ ಇರಲಿ, ಎಲ್ಲವೂ ಹಿಂದೆಯೇ ಬೆಳಕಿಗೆ ಬಂದಿದ್ದವು. ಈಗ ಆಗಿರುವುದರಲ್ಲಿ ವಿಶೇಷವೆಂದರೆ ಲೂಟಿಯ ಪಾಲುಗಾರಿಕೆಯ ನ್ಯಾಯ-ಅನ್ಯಾಯದ ಗದ್ದಲ. ಕೆಲವರಿಗೆ ಹೆಚ್ಚು, ಕೆಲವರಿಗೆ ಕಡಿಮೆ, ಕೆಲವರಿಗೆ ಏನೇನೂ ಇಲ್ಲ. ಈ ಜಗಳ ಬಹಿರಂಗದಲ್ಲಿ ಮಾಡಬೇಡಿ ಎಂದು ಉದ್ಯಮಿಗಳಿಗೆ ಪ್ರಣವ್ ಮುಖರ್ಜಿ ಈಗಾಗಲೆ ಅಪ್ಪಣೆ ಹೊರಡಿಸಿದ್ದಾರೆ. ಈ ರಾದ್ಧಾಂತದ ಟೇಪು ಮೂಲತಃ ಅವರ ಮಂತ್ರಾಲಯದ್ದು ತಾನೆ! ಈಗಾಗಲೆ ಕೇಂದ್ರದ ಮಂತ್ರಿಗಳು ಬಹಿರಂಗವಾಗಿ ಪರಸ್ಪರ ಕಚ್ಚಾಡುವುದು ತಮಾಷೆಯಾಗಿಬಿಟ್ಟಿದೆ. ಈಗ ಎ. ರಾಜಾ ಹೆಸರಿನಲ್ಲಿ ಪರಸ್ಪರ ಕಾಲೆಳೆಯುತ್ತಿರುವುದು ಸ್ಪಷ್ಟ. ಟೆಲಿಕಾಂ ಕ್ಷೇತ್ರದಲ್ಲಿ ಈ ಭ್ರಷ್ಟಾಚಾರದಿಂದಾಗಿ ಅಂದಾಜು ಮಾಡಿರುವ ನಷ್ಟ ರೂ. ೧,೭೬,೦೦೦ ಕೋಟಿ ಎಂಬುದು, ಮುಂದಿನ ದಶಕದಲ್ಲಿ ಸರ್ಕಾರಕ್ಕೆ ಬರಬಹುದಿದ್ದ ಆದಾಯಕ್ಕೆ ಸಂಬಂಧಿಸಿದ್ದು. ಇದನ್ನು ಸುಲಭವಾಗಿ ಹೇಗೆ ಮಾಡಲಾಯಿತು ಎನ್ನುವ ವಿಷಯವೂ ಹೊಸದಲ್ಲ. ಟೆಂಡರ್ ಪ್ರಕ್ರಿಯೆಯ ಎಲ್ಲಾ ಹಂತಗಳಲ್ಲೂ ಕಾರ್ಪೊರೇಟ್‌ಗಳ ಪ್ರತಿನಿಧಿಗಳು ತಮ್ಮ ರಾಜಕೀಯ ದಳ್ಳಾಳಿಗಳ ಮೂಲಕ, ರಾಡಿಯಾ ಅಂಥ ಕೆಲವು ಸಂಪರ್ಕ ಚತುರರನ್ನು, ಮಾಧ್ಯಮಗಳನ್ನು, ಬಳಸಿಕೊಂಡು, ಮಧ್ಯಪ್ರವೇಶಿಸಿ, ಅದನ್ನು ಹದಗೆಡಿಸಿ, ತಮ್ಮ ತಮ್ಮ ಪಾಲನ್ನು ಬಾಚಿಕೊಂಡರು. ಟೆಂಡರ್‌ನ ಮೊದಲ, ಕೊನೆಯ, ಸರದಿಯ ಗಡುವುಗಳನ್ನು ಹಠಾತ್ತನೆ ಬದಲಾಯಿಸುವುದು, ಅದರ ಕರಾರುಗಳನ್ನು ಬದಲಾಯಿಸುತ್ತಾ ಹೋಗುವುದು, ಭಾಗವಹಿಸುವ ಕಂಪನಿಗಳ ದಾಖಲೆಗಳನ್ನು, ಮಾಹಿತಿಗಳನ್ನು, ಟೆಂಡರಿಗೆ ತಕ್ಕಂತೆ, ಸರ್ಕಾರಕ್ಕೆ ನೀಡುವುದಕ್ಕೆ ಮುಂಚೆ ಹಾಗೂ ನಂತರ ಬದಲಾಯಿಸುವುದು, ಇವೆಲ್ಲ ಕೆಲವು ಭ್ರಷ್ಟಾಚಾರಗಳು. ಈಗ ಮಂತ್ರಿ ಯಾರಾಗಬೇಕು



ಎನ್ನುವುದನ್ನು ನಿರ್ಧರಿಸುವುದೂ ಇದರೊಡನೆ ಸೇರಿದೆ. ಕಾನೂನು, ಹಣಕಾಸು, ಗೃಹಖಾತೆ, ಪ್ರಧಾನಿ ಕಾರ್ಯಾಲಯ ಎಲ್ಲವನ್ನೂ ಇದಿರು ಹಾಕಿಕೊಂಡ ರಾಜಾ, ಹಲವು ಹಂತದ ಶತ್ರುಗಳನ್ನು ಸೃಷ್ಟಿಸಿಕೊಂಡದ್ದು ಆತನ ಅವಿವೇಕ. ಈತನ ಹಿಂದಿನ ಮಂತ್ರಿಗಳು ಈ ವಿಷಯದಲ್ಲಿ ಈತನಿಗಿಂತ ಜಾಣರಾಗಿದ್ದರು! ಈಗ ಚರ್ಚೆಗೆ ಒಳಗಾಗಿರುವ ನೀರಾ ರಾಡಿಯಾ ಅಲ್ಲದೆ ಇನ್ನೂ ಸಿಕ್ಕಿಕೊಳ್ಳದ ಎಷ್ಟೋ ಕಂಪನಿಗಳಿವೆ. ಕೆಲವೇ ವರ್ಷಗಳಲ್ಲಿ ಅಪಾರ ಹಣ ಗಳಿಸಿದ ಆಕೆಯ ಬಗ್ಗೆ ಮಾತ್ಸರ್ಯವೇ ಅವಳಿಗೆ ಶತ್ರುಗಳನ್ನು ಸೃಷ್ಟಿಸಿರಬಹುದು. ಸಹೋದ್ಯೋಗಿಗಳೇ ಅಲ್ಲದೆ ಆಕೆ ಹೊಟ್ಟೆ ಉರಿಸಿರುವ ಕಾರ್ಪೊರೇಟ್‌ಗಳು, ರಾಜಾನ ರಾಜಕೀಯ ಶತ್ರುಗಳು, ಹೀಗೆ ಎಲ್ಲರೂ ಬಹಿರಂಗವಾಗಿ ಬೆತ್ತಲೆಯಾಗಿ, ಪರಸ್ಪರ ಸಗಣಿ ನೀರಿನ ಓಕುಳಿ ಆಡುತ್ತಿದ್ದಾರೆ.

ಟೆಂಡರ್ ಪ್ರಕ್ರಿಯೆಯಲ್ಲಿ ಭ್ರಷ್ಟಾಚಾರವನ್ನು ನಿಯಂತ್ರಿಸುವ ಅನೇಕ ತಡೆಗಳು ಹಲವು ಹಂತಗಳಲ್ಲಿ ಲಭ್ಯವಿದ್ದರೂ ಅವೆಲ್ಲವನ್ನೂ ಭೇದಿಸಲು ಸಾಧ್ಯವಾದುದು ಸ್ಪೆಕ್ಟ್ರಂ ರಾಜಾ ಸಾಧನೆ. ಈತನ ಹಿಂದಿನ ನಾಲ್ವರು ಮಂತ್ರಿಗಳೂ ಸ್ವಲ್ಪಸ್ವಲ್ಪ ಇಂಥದೆ ಕೆಲಸಗಳನ್ನು ಮಾಡಿ ರಿಲೈಯನ್ಸ್‌ಗೋ, ಟಾಟಾಗೋ, ಭಾರತಿಗೋ, ಬಿಎಸ್‌ಎನ್‌ಎಲ್ ಮತ್ತು ಎಂಟಿಎನ್‌ಎಲ್‌ಗಳಿಗೆ ಆಘಾತವಾದರೂ, ಸಹಾಯ ಮಾಡುತ್ತಲೇ ಬಂದಿದ್ದರು. ಖಾಸಗಿಯವರಿಗೆ ಮೊದಲು ಸೆಲ್‌ಫೋನ್ ವ್ಯವಹಾರಕ್ಕೆ ಅವಕಾಶ ನೀಡಿ, ಅವರು ಬೆಳೆಯುವವರೆಗೆ ಸಾರ್ವಜನಿಕ ಕ್ಷೇತ್ರವನ್ನು ತಡೆಹಿಡಿದಿದ್ದು ಒಂದು ವಿಧಾನ. ಬಿಎಸ್‌ಎನ್‌ಎಲ್ ತಾನು ತನ್ನ ಅಭಿವೃದ್ಧಿಗಾಗಿ ಕೈಗೊಳ್ಳಬೇಕಾದ ಕೆಲಸಗಳನ್ನು ನೇರವಾಗಿ ಹಾಗೂ ಕೃತ್ರಿಮವಾಗಿ ಸರ್ಕಾರ ತಡೆಹಿಡಿದಿದ್ದು ಖಾಸಗಿ ಕಂಪನಿಗಳಿಗೆ ಮತ್ತು ಮಧ್ಯವರ್ತಿಗಳಿಗೆ ಅಪಾರ ಲಾಭ ತಂದಿತು. ಈ ಭ್ರಷ್ಟಾಚಾರದ ವ್ಯವಸ್ಥೆ ಕೊನೆಗೆ ದೂರ ಸಂಪರ್ಕ ಮಂತ್ರಿಯಾಗಿ ರಾಜಾನೇ ಬೇಕು ಎಂದೂ ನಿರ್ಧರಿಸಲು ಶಕ್ತವಾಯಿತು. ಖಾಸಗಿಕ್ಷೇತ್ರದ ಈ ಎಲ್ಲ ಕಾರ್ಯವಿಧಾನಗಳೂ ಸಾರ್ವಜನಿಕರಿಗೆ ಈಗಷ್ಟೆ ರಾಚಿ ಬಡಿದಿವೆ. ಒಕ್ಕೂಟ ರಾಜಕೀಯದಲ್ಲಿ ಚಿಲ್ಲರೆ ಪಕ್ಷಗಳು ರೈಲ್ವೆ, ಟೆಲಿಕಾಂ, ರಕ್ಷಣೆ, ಸಾರಿಗೆ ಕ್ಷೇತ್ರಗಳನ್ನು ಲಪಟಾಯಿಸಿ, ಈ ಕ್ಷೇತ್ರಗಳನ್ನು ಹಾಳುಗೆಡಹಿರುವ ಚಿತ್ರ ನಮ್ಮ ಪ್ರಜಾಪ್ರಭುತ್ವದ ಬುನಾದಿಯನ್ನೆ ನಡುಗಿಸಿದೆ. ಮೂರುಕಾಸಿಗೆ ಕೊಂಡ ಲೈಸೆನ್ಸನ್ನು ಅಡವಿಟ್ಟು ನೂರು ಕಾಸು ಸಾಲವನ್ನು ಸಾರ್ವಜನಿಕ ಕ್ಷೇತ್ರದ ಬ್ಯಾಂಕುಗಳಿಂದ ಬಂಡವಾಳವೇ ಇಲ್ಲದವರಿಗೆ ಕೊಡಿಸಲು ಆಳುವವರಿಂದ ಮಾತ್ರ ಸಾಧ್ಯ. ಇವೆಲ್ಲ ಆಗುತ್ತಿದ್ದರೆ ಮೂಕಪ್ರೇಕ್ಷಕನಂತೆ ವರ್ತಿಸಿದ ನಮ್ಮ ಪ್ರಧಾನಿಯೇ ನಮ್ಮ ವ್ಯವಸ್ಥೆಯ ಇಂದಿನ ಪ್ರಧಾನ ದುರಂತ. ಮನೆಯೊಳಗೆ ಮನೆಯೊಡೆಯನೇ ಇಲ್ಲ! ಪರಸ್ಪರ ಕತ್ತು ಕೊಯ್ಯುವ ಪೈಪೋಟಿಯಲ್ಲಿ ಬಿಎಸ್‌ಎನ್‌ಎಲ್, ಎಂಟಿಎನ್‌ಎಲ್‌ಗಳನ್ನು ಸದ್ಯದಲ್ಲೇ ದಿವಾಳಿಯಾಗಿಸಿ, ಅವುಗಳ ಆಸ್ತಿಯನ್ನು ಖಾಸಗಿ ಕಂಪನಿಗಳಿಗೆ ದಾನ ಮಾಡುವುದಿದೆ. ಖಾಸಗಿ ಕ್ಷೇತ್ರದಲ್ಲಿ ಸಣ್ಣ ಕಂಪನಿಗಳನ್ನು ದೊಡ್ಡ ಕಂಪನಿಗಳು ನುಂಗಲು ಸುಗಮವಾಗುವ ಕಾನೂನುಗಳನ್ನು ತರಲಾಗುತ್ತದೆ. ಕೆಲವೇ ಕಂಪನಿಗಳ ಏಕಸ್ವಾಮ್ಯ ತಲೆಹಾಕಿ, ಈ ಕ್ಷೇತ್ರದ ಸೇವೆಯ ದರ ಸಾಧಾರಣ ವ್ಯಕ್ತಿಗಳಿಗೆ ನಿಲುಕದೆ ದುಬಾರಿಯಾಗುತ್ತದೆ. ಕನಿಷ್ಠ ಸೇವೆಯನ್ನು ಮಾತ್ರ ಸ್ವಲ್ಪ ನಿಯಂತ್ರಿಸಿಯಾರು. ಮಿಕ್ಕವು ಕೆಳಸ್ತರದ ಬಳಕೆದಾರರಿಗೆ ಎಟುಕದಾದಾವು. ಕೆಲವೇ ವರ್ಷಗಳಲ್ಲಿ ಇಲ್ಲಿಯ ಟೆಲಿಫೋನ್ ಸಂಖ್ಯೆ ಜನಸಂಖ್ಯೆಗಿಂತ ಹೆಚ್ಚುವುದಲ್ಲದೆ ಚೀನವನ್ನೂ ಮೀರಿಸಿ, ಜಗತ್ತಿನ ಅತಿ ದೊಡ್ಡ ಟೆಲಿಕಾಂ ವ್ಯವಸ್ಥೆಯಾಗಿ, ವಿದೇಶಿ ಕಂಪನಿಗಳೂ ತಾಂತ್ರಿಕವಾಗಿ ನಿಯಂತ್ರಣ ಸ್ಥಾಪಿಸಿಯಾವು. ಕಾರಣ ಈ ಕ್ಷೇತ್ರದ ಉಪಕರಣಗಳನ್ನು ದೇಶದೊಳಗೇ ತಯಾರಿಸಲು ಯಾರೂ ಮುಂದೆ ಬಂದಿಲ್ಲ, ನೀತಿಯೂ ಇಲ್ಲ. ಈ ಕ್ಷೇತ್ರದಲ್ಲಿ ಉದ್ಯೋಗಾವಕಾಶವೂ ಅದರ ಪ್ರಮಾಣಕ್ಕೆ ತಕ್ಕಂತೆ ಬೆಳೆಯುವುದಿಲ್ಲ. ಈಗಾಗಲೆ ಪೈಪೋಟಿಯಿಂದಾಗಿ ಸಂಪರ್ಕತರಂಗಗಳಿಗೆ ವಿಪರೀತ ಬೆಲೆ ನೀಡಿರುವ ಕಂಪನಿಗಳು, ಸೇವೆಗೆ ಬೆಲೆ ಹೆಚ್ಚಿಸದೆ ಬೇರೆ ದಾರಿ ಇರುವುದಿಲ್ಲ. ಈ ಮಾರ್ಗ ಬಿಎಸ್‌ಎನ್‌ಎಲ್‌ನ ಸಾವಿನಿಂದ ಸುಗಮವಾಗುತ್ತದೆ. ಈಗಾಗಲೆ ಖಾಸಗಿ ಕಂಪನಿಯೊಂದಿಗೆ ಅದರ ಬಳಕೆದಾರನ ಸಂಬಂಧ ಒಂದಿಷ್ಟೂ ಪಾರದರ್ಶಕವಾಗಿಲ್ಲ. ಬಿಎಸ್‌ಎನ್‌ಎಲ್ ಕಛೇರಿಗೆ ನುಗ್ಗಿ ಹಕ್ಕೊತ್ತಾಯ ಮಾಡುವ ಸಾರ್ವಜನಿಕ ಬಳಕೆದಾರರು ಖಾಸಗಿತನದಡಿ ಈಗಿನ ಅನಿಷ್ಟ ಬೆಳವಣಿಗೆಗಳು ಅವರ ಹಿತ ಸಾಧಿಸುತ್ತವೆಯೇ ಎಂದು ಚಿಂತಿಸಬೇಕು. ಬಜೆಟ್‌ನಲ್ಲಿ ಕೊರತೆಯನ್ನು ಕಡಿತಮಾಡುವ ವ್ರತ ತೊಟ್ಟಿರುವ ಸರ್ಕಾರ ತನ್ನ ದುಂದು, ಪೋಲು, ಭ್ರಷ್ಟಾಚಾರ ಯಾವುದನ್ನೂ ಹಿಡಿತಕ್ಕೆ ತರದೆ, ಅದೇ ಸಮಯದಲ್ಲಿ ಟೆಲಿಕಾಂ ಕ್ಷೇತ್ರದಂಥ ಸಾರ್ವಜನಿಕ ಆಸ್ತಿಯನ್ನು ಪುಡಿಕಾಸಿಗೆ ಮಾರಿಕೊಂಡು, ಭವಿಷ್ಯದಲ್ಲಿ ಬರಬಹುದಾದ ಆದಾಯ ಕಡಿಮೆಯಾದರೂ ಲೆಕ್ಕಿಸದೆ, ತನ್ನ ಅಂದಂದಿನ ಬೊಕ್ಕಸದ ಕೊರತೆಯನ್ನು ನೀಗಿಕೊಳ್ಳುತ್ತಿದೆಯೇ ವಿನಾ, ಹಾಗೆ ಮಾರಿ ಬಂದ ಸಂಪತ್ತು ಸಾರ್ವಜನಿಕ ಸೇವಾಕ್ಷೇತ್ರಗಳಿಗೇನೂ ವಿನಿಯೋಗವಾಗುತ್ತಿಲ್ಲ. ಅದು ಬಜೆಟ್ ಕುರಿತ ಸಾರ್ವಜನಿಕ ತಪಾಸಣೆಗೂ ಸಿಕ್ಕುತ್ತಿಲ್ಲ. ಇದು ಮತ್ತೊಂದು ಆತಂಕಕಾರಿ ಬೆಳವಣಿಗೆ. ವಾಲ್‌ಸ್ಟ್ರೀಟ್ ಲಾಯರ್ ಕಪಿಲ್ ಸಿಬಲ್ ಕೈಗೆ ಈಗ ಟೆಲಿಕಾಂ ಮಂತ್ರಾಲಯವೂ ಸಿಕ್ಕಿದೆ. ಏಕಸದಸ್ಯ ನ್ಯಾಯಾಲಯದ ಆಯೋಗ ರಚಿಸಿ, ಒಂದೇ ತಿಂಗಳು ಸಮಯ ನೀಡಿರುವುದು ನಿರರ್ಥಕ. ಅದೊಂದು ಕುತಂತ್ರ. ಸದ್ಯದ ಅಗತ್ಯಕ್ಕೆ ಮೀರಿದ ಅಥವಾ ಬೇಕೆಂತಲೇ ಮುಂದೆ ಇನ್ನೂ ಹೆಚ್ಚು ಲಾಭಕ್ಕೆ ಮಾರಲು ಅಥವಾ ಈಗಿರುವ ಮಾರುಕಟ್ಟೆಯ ಗ್ರಾಹಕರ ಸೇವೆಯ ಬೆಲೆಗಳನ್ನು ನಿಯಂತ್ರಿಸಲು, ತಮ್ಮ ಲೈಸೆನ್ಸ್‌ಗಳನ್ನು ತಕ್ಷಣ ಬಳಸದೆ ಹೆಚ್ಚುವರಿ ಸ್ಪೆಕ್ಟ್ರಂ ದಾಸ್ತಾನಿನ ಮೇಲೆ ಠಳಿ ಕಂಪನಿಗಳು ನಿಷ್ಕ್ರಿಯವಾಗಿ ಕೂತಿವೆ. ಇವನ್ನು ರದ್ದು ಮಾಡುವುದು ಕಾನೂನಿನಲ್ಲಿ ಅಷ್ಟು ಸುಲಭವಿದ್ದಂತಿಲ್ಲ. ಹೀಗಾಗಿ ಈ ಕ್ಷೇತ್ರದಲ್ಲಿ ಅನಿಶ್ಚಯ ಪರಿಸ್ಥಿತಿ, ಗೊಂದಲಗಳು ಇನ್ನೂ ಸ್ವಲ್ಪ ಕಾಲ ಮುಂದುವರಿಯುವುದು ಖಂಡಿತ.

ಈಗ ಭ್ರಷ್ಟಾಚಾರಕ್ಕೆ ಪ್ರತ್ಯೇಕವಾದ ಸಚಿವಾಲಯವೊಂದನ್ನು ತೆರೆಯಬಹುದು! ಅದರ ಉದ್ದೇಶ ಭ್ರಷ್ಟಾಚಾರದ ಪ್ರಕರಣಗಳು ಹೊರಗೆ ಬರದಂತೆ ತಡೆಯುವುದು! ಈ ಹಿಂದೆಯೂ ವಿಚಾರಣಾ ಸಮಿತಿಗಳು, ಆಯೋಗಗಳು, ಜಂಟಿ ಪಾರ್ಲಿಮೆಂಟ್ ಸಮಿತಿಗಳು ಆಗಿವೆ. ಅವೆಲ್ಲ ಕಡಿದದ್ದು ಅಷ್ಟರಲ್ಲೇ ಇದೆ. ಆಡಿಟರ್ ಜನರಲ್ ಕಟು ವಿಮರ್ಶೆಯ ವರದಿಗಳಿಗೆ ಲೆಕ್ಕವಿಲ್ಲ. ಈಗಲೂ ವಿಷಯವನ್ನು ವಿಚಾರಿಸಿ, ಬಹಿರಂಗ ಪಡಿಸುವುದಕ್ಕಿಂತ, ಅದನ್ನು ಮುಚ್ಚುವ ತವಕವೇ ಹೆಚ್ಚಿರುವಂತೆ ಕಾಣುತ್ತಿದೆ. ಸಾರ್ವಜನಿಕರ ನಂಬಿಕೆಯನ್ನು ಉಳಿಸಿ ಕೊಳ್ಳುವ, ಪಾರದರ್ಶಕ ವಿಚಾರಣೆ ಮಾಡಬಲ್ಲ ಸಂಸ್ಥೆಯೊಂದನ್ನು ಹೇಗೆ ನಿರ್ಮಿಸುವುದು ಎನ್ನುವುದು ಒಂದು ಕಠಿಣ ಪ್ರಶ್ನೆ. ಉಚ್ಚ ನ್ಯಾಯಾಲಯ ಎಲ್ಲ ಕಾಲಕ್ಕೂ ಎಲ್ಲವನ್ನೂ ಮಾಡಲಾಗುವುದಿಲ್ಲ. ಹಾಗೂ ಅಲ್ಲಿಯೇ ನ್ಯಾಯಾಧೀಶರುಗಳಲ್ಲಿ ಅನೇಕರ ಬಗ್ಗೆ ಅಪನಂಬಿಕೆಯ ದುರಂತವೂ ಉಂಟಾಗಿದೆ. ಈಗ ಉಚ್ಚ ನ್ಯಾಯಾಲಯ ಅದರ ನಿರ್ದೇಶನದಲ್ಲಿ ಕೇಂದ್ರ ತನಿಖಾ ಇಲಾಖೆ ಹಾಗೂ ಆದಾಯ ತೆರಿಗೆ ಇಲಾಖೆಗೆ ತನಿಖೆ ನಡೆಸಲು ಆದೇಶ ನೀಡಿದೆ. ಏನಾಗುತ್ತದೋ ನೋಡೋಣ.

ಅಧಿಕಾರ ವರ್ಗ, ಶಾಸಕವರ್ಗ ಹಾಗೂ ನ್ಯಾಯಾಂಗ ಮೂರೂ ಕೆಟ್ಟರೆ ಪ್ರಜಾಪ್ರಭುತ್ವ ನಡೆಯುವುದು ಹೇಗೆ? ಈ ಪ್ರಜಾಪ್ರಭುತ್ವದ ಅಗತ್ಯವಿರುವುದು ಜನತೆಗೆ. ಅವರೇ ಇಲ್ಲಿ ಮಧ್ಯಪ್ರವೇಶ ಮಾಡದೆ ಪರಿಸ್ಥಿತಿ ಸುಧಾರಿಸುವುದಿಲ್ಲ. ಇದಕ್ಕೆ ಕೇವಲ ಚುನಾವಣೆ ಸಾಲದು.



# ಈ ತಿಂಗಳು

‘‘ಸನ್ಮಾನ್ಯ’’ ಯಡಿಯೂರಪ್ಪನವರು ಮುಖ್ಯಮಂತ್ರಿಯಾದಾಗಿನಿಂದ ಹಲವು ರೀತಿಗಳಲ್ಲಿ ಅವರಿಂದ ಉಂಬಳಿ ಪಡೆದು ಉಂಡಿರುವ ಪೇಜಾವರ ಸ್ವಾಮಿ ತೀರ್ಥರೆಂಬ ‘‘ಮಹಾ ಸಜ್ಜನ’’ರಿಗೆ ತುಮಕೂರು ವಿಶ್ವವಿದ್ಯಾನಿಲಯವು ಡಾಕ್ಟರೇಟ್ ಪದವಿಯೊಂದನ್ನು ಪುಕ್ಕಟೆಯಾಗಿ ಕೊಟ್ಟು ಕೃತಾರ್ಥವಾಗಿದೆ. ಸದರಿ ವಿಶ್ವವಿದ್ಯಾಲಯದ ಉಪಕುಲಪತಿಗಳು ಏನೋ ಮಾಯಾಮಂತ್ರ ಮಾಡಿ ಗವರ್ನರರಿಂದ ಮಾಹೆಯಾನ ಒಂದು ಲಕ್ಷಕ್ಕೂ ಹೆಚ್ಚಿನ ಸಂಬಳವನ್ನು ಪಡೆದುಕೊಂಡಿದ್ದರು. ಮಂತ್ರವು ತಿರುಮಂತ್ರವಾಗಿ ಅಕಲಾಯವಾಗಿ ಪಡೆದಿದ್ದ ಹಣವನ್ನು ಹಿಂದಿರುಗಿಸಬೇಕೆಂದು ಆಜ್ಞೆ ಬಂದಾಗ ಉಪ ಕುಲಪತಿಗಳು ಅದನ್ನು ಪ್ರಶ್ನಿಸಿ ಪತ್ರವ್ಯವಹಾರ ನಡೆಸುತ್ತಿದ್ದಾರೆ. ಸಂನ್ಯಾಸಿ ಪೇಜಾವರರಿಗೆ ಪದವಿ ದಾನ ಮಾಡಿ ಪುನೀತರಾದ ನಂತರ ಅವರು ಹಿಂದಿರುಗಿಸಬೇಕಾದ ಹಣವನ್ನು ದಕ್ಕಿಸಿಕೊಳ್ಳುತ್ತಾರೆಯೆ ? ಕಾದು ನೋಡಬೇಕು. ಸಂನ್ಯಾಸದ ಸದುಪಯೋಗ ಪಡೆದು ವೇದಾಂತ ಸುಧೆಯನ್ನು ಸವಿಯಲೆಂಬ ಆಶಯದಿಂದ ಗೌರವ ಪದವಿಯನ್ನು ಪೇಜಾವರರಿಗೆ ನೀಡಿದ್ದರೆ ಸದರಿ ಸ್ವಾಮಿಗಳೂ ನ್ಯಾಯಸುಧೆಯ ಅಧ್ಯಯನದಲ್ಲಿ ಮುಳುಗಲೆಂದು ಆಶಿಸಬೇಕಾಗಿದೆ. ಅದನ್ನು ಮಾಡಲು ವಿಶ್ವೇಶ್ವರ ಯತಿಗಳು ಸಿದ್ಧರಿದ್ದಂತೆ ಕಾಣುವುದಿಲ್ಲ. ಬದಲಾಗಿ ಮಂತ್ರಿಗಳ ಗುಳಂ ವ್ಯವಹಾರಕ್ಕೆ ಕುಮ್ಮಕ್ಕು ನೀಡಿ ತಾವೂ ಒಂದು ಗುಳುಂ ಪ್ರಸಂಗದಲ್ಲಿ ಲಾಭ ಮಾಡಿಕೊಂಡಿದ್ದಾರೆ. ಅದೇನೆಂದರೆ, ಇನ್ನು ಮೇಲೆ ಉಡುಪಿ ಶ್ರೀಕೃಷ್ಣ ದೇವಾಲಯವು ಮುಜರಾಯಿ ಇಲಾಖೆಯ ಸುಪರ್ದಿನಿಂದ ಮುಕ್ತವಾಗಿ ಅಷ್ಟ ಮಠಗಳ ಒಡಲಿಗೆ ಗ್ರಾಸವಾಗುತ್ತದೆ ಎಂಬುದು. ಆ ಸಂಬಂಧ ಒಂದು ಆಜ್ಞೆಯನ್ನು ಸರ್ಕಾರ ಹೊರಡಿಸಿದೆ. ಸರ್ಕಾರದ ಬೊಕ್ಕಸಕ್ಕೆ ಬರುತ್ತಿದ್ದ ಲಕ್ಷಗಟ್ಟಲೆ ಹಣ ಇನ್ನು ಮುಂದೆ ಅಷ್ಟ (ಅಥವಾ ಅನಿಷ್ಟ) ಸ್ವಾಮಿಗಳ ತಿಜೋರಿ ಸೇರುತ್ತದೆ. ಡಾಕ್ಟರೇಟ್ ಜೊತೆ ಸ್ವಾಮಿಗಳಿಗೆ ಇದೊಂದು ಸುವರ್ಣ ಪದಕವಿದ್ದಂತೆ. ಆದರೆ ಸರ್ಕಾರದ ಆಜ್ಞೆಯು ಕಾನೂನುಬಾಹಿರವಾದ್ದು. ಕೃಷ್ಣ ದೇವಸ್ಥಾನವನ್ನು ಮಠಗಳಿಗೆ ದಾನ ಮಾಡಿದ ಮುಖ್ಯಮಂತ್ರಿ ಸರ್ವೋಚ್ಚ ನ್ಯಾಯಾಲಯದ ತೀರ್ಪೊಂದನ್ನು ಉಲ್ಲಂಘಿಸಿದ್ದಾರೆ. ಆ ತೀರ್ಪಿನ ಪ್ರಕಾರ ಮುಜರಾಯಿ ದೇವಸ್ಥಾನಗಳನ್ನು ಬೇರೆ ಯಾರ ಸುಪರ್ದಿಗೂ ಬಿಟ್ಟುಕೊಡುವಂತಿಲ್ಲ, ಅವನ್ನು ಸರ್ಕಾರದ ಅಧೀನದಲ್ಲೇ ಇರಿಸಿಕೊಳ್ಳಬೇಕು. ಸ್ವಾಮಿಗಳ ಹೊಟ್ಟೆಬಾಕತನವನ್ನು ನ್ಯಾಯಾಲಯ ನಿಯಂತ್ರಿಸಲಾರದು, ಆದರೆ ಮುಜರಾಯಿ ಇಲಾಖೆಯನ್ನು ನಿಯಂತ್ರಿಸಲು ಅಡ್ಡಿಯಿಲ್ಲ. ಯಡಿಯೂರಪ್ಪನವರು ತಮ್ಮ ಉದಾರ ಆಜ್ಞೆಯನ್ನು ಹಿಂತೆಗೆದುಕೊಳ್ಳಬೇಕು. ಇಲ್ಲದಿದ್ದರೆ ನ್ಯಾಯಾಂಗ ನಿಂದನೆ ಆರೋಪದ ಕಟ್ಟಳೆಯನ್ನವರು ಎದುರಿಸಬೇಕಾಗುತ್ತದೆ. ಸಾರ್ವಜನಿಕ ಹಿತ ಕಾಯ್ದುಕೊಳ್ಳಲು ಯಾರಾದರೂ ವಕೀಲರು ಮೊಕದ್ದಮೆಯನ್ನು ಹೂಡಬೇಕೆಂಬ ನಿರೀಕ್ಷೆ ನಮ್ಮದು.

* * *

ಅಮೆರಿಕಾ ಸರ್ಕಾರ ಎಷ್ಟು ಉದ್ಧಟತನವನ್ನು ಮೆರೆಯುತ್ತದೋ ಅಷ್ಟೇ ಪ್ರಮಾಣದಲ್ಲಿ ಆ ಸರ್ಕಾರದ ರಾಜತಾಂತ್ರಿಕ ಪ್ರತಿನಿಧಿಗಳೂ ಮೆರೆಯುತ್ತಾರೆ. ಅದಕ್ಕೆ ಈವರೆಗೆ ಪ್ರಕಟವಾಗಿರುವ ‘‘ವಿಕಿಲೀಕ್ಸ್’’ ಬೇಕಾದಷ್ಟು ಪುರಾವೆ ಒದಗಿಸಿದೆ. ಇದಕ್ಕೇನೂ ಪುರಾವೆ ಅಗತ್ಯವಿರಲಿಲ್ಲ, ಏಕೆಂದರೆ ನಿಕ್ಸನ್ - ಕಿಸಿಂಜರ್ ಕಾಲದಿಂದಲೂ ಅಮೆರಿಕಾದ ನಡೆವಳಿಕೆ ಪ್ರಸಿದ್ಧವಾಗಿದೆ. ಅದನ್ನು ತಿಳಿಯದವರಂತೆ ನಟಿಸುವುದು ನಮ್ಮ ಕೇಂದ್ರ ಸರ್ಕಾರದ ಮುತ್ಸದ್ದಿಗಳ ಹೇಡಿತನದ ಕುರುಹು. ಅಮೆರಿಕಾ ರಾಯಭಾರಿಗಳು ಮತ್ತಿತರರು ಯಾವ ದೇಶಗಳನ್ನು ಮತ್ತು ದೇಶಗಳ ನಾಯಕರನ್ನು ಸ್ವೇಚ್ಛೆಯಿಂದ ಮುಕ್ತವಾಗಿ ದಂಡಿಸಿ ದೂಷಿಸಿದ್ದಾರೋ ಅವರೆಲ್ಲಾ ಏನೂ ಆಗಿಲ್ಲವೆಂಬಂತೆ ತೆಪ್ಪಗೆ ಕುಳಿತಿರುವುದು ಆಶ್ಚರ್ಯವಲ್ಲ. ಅಮೆರಿಕಾದ ಅಧ್ಯಕ್ಷ ಈ ‘ಲೀಕ್ಸ್’ ಪ್ರಭಾವವನ್ನು ದೂರೀಕರಿಸಲು ದಿನನಿತ್ಯ ಯಾರಾರಿಗೋ ದೂರವಾಣಿಯಲ್ಲಿ ಮಾತನಾಡುವುದು ಒಂದು ಮೋಜಿನ ಕಾರ್ಯಕ್ರಮವಾಗಿದೆ. ಇತ್ತೀಚೆಗೆ ಟರ್ಕಿ ಮುಂತಾದ ‘‘ಮಿತ್ರರಾಷ್ಟ್ರ’’ಗಳ ನಾಯಕರಿಗೆ ಫೋನ್ ಮಾಡಿ ಸರಸ ಸಂಭಾಷಣೆ ನಡೆಸಿದ್ದಾರೆಂದು ವರದಿಯಾಗಿದೆ. ಅಮೆರಿಕಾದ ರಾಜಕಾರಣಿಗಳು ಮತ್ತು ಮಾಧ್ಯಮಗಳು ಹರಿಯಬಿಟ್ಟಿರುವ ಒಂದು ಮಾತು ‘‘ಹೀಗೆ ಬಹಿರಂಗಗೊಂಡಿರುವುದು ಬೇರೆಬೇರೆ ದೇಶಗಳ ಕೆಲವು ವ್ಯಕ್ತಿಗಳ ಜೀವಕ್ಕೆ ಅಪಾಯ ತರುತ್ತದೆ’’ ಎಂಬುದು. ಅಂದರೆ, ಆ ಕಾರಣಕ್ಕಾಗಿಯಾದರೂ ‘ಲೀಕ್’ ಮಾಡುವುದನ್ನು ನಿಲ್ಲಿಸಿ ಎಂಬುದು ಅವರ ಸೂಚನೆ. ಜೀವಗಳ ಅಪಾಯದ ಬಗೆಗಿನ ಕಾಳಜಿ ಅಮೆರಿಕಾ ಅಧ್ಯಕ್ಷರಿಗೆ ಯಾವಾಗಿನಿಂದ ಮೂಡಿತು ? ಹಲವು ದೇಶಗಳಲ್ಲಿ ಲಕ್ಷಗಟ್ಟಲೆ ಜನಗಳನ್ನು ಕೊಂದುಹಾಕಿರುವ ಅಮೆರಿಕಾಕ್ಕೆ ಒಂದಿಬ್ಬರು ವ್ಯಕ್ತಿಗಳ ಬಗೆಗಿನ ಕಳಕಳಿ ಸ್ವಾರಸ್ಯವಾಗಿದೆ. ಇನ್ನೂ ಹೆಚ್ಚಿನ ‘ಲೀಕ್’ಗಳನ್ನು ತಡೆಯಲು ಅಮೆರಿಕಾ ಡೈಕ್‌ಗಳನ್ನು ರಚಿಸಲು ಸ್ವೀಡನ್ನಿನ ಮೊರೆ ಹೊಕ್ಕಿದೆ. ಆಜ್ಞಾಧಾರಕ ಸ್ವೀಡನ್, ಅಸಾಂಜ್ ಅವರ ಮೇಲೆ ವಿನೂತನ ಆಪಾದನೆ ಹೊರಿಸಿ ಬ್ರಿಟನ್ನಿನಲ್ಲಿ ಆತನ ದಸ್ತಗಿರಿ ಮಾಡಿಸಿದೆ. ಉಳಿದ ಕತೆ ಇನ್ನೂ ಬಿಚ್ಚಿಕೊಳ್ಳಲಿದೆ.

ಈ ಮಧ್ಯೆ ಭಾರತದ ರಾಯಭಾರಿ ಮೀರಾ ಶಂಕರ್ ಅವರನ್ನು ಅಮೆರಿಕಾದಲ್ಲಿ ತಪಾಸಣೆಗೆ ಗುರಿಮಾಡಿರುವ ಸುದ್ದಿಯಿಂದ ನಮ್ಮ ವಿದೇಶಾಂಗ ಮಂತ್ರಿ ಕಿಂಚಿತ್ತೂ ವಿಚಲಿತರಾಗಿಲ್ಲ. ‘‘ಇನ್ನು ಮುಂದೆ ಸೀರೆಯುಟ್ಟು ವಿಮಾನದಲ್ಲಿ ಪ್ರಯಾಣಿಸಬೇಡಿ’’ ಎಂಬ ಸೂಚನೆಯನ್ನವರಿಗೆ ಕಳಿಸುತ್ತಾರೆಯೆ ? ಅಮೆರಿಕಾ ಏನು ಮಾಡಿದರೂ ವಿನಯದಿಂದ ಸ್ವೀಕರಿಸುವ ಪ್ರಧಾನಿ ಮತ್ತು ವಿದೇಶಾಂಗ ಮಂತ್ರಿ ಆ ದೇಶದ ಬಗ್ಗೆ ಉಸಿರೆತ್ತಲು ಆಶಿಸುವ ಸೋಗುಹಾಕುತ್ತಾರೆ; ಆದರೆ ತಕ್ಷಣ ಬಟ್ಟೆ ಒದ್ದೆಯಾಗಿಬಿಡುತ್ತಾದ್ದರಿಂದ ಬಾಯಿ ಬಿಡುವುದಿಲ್ಲ. ‘‘ಅಮೆರಿಕಾದ ರಾಯಭಾರಿಗೆ ಗೌಹಾತಿ ವಿಮಾನ ನಿಲ್ದಾಣದಲ್ಲಿ ಚೆಡ್ಡಿ ಬಿಚ್ಚಿಸಿ ತಪಾಸಣೆ ಮಾಡಬೇಕು’’ ಎಂಬ ಸಲಹೆ ನೀಡಿದರೆ ವಿದೇಶಾಂಗ ಮಂತ್ರಿ ಒಪ್ಪುತ್ತಾರೆಯೆ ? ‘‘ಅವರ ದೇಶದ ಸುಭದ್ರತೆಗಾಗಿ ಅಮೆರಿಕಾ ಏನಾದರೂ ಮಾಡಿದರೆ ನೀವೇಕೆ ಗುಲ್ಲೆಬ್ಬಿಸುತ್ತೀರಿ’’ ಎಂದು ಉಪದೇಶಿಸುವವರಿಗೆ ನಮ್ಮಲ್ಲಿ ಕೊರತೆಯಿಲ್ಲ. ಇದು ಸುಭದ್ರತೆಯ ಪ್ರಶ್ನೆಯಲ್ಲ, ಅಹಂಕಾರದ ಪ್ರಶ್ನೆ. ಅದಕ್ಕೆ ಉತ್ತರ ಪ್ರತೀಕಾರವಲ್ಲ, ಗೌರವಯುತ ದೃಢತೆ. ಮನಮೋಹನ ಸಿಂಗ್ ಸರ್ಕಾರ ಮತ್ತು ಭಾರತದ ಗೌರವ ಪರಸ್ಪರ ವಿರೋಧಿ ಅಂಶಗಳಾಗಿಬಿಟ್ಟಿರುವುದು ನಮ್ಮ ಪ್ರಕೃತದ ದುರಂತ.

* * *

ಅಮೆರಿಕಾದ ಬೇಜವಾಬ್ದಾರಿ ಆರ್ಥಿಕ ಅನೀತಿಯ ಪರಿಣಾಮವಾಗಿ ಎರಡು ವರ್ಷಗಳ ಹಿಂದೆ ಆರಂಭವಾದ ಆರ್ಥಿಕ ಹಿಂಜರಿತವು ವಿಶ್ವದ ಅನೇಕ ರಾಷ್ಟ್ರಗಳಿಗೆ ಬಲವಾದ ಪೆಟ್ಟು ನೀಡಿತು. ಯೂರೋಪ್ ಅದರ ಭೀಕರ ಪರಿಣಾಮದ ಭಯದಿಂದ ಇನ್ನೂ ಮುಕ್ತವಾಗಿಲ್ಲ. ಐರ್ಲೆಂಡ್ ಮತ್ತು ಗ್ರೀಸ್ ಅದಕ್ಕೆ ವರ್ತಮಾನದ ನಿದರ್ಶನಗಳು. ಚೀಣಾ ಮತ್ತು ಭಾರತ ಸಹ ಒಂದಷ್ಟು ಹೊಡೆತ ತಿನ್ನಬೇಕಾಗುತ್ತದೆಂದು ನಿರೀಕ್ಷಿಸಲಾಗಿತ್ತು, ಆದರೆ ನಮ್ಮ ದೇಶ ಒಂದಷ್ಟು ಮೂಗೇಟು ತಿಂದು ಸಾವರಿಸಿಕೊಂಡಿತು. ಹೀಗೆ ಸ್ವಲ್ಪ ಸ್ಥೈರ್ಯ ಹೊಂದಲು ಕಾರಣ ಮನಮೋಹನ ಸಿಂಗ್ ಮತ್ತು ಅವರ ಮಂತ್ರಿಮಂಡಲದ ಸದಸ್ಯರೇನಲ್ಲ. ಅವರೆಲ್ಲರ ನೀತಿಯೂ ಭಾರತವನ್ನು ಅಮೆರಿಕಾದ ಮಡಿಲಿಗೆ ತುಂಬುವುದೇ ಆಗಿದೆ. ನಮ್ಮ ಹಣಕಾಸು ವ್ಯವಸ್ಥೆಯನ್ನು ನಿಯಂತ್ರಿಸುವ ಕೆಲಸವನ್ನು ಮಾಡುವುದು (ಮತ್ತು ಹಿಂಜರಿತದ ಸನ್ನಿವೇಶದಲ್ಲಿ ಮಾಡಿದ್ದು) ಭಾರತೀಯ ರಿಸರ್ವ್ ಬ್ಯಾಂಕ್. ಹಣದ ಸರಬರಾಜು, ಪ್ರಸಾರ, ಬಡ್ಡಿ ದರ, ಮುಂತಾದುವನ್ನು ಹದ್ದುಬಸ್ತಿನಲ್ಲಿಡಲು ಈ ಕೇಂದ್ರ ಬ್ಯಾಂಕ್ ಬಹುಮಟ್ಟಿಗೆ ಶ್ರಮಿಸಿದೆ ಮತ್ತು ಸಾಕಷ್ಟು ಯಶಸ್ವಿಯಾಗಿದೆ. ರಿಸರ್ವ್ ಬ್ಯಾಂಕಿನ ನೀತಿ ನಿರೂಪಣೆ ಮಾಡುವುದು, ಆ ನೀತಿಯನ್ನು ಅನುಷ್ಠಾನಕ್ಕೆ ತರುವುದು, ಕೇವಲ ಬ್ಯಾಂಕಿನ ಗವರ್ನರ್ ಒಬ್ಬರಲ್ಲ, ಅದಕ್ಕೆ ಬ್ಯಾಂಕಿನ ಮಂಡಲಿ ಇದೆ. ಈ ಮಂಡಲಿಯ ಮೇಲೆ ಉರಿಗಣ್ಣಿನ ನೋಟ ಹಾಯಿಸುವವರಲ್ಲಿ ಪ್ರಮುಖರೆಂದರೆ ಸ್ಟಾಕ್ ಎಕ್ಸ್‌ಚೇಂಜ್, ಖಾಸಗಿ ಬ್ಯಾಂಕರುಗಳು ಮತ್ತು ಅಮೆರಿಕಾದ ಬಾಲಬಡುಕ ಬಂಡವಾಳಶಾಹಿ ವರ್ಗ ಮತ್ತದರ ಪೋಷಕ ಮಂತ್ರಿಮಂಡಲ. ಜೊತೆಗೆ ಅಹ್ಲುವಾಲಿಯನಂತಹ ಯೋಜನಾ ಆಯೋಗದ ಅಧ್ಯಕ್ಷ. ಇವರೆಲ್ಲರಿಗೂ ವಿಶ್ವ ಬ್ಯಾಂಕ್ ಮತ್ತು ಅಂತರರಾಷ್ಟ್ರೀಯ ಹಣಕಾಸು ಸಂಸ್ಥೆಯ ಇಂಗಿತ ಮತ್ತು ಆದೇಶವೆಂದರೆ ಎಲ್ಲಿಲ್ಲದ ವ್ಯಾಮೋಹ. ಅಂತಹ ಕ್ಷುದ್ರ ಆದೇಶವನ್ನು ತಳ್ಳಿಹಾಕಿ ದೇಶವನ್ನು ಸ್ವಂತದ ಆರ್ಥಿಕ ಕಾಲುಗಳ ಮೇಲೆ ನಿಲ್ಲಿಸಿದ್ದು ಮತ್ತು ನಿಲ್ಲಿಸುವುದು ರಿಸರ್ವ್ ಬ್ಯಾಂಕ್ ಮಂಡಲಿ. ಹೀಗಿರುವಾಗ ಏನಾಗುತ್ತಿದೆ ಗೊತ್ತೆ ? ಅಮೆರಿಕಾ ಇತ್ಯಾದಿಗಳ ಏಜೆಂಟರು ಸರ್ಕಾರದ ಸ್ವಾಮ್ಯಕ್ಕೆ ರಿಸರ್ವ್ ಬ್ಯಾಂಕನ್ನು ತಂದು ಅದರ ಸ್ವಾಯತ್ತತೆಯನ್ನು ಮೊಟಕು ಗೊಳಿಸಹೊರಟಿದ್ದಾರೆ. ಅವರಿಗೆ ಬ್ಯಾಂಕಿನ ಮಂಡಲಿ ಒಂದು ತೊಡಕಾಗಿದೆ; ಆದ್ದರಿಂದ ಅದನ್ನು ವಿಸರ್ಜಿಸಬೇಕೆಂಬ ಹುನ್ನಾರ ಬಲವಾಗುತ್ತಿದೆ. ಆ ಬಗ್ಗೆ ಪಾರ್ಲಿಮೆಂಟ್ ಮುಂದೆ ಶಾಸನವೊಂದನ್ನು ಮಂಡಿಸುವ ಯೋಚನೆ ನಡೆದಿದೆ. ಅದು ಪೂರ್ಣಪ್ರಮಾಣದಲ್ಲಿ ಕಾರ್ಯಗತವಾದರೆ ಕೇಂದ್ರದ ಅರ್ಥಮಂತ್ರಿಯ ಮೂಲಕ ಬೇಕಾದಷ್ಟು ಅನರ್ಥಗಳನ್ನು ಉಂಟುಮಾಡಲು ಸಾಧ್ಯವಾಗುತ್ತದೆ, ಅಹ್ಲುವಾಲಿಯ ಏಕೈಕ ಆರ್ಥಿಕ ಸಲಹೆಗಾರರಾಗುತ್ತಾರೆ ಮತ್ತು ಅಮೆರಿಕಾದ ಆರ್ಥಿಕ ಹಿಂಜರಿತವು ನಮ್ಮ ದೇಶದ ಎಲ್ಲೆಯನ್ನು ದಾಟಿ ಒಳನುಸುಳುತ್ತದೆ. ಅದನ್ನು ಆಗಗೊಡಕೂಡದು. ನಮ್ಮ ದೇಶದ ಪಾರ್ಲಿಮೆಂಟ್ ಇದನ್ನೆಲ್ಲಾ ಕೂಲಂಕಷವಾಗಿ ಪರಿಶೀಲಿಸುವ ಮೊದಲೇ ಅದು ಅನಭಿಷಿಕ್ತ ಶಾಸನವಾಗಿಬಿಡುವ ಅಪಾಯವಿದೆ. ಇತ್ತೀಚೆಗೆ ಕೋಲ್ಕತ್ತಾದಲ್ಲಿ ಜರುಗಿದ ರಿಸರ್ವ್ ಬ್ಯಾಂಕ್ ಮಂಡಲಿಯು ಅನಿವಾರ್ಯವೋ ಎಂಬಂತೆ ತನ್ನ ಅಳಿವಿಗೆ ಮೌನದಿಂದ ಒಪ್ಪಿಗೆ ಸೂಚಿಸಿದೆಯೆಂದು ತಿಳಿದುಬಂದಿದೆ. ಅದರ ಹಿಂದಿನ ಒತ್ತಡ ಎಲ್ಲಿಯದೆಂದು

ತಿಳಿಯುವುದು ಸುಲಭ. ಬ್ಯಾಂಕ್ ನೌಕರರು ರಿಸರ್ವ್ ಬ್ಯಾಂಕ್ ಮಂಡಲಿಯನ್ನು ವಿಸರ್ಜಿಸ ಕೂಡದೆಂದೂ, ಅದರ ಸ್ವಾಯತ್ತತೆಯನ್ನು ಕಸಿದುಕೊಳ್ಳಕೂಡದೆಂದೂ ಒಕ್ಕೊರಲಿನಿಂದ ಒತ್ತಾಯಿಸುತ್ತಿದ್ದಾರೆ. ನಮ್ಮ ದೇಶದ ಆರ್ಥಿಕ ಆರೋಗ್ಯ ಮತ್ತು ಚೈತನ್ಯವನ್ನು ಕಳೆದು ಕೊಳ್ಳದಿರಲು ಸಾರ್ವಜನಿಕರು ತಮ್ಮ ದನಿಯೆತ್ತಬೇಕು, ದೇಶದ ಸಾರ್ವಭೌಮತ್ವವನ್ನು ಉಳಿಸಿಕೊಳ್ಳಬೇಕು, ಅಹ್ಲುವಾಲಿಯ ಬಣದ ಕುಟಿಲತಂತ್ರಗಳಿಗೆ ನಾವು ಬಲಿಯಾಗದಿರಬೇಕು.

* * *

ಮುಖೇಶ ಅಂಬಾನಿ ೨೫ ಅಂತಸ್ತುಗಳ ಮಹಲ್ ಕಟ್ಟಿಕೊಂಡ, ಎ. ರಾಜ ೧,೭೬,೦೦೦ ಕೋಟಿ ಹಣ ದೋಚಿಕೊಂಡ, ಯಡಿಯೂರಪ್ಪನವರ ಮಂಡಳಿ ಅದೆಷ್ಟೋ ಸಾವಿರ ಎಕರೆ ಭೂಮಿ ಕದ್ದಿತು, ನಿತಿನ್ ಗಡ್ಕರಿ ೯ ಕೋಟಿ ರೂಪಾಯಿ ಉಡುಗೊರೆ ಕೊಟ್ಟರು, ಯಾರೋ ನ್ಯಾಯಾಧೀಶರು ಚೀಲಗಳಲ್ಲಿ ಏನನ್ನೋ ತುಂಬಿಕೊಂಡು ಹೋದರು, ರವಿಶಂಕರ ಗುರು ರೈತರ ಭೂಮಿ ಕಬಳಿಸಿದ, ಹೀಗೆ ಏನೇನೋ ವಾರ್ತೆಗಳನ್ನು ಕೇಳುತ್ತಾ ದೇಶವಿಡೀ ಮೂಕವಾಗಿದೆ. ಇವರಿಗೆಲ್ಲಾ ಮಾದರಿ ಯಾವುದೆಂದು ಹುಡುಕಿದರೆ ಅಮೆರಿಕಾದ ಫೋರ್ಬ್ಸ್ ನಿಯತಕಾಲಿಕೆ ನೀಡುವ ಅಮೋಘ ಪಟ್ಟಿ ಸಹಾಯ ಮಾಡಬಹುದು. ಬ್ರಿಟನ್ನಿನ ವಸಾಹತು ರಾಷ್ಟ್ರವಾಗಿದ್ದ ಭಾರತದ ಮುಂದಾಳುಗಳಿಗೆ ಬ್ರಿಟನ್ ಸಹ ಮಾದರಿಯನ್ನೊದಗಿಸಬೇಕಲ್ಲವೆ ? ಆ ದೇಶದ ''ನ್ಯೂ ಸ್ಟೇಟ್ಸ್‌ಮನ್'' ಎಂಬ ವಾರಪತ್ರಿಕೆ ದಾಖಲಿಸಿರುವ ಒಂದು ಮಾಹಿತಿ ನೋಡಿದರೆ ಇದು ಖಚಿತವಾಗುತ್ತದೆ. ಪತ್ರಿಕೆಯ ಅಕ್ಟೋಬರ್ ೧೮ರ ಸಂಚಿಕೆಯಲ್ಲಿರುವ ಮಾಹಿತಿ ಹೀಗಿದೆ: ಡ್ಯೂಕ್ ಆಫ್ ವೆಸ್ಟ್‌ಮಿನ್‌ಸ್ಟರ್ ಹೊಂದಿರುವ ಜಮೀನಿನ ಬೆಲೆ ೧೧.೫ ಬಿಲಿಯನ್ ಪೌಂಡುಗಳು. (ಅದನ್ನು ರೂಪಾಯಿಗೆ ಪರಿವರ್ತಿಸಿದರೆ ಪತ್ರಿಕೆಯ ಒಂದು ಸಾಲು ಪೂರ್ತಿ ಸಂಖ್ಯೆಗಳು ತುಂಬುತ್ತವೆ). ಇದಕ್ಕೆ ಪೂರಕವಾಗಿ ಬ್ರಿಟನ್ನಿನ ಜನಸಂಖ್ಯೆಯ ಶೇಕಡ ೧ರಷ್ಟು ಮಂದಿ ದೇಶದ ಶೇಕಡ ೭೦ರಷ್ಟು ಭೂಮಿಗೆ ಒಡೆಯರು. (ನಮ್ಮಲ್ಲಿ ಈ ದಾಖಲೆಯನ್ನು ಮುರಿಯಲು ಕೆಲವರು ಯತ್ನಿಸುತ್ತಿದ್ದಾರೆ). ಇನ್ನೂ ನಿಖರವಾಗಿ ಹೇಳುವುದಾದರೆ ಶೇಕಡ ೦.೬ ಮಂದಿ ಶೇಕಡ ೬೯ರಷ್ಟು ಭೂಮಿಯ ಒಡೆಯರು. ಅಥವಾ, ದೇಶದ ೧,೫೮,೦೦೦ ಕುಟುಂಬಗಳು ಒಟ್ಟು ೪.೧ ಕೋಟಿ ಎಕರೆ ಜಮೀನಿನ ಒಡೆಯರು. ಇದಕ್ಕೆ ಪ್ರತಿಯಾಗಿ (ಅಥವಾ ಇದರ ಪರಿಣಾಮವಾಗಿ) ದೇಶದ ೨.೪ ಕೋಟಿ ಕುಟುಂಬಗಳು ಒಟ್ಟು ೪೦ ಲಕ್ಷ ಎಕರೆಗಳಷ್ಟು ಪ್ರದೇಶದಲ್ಲಿ ನಗರವಾಸಿಗಳಾಗಿದ್ದಾರೆ. (ನಮ್ಮ ರಾಜ್ಯದ ನಾಯಕರಿಗೆ ದಾಖಲೆ ಮುರಿಯಲು ಪ್ರೇರಣೆ ದೊರಕೀತೆ ?) ಲಂಡನ್ನಿನಲ್ಲಿ ಒಂದು ಚದರಡಿ ಭೂಮಿಯ ಬೆಲೆ ೨೫೦೦ ಪೌಂಡುಗಳು, ಅಂದರೆ ಸುಮಾರು ೧,೬೧,೦೦೦ ರೂಪಾಯಿಗಳು. ಬೆಂಗಳೂರಿನ ಎಸ್ಟೇಟ್ ಏಜೆಂಟರು ಇದನ್ನು ಗಮನಿಸಿ ದಾಪುಗಾಲು ಹಾಕಬಹುದಲ್ಲವೆ ?

* * *

ರಾಡಿಯಾ ಎಂಬ ಪ್ರತಿಭಾನ್ವಿತ ಮಹಿಳೆಯ ಆಪ್ತವಾಕ್ಯಗಳು, ಕಾರ್ಯವೈಖರಿ, ಮಿತ್ರವೃಂದ, ಹಣದ ವಹಿವಾಟು, ವ್ಯಾಪಕ ಪ್ರಭಾವ, ಇವೆಲ್ಲಾ ದಿನನಿತ್ಯ ಪತ್ರಿಕೆಗಳಲ್ಲಿ ರಾರಾಜಿಸುತ್ತಿರುವುದರಿಂದ ಅದರ ವಿವರಗಳನ್ನು ಪ್ರಸ್ತಾಪಿಸುವುದು ಅನಗತ್ಯ. ಬುರ್ಖಾ ದತ್ತ, ರಾಡಿಯಾ, ಮುಂತಾದವರು ನಮ್ಮ ದೇಶದಲ್ಲಿ ಇನ್ನೆಷ್ಟು ಮಂದಿ ಕಾರ್ಯ ಪ್ರವೃತ್ತರಾಗಿರಬಹುದೆಂಬ ವಿಸ್ಮಯ ಮಾತ್ರ ದಟ್ಟವಾಗಿದೆ, ನಡುಗಿಸಿದೆ. ಇವರಿಗೆಲ್ಲಾ ಯಾವ ಚಳುವಳಿ ಏನು ಬಿಸಿ ಮುಟ್ಟಿಸಬಲ್ಲದು ! ಅಷ್ಟಾದರೂ ಇದರಲ್ಲೇನೂ ಹೊಸದೇನೂ ಇಲ್ಲ, ಅಂಬಾನಿ, ಟಾಟಾ, ರಾಜ, ರಾಡಿಯಾ ಮೊದಲಾದವರು ರಾಡಿ ಉಂಟು ಮಾಡುವುದು ಸಹಜ. ಕೆಲವೇಳೆ ಬಹಿರಂಗವಾಗಿ, ಮತ್ತೆ ಕೆಲವೇಳೆ ಬಚ್ಚಿಟ್ಟು ಕೊಂಡು ಮಾಡುತ್ತಾರೆ, ಅಷ್ಟೆ. ಬಚ್ಚಿಟ್ಟುಕೊಂಡು ಮಾಡಿದರೂ ಬೆಳಕಿನಲ್ಲಿ ಮಾಡಿದಷ್ಟೇ ಪ್ರಕಾಶಮಾನವಾಗಿ ರಾಡಿಯು ಇದ್ದದ್ದೇ. ಅಮೆರಿಕಾ, ಫ್ರಾನ್ಸ್, ಬ್ರಿಟನ್, ಮೊದಲಾದೆಡೆ ಅದಿರಬಹುದಾದರೆ ನಮ್ಮಲ್ಲೇಕೆ ಬೇಡ ! ಹೇಗೆತಾನೆ ಇರದಿರಲು ಸಾಧ್ಯ ? ಅದು ಬಂಡವಾಳಶಾಹಿ ವ್ಯವಸ್ಥೆಯ ಅವಿರತ ಲಕ್ಷಣ. ವಿಜಿಲೆನ್ಸ್ ಕಮಿಷನರ್ ಆದರೂ ಅಷ್ಟೆ, ಮನಮೋಹನ ಸಿಂಗ್ ಆದರೂ ಅಷ್ಟೆ, ಭಾರತೀಯ ಜೀವ ವಿಮಾ ನಿಗಮವಾದರೂ ಅಷ್ಟೆ; ಎಲ್ಲಾ ಬಂಡವಾಳಶಾಹಿ ಚಕ್ರದ ಅಕ್ಷಗಳು. ಅಷ್ಟಲ್ಲದೆ ೧೬೨ ವರ್ಷಗಳ ಹಿಂದೆಯೇ ಕಮ್ಯುನಿಸ್ಟ್ ಪ್ರಣಾಲಿಕೆ ಹೇಳಿತೆ, ಬಂಡವಾಳಶಾಹಿಯಡಿ ಸರ್ಕಾರ, ಅಧಿಕಾರಿಗಳು, ನ್ಯಾಯಾಲಯ, ಎಲ್ಲವೂ ಬಂಡವಾಳಶಾಹಿ ವ್ಯವಸ್ಥೆಯ ಅನಧಿಕೃತ ಕಾರ್ಯಕಾರಿ ಮಂಡಲಿಗಳು, ಎಂದು !! ಆಗೊಮ್ಮೆ ಈಗೊಮ್ಮೆ ರಾಡಿಯನ್ನು ನೋಡಿ ಮೂಗು ಮುಚ್ಚಿಕೊಳ್ಳುವುದು ನಿರರ್ಥಕ; ರಾಡಿಯನ್ನು ಹೊಮ್ಮಿಸುವ ಹೊಲಸು ಚರಂಡಿಯಾದ ಬಂಡವಾಳಶಾಹಿ ವ್ಯವಸ್ಥೆಯನ್ನು ಹೊರದಬ್ಬಬೇಕು. ಇಲ್ಲದಿದ್ದರೆ ಜನರ ಅರಿವಿಗೆ ಬರದಿದ್ದಾಗಲೂ ರಾಡಿ ಕೆಲಸ ನಡೆದೇ ಇರುತ್ತದೆ. ಸರ್ಕಾರವು ದಳ್ಳಾಳಿಯಾಗದಂತೆ ತಡೆಯಬೇಕಾದರೆ ಅದು ಜನತಾ ಪ್ರಜಾಪ್ರಭುತ್ವವಾಗಿ ಮಾರ್ಪಡಬೇಕು.

೨೦೧೧ರಲ್ಲಿ ಅದನ್ನು ಆಗುಮಾಡುವ ಕೆಲಸದಲ್ಲಿ ನಾವೆಲ್ಲಾ ತೊಡಗಬೇಕಾದ್ದು ಕೇವಲ ಮರ್ಯಾದೆಯ ಅಥವಾ ಶಾಸ್ತ್ರದ ಪ್ರಶ್ನೆಯಲ್ಲ; ಅದು ಬಾಳುವೆಯ ಪ್ರಶ್ನೆ.

* * *

ಭಾರತೀಯ ಜನತಾ ಪಕ್ಷದಲ್ಲಿ ಅಧ್ವಾನಿಯವರಿಂದ ಹಿಡಿದು ಕಟ್ಟಕಡೆಯ ''ಸ್ವಯಂ'' ಸೇವಕನವರೆಗೆ ಎಲ್ಲರೂ ಶ್ರೀರಾಮಚಂದ್ರನ ಭಕ್ತರೇ. ಅವನ ಭಜನೆಯು ಇವರೆಲ್ಲರ ರಾಜಕೀಯ ಗೀತೆ. ರಾಮನ ಸಂಪ್ರದಾಯದವರು ಕೆಲವಾದರೂ ಮೌಲ್ಯಗಳನ್ನು ಪಾಲಿಸಬೇಕೆಂಬ ನಿರ್ಬಂಧವೇನೂ ಇಲ್ಲ. ಒಂದು ಕೋಮಿನವರನ್ನು ದೂಷಿಸುವುದು ಮತ್ತು ಶ್ರೀರಾಮನ ಹೆಸರು ಉಚ್ಚರಿಸುತ್ತಿರುವುದು, ಇವೆರಡೇ ಅವರು ಪಾಲಿಸಬೇಕಾದ ಮೂಲಧರ್ಮ. ಸಾರ್ವಜನಿಕ ಆಸ್ತಿ ದೋಚಬಾರದು, ರೈತರ ಕತ್ತು ಹಿಚುಕಬಾರದು, ಸ್ಟಾಕ್ ಮಾರ್ಕೆಟ್ ದಲ್ಲಾಳಿಗಳನ್ನು ದೂರವಿರಿಸಬೇಕು, ಇತ್ಯಾದಿ ಯಾವ ನಿಬಂಧನೆಯೂ ಅವರಿಗೆ ವಿಧಿಸಿಲ್ಲ, ವಿಧಿಸುವಂತಿಲ್ಲ. ಇದೇ ಭಾರತೀಯ ಸಂಸ್ಕೃತಿಯ ಪುನರುಜ್ಜೀವನಕ್ಕೆ ಸಾಧನೆಯೆಂದು ಅವರಿಗೆಲ್ಲಾ ಮನದಟ್ಟಾಗಿದೆ ! ಆದ್ದರಿಂದ ಯಡಿಯೂರಪ್ಪ, ಕಟ್ಟಾ ಲೂಟಿಕೋರ, ಹೀಗೆ ಯಾರೂ ಹಿಂದೆ ಬೀಳದೆ ಎಷ್ಟು ಸಿಕ್ಕಿದರೂ ಸಾಲದೆಂದು ಬಾಚಿಕೊಳ್ಳುತ್ತಾರೆ ಮತ್ತು ಬಾಚಿಕೊಂಡರೆಂದು ಹೇಳಿದವರ ಮೇಲೆ ಸಿಟ್ಟಿಗೇಳುತ್ತಾರೆ. ಪ್ರತಿನಿತ್ಯ ಇದೇ ಆಹಾರವನ್ನು ಮಾಧ್ಯಮಗಳು ನೀಡುತ್ತವಾದ್ದರಿಂದ ಅದನ್ನು ವಿಸ್ತರಿಸುವ ಅಗತ್ಯವಿಲ್ಲ. ಆದರೆ ಹಿಂದಿನ ಪ್ರಮೋದ್ ಮಹಾಜನ್ ಮತ್ತು ಇಂದಿನ ಕೇತನ್ ದೇಸಾಯಿ, ನಿತಿನ್ ಗಡ್ಕರಿ, ಮುಂತಾದವರ ದಾಖಲೆಗಳನ್ನು ಸ್ಮರಿಸುವುದು ಉಚಿತ. ೨-ಜಿ ಸ್ಪೆಕ್ಟ್ರಂ ಹಗರಣಗಳ ಸೃಷ್ಟಿಕರ್ತ ಬ್ರಹ್ಮದೇವ ಮಹಾಜನ್. ಕೇತನ್ ದೇಸಾಯಿ ಅಖಿಲ ಭಾರತ ವೈದ್ಯಕೀಯ ಮಂಡಲಿಯ ಅಧ್ಯಕ್ಷನಾಗಿ ಹಣವನ್ನು ಸೂರೆ ಮಾಡಿದ ಪ್ರಖ್ಯಾತಿಯವರು. ದೇಶದ ಎಲ್ಲ ವೈದ್ಯರೂ ಆ ಮಹಾಶಯನಿಗೆ ಮಂಗಳಾರತಿ ಮಾಡಿದ್ದಾರೆ. ಅದರ ಪ್ರಯುಕ್ತ ಕಡೆಗೂ ದೇಸಾಯಿ ತನ್ನ ಸ್ಥಾನದಿಂದ ನಿರ್ಗಮಿಸಬೇಕಾಯಿತು. ಆದರೆ ಯಥಾಪ್ರಕಾರ ಒಂದು ಬಿಡಿಗಾಸನ್ನೂ ಅವರು ಕಳೆದುಕೊಂಡಿಲ್ಲ. ನಿತಿನ್ ಅವರು ''ಸ್ವಯಂ'' ಸೇವಕರ ಕೇಂದ್ರಸ್ಥಾನವಾದ ನಾಗಪುರದಲ್ಲೇ ಸಹಸ್ರಾರು ಅಭಿಮಾನಿಗಳ ಸಮ್ಮುಖದಲ್ಲಿ ತಮ್ಮ ಪುತ್ರರತ್ನನಿಗೆ ಮದುವೆಯ ಉಡುಗೊರೆಯಾಗಿ ಕೇವಲ ಒಂಭತ್ತು ಕೋಟಿ ರೂಪಾಯಿ ಮೌಲ್ಯದ್ದೇನನ್ನೋ ನೀಡಿ ಮಂದಹಾಸ ಹೊರಸೂಸಿದ್ದಾರೆ. ಅದ್ಭುತ ಸಾಂಸ್ಕೃತಿಕ ಪ್ರತಿನಿಧಿ, ನೀತಿವಂತ ರಾಜಕಾರಣಿ ಮತ್ತು ಸರಳ ಜೀವನದ ಪ್ರತಿಕೃತಿ ಅಂದರೆ ಇವರೇ ಇರಬೇಕು. ಆದರೆ ಉಡುಗೊರೆಯಾಗಿ ಕೋಟಿ ನೀಡುವ ಉದಾರಿಗೆ ಅಷ್ಟು ಮೊತ್ತ ಎಲ್ಲಿಂದ ಬಂತು ಎಂದು ಯಾರೂ ಕೇಳಬಾರದು. ದೇಶದ ಅಧ್ಯಕ್ಷರೂ ಒಳಗೊಂಡಂತೆ ಹತ್ತಾರು ವಿಮಾನಗಳಲ್ಲಿ ನೂರಾರು ದೇಶಭಕ್ತ ನಾಯಕರು ಮದುವೆಗೆ ನಾಗಪುರಕ್ಕೆ ಬಿಜಯಂಗೈದಿದ್ದರು. ಯಾರೂ ಕೋಟಿಯ ಮೂಲ ಶೋಧಿಸಲು ಆಸಕ್ತಿ ತೋರಲಿಲ್ಲ. ಮದುವೆಗೆ ಬಂದಿದ್ದು ನಾಲ್ಕು ಲಕ್ಷ ಮಂದಿ. ಇವರಿಗೆಲ್ಲ ಭೂರಿಭೋಜನ. ಒಂದು ಊಟಕ್ಕೆ ೪೦೦ರಿಂದ ೮೦೦ ರೂಪಾಯಿ. ಕೇಳಬೇಕೆ ? ವಧೂವರರ ಮುಂದಿನ ಜೀವನ ಸುಗಮವಾಗದೆ ಇದ್ದೀತೇಕೆ ! ■

(೧೪ನೇ ಪುಟಕ್ಕೆ)








# ಪರಿವಿಡಿ

# ಪರಿವಿಡಿ




**ಮುಖಚಿತ್ರ :** ರೈತ ಮಹಿಳೆ
ಕೊನ್‌ಸ್ತಾಂತಿನ್ ಯೊಗೇರೊವಿಚ್ ಮಕೊವ್‌ಸ್ಕಿ
(ರಶಿಯನ್ ಕಲಾವಿದ)

**ವಿನ್ಯಾಸ :** ನವಕರ್ನಾಟಕ ವಿನ್ಯಾಸ

**ಈ ಸಂಚಿಕೆಯ ಚಿತ್ರಗಾರರು**
ಸೃಜನ್, ಮೋನಪ್ಪ, ಶ್ರೀಹರಿ, ಕಮಲಂ ಅರಸು,
ಸುವರ್ಣ, ರಾಜೇಂದ್ರ, ಜಿ. ಎಂ. ಬೊಮ್ನಳ್ಳಿ
ಬಿ. ವಿಲ್ಸನ್, ರಾಂಚಂದ್ರ ಕೊಪ್ಪಲು

**ಕಚೇರಿ ಸಹಕಾರ :** ಜಿ. ವಿ. ತೇಜೋವತಿ










ಈ ತಿಂಗಳು (೧೧ನೇ ಪುಟದಿಂದ)

ಟೆಲಿಫೋನ್ ಕದ್ದಾಲಿಸುವುದು ಟೆಲಿಫೋನ್ ಆರಂಭಿಸಿದ ಕಾಲದಿಂದಲೂ ಇದ್ದದ್ದೇ. ಆ ತಂತ್ರಜ್ಞಾನದ ಸ್ವರೂಪವೇ ಪಾರದರ್ಶಕ. ಗೃಹಶಾಖೆಯ ಮತ್ತೆ ಕೆಲವು ಅಧಿಕಾರಾರೂಢರ ನಡುವೆ ಪ್ರತ್ಯೇಕವಾದ ಟೆಲಿಫೋನ್ ಇರುತ್ತದೆ ಅಥವಾ ಅವರು ಮಾತನಾಡಿದ್ದನ್ನು ರೂಪುಗೆಡಿಸಿ ಅಂದರೆ ಗಾರ್ಬಲ್ ಮಾಡಿ ತಂತುವಿನ ಮೇಲೆ ಕಳುಹಿಸಿದಾಗ, ಅದರದೇ ಭಾಷೆ ತಿಳಿಯುವ ಸಾಧನದಿಂದ ಮಾತ್ರ ಅದನ್ನು ಮೂಲ ರೂಪಕ್ಕೆ ಬದಲಾಯಿಸಿಕೊಂಡು ಆಲಿಸಬಹುದು. ಇದನ್ನೇ ಈಗ ಎನ್‌ಕ್ರಿಪ್ಷನ್ ರಹಸ್ಯ ಅಥವಾ ಕೋಡ್ ಭಾಷೆ ಎನ್ನುವುದು. ರಹಸ್ಯವಾಗಿ ಮಾತನಾಡಬೇಕಾದವರು ಹಾಗೆ ಮಾಡಬಹುದು. ಆದರೆ ಈ ಗುಟ್ಟಿನ ಭಾಷೆ ಬಳಸಲು ಗೃಹಖಾತೆಯ ಕಾನೂನಿನನ್ವಯ ಗುರುತಿಸಿದವರಿಗೆ ಮಾತ್ರ, ಅಂದರೆ, ಉನ್ನತ ಪೊಲೀಸ್ ಅಧಿಕಾರಿಗಳು, ಪ್ರಧಾನಿ, ರಾಜ್ಯಪಾಲರು ಮುಂತಾದವರಿಗೆ ಅವಕಾಶ. ಇದಕ್ಕೆ ಬೇಕಾದ ಉಪಕರಣಗಳನ್ನು ಮುಕ್ತ ಮಾರುಕಟ್ಟೆಯಲ್ಲಿ ಮಾರುವ ಹಾಗಿಲ್ಲ. ಕೈಗಾರಿಕೋದ್ಯಮಿಗಳು ಅಥವಾ ಪ್ರೇಮಿಗಳು ಆಡುವ ಸಂಭಾಷಣೆಗಳನ್ನು ಈ ರಹಸ್ಯದ ಗುಂಪಿಗೆ ಸೇರಿಸಲಾಗುವುದಿಲ್ಲ. ಇತ್ತೀಚೆಗೆ ಬ್ಲಾಕ್‌ಬೆರಿ ಟೆಲಿಫೋನ್ ಕಂಪನಿ ತನ್ನ ಬಳಕೆದಾರರಿಗೆ ಈ ರಹಸ್ಯ ಭಾಷೆಯ ಸೌಲಭ್ಯ ಕೊಟ್ಟಿದ್ದು ವಿವಾದವಾಗಿ, ಈಗ ಅದನ್ನು ಸರ್ಕಾರ ಕದ್ದಾಲಿಸಲು ಬೇಕಾದ ರಹಸ್ಯವನ್ನು ಅವರಿಂದ ಒತ್ತಾಯಿಸಿ ಪಡೆದುಕೊಂಡಿತು. ಭಯೋತ್ಪಾದಕರು, ರಾಷ್ಟ್ರದ್ರೋಹಿಗಳು ತೊಡಗುವ ಕುಕೃತ್ಯಗಳನ್ನು ತಿಳಿಯಲು ಈ ಕದ್ದಾಲಿಸುವ ವ್ಯವಸ್ಥೆ ಬೇಕಾಗುತ್ತದೆ. ಇದು ಸರ್ಕಾರದ ಅಗತ್ಯ. ಎಲ್ಲರಿಗೂ ಆ ಅಧಿಕಾರವನ್ನು ನೀಡುವುದು ಸರಿಯೂ ಅಲ್ಲ. ವಾಸ್ತವವೆಂದರೆ ಸಂಪರ್ಕದ ಹಾದಿಯಲ್ಲಿ ಎಲ್ಲಾದರೂ ಒಂದೆಡೆ ತಾಂತ್ರಿಕವಾಗಿ ಕದ್ದಾಲಿಸುವುದು ಸಾಧ್ಯ ಮತ್ತು ಇದನ್ನು ತಾಂತ್ರಿಕವಾಗಿ ತಡೆಯಲು ಆಗುವುದಿಲ್ಲ. ಯಾರು ಯಾವ ಹಂತದಲ್ಲಿ ಕದ್ದಾಲಿಸಿದರೆಂದು ತಿಳಿಯಬಲ್ಲೆವಾದರೆ ಅವರನ್ನು ಶಿಕ್ಷೆಗೆ ಗುರಿಪಡಿಸಬಹುದು. ಅದೂ ತಾಂತ್ರಿಕ ಕಾರಣಗಳಿಂದಾಗಿ ಸಾಧ್ಯವಾಗಿಲ್ಲ. ಈಗ ಸದ್ಯದಲ್ಲಿ ಚರ್ಚಿತವಾಗುತ್ತಿರುವುದು ರೆವಿನ್ಯೂ ಗೂಢಚರ್ಯೆಗಾಗಿ ಸರ್ಕಾರದ ತೆರಿಗೆ ಇಲಾಖೆ ಕದ್ದಾಲಿಸಿದ ಟೇಪುಗಳು ಮಾಧ್ಯಮದ ಕೈಗೆ ಹೇಗೆ ತಲುಪಿತು ಎನ್ನುವ ವಿಷಯ. ಇದನ್ನು ಹಿಡಿಯಲೂ ಆಗುವುದಿಲ್ಲ ಮತ್ತು ತಡೆಯಲೂ ಆಗುವುದಿಲ್ಲ. ವಿಕಿಲೀಕ್, ರಾಡಿಯ ಟೇಪುಗಳ ಕಥೆ ಇದು.

ಇದರ ನೀತಿ ಇಷ್ಟು! ರಹಸ್ಯ ವಿಷಯಗಳನ್ನು ಟೆಲಿಫೋನ್‌ನಲ್ಲಿ ಮಾತಾಡಬಾರದು. ಅಂಥವನ್ನು ಮುಖಾಮುಖಿಯಾಗಿ, ಖಾಸಗಿ ಕೋಣೆಯಲ್ಲಿ, ಯಾವುದೇ ಕ್ಯಾಮರ ಅಥವಾ ಕದ್ದಾಲಿಸುವ ಉಪಕರಣಗಳು ಇಲ್ಲವೆಂದು ಖಚಿತಪಡಿಸಿಕೊಂಡು, ನಂತರ ನಡೆಸಬೇಕು. ಶೀತಲ ಸಮರದ ಕಾಲದಲ್ಲಿ ಮಾಸ್ಕೋ ನಗರದ ಅಮೆರಿಕ ರಾಯಭಾರಿ ಕಚೇರಿಯಲ್ಲಿ ಇಂಥ ಉಪಕರಣಗಳನ್ನು ಹುದುಗಿಸಿದ್ದು ಬಹಿರಂಗವಾಯ್ತು. ರಾದ್ಧಾಂತವೂ ಆಯಿತು. ಆಗ ಕ್ರುಶ್ಚೇವ್ ಹೇಳಿದ್ದು : ನಿಮ್ಮ ಎಲ್ಲ ಗುಟ್ಟುಗಳೂ ನಮಗೆ ಮತ್ತು ನಮ್ಮ ಗುಟ್ಟುಗಳು ನಿಮಗೆ ಗೊತ್ತು. ಏನೂ ಪ್ರಮಾದವಿಲ್ಲ ಬಿಡಿ ! ಹಿರಿಯ ಉದ್ಯಮಪತಿ ಟಾಟಾ ಅವರು ತಮ್ಮ ಏಕಾಂತದ ಹಕ್ಕಿಗೆ ಚ್ಯುತಿ ಆಯ್ತು ಎಂದು ಉಚ್ಚ ನ್ಯಾಯಾಲಯದ ಮೊರೆಹೋಗಿದ್ದಾರೆ. ಅವರ ಸ್ವಂತ ವಿಷಯಗಳ ಅಂದರೆ ಗಂಡ ಹೆಂಡತಿ ಸಂಬಂಧ ಮುಂತಾದುವನ್ನು ಗೌಪ್ಯವಾಗಿಡಬೇಕು ನಿಜ. ಆದರೆ ದೇಶದ ಬಹುಪಾಲು ಸಂಪತ್ತಿಗೆ ಪಾಲುದಾರರಾದ ಹಿರಿಯ ಉದ್ಯಮಿಗಳಿಗೆ ಈ ಹಕ್ಕು ಎಲ್ಲಿಂದ ಬಂತು ? ಅವರೂ ಸಾರ್ವಜನಿಕ ಸಂಸ್ಥೆಯೇ ಸರಿ. ಅವರ ವ್ಯವಹಾರವನ್ನು ಪ್ರಾಮಾಣಿಕವಾಗಿ, ಪಾರದರ್ಶಕವಾಗಿ ನಡೆಸುವುದು ಅವರ ಕರ್ತವ್ಯ. ಮಂತ್ರಿ ಮಂಡಲದಲ್ಲಿ ಯಾರು ಸೇರಬೇಕು, ಬಿಡಬೇಕು, ಪ್ರಧಾನಿ ಯಾರು ಆಗಬೇಕು, ಮುಂದಿನ ಬಜೆಟ್ಟಿನಲ್ಲಿ ಯಾವ ಯಾವ ತೆರಿಗೆ ಇರಬಾರದು, ಹೀಗೆಲ್ಲ ತಮ್ಮ ಉದ್ಯಮದ ಹಿರಿತನದ ಪ್ರಭಾವದಿಂದ ನಿರ್ಧರಿಸಬೇಕು ಎಂದು ಬಯಸಿದರೆ ಅದು ಅಕ್ಷಮ್ಯ ಮತ್ತು ಸಾರ್ವಜನಿಕ ವಿಷಯದಲ್ಲಿ ಅಪ್ರಸ್ತುತ ಪ್ರವೇಶ. ಬಹುಶಃ ಇವು ಕಾನೂನು ವಿರೋಧಿಯೂ ಕೂಡ. ತಮ್ಮ ವಿರೋಧಿಗಳು, ಅವರದೇ ಮಾಧ್ಯಮಗಳಿಗೆ ಹಣ ಕೊಟ್ಟು ತಮ್ಮದೇ ಪ್ರಚಾರ ಮತ್ತು ತಮ್ಮೊಡನೆ ಪೈಪೋಟಿಯಲ್ಲಿರುವವರ ವಿರುದ್ಧ ಅಪಪ್ರಚಾರ ಮಾಡುತ್ತಾರೆ ಅಂತ ಟಾಟಾ ನ್ಯಾಯಾಲಯಕ್ಕೆ ಹೇಳಿದ್ದಾರೆ. ಇದು ಮಡಕೆ, ಟೀ ಎಸರಿನ ಪಾತ್ರೆಯನ್ನು ಕಪ್ಪು ಎಂದಂತೆ ! ವಾಸ್ತವದಲ್ಲಿ ಉದ್ಯಮಪತಿಗಳೂ ಮಾಧ್ಯಮಪತಿಗಳೂ ಆಗಿ, ಅವರ ಅತ್ಯಾಚಾರಗಳ ವಿರುದ್ಧ ತಾನು ಏನೂ ಮಾಡಲಾರೆನೋ ಎಂದು ಪ್ರೆಸ್ ಕೌನ್ಸಿಲ್ ಕೈಚೆಲ್ಲಿದೆ. ಈ ಪ್ರವೃತ್ತಿಯಿಂದಾಗಿ ಪ್ರಜೆಗಳಿಗೆ ನಂಬಲರ್ಹವಾದ ಮಾಧ್ಯಮಗಳೇ ಇಲ್ಲವಾದ ದುರಂತ ಉಂಟಾಗಿದೆ. ಈ ಸುದ್ದಿ ಸೋರುವಿಕೆಗೆ ಮುಂಚೆಯೇ ಜನಕ್ಕೆ ತೆರೆಯಮರೆಯಲ್ಲಿ ಏನೆಲ್ಲ ಆಗುತ್ತೆ ಅಂತ ಸಂದೇಹವಿತ್ತು. ಈಗ ಅದು ಖಚಿತವಾಯ್ತು ಅಷ್ಟೇ. ಈಗ ದೊರೆತಿರುವ ಸಂಗತಿಗಳು ದೇಶದ್ರೋಹದ, ಭಯೋತ್ಪಾದನೆಯ ವಿಷಯವೇನೂ ಅಲ್ಲ. ಇದು ಉಂಟುಮಾಡಿರುವ ಆಘಾತ ಪ್ರಜಾಪ್ರಭುತ್ವಕ್ಕೆ. ಹೀಗಾಗಿ ಈ ಟೇಪುಗಳನ್ನು, ವಿಕಿಲೀಕ್ ಅಂಥವುಗಳನ್ನು ಸಾರ್ವಜನಿಕರಿಗೆ ತಿಳಿಯುವ ಹಕ್ಕಿದೆ. ಅವನ್ನು ಪ್ರಕಟಿಸಿದ ಪತ್ರಿಕೆ ಒಂದು ಸಾರ್ವಜನಿಕ ಕರ್ತವ್ಯವನ್ನು ನಿರ್ವಹಿಸಿದೆ. ಪ್ರಭುತ್ವಕ್ಕೆ ಸವಾಲೆಸೆದವರನ್ನು ಬಾಯಿಮುಚ್ಚಿಸುವ ಪ್ರಯತ್ನ ಅನೂಚಾನವಾಗಿ ನಡೆಯುತ್ತಲೇ ಬಂದಿದೆ. ಅದು ಅವರನ್ನು ದೇಶದ್ರೋಹಿ ಎಂದು ಕರೆಯುವ ಸಂಚು ಮಾಡುತ್ತದೆ. ಪ್ರಜಾಪ್ರಭುತ್ವದ ಪ್ರತಿಪಾದಕರು ಅಂತಹ ಪ್ರಯತ್ನಗಳನ್ನು ಖಂಡಿಸಬೇಕು. ವಿಕಿಲೀಕ್‌ನ ಲಸಾಂಜೆ ಮೇಲೆ ಅತ್ಯಾಚಾರದ ಅಪರಾಧದ ಪುಕಾರೂ ಇಂಥದೇ. ಇಷ್ಟೆಲ್ಲಾ ಗಲಾಟೇಲಿ ಒಂದು ವಿಷಯ ಯಾರೂ ಗಮನಿಸಲೇ ಇಲ್ಲವೆ ! ಟೇಪುಗಳನ್ನಿಟ್ಟುಕೊಂಡು ಸರ್ಕಾರ ಮೂರು ವರ್ಷ ಏನು ಮಾಡಿತು ಎಂಬುದನ್ನಲ್ಲವೆ ಕೇಳಬೇಕು ?

*                    *                    *

ಒಂದು ರಾಜ್ಯದ ಮುಖ್ಯಮಂತ್ರಿ ಭ್ರಷ್ಟಾಚಾರದ ಕಾರಣ ಪದವಿ ಬಿಟ್ಟ ಒಡನೆಯೇ ಕೇಂದ್ರದಲ್ಲಿ ವಿಲಾಸದಿಂದ ಮಂತ್ರಿಯಾಗುವುದಕ್ಕೆ ಹೇಗೆ ಅರ್ಹನಾಗುತ್ತಾನೆ ? ಅಲ್ಲೂ ಉಚ್ಚ ನ್ಯಾಯಾಲಯ ಆತನ ಮೇಲೆ ದಂಡ ವಿಧಿಸಿದರೆ, ಆತ ಮಂತ್ರಿಮಂಡಲದಲ್ಲಿ ಹೇಗೆ ತಾನೆ ಮುಂದುವರಿಯಲು ಅರ್ಹನಾಗುತ್ತಾನೆ ? ಈ ಎಲ್ಲ ವಿಚಿತ್ರಗಳೂ ಆಗುತ್ತಿರುವುದು ನಾವು ಬನಾನ ರಿಪಬ್ಲಿಕ್ ಆಗುತ್ತಿರುವುದರ ಸೂಚನೆಯೇ ವಿನಾ, ಟಾಟಾ ಹೇಳಿದಂತೆ ಉದ್ಯಪತಿಗಳ ಭ್ರಷ್ಟಾಚಾರ ಬಹಿರಂಗವಾದಾಗಲ್ಲ.

*                    *                    *

ಈಗಷ್ಟೇ ಮುಗಿದ ಚೀನಾದ ಏಷಿಯಾ ಕ್ರೀಡಾಕೂಟ ಆ ದೇಶದ ಸರ್ವತೋಮುಖ ಬೆಳವಣಿಗೆಗೆ ಕನ್ನಡಿ ಹಿಡಿದಿದೆ. ಅವರು ನಡೆಸಿದ ಕೂಟ, ಬಿಂಬಿಸಿದ ಸಾಂಸ್ಕೃತಿಕ ವೈಭವ, ಕಾರ್ಯಶೀಲತೆ ಅಭೂತಪೂರ್ವವಾಗಿತ್ತು. ಅವರೇ ನಡೆಸಿದ ಒಲಿಂಪಿಕ್ ಕೂಟಕ್ಕಿಂತ ಚೆನ್ನಾಗಿತ್ತು. ಇಡೀ ಸಿದ್ಧತೆಯನ್ನು ಕೇವಲ ಎರಡೇ ವರ್ಷದಲ್ಲಿ ನಡೆಸಿದ್ದರು. ಬರುವ ಒಲಿಂಪಿಕ್‌ನಲ್ಲಿ ಪದಕದ ಪಂಕ್ತಿಯಲ್ಲಿ ಅಗ್ರಸ್ಥಾನ ಪಡೆಯುವ ಭರವಸೆ ಹುಟ್ಟಿಸಿದ್ದಾರೆ. ಏಷಿಯಾ ಖಂಡದವರಾಗಿ ನಾವು ಈ ಸಾಧನೆಯನ್ನು ಶ್ಲಾಘಿಸಬೇಕು. ಒಂದು ಕಾಮನ್‌ವೆಲ್ತ್ ಕ್ರೀಡಾ ವ್ಯವಸ್ಥೆಯನ್ನೇ ನಿರ್ವಹಿಸಲಾಗದ ನಾವು, ಒಲಿಂಪಿಕ್‌ಗೆ ಆಹ್ವಾನ ಕೊಡುವ ಬಯಕೆ ಒಣ ಜಂಭವಾಗುತ್ತೆ. ಇನ್ನೂ ತೀವ್ರ ಬಡತನದಿಂದ ತತ್ತರಿಸುತ್ತಿರುವ ನಾವು, ಅದೇಕಾದರೂ ಭದ್ರತಾ ಸಮಿತಿಯ ಸದಸ್ಯತ್ವದ ಆಸೆಗೆ ಏನೇನೊ ಮಾರಿ ಕೊಳ್ಳುತ್ತಿದ್ದೇವೋ ? ಅವರನ್ನು ಸರ್ವಾಧಿಕಾರಿ ದೇಶ ಅಂತ ಹಲವು ವಿಧದಲ್ಲಿ ದೂಷಿಸಿ ಸಂತೋಷಪಡುವವರಿಗೆ ಇದರಿಂದ ನಿರಾಸೆ ಆಗಿರುವುದು ಸಹಜ. ಆ ಕ್ರೀಡೆ ನಡೆಸಿದ ಗುವಾಂಗ್‌ಜೂ ನಗರ ನಮ್ಮ ಬಳ್ಳಾರಿಯ ಕಬ್ಬಿಣದ ಅದಿರನ್ನೆಲ್ಲ ತರಿಸಿಕೊಳ್ಳುತ್ತೆ... ವಾರ್ಷಿಕ ಸುಮಾರು ಎಪ್ಪತ್ತು ಲಕ್ಷ ಟನ್ನು. ನಮಗೆ ಅದರಿಂದ ತಯಾರಿಸಿದ ಮೊಳೆ, ಗೋದ್ರೆಜ್ ಬೀಗ, ಬಾಗಿಲ ಹಿಡಿ ಮುಂತಾಗಿ ರಫ್ತು ಮಾಡುತ್ತೆ. ಹದಿನೆಂಟನೆಯ ಶತಮಾನದಲ್ಲೇ ಸರಕುಗಳನ್ನು ಇಂಗ್ಲೆಂಡಿಗೂ, ಯೂರೋಪಿಗೂ ಕಳುಹಿಸುತ್ತಿದ್ದೆವು. ವಸಾಹತುಶಾಹಿ ಹೇಗೆ ನಾಡಿನ ಅಸ್ತಿತ್ವವನ್ನೇ ಹೀರಿಬಿಡುತ್ತದೆ ಅಂದರೆ, ನಾವು ಇನ್ನೂ ಕಚ್ಚಾವಸ್ತುಗಳನ್ನು ಮಾರುವ ಹಿಂದುಳಿದ ದೇಶವೇ. ನಮ್ಮ ಉದ್ಯಮಪತಿಗಳಿಗೆ ಬಾಗಿಲ ಹಿಡಿ, ಬೀಗಗಳನ್ನು ಮಾಡಲು ಬರುವುದಿಲ್ಲವೇನೋ ! ಜಿಂದಾಲ್ ಕಂಪನಿ ದೂರದ ಬೊಲಿವಿಯಾಗೆ ಹೋಗಿದೆ, ಕಬ್ಬಿಣದ ಅದಿರು ರಫ್ತು ಮಾಡಲು. ಇವರೆಲ್ಲ ನಮ್ಮ ಸಾಹಸಿ ಉದ್ಯಮಿಗಳೇ ಸರಿ ! ಇದು ಕೀಳರಿಮೆಯ ಉದ್ಗಾರವಲ್ಲ. ವಾಸ್ತವವನ್ನು ಒಪ್ಪಿಕೊಂಡರೆ ತಿದ್ದಿಕೊಂಡು ಸರಿಪಡಿಸಿಕೊಳ್ಳುವುದು ಸಾಧ್ಯ. ಸ್ವಚ್ಛ ರಾಜಕೀಯವಿಲ್ಲದೆ ಕೇವಲ ರಾಷ್ಟ್ರಭಕ್ತಿಯ ಪಠಣ ಹಿರಿತನವನ್ನು ಸಾಧಿಸಲು ಸಾಲದು. ಚೀನಾದ ಮಾನವ ಅಭಿವೃದ್ಧಿ ಸೂಚ್ಯಂಕ ನಮಗಿಂತ ತುಂಬ ಮೇಲೆ ಇದೆ. ಪ್ರಜಾಪ್ರಭುತ್ವವನ್ನು ಸರಿಯಾಗಿ ನಿರ್ವಹಿಸಿದರೆ ಅವರಿಗಿಂತ ಹೆಚ್ಚು ಸಾಧಿಸಬಹುದು. ■

## ರಹಮತ್ ಅವರಿಗೆ ಅಭಿನಂದನೆಗಳು



ಕನ್ನಡ ವಿಶ್ವವಿದ್ಯಾನಿಲಯದ ಪ್ರಾಧ್ಯಾಪಕ ಡಾ॥ ರಹಮತ್ ತರೀಕೆರೆ ಅವರಿಗೆ ಕೇಂದ್ರ ಸಾಹಿತ್ಯ ಅಕಾಡೆಮಿಯ ಈ ಸಾಲಿನ ಪುರಸ್ಕಾರ ದೊರೆತಿದೆ. 'ಹೊಸತು'ಗೆ ಆಗಾಗ್ಗೆ ಲೇಖನಗಳನ್ನು ಬರೆಯುತ್ತಾ ಪತ್ರಿಕೆಯ ಮೌಲಿಕತೆಗೆ ಗಮನಾರ್ಹ ಕೊಡುಗೆ ನೀಡುತ್ತಾ ಬಂದಿರುವ ಶ್ರೀಯುತರಿಗೆ, ಅವರ 'ಕತ್ತಿಯಂಚಿನ ದಾರಿ' ಕೃತಿಗೆ, ಇಂತಹ ಗೌರವ ಸಂದಿರುವುದು ಹರ್ಷದ ಸಂಗತಿ. ನವಕರ್ನಾಟಕ ಅವರ ಕೆಲವು ಪುಸ್ತಕಗಳನ್ನು ಸಹ ಪ್ರಕಟಿಸಿದೆ. ನವಕರ್ನಾಟಕ ಪ್ರಕಾಶನ ಮತ್ತು 'ಹೊಸತು' ಅವರಿಗೆ ಹಾರ್ದಿಕ ಅಭಿನಂದನೆಗಳನ್ನು ಸಲ್ಲಿಸುತ್ತವೆ.

# ಓದುಗರ ವೇದಿಕೆ



# ಮಾದಾರ ಮತ್ತು ಪೇಜಾವರ ಸ್ವಾಮಿಗಳ ತಥಾಕಥಿತ ಸಾಮಾಜಿಕ ಸುಧಾರಣೆ

ಪ್ರತಿಯೊಂದು ಜಾತಿಗೂ - ಉಪಜಾತಿಗೂ ಒಬ್ಬೊಬ್ಬ ಸ್ವಾಮಿ. ಅದೇಕೋ ಸ್ವಾಮಿನಿಗಳನ್ನು ನೇಮಿಸಿಕೊಳ್ಳುವುದಿಲ್ಲ. ಸ್ವಾಮಿ ಇಲ್ಲದಿದ್ದರೆ ಯಡಿಯೂರಪ್ಪನವರು ನೀಡುವ ಸ್ವಾಮಿ-ಕಾಣಿಕೆ ಪಡೆಯಲು ತಮ್ಮ ಜಾತಿಗೆ ಅವಕಾಶ ತಪ್ಪಿಹೋಗುತ್ತದೆಂಬ ಭಾವನೆಯೂ ಇದ್ದೀತು. ಮಾದಾರ ಸ್ವಾಮಿಗಳು ಅಸ್ತಿತ್ವಕ್ಕೆ ಬಂದನಂತರ ಸ್ವಾಮಿ-ಶ್ರೇಷ್ಠ ಪೇಜಾವರರು ಅವರಿಗೆ ಕಾಯಕಲ್ಪ ಮಾಡುವುದರಲ್ಲಿ ಆಸಕ್ತಿ ತೋರಿದ್ದಾರೆ. ಇದು ಸಂಪ್ರದಾಯಕ್ಕೆ ತಿರುಗುಬಾಣವೋ ಅಥವಾ ಹೊಸ ಜಡ್ಡು ಸಂಪ್ರದಾಯದ ನಾಂದಿಯೋ ಇನ್ನೂ ತಿಳಿದಿಲ್ಲ. ಈ ಪ್ರಕ್ರಿಯೆ ಸಾಂಸ್ಕೃತಿಕ ಮಹತ್ವ ಹೊಂದಿದೆಯೆ ಮತ್ತು ಬೇರೆ ಸ್ವಾಮಿಗಳ ಅಭಿಪ್ರಾಯವೇನು ?

ಇದನ್ನು ಕುರಿತಂತೆ ಪ್ರತಿಕ್ರಿಯಿಸಲು ನಮ್ಮ ಓದುಗರನ್ನು ಆಹ್ವಾನಿಸಲಾಗಿತ್ತು. ಹತ್ತಾರು ಪ್ರತಿಕ್ರಿಯೆಗಳು ಬಂದಿದ್ದು ಬಹಳ ಸಂತೋಷ. ಅವುಗಳಲ್ಲಿ ಆಯ್ದ ಕೆಲವನ್ನು ಇಲ್ಲಿ ಪ್ರಕಟಿಸಲಾಗಿದೆ. ಪ್ರತಿಕ್ರಿಯೆಗಳನ್ನು ಕಳಿಸಿದ್ದ ಎಲ್ಲ 'ಹೊಸತು' ಓದುಗರಿಗೂ ನಾವು ವಂದನೆಗಳನ್ನು ಸಲ್ಲಿಸುತ್ತೇವೆ. – ಸಂ.

**ಮಾ**ದಾರ ಸ್ವಾಮಿಗಳೊಬ್ಬರನ್ನು ಅಸ್ತಿತ್ವಕ್ಕೆ ತಂದದ್ದೇ ಒಂದು ಸೋಜಿಗ! ಮುರುಘಾಮಠದ ಪೀಠಾಧೀಶರು ಜಾತಿಗಳನ್ನು ಖಾಯಂಗೊಳಿಸಲು ತೊಡಗಿದ್ದಾರೆ, ಜಾತಿಗೊಬ್ಬ ಮಠಾಧಿಪತಿಯನ್ನು ಸೃಷ್ಟಿಮಾಡುತ್ತಿದ್ದಾರೆ. ಜಾತಿಗಳು ಹೋಗಬೇಕೆಂದು ಬ್ರಾಹ್ಮಣ ಮತ ತ್ಯಜಿಸಿ, ಒಂದು ವಿಶ್ವಮತವನ್ನು ಸ್ಥಾಪಿಸಲು ಬಸವಣ್ಣ ಮುಂದಾದರೆ, ಅವರ ಹಿಂಬಾಲಕರಾದ ಮುರುಘಾ ಮಠಾಧೀಶರು ಜಾತಿಗಳನ್ನು ಖಾಯಂ ಗೊಳಿಸುವ ಕೆಲಸದಲ್ಲಿ ತೊಡಗಿದ್ದಾರೆ. ವಿಶ್ವೇಶ ತೀರ್ಥರು ತಿಳಿದೋ ತಿಳಿಯದೆಯೋ, ಮುರುಘಾಮಠದವರ ದುಷ್ಕಾರ್ಯಕ್ಕೆ ಪ್ರೋತ್ಸಾಹ ನೀಡಲು ಹೊರಟಿದ್ದಾರೆ.

ಪೇಜಾವರ ಸ್ವಾಮಿಗಳು ಹರಿಜನರತ್ತ ಗಮನ ಹರಿಸಲು ಕಾರಣವಾದ ಒಂದು ಪ್ರಕರಣವನ್ನೂ ಓದುಗರು ಗಮನಿಸಬೇಕು. ಕೆಲವರ್ಷಗಳ ಹಿಂದೆ ಪೇಜಾವರ ಸ್ವಾಮಿಗಳು ಪರ್ಯಾಯ ಪಟ್ಟ ವಹಿಸಿಕೊಂಡ ಸಂದರ್ಭದಲ್ಲಿ ಮಾಮೂಲಿನಂತೆ ಮಠದ ಜಮೀನು ನೋಡಿಕೊಳ್ಳತಕ್ಕ ರೈತರಿಗೆ ಸನ್ಮಾನ ಮಾಡಿ ಹರಸುವ ಕಾರ್ಯಕ್ರಮವಿತ್ತು. ಕೆಲವರ್ಗದ ರೈತರನ್ನು ಕೊಠಡಿಯ ಒಳಗೆ ಕೂರಿಸಿ ಮರ್ಯಾದೆ ಮಾಡುವುದು, ಹರಿಜನ, ಗಿರಿಜನರನ್ನು ಹೊರ ಆವರಣದಲ್ಲಿಯೇ ನಿಲ್ಲಿಸಿ ಮರ್ಯಾದೆ ಮಾಡುವುದು, ಹಿಂದಿನಿಂದ ನಡೆದುಬಂದ ಸಂಪ್ರದಾಯ. ಅದರಂತೆ ಈ ಸಾರಿಯೂ ವ್ಯವಸ್ಥೆಯಾಗಿತ್ತು. ಕೊಠಡಿಯಲ್ಲಿ ನೆರೆದಿದ್ದ ರೈತರೊಡನೆ ಕುಶಲ ಸಂಭಾಷಣೆ ನಡೆಸಿದ ಸ್ವಾಮೀಜಿ ಸಹಜವಾಗಿ ಅವರ ಹೆಸರು ಇತ್ಯಾದಿಗಳನ್ನು ವಿಚಾರಿಸಿ ಅವರಿಗೆ ಪಾರಿತೋಷಕಗಳನ್ನಿತ್ತರು. ಕೊಠಡಿ ಯಲ್ಲಿದ್ದವರ ಪೈಕಿ ಒಬ್ಬಾತ ಕ್ರಿಶ್ಚಿಯನ್. ಅವನು ಕೈಸ್ತಮತಕ್ಕೆ ಮತಾಂತರಗೊಂಡ ಹರಿಜನ.

ಸ್ವಾಮೀಜಿ ಗೊಂದಲಕ್ಕೆ ಬಿದ್ದರು. ಹರಿಜನನಾಗಿ ಹಿಂದೂಮತದಲ್ಲೇ ಉಳಿದವನಾದರೆ ಅವನಿಗೆ ಹೊರಗೇ ನಿಲ್ಲಿಸಿ ಸನ್ಮಾನ! ಅದೇ ಹರಿಜನ ಕ್ರಿಶ್ಚಿಯನ್ ಆಗಿ ಪರಿವರ್ತನೆ ಆದರೆ ಅವನಿಗೆ ಕೊಠಡಿಗೆ ಕರೆದು ಕೂಡಿಸಿ ಸನ್ಮಾನ!

ಇದೆಂಥ ವಿಪರ್ಯಾಸ ಎನ್ನಿಸಿತು ವಿಶ್ವೇಶ ತೀರ್ಥರಿಗೆ. ಅವರು ಉಳಿದ ಏಳು ಮಂದಿ ಉಡುಪಿ ಮಠಾಧೀಶರನ್ನು ಕರೆಸಿ ಅವರ ಮುಂದೆ ಈ ಸಮಸ್ಯೆ ಇಟ್ಟು ಇದಕ್ಕೆ ಪರಿಹಾರ ಕೇಳಿದರು. ಕರ್ಮಠರಾದ ಇತರ ಯತಿಗಳಿಂದ ಯಾವ ಉತ್ತರವೂ ಬರಲಿಲ್ಲ. ವಿಶ್ವೇಶ ತೀರ್ಥರು ಏಕಪಕ್ಷೀಯವಾಗಿ ತಮ್ಮದೇ ತೀರ್ಮಾನ ತೆಗೆದುಕೊಂಡರು : ''ಇನ್ನು ಮುಂದೆ ನಾನು ಹರಿಜನ ಕೇರಿಗಳಿಗೆ ಹೋಗಿ ಅವರ ಸಮಸ್ಯೆಗಳಿಗೆ ಸ್ಪಂದಿಸುತ್ತೇನೆ.'' ಶ್ರೀಮಠದ ಇತರೇ ಸ್ವಾಮಿಗಳಿಗೆ ಇದು ಒಪ್ಪಿಗೆಯಿಲ್ಲ ವಾದರೂ, ಮೌನಸಮ್ಮತಿ ನೀಡಿದರು. ಅಂದಿನಿಂದ ವಿಶ್ವೇಶ ತೀರ್ಥರು ಹರಿಜನಕೇರಿಗೆ ಭೇಟಿನೀಡುವ ಕೆಲಸ ಮಾಡುತ್ತಿದ್ದಾರೆ.

ಅವರು ಒಂದು ಹೆಜ್ಜೆ ಮುಂದೆ ಹೋಗಿ ತಮಿಳುನಾಡಿನಲ್ಲಿ ಇಸ್ಲಾಂಮತಕ್ಕೆ ಮತಾಂತರಗೊಂಡಿದ್ದ ಹರಿಜನರನ್ನು ಹಿಂದೂಧರ್ಮಕ್ಕೆ ಕರೆತರುವ ಸಾಹಸ ಮಾಡಿದರು. ಆ ಸಮಯದಲ್ಲಿ ನಾನು ಪತ್ರಿಕಾಸಂದರ್ಶನದಲ್ಲಿ, ''ವಿಶ್ವೇಶ ತೀರ್ಥರು ಮುಸ್ಲಿಂ ಮತಕ್ಕೆ ಮತಾಂತರಗೊಂಡ ಹರಿಜನರನ್ನು ಹಿಂದೂ ಮತಕ್ಕೆ ಮತ್ತೆ ಕರೆತರುತ್ತಿದ್ದಾರೆ. ಅವರೆಲ್ಲ ಹಿಂದಿನಂತೆಯೇ ಪೊರಕೆ ಹಿಡಿದುಕೊಂಡು ತಾನೆ ಹಿಂದುಮತದಲ್ಲಿ ಮುಂದುವರಿಯಬೇಕು!'' ಎಂದು ಹೇಳಿದೆ. ಹಿಂದುಮತಕ್ಕೆ ಮತ್ತೆ ಕರೆತಂದ ವಿಶ್ವೇಶ ತೀರ್ಥರು ಆ ಹರಿಜನರ ಆರ್ಥಿಕ ಭದ್ರತೆಗೆ ಕೈಗೊಂಡಿರುವ ಯಾವುದೇ ಯೋಜನೆಯ ಮಾಹಿತಿ ನನಗೆ ದೊರೆತಿಲ್ಲ.

ಈ ಯಥಾಸ್ಥಿತಿವಾದಿ ಸ್ವಾಮಿಗಳು ಈಗ ಇನ್ನೊಂದು ಅಧ್ಯಾಯ ಆರಂಭಿಸಿದ್ದಾರೆ. ಹರಿಜನ ಸ್ವಾಮಿಯೊಬ್ಬರನ್ನು ಬ್ರಾಹ್ಮಣ ಕೇರಿಗೆ ಕರೆತಂದು ಅವರಿಗೆ ಬ್ರಾಹ್ಮಣರಿಂದ (ಮಾಧ್ವ ಗೃಹಸ್ಥರೊಬ್ಬರಿಂದ) ಪಾದಪೂಜೆ ಮಾಡಿಸುವ ಮಹತ್ಕಾರ್ಯ ಮಾಡಿದ್ದಾರೆ.

ಇದೊಂದು ನಾಟಕೀಯ ಪ್ರಕರಣವೇನೋ ಹೌದು. ಇದರಿಂದ ಎಲ್ಲ ಮಾಧ್ವರೂ (ಬ್ರಾಹ್ಮಣರೂ) ಪರಿವರ್ತನೆಗೊಂಡರು, ಪರಿವರ್ತನೆಗೊಳ್ಳುತ್ತಾರೆ ಎಂದು ಭಾವಿಸುವುದು ತಪ್ಪಾದೀತು. ಈ ನಾಟಕೀಯ ಪ್ರಕರಣ ನಡೆಸುವ ಬದಲು ಮಾಧ್ವರನ್ನೆಲ್ಲ ಕೂಡಿಸಿ ಒಂದು ಸಮಾವೇಶ ನಡೆಸಿ, ಇನ್ನು ಮುಂದೆ ಬ್ರಾಹ್ಮಣ- ಹರಿಜನ ಭೇದವನ್ನು ತೊರೆದು ನಮ್ಮ ಎಲ್ಲ ಮಠಮಂದಿರಗಳಿಗೆ ಹರಿಜನರನ್ನು ಬರಮಾಡಿಕೊಳ್ಳೋಣ. ಒಂದೇ ಓಣಿಯಲ್ಲಿ ಇಬ್ಬರೂ ಕೂಡಿ ಬಾಳುವ ಪ್ರಯತ್ನ ಮಾಡೋಣ ಎಂದು ವಿಶ್ವೇಶ ತೀರ್ಥರು ಮಾಧ್ವಮತದವರ ಮನ ಒಲಿಸುವ ಕೆಲಸ ಮಾಡಿದ್ದರೆ ಅದು ಶ್ಲಾಘನೀಯ ವಾಗಿರುತ್ತಿತ್ತು. ಶ್ರೀಗಳು ಮುಂದಿನ ಹೆಜ್ಜೆಯಾಗಿ ಆ ಕೆಲಸವನ್ನು ಕೈಗೆತ್ತಿಕೊಳ್ಳಲಿ ಎಂದು ಆಶಿಸುತ್ತೇನೆ.

**– ಎಚ್. ಎಸ್. ದೊರೆಸ್ವಾಮಿ**

# ೭೬೧, ೩೭ನೇ ಕ್ರಾಸ್, ೧೮ನೇ ಮುಖ್ಯರಸ್ತೆ, ಜಯನಗರ 'ಟಿ' ಬ್ಲಾಕ್, ಬೆಂಗಳೂರು - ೫೬೦ ೦೪೧

* * *

**ಉ**ತ್ತಮ ಚಿಂತನೆಗಳು ಚಲನಶೀಲತೆಯೊಂದಿಗೆ ಸದಾಕಾಲ ಜೀವಂತವೂ ಜೀವಪರವೂ ಆಗಿರುತ್ತವೆ. ಅವುಗಳ ಹೊಳಪು ಆ ಕ್ಷಣಕ್ಕೆ ಸ್ವಲ್ಪ ಮಸುಕಾಗಿ ಕಂಡರೂ ಅದರ ತೀವ್ರತೆ ದಿನಕಳೆದಂತೆ ಪ್ರಜ್ವಲಿಸತೊಡಗುತ್ತದೆ. ಇದರರ್ಥ ೧೨ನೇ ಶತಮಾನದ ಬಸವಾದಿ ಶರಣರ ಚಿಂತನೆಗಳು ಇಂದಿನ ೨೧ನೇ ಶತಮಾನದ ವೈಜ್ಞಾನಿಕ ಯುಗಕ್ಕೂ ಅನ್ವಯಿಸಲ್ಪಡುತ್ತವೆ ಎಂಬುದಾಗಿದೆ.

# ಓದುಗರ ವೇದಿಕೆ

ಸಾಮಾಜಿಕ ಸಮಾನತೆಗಾಗಿ ಹಂಬಲಿಸುವ ಬಹುಕೋಟಿ ಮನಸ್ಸುಗಳಿರುವಾಗ ಸಾಮಾಜಿಕ ಸಮಾನತೆಯೆಂಬ ದಿಟ್ಟ ಹೋರಾಟದ ದೀವಿಗೆಯನ್ನು ಹಿಡಿದುಬಂದವರು ಬಹುಶಃ ಬೆರಳೆಣಿಕೆಯಷ್ಟು ಮಂದಿ; ಸ್ವಾತಂತ್ರ್ಯ ಬಂದು ಆರು ದಶಕಗಳು ಗತಿಸಿದರೂ ನಮ್ಮ ಸಂವಿಧಾನದಲ್ಲಿ ನಾವು 'ಜಾತ್ಯತೀತ'ವೆಂದು ಕರೆದುಕೊಂಡಿದ್ದರೂ ಸಹ ನಮ್ಮಲ್ಲಿ ಇನ್ನೂ ಜಾತೀಯತೆ ತಾಂಡವವಾಡುತ್ತಿದೆ ಎಂಬುದು ಸಾರ್ವತ್ರಿಕವಾಗಿ ಒಪ್ಪಲೇಬೇಕಾದ ಸತ್ಯ. ಇದೇ ಕಾರಣಕ್ಕೆ ಮೇಲುಜಾತಿಯವರೆಂದು ಕರೆಸಿಕೊಳ್ಳುವ ಸಮುದಾಯದವರು ಪ್ರಶಂಸೆಗೊಳಪಟ್ಟರೆ ತಳಸಮುದಾಯದವರು ಕೀಳರಿಮೆ ಪಟ್ಟುಕೊಂಡಿರಲಿಕ್ಕೂ ಸಾಕು.

ಬಸವಣ್ಣನವರು ಮಾದಿಗ ಜಾತಿಯ ಮೂಲಕ್ಕೆ ಸೇರಿದವರಾಗಿದ್ದಾರೆ ಎಂಬ ಅನುಮಾನಿಕ ಸತ್ಯವನ್ನು ಸಹ ವಿಸ್ತೃತ ನೆಲೆಯಲ್ಲಿ ವಿವೇಚನಾಪರವಾಗಿ ನೋಡದ ಕೆಲವು ಮೇಲುಜಾತಿಯ ಕೆಲ ಮನಸ್ಸುಗಳಿರುವ ಈ ಸಂದರ್ಭಗಳಲ್ಲಿ ಅದೇ (ಮಾದಿಗ) ಸಮುದಾಯದ ಒಬ್ಬ ಪ್ರತಿನಿಧಿಯನ್ನು, ಜಾತಿವ್ಯವಸ್ಥೆಯ ಪ್ರಾಬಲ್ಯದ ಮುಖೇನ ಶೋಷಕರೆಂಬ ಆಪಾದನೆಯ ಹಣೆಪಟ್ಟಿ ಕಟ್ಟಿಕೊಂಡು ಕೂತಿರುವ ಬ್ರಾಹ್ಮಣ ಸಮುದಾಯದವರು, ಆ ಸಮುದಾಯದ ಒಬ್ಬ ಪ್ರತಿನಿಧಿಯನ್ನು ಇಂದು ತಮ್ಮ ಕೇರಿಗೆ ಕರೆಯಿಸಿಕೊಂಡು ಪ್ರೀತಿ ಆದರಗಳಿಂದ ಗೌರವಿಸಿದ ಪ್ರಸಂಗ ತುಂಬ ಒಳ್ಳೆಯ ಬೆಳವಣಿಗೆ ಎಂದರೆ ತಪ್ಪಾಗಲಿಕ್ಕಿಲ್ಲ.

ಮಾದಾರ ಚೆನ್ನಯ್ಯ ಶ್ರೀಗಳನ್ನು ಪೂಜಿಸಿದ ಮಾತ್ರಕ್ಕೆ ಆ ಸಮುದಾಯದ ಎಲ್ಲಾ ಇಷ್ಟಕಷ್ಟಗಳು ನೆರವೇರಿದಂತಾಗುವುದಿಲ್ಲ, ಅಥವಾ ನೆರವೇರುತ್ತವೆಂಬ ಸೂಚನೆಯೂ ಅಲ್ಲ. ಇದೊಂದು ಪ್ರಗತಿದಾಯಕ ಹೆಜ್ಜೆ ಎಂದು ಎಲ್ಲ ರಾಜಕೀಯ ಮತ್ತು ಸೈದ್ಧಾಂತಿಕ ಸೂಕ್ಷ್ಮತೆಗಳನ್ನು ಒಂದಿಷ್ಟು ಬದಿಗಿಟ್ಟು, ಸಾಮಾಜಿಕ ನೆಲೆಯಲ್ಲಿ ಮುಕ್ತಮನಸ್ಸಿನಿಂದ ಪ್ರಗತಿಪರರು ಸ್ವಾಗತಿಸಬೇಕಷ್ಟೆ. ತಲೆತಲಾಂತರಗಳಿಂದ ಬಂದ ಜಾತಿ ಅಸಮಾನತೆಯನ್ನು ಹೋಗಲಾಡಿಸಲು ಕೇವಲ ಬೆರಳೆಣಿಕೆಯ ಒಂದೆರಡು ಜಾತ್ಯತೀತ ಮಠಗಳು, ನಾಲ್ಕಾರು ವ್ಯಕ್ತಿಗಳಿಂದ ಸಾಧ್ಯವಿಲ್ಲ, ಬದಲಾಗಿ ಇಡೀ ನಾಗರಿಕ ಸಮಾಜ ಈ ಆಚರಣೆಯ ವಿರುದ್ಧ ಹೆಜ್ಜೆ ಹಾಕಿದಾಗ ಮಾತ್ರ ಸಾಧ್ಯ.

ಅದಕ್ಕೆ ಮಾದಾರ ಶ್ರೀಗಳು ಮತ್ತು ಪೇಜಾವರ ಶ್ರೀಗಳು ನೆಪಮಾತ್ರ. ಮಾದಾರ ಶ್ರೀಗಳ ಸಮಾನತೆಯ ಆಶಯದ ಸ್ಫೂರ್ತಿದಾಯಕ ನಿಲುವುಗಳನ್ನು ಪ್ರೋತ್ಸಾಹಿಸುತ್ತಾ ಪೇಜಾವರ ಶ್ರೀಗಳನ್ನು ಅವರ ದ್ವಂದ್ವತೆಗಳ ನಡುವೆಯೂ ಮೆಚ್ಚಿ ಗೌರವಿಸುತ್ತಾ, ಇಂದಿನ ಸಮಾಜವನ್ನು ಜಾತಿ-ಮತ-ಪಂಥಗಳ ಸಂಕೋಲೆಗೆ ತಳ್ಳದೆ ಆರೋಗ್ಯಪೂರ್ಣವಾಗಿ ನಿರ್ಮಿಸುವುದೇ ನಮ್ಮ ಧ್ಯೇಯವಾಗಬೇಕಾಗಿದೆ.


**ಆರ್. ಶಿವಶಂಕರ ಸೀಗೆಹಟ್ಟಿ**

ಶಿಕ್ಷಕರು, ಎಸ್. ಜಿ. ಮೊಬೈಲ್ ಸರ್ವಿಸ್ ಅಂಡ್ ಜೆರಾಕ್ಸ್, ಎಸ್.ಬಿ.ಐ. ಬ್ಯಾಂಕ್ ಎದುರು

ದೇವದುರ್ಗ, ರಾಯಚೂರು - ೫೮೪ ೧೧೧


*          *          *

**ಸ**ಮಕಾಲೀನ ಸಮಾಜದಲ್ಲಿ ಮಠಗಳು ಹಾಗೂ ಸ್ವಾಮೀಜಿಗಳ ಪಾತ್ರವೇನು ಎಂಬುದೇ ಇನ್ನೂ ಅರ್ಥವಾಗದೆ ಇರುವಾಗ ಮಾದಾರ ಮತ್ತು ಪೇಜಾವರ ಮಠಾಧೀಶರ ಮತ್ತೊಂದು ಪ್ರಹಸನವು ಪ್ರಾರಂಭವಾಗಿದೆ. ಒಬ್ಬರು ತುಳಿತಕ್ಕೆ ಒಳಗಾದ ಜನರ ಪ್ರತಿನಿಧಿಯಾದರೆ ಮತ್ತೊಬ್ಬರು ಶತಮಾನಗಳಿಂದ ಸಮಾಜದ ಪ್ರಬಲವರ್ಗವೆಂದೇ ಪರಿಗಣಿತವಾದ ವರ್ಗದ ಪ್ರತಿನಿಧಿ. ಕೇವಲ ದಲಿತ ಕೇರಿಯ ಪ್ರವೇಶ, ದಲಿತ ಸ್ವಾಮೀಜಿಯ ಪಾದಪೂಜೆಗಳಿಂದ ಸಮಾಜದಲ್ಲಿ ಅಸ್ಪೃಶ್ಯತೆ, ಮೇಲು- ಕೀಳು ಭಾವ ತೊಲಗಲು ಸಾಧ್ಯವೆ? ಪಾದಪೂಜೆಯ ಸಾಂಸ್ಕೃತಿಕ ಮತ್ತು ಸಾಂಪ್ರದಾಯಿಕ ಮಹತ್ವವು ಇಲ್ಲಿ ಅಪ್ರಸ್ತುತ, ಈ ಘಟನೆಯಿಂದ ಸಾಮಾಜಿಕ ಬದಲಾವಣೆ ಅಸಾಧ್ಯದ ಮಾತು.

ಪೇಜಾವರ ಶ್ರೀಗಳು ಮತ್ತು ರಾಜ್ಯದ ಪ್ರಭಾವಿ ಮಠಾಧೀಶರು ಸಾಮಾಜಿಕ ಬದಲಾವಣೆಗೆ ಮನಃಪೂರ್ವಕವಾಗಿ ಪ್ರಯತ್ನ ನಡೆಸಿದ್ದರೆ ರಾಜ್ಯದ ಅಥವಾ ದೇಶದ ಇಂದಿನ ಸ್ಥಿತಿಗತಿಯೇ ಬದಲಾಗುತ್ತಿತ್ತು ಎಂಬುದರಲ್ಲಿ ಸಂಶಯವೇ ಇರಲಿಲ್ಲ. ಆದರೆ ನಡೆದದ್ದು, ನಡೆಯುತ್ತಿರುವುದು ವಿಪರ್ಯಾಸವೇ ಸರಿ. ಮಠಮಂದಿರಗಳಲ್ಲಿ ದರ್ಶನ, ಪೂಜಾಕಾರ್ಯಗಳು, ಭೋಜನ ವ್ಯವಸ್ಥೆ ಹೀಗೆ ಎಲ್ಲಾ ಹಂತಗಳಲ್ಲಿಯೂ ಮಠಗಳು

# ಓದುಗರ ವೇದಿಕೆ

ಇಂದು ಪರೀಕ್ಷೆಗೆ ಒಳಪಟ್ಟಿವೆ. ಸಹಪಂಕ್ತಿಭೋಜನವನ್ನು ಪ್ರೋತ್ಸಾಹಿಸುತ್ತಿರುವ ಮಠಗಳು ಕರ್ನಾಟಕದಲ್ಲಿ ಕೆಲವಾದರೂ ಇದ್ದರೆ ಅದು ಸಮಾಜದ ಅಲ್ಪ ಪುಣ್ಯವೇ ಸರಿ. ಶತಮಾನಗಳ ಮೂಢನಂಬಿಕೆಗಳಿಗೆ ತಿಲಾಂಜಲಿ ನೀಡದೆ ಅಲ್ಲೆಲ್ಲೋ ದಲಿತ ಕೇರಿ ಪ್ರವೇಶ, ಇನ್ನೆಲ್ಲೋ ಪಾದಪೂಜೆಗಳು ಸಮಾಜದ ಕಣ್ಣಿಗೆ ಎರಚುತ್ತಿರುವ ಮಣ್ಣು ಅಲ್ಲವೆ ?

ಮಠಗಳು ಸಮಾಜದ ಏಳ್ಗೆಗೆ ಶ್ರಮಿಸುವ ಪುಣ್ಯ ಕೆಲಸವನ್ನು ತೊರೆದು ತನ್ನ ಅವಲಂಬಿತ ವರ್ಗ, ಜಾತಿಯ ಜನರ ಮತ್ತು ಮಠದ ಲಾಭಗಳಿಗೆ ಸರ್ಕಾರವನ್ನು ಅವಲಂಬಿಸಿರುವುದು ಮತ್ತು ನಿಯಂತ್ರಿಸುತ್ತಿರುವುದು ಮೌಲ್ಯಗಳ ಅಧಃಪತನಕ್ಕೆ ಬರೆದ ಮುನ್ನುಡಿಯಾಗಿದೆ. ಮಠಗಳು, ಮಠಾಧೀಶರು ಲಾಭದ ಕಡೆಗೆ ಗಮನ ಹರಿಸುತ್ತಿರುವರೇ ವಿನಾ ಭ್ರಷ್ಟಾಚಾರ ನಿಯಂತ್ರಣ, ಅಭಿವೃದ್ಧಿಯತ್ತ ರಾಜ್ಯವನ್ನು ಕೊಂಡೊಯ್ಯಲು ಮಾರ್ಗದರ್ಶನ ನೀಡಿದ ಯಾವ ನಿದರ್ಶನಗಳೂ ನಮ್ಮ ಕಣ್ಣೆದುರಿಗೆ ಇಲ್ಲ.

ವ್ಯವಸ್ಥೆಯಲ್ಲಿ ನೇರ ಪ್ರತಿನಿಧಿಗಳಂತೆ ಮಠಾಧೀಶರು ವರ್ತಿಸುತ್ತಿರುವುದು ರಾಜ್ಯದ ದೃಷ್ಟಿಯಿಂದ ಮತ್ತು ಸಮಾಜದ ಸ್ವಾಸ್ಥ್ಯದ ದೃಷ್ಟಿಯಿಂದ ಅನಗತ್ಯ. ಮೌಲಿಕವಾದ ಆಚರಣೆಗಳು, ಚಳುವಳಿಗಳು ನಡೆದಾಗ ಬೆಂಬಲ ನೀಡಿದ ಮಠಗಳು ಎಲ್ಲೂ ಇಲ್ಲ. ಸರ್ಕಾರಗಳು ಸಮಾಜದ ಅಭಿವೃದ್ಧಿಗೆ ತಳೆಯಬೇಕಾದ ನಿಲುವು, ಕಾರ್ಯಕ್ರಮಗಳಿಗೆ ಸಲಹೆ ನೀಡಿ ಅದನ್ನು ಸಮಾಜದ ಕಟ್ಟಕಡೆಯ ವ್ಯಕ್ತಿಗೂ ತಲುಪಿಸುವಲ್ಲಿ ಮಠಾಧೀಶರು ಶ್ರಮಿಸಿದ್ದರೆ, ಅಂತಹ ಕಳಕಳಿ ಹೊಂದಿದ್ದರೆ ಮಠಗಳ ಬಗ್ಗೆ ಗೌರವಭಾವ ಹೊಂದಬಹುದಿತ್ತು.

ಸಂಸ್ಕೃತಿ, ಸಂಪ್ರದಾಯಗಳ ಹೆಸರಿನಲ್ಲಿ ಸಮಾಜವನ್ನು ಮೂಢನಂಬಿಕೆಗಳ ಆಚರಣೆಗೆ ತಳ್ಳುತ್ತಿರುವುದು ಅಕ್ಷಮ್ಯ ಅಪರಾಧವೇ ಸರಿ. ಇಂತಹ ಕಾರ್ಯಗಳಿಗೆ ಸಮೂಹ ಮಾಧ್ಯಮಗಳನ್ನು ಬಳಸಿ ಸಮಾಜವನ್ನು ದಾರಿತಪ್ಪಿಸುತ್ತಿರುವುದು ಮಠಗಳ ತಪ್ಪಲ್ಲವೆ? ಅಧ್ಯಾತ್ಮ, ವ್ಯಕ್ತಿಯ ವೈಯಕ್ತಿಕ ಆಚರಣೆಯಾಗಬೇಕೇ ಹೊರತು ವ್ಯಾಪಾರದ ಸರಕಾಗಬಾರದು. ಆದರೆ ಇಂದು ಅಧ್ಯಾತ್ಮ ವ್ಯವಹಾರವಾಗಿ ಮಾರ್ಪಟ್ಟು, ತನ್ಮೂಲಕ ಮಠಮಂದಿರಗಳು ಸಮಾಜವನ್ನು ಶತಮಾನಗಳ ಹಿಂದಕ್ಕೆ ಕೊಂಡೊಯ್ಯುತ್ತಿವೆ. ಅವರು ನಡೆಸುವ ಸಮೂಹ ಸನ್ನಿಯ ಕಾರ್ಯಗಳಿಗೆ ಮಾಧ್ಯಮಗಳು ಬೆನ್ನೆಲುಬಾಗಿ ನಿಂತಿರುವುದು ಸಮಾಜದ ಮತ್ತೊಂದು ಘೋರ ದುರಂತವಾಗಿದೆ.

ಸಮಾಜದ ಶ್ರೇಯೋಭಿವೃದ್ಧಿಗೆ ಸ್ಥಾಪಿತವಾದ ಮಠಗಳು ಸಮಾಜದ ಅಭಿವೃದ್ಧಿಗೆ ಶ್ರಮಿಸಲಿ. ಸಮಾಜವನ್ನು ಸರಿದಾರಿಗೆ ತರುವ ಕಾರ್ಯ ಮಠಗಳದ್ದು. ದಾರಿತಪ್ಪುವ, ತಪ್ಪಿಸುವ ಕಾರ್ಯವಲ್ಲ. ಮಾಡುವ ಕಾರ್ಯಗಳಲ್ಲಿ ಪ್ರಾಮಾಣಿಕತೆ ಇದ್ದರೆ, ಕಳಕಳಿ ಇದ್ದರೆ, ಅಗ್ಗದ ಪ್ರಚಾರಗಳಿಗೆ ಮನಸ್ಸು ಮಾಡದೇ ಇದ್ದರೆ ಮಠ ಮತ್ತು ಸ್ವಾಮೀಜಿಗಳಿಂದ ಸಮಾಜವು ನಿರೀಕ್ಷಿಸುತ್ತಿರುವ ಕಾರ್ಯಗಳು ನಡೆಯಲು ಸಾಧ್ಯ. ಇಂದಿನ ಪ್ರಕ್ಷುಬ್ಧ ಪರಿಸ್ಥಿತಿಯಲ್ಲಿ ಮಾದಾರ ಮತ್ತು ಪೇಜಾವರ ಸ್ವಾಮಿಗಳ ಕಾರ್ಯಗಳಿಗೆ ಯಾವ ಮಹತ್ವವೂ ಇಲ್ಲ. ಈಗಂತೂ ಮಠಗಳು ಸ್ವಾಮೀಜಿಗಳು ಇರುವುದು ತಮ್ಮ ಸ್ವಾರ್ಥಕ್ಕಾಗೇ ವಿನಾ ಸಮಾಜಕ್ಕಲ್ಲ.

**– ಸಂಪತ್‌ಕುಮಾರ್ ಎನ್.**
ಮ.ಸಂ. ಇ.೨-೧೦, ಕುಮುದ್ವತಿ ವಸತಿ ಗೃಹ
ಡಿ.ಎ.ಆರ್. ವಸತಿಗೃಹಗಳ ಸಮುಚ್ಚಯ, ಸಾಗರ ರಸ್ತೆ, ಶಿವಮೊಗ್ಗ - ೫೭೭ ೨೦೧

*　　*　　*

೧೨ನೆಯ ಶತಮಾನದ ಶಿವಶರಣರು ಜಾತಿರಹಿತ ಸಮಾಜ ನಿರ್ಮಾಣಕ್ಕಾಗಿ ಹೋರಾಡಿದರು. ಸಮಾಜಾಂದೋಲನಕ್ಕಾಗಿ ಶರಣರಾದರು. ದುರಂತವೆಂದರೆ, ಜಾತಿಗೊಂದು ಮಠ, ಮತ್ತದರಲ್ಲಿ ಜೀವಂತ ಉತ್ಸವ ಮೂರ್ತಿಗಳನ್ನು ಸೃಷ್ಟಿಸಿದರು. ಸೆಪ್ಟೆಂಬರ್ ೨೦೧೦ರಲ್ಲಿ, ಬ್ರಾಹ್ಮಣರ ಕೇರಿಗಳಲ್ಲಿ ಪಾದ ಬೆಳೆಸಿ ಮನೆಗಳಲ್ಲಿ ಪಾದ ಮತ್ತು ಹೊಟ್ಟೆಯ ಪೂಜೆ ಮಾಡಿಸಿಕೊಂಡು ತೃಪ್ತಿಯ ತೇಗು ಬಿಟ್ಟರು; ಘನ ಸಾಧಿಸಿದೆವೆಂದುಕೊಂಡರು ಈ ಮಾದಾರ ಚೆನ್ನಯ್ಯ ಸ್ವಾಮಿಗಳು !!

ಪೇಜಾವರ ಶ್ರೀಗಳು ಕೃಷ್ಣಮಠದಲ್ಲಿ ಅವರನ್ನು ಬರಮಾಡಿಕೊಳ್ಳುತ್ತ, ''ದಲಿತ ಸಮಾಜ ಒಂದಾಗಿರಬೇಕು. ಅಸ್ಪೃಶ್ಯತೆಯನ್ನು ಹೋಗಲಾಡಿಸುವ ನಿಟ್ಟಿನಲ್ಲಿ ನಾನು ಈಗಾಗಲೇ ದಲಿತ ಕೇರಿಯಲ್ಲಿ ಪಾದಯಾತ್ರೆ ಕೈಗೊಂಡಿದ್ದು ಉತ್ತಮ ಪ್ರತಿಕ್ರಿಯೆ ವ್ಯಕ್ತವಾಗಿದೆ. ಸಂಸ್ಕೃತಿ ಉಳಿಸಿ ಹಿಂದೂ ಸಮಾಜದಲ್ಲಿ ಸಮಾನತೆ-ಸಾಮರಸ್ಯ ಮೂಡಿಸಲು ಪಣತೊಟ್ಟಿದ್ದೇನೆ...'' ಎಂದಿದ್ದರು. ಅದಕ್ಕೆ ಪ್ರತಿಯಾಗಿ ಮಾದಾರ ಚೆನ್ನಯ್ಯನವರು, ''ದಲಿತರ ಮುಂದೆ ಬಹಳಷ್ಟು ಸಮಸ್ಯೆಗಳಿವೆ. ಸಮಾನತೆ, ಆತ್ಮರಕ್ಷಣೆ ಹಾಗೂ ಜೀವರಕ್ಷಣೆಗೆ ದಲಿತರು ಪರದಾಡುವಂತಾಗಿದೆ. ಧರ್ಮಗಳ ಬಗ್ಗೆ ಮಾತನಾಡುವ ಮೊದಲು ದಲಿತರಿಗೆ ಸಮಾನ ಅವಕಾಶ ಕಲ್ಪಿಸಬೇಕಾಗಿದೆ...'' ಎಂದಿದ್ದರು. ಈವರೆಗೂ ಅವರು ಸಾಧಿಸಿರುವುದೇನನ್ನು ?!

ಡಾ|| ಶಿವಮೂರ್ತಿ ಶಿವಾಚಾರ್ಯರು, ''ಜಾತಿ ನಿವಾರಣೆ ಮತ್ತಿತರ ಅನಿಷ್ಟ ಪದ್ಧತಿಗಳನ್ನು ನಿವಾರಿಸಲು ಕೇವಲ ಪಾದಯಾತ್ರೆ ಸಾಲದು... ದಲಿತರ ಕೇರಿಗಳಿಗೆ ಹೋಗುವುದೂ, ದಲಿತರ ಮನೆಗಳಲ್ಲಿ ಪ್ರಸಾದ ಸ್ವೀಕರಿಸುವುದೂ ಸೇರಿದಂತೆ ಅನೇಕ ಪ್ರಗತಿಪರ ಕಾರ್ಯಕ್ರಮಗಳು ಮುರಘಾಮಠದ ವತಿಯಿಂದ ಕಳೆದ ೩೦ ವರ್ಷಗಳಿಂದ ನಡೆಯುತ್ತಲೇ ಇವೆ. ಇಂತಹ ಕಾರ್ಯಕ್ರಮಗಳನ್ನು ನಿರಾತಂಕವಾಗಿ ನಡೆಸುವ ಮೂಲಕ ಶೋಷಿತ ಸಮುದಾಯಗಳನ್ನು ಮೇಲೆತ್ತುವ ಕೆಲಸ ಮಾಡಲಾಗುತ್ತಿದೆ...'' ಎಂದಿದ್ದಾರೆ. ಆ ೩೦ ವರ್ಷಗಳಿಂದ ಎಷ್ಟು ಮೇಲೆತ್ತಿದ್ದಾರೋ ?

ಪೇಜಾವರ ಶ್ರೀಗಳು, ''ಮುರಘಾಮಠದ ಶ್ರೀಗಳು ದಲಿತ ಸ್ವಾಮೀಜಿಯನ್ನು ಮಠಾಧೀಶರನ್ನಾಗಿ ಮಾಡಿದ್ದಾರೆ. ತಾವೂ ಸಹ ದಲಿತರೊಬ್ಬರನ್ನು ಮಠಾಧೀಶರನ್ನಾಗಿ ಮಾಡಲು ಸಿದ್ಧ... ತಾವು ಜೀವಂತ ಇರುವಾಗಲೇ ಅಸ್ಪೃಶ್ಯರಹಿತ ಸಮಾಜ ನೋಡುವ ಗುರಿ ಇದೆ...'' ಎಂದಿದ್ದಾರೆ. ಆದರೆ, ಕಳೆದ ೪೦ ವರ್ಷಗಳಿಂದ ಬರಿಗೊಡದಂತೆ ಬಡಬಡಿಸುತ್ತಿರುವ ಇವರು ಬ್ರಾಹ್ಮಣರಲ್ಲಿರುವ ಉಪ ಪಂಗಡಗಳನ್ನೇ ನಿರ್ಮೂಲನೆ ಮಾಡಲಾಗಿಲ್ಲ. ಇನ್ನು ಬೇರೆಯದ್ದನ್ನು ಹೇಗೆ ಸಾಧಿಸಿಯಾರು ? ''ಲೋಕದ ಡೊಂಕವನು ನೀವೇಕೆ ತಿದ್ದುವಿರಿ...'' ಎಂಬ ಸಾಲು ಇಲ್ಲಿ ಪ್ರಸ್ತುತವೆನಿಸುತ್ತದೆ.

ಈ ಎಲ್ಲ ಹೇಳಿಕೆ, ಕೇಳಿಕೆಗಳನ್ನು ನೋಡಿದರೆ, ಬರೀ ಜಾತಿ ರಾಜಕೀಯದ ಸ್ಟಂಟೇ ಎದ್ದುಕಾಣುತ್ತದೆ. ಮುರಘಾಮಠದ ಶರಣರು ತಾವೊಬ್ಬರೇ ದಲಿತರ ಮನೆಯಲ್ಲಿ ಊಟ ಮಾಡುವುದರ ಬದಲಿಗೆ ತಮ್ಮ ಶಿಷ್ಯಕೋಟಿಗಳಿಂದ ಮಾಡಿಸಬೇಕಿತ್ತು. ಕಡ್ಡಾಯವಾಗಿ ಅಂತರ್ಜಾತಿ ವಿವಾಹ ಮಾಡಿಸಬೇಕಿತ್ತು. ಆ ನಿಟ್ಟಿನಲ್ಲಿ ಬೆಲೆ ಕಟ್ಟಲಾಗದ ಮಠವನ್ನು ತ್ಯಾಗಮಾಡಬೇಕಿತ್ತು. ಬದಲಿಗೆ ಈ ಕ್ಲೋನಿಂಗ್‌ದ ಅವಶ್ಯಕತೆ ಏನಿತ್ತು ?

ಮಾದಾರ ಚೆನ್ನಯ್ಯ ಸ್ವಾಮಿಗಳು ಬ್ರಾಹ್ಮಣರ ಕೇರಿಯಲ್ಲಿ ಪಾದಬೆಳೆಸಿ ಖುಷಿ ಪಡುವುದರ ಬದಲು, ಎಡಗೈ-ಬಲಗೈಗಳನ್ನು ಒಂದುಗೂಡಿಸಲಿ. ಕೆನೆಪದರ ವ್ಯಕ್ತಿಗಳಿಂದ ಗ್ರಾಮ ದತ್ತುಕೊಡಿಸಿ, ಸಾಮಾಜಿಕವಾಗಿ, ಸಾಂಸ್ಕೃತಿಕವಾಗಿ ಶ್ರೀಮಂತಗೊಳಿಸಲಿ. ಮಠದಿಂದ ಹೊರಗೆ ಹೋಗಿ, ಪ್ರತಿಹಳ್ಳಿಗಳಲ್ಲಿ ಪುರಾಣ-ಪ್ರವಚನ ಹೇಳಿಸಿ, ಎಲ್ಲಾ ಜನರನ್ನು ಪರಿವರ್ತಿತಗೊಳಿಸಲಿ. ಆಗ ದೌರ್ಜನ್ಯ ಕಡಿಮೆಯಾದೀತು.

ಪ್ರತಿ ಜಾತಿ-ಜನಾಂಗಗಳಿಗೆ ಇಂದಿನ ದಿನಮಾನಗಳಲ್ಲಿ ಪರಾವಲಂಬಿ ಜೀವಿಗಳಾದ ಸ್ವಾಮಿಗಳ ಅವಶ್ಯಕತೆ ಇದೆಯೆ ? ಅದಿಲ್ಲದೆ ಸತ್ತು ಸ್ವರ್ಗ ಸೇರಲಾರರೆ ? ರೆಡ್ಡಿ ಲಿಂಗಾಯತ ಎಂಬ ಪಂಥವೊಂದಿದೆ. ೧೨ನೆಯ ಶತಮಾನದಿಂದ ಅದು ಜಗದ್ಗುರುಗಳಿಲ್ಲದೆ ಐಷಾರಾಮವಾಗಿ ಬದುಕುತ್ತಿದೆ! ಎಂದಮೇಲೆ, ಖತರ್‌ನಾಕ್ ಖಾವಿಗಳಿಲ್ಲದೆ ಜೀವನ ನಡೆಸಲು ಸಾಧ್ಯವಿಲ್ಲವೇ ?

**ಶರಣಗೌಡ ಎರಡೆತ್ತಿನ**
'ವ್ಯೋಮಕೇಶ', ಟೀಚರ್ಸ್ ಕಾಲೋನಿ, ತಮಟಕಲ್ ರಸ್ತೆ, ಚಿತ್ರದುರ್ಗ - ೫೭೭ ೫೦೨

*　　*　　*

**ಚ**ಳುವಳಿಗಳು ಮೂಲೆಗೆ ತಳ್ಳಲ್ಪಟ್ಟಿವೆ. ಪ್ರಸಕ್ತ ಕಾಲದಲ್ಲಿ, ಸಿದ್ಧಾಂತಗಳು ಆಧುನಿಕತೆಗೆ ಮುಖಾಮುಖಿ ನಿಲ್ಲಲಿಲ್ಲ.

ಅಸ್ಪೃಶ್ಯತೆ ನಿವಾರಣೆಗಾಗಿ ಕನಿಷ್ಠ ವರ್ಷಕ್ಕೆ ಒಮ್ಮೆಯಾದರೂ ಸಂಘಪರಿವಾರದ ಎಲ್ಲಾ ಸದಸ್ಯರುಗಳು ಸಹಭೋಜನವನ್ನು ಅಸ್ಪೃಶ್ಯನ ಮನೆಯಲ್ಲಿ ಅಥವಾ ಅವರನ್ನು ತಮ್ಮ ಮನೆಗೆ ಆಮಂತ್ರಿಸಿ ಮಾಡುವ ಬಗ್ಗೆ ಚಿಂತಿಸಿದ್ದಾರೆ. ತಮ್ಮ ಗೃಹ ಪ್ರವೇಶ ಕಾರ್ಯಕ್ರಮದಲ್ಲಿ ಪೌರಕಾರ್ಮಿಕರುಗಳ ಪಾದಪೂಜೆಯನ್ನು ಪ್ರಚಾರವಿಲ್ಲದೆ ನೆರವೇರಿಸಿದವರಿದ್ದಾರೆ. ಮತ್ತೊಂದೆಡೆ ಸಮಾಜವಾದಿಗಳು, ಅಂಬೇಡ್ಕರ್‌ವಾದಿಗಳಾಗಿರುವ ಬಹುತೇಕರು ತಮ್ಮ ಮನೆಯಲ್ಲಿನ ಸತ್ಯನಾರಾಯಣ ಪೂಜೆಯನ್ನು ಪ್ರಶ್ನಿಸಲು ಅಶಕ್ತರಾಗಿ ಜಾತಿ ವಿನಾಶಕ್ಕೆ ಬಾಹ್ಯವಾಗಿ ಕರೆಕೊಡುತ್ತಾ ತಮ್ಮ ಮನೆಯಲ್ಲಿ ಜಾತಿ ಪೋಷಿಸುವವರನ್ನು ಕಾಣಬಹುದಾಗಿದೆ.

ಮಾನವತಾವಾದಿ ಅಂಬೇಡ್ಕರ್, ಸಮಾಜವಾದಿ ಲೋಹಿಯಾ, ಮುಂತಾದವರ ವಿಚಾರಧಾರೆಯ ಮುಗಿಲಮೇಲಿರುವವರಿಗೆ ಅಸ್ಪೃಶ್ಯತೆ ಎಂಬ

# ಓದುಗರ ವೇದಿಕೆ

ಪೆಡಂಭೂತವನ್ನು ಅಳಿಸಿ, ರಾಷ್ಟ್ರವ್ಯಾಪಿ ಚಳುವಳಿಯ ಮೂಲಕ ಅದರ ನಿವಾರಣೆಗೆ ಶ್ರಮಿಸುತ್ತೇನೆ ಎನ್ನುವ ಪೇಜಾವರರ ಬಗ್ಗೆ ಇಷ್ಟೊಂದು ವ್ಯಗ್ರವಾಗಿ ಪ್ರತಿಕ್ರಿಯಿಸುವ ಅಗತ್ಯವಿರಲಿಲ್ಲ. ಸಾಮಾನ್ಯ ಜನರು ಸ್ವಪ್ರೇರಣೆಯಿಂದ ಬದಲಾವಣೆಗೆ ಹಾತೊರೆಯುತ್ತಿದ್ದಾರೆ ಎಂಬುದನ್ನು ಮನಗಾಣಬೇಕಾಗಿರುತ್ತದೆ. ದಲಿತರ ಮೇಲಿನ ದೌರ್ಜನ್ಯಕ್ಕಾಗಿ ಉಪವಾಸ ಕೂರುವ ಮುಖೇನ ಭಂಗಿಗಳ ಮತ್ತು ಬ್ರಾಹ್ಮಣರ ನಡುವೆ ಸಮಾಜದಲ್ಲಿ ಶತಮಾನಗಳಿಂದಲೂ ಬೆಳೆದುಬಂದಿರುವ ಕಂದಕವನ್ನು ಮುಚ್ಚಲು ಶ್ರಮಿಸುವ ಬದ್ಧತೆ ಪ್ರದರ್ಶಿಸಿದಾಗ ಇದಕ್ಕೆ ಸವಾಲು ಎಸೆಯುವಂತೆ, ಬೆಚ್ಚಿ ಬೀಳಿಸಲೆಂದೇ ಮಾದಾರ ಚೆನ್ನಯ್ಯ ಸ್ವಾಮೀಜಿಗಳು ಮೈಸೂರಿನಲ್ಲಿಯೇ ಬ್ರಾಹ್ಮಣರ ಬಾಹುಳ್ಯವಿರುವ ವಿಭಾಗದಲ್ಲಿ ಪಾದಯಾತ್ರೆ ನಡೆಸುವ ಆಶಯವನ್ನು ಪತ್ರಿಕೆಯಲ್ಲಿ ಪ್ರಕಟಿಸಿದಾಗ ಇದನ್ನು 'ಸಾಮರಸ್ಯದ ನಡಿಗೆ' ಎಂದು ಅಲ್ಲಿ ಪೂರ್ಣಕುಂಭ ಸ್ವಾಗತವೇ ಸಿಕ್ಕಿದೆ. ಒಂದು ಚಲನಶೀಲ ಸಮಾಜದಲ್ಲಿ ಇಂತಹ ಪ್ರಕ್ರಿಯೆಗಳು ಜರುಗುತ್ತಿರಬೇಕು ಎನ್ನುವುದರಲ್ಲಿ ಎರಡು ಮಾತಿಲ್ಲ. ತಮ್ಮ ಜೀವಿತಾವಧಿಯಲ್ಲಿ ಅಸ್ಪೃಶ್ಯತಾ ನಿವಾರಣೆ ಕಣ್ಣಾರೆ ಕಾಣಬೇಕೆಂದು ಆಶಿಸಿರುವವರೂ, ಇದಕ್ಕಾಗಿ ಪದೇಪದೇ ಚಳುವಳಿ ನಡೆಸುತ್ತಾ, ತಮ್ಮ ಸಂಧ್ಯಾಕಾಲದಲ್ಲಿಯೂ ಅಸ್ಪೃಶ್ಯತಾ ನಿವಾರಣೆಗೆ ತಮ್ಮ ಬದುಕನ್ನು ಮುಡುಪಾಗಿಡುವುದಾಗಿ ಘೋಷಿಸಿರುವವರೂ ಆದ ಪೇಜಾವರ ಶ್ರೀಗಳ ನಿಲುವು ಎಲ್ಲಾ ಮಠಾಧೀಶರಿಗೂ ಆದರ್ಶವಾಗಬೇಕು.

ಭಾರತದಲ್ಲಿ ಜಾತಿ ವ್ಯವಸ್ಥೆ ಇದೆ ಎನ್ನುವುದು ಎಲ್ಲರೂ ತಿಳಿದಿರುವ ಸತ್ಯ. ತಾವು ಜಾತ್ಯತೀತರು ಎಂದು ಹೇಳಿಕೊಂಡು ಬೀಗುವವರಲ್ಲಿನ ಜಾತ್ಯತೀತೆಯ ಬದ್ಧತೆ ಅಲ್ಪ ಪ್ರಮಾಣದ್ದಾಗಿರುತ್ತದೆ. ಇವರಲ್ಲಿನ ಜಾತ್ಯತೀತೆಯ ಭಾವನೆಗಳು, ಪ್ರಾಧಿಕಾರಗಳು, ಪರಿಷತ್ತುಗಳು, ಅಕಾಡೆಮಿಗಳು, ಪ್ರಶಸ್ತಿಗಳು, ಅಷ್ಟೇ ಏಕೆ ವಿಶ್ವವಿದ್ಯಾನಿಲಯದ ಅಧಿಕಾರ ಪ್ರಾಪ್ತವಾಗುವ ಸಂದರ್ಭದಲ್ಲಿ ತಮ್ಮ ನಗ್ನತೆಯನ್ನು ತೋರ್ಪಡಿಸಿಕೊಳ್ಳುತ್ತವೆ.

ಬಸವಮೂರ್ತಿ ಮಾದಾರ ಚನ್ನಯ್ಯ ಸ್ವಾಮೀಜಿಗಳು ದಲಿತರು ಅನ್ಯ ಧರ್ಮಕ್ಕೆ ಮತಾಂತರವಾಗಲು ನನ್ನ ಬೆಂಬಲವಿಲ್ಲ. ಆದರೆ ತಾನಿರುವ ಧರ್ಮದಲ್ಲಿ ಸ್ವಾಭಿಮಾನದ ಬದುಕು ಸಾಧ್ಯವಿಲ್ಲ ಎಂದಾದಾಗ ನನ್ನ ಮಾತನ್ನಾಗಲೀ, ಪೇಜಾವರ ಶ್ರೀಗಳ ಮಾತನ್ನಾಗಲೀ ಕೇಳಲಾರರು ಎಂದು ಹೇಳಿದರು. ಸಮಾಜದಲ್ಲಿ ಜಾತಿ ಜಾತಿಗಳ ಮಧ್ಯೆ ಸಮಾನತೆ ಮೂಡಿದರೆ ಮತಾಂತರ ಬೇಡ ಎನ್ನಬಹುದು. ಹುಟ್ಟಿದ ಧರ್ಮದಲ್ಲಿ ಸ್ವಾಭಿಮಾನಕ್ಕೆ ಧಕ್ಕೆಯಾದಾಗ ಸ್ವಲ್ಪ ಮಟ್ಟಿಗೆ ಮತಾಂತರ ಆಗುತ್ತಿರುತ್ತದೆ ಎಂದರು.

ದೇವಾಲಯ, ಧಾರ್ಮಿಕ ಮಂದಿರಗಳಿಗೆ ದಲಿತರಿಗೆ ಪ್ರವೇಶ ನೀಡಿದರೆ ಒಳ್ಳೆಯ ವಾತಾವರಣ ಮೂಡುತ್ತದೆ. ದಲಿತರ ಮೇಲಿನ ಹಲ್ಲೆಯನ್ನು ಸಹಿಸುವುದಿಲ್ಲ ಎಂದು ಪೇಜಾವರ ಶ್ರೀಗಳ ರೀತಿಯಲ್ಲೇ ಉಳಿದ ಎಲ್ಲಾ ಶ್ರೀಗಳೂ ಹೇಳಿದರೆ, ಸ್ಪಂದಿಸಿದರೆ ಅಂಬೇಡ್ಕರ್ ಕನಸು ನನಸಾಗುತ್ತದೆ.

ಹಾಗೆಯೇ ಪ್ರಗತಿಪರರು, ವಿಚಾರವಂತರು ಅಸ್ಪೃಶ್ಯತಾ ನಿವಾರಣೆಗೆ ಯಾರೇ ಬದ್ಧತೆ ಪ್ರದರ್ಶಿಸಲಿ ಅವರ ಜೊತೆ ಕೈಜೋಡಿಸಬೇಕು. ಸರಕಾರವು ಕಣ್ಣೊರೆಸುವ ನಾಟಕ ಮಾಡುವಾಗ ತಮ್ಮೆಲ್ಲಾ ಸಾಮರ್ಥ್ಯದಿಂದ ವಿರೋಧಿಸುವವರಾಗಬೇಕು.

**– ಆನಂದಕುಮಾರ್**
ಸಂಶೋಧನಾ ವಿದ್ಯಾರ್ಥಿ, ಸಮಾಜಶಾಸ್ತ್ರ ವಿಭಾಗ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು

* * *

**ಭಾ**ರತ ದೇಶದಲ್ಲಿರುವಷ್ಟು ಜಾತಿಗಳು, ಉಪಜಾತಿಗಳು ಜಗತ್ತಿನ ಯಾವ ದೇಶದಲ್ಲಿಯೂ ಇರಲಿಕ್ಕಿಲ್ಲ. ಒಂದು ವೇಳೆ ಅವುಗಳು ಇದ್ದಲ್ಲಿ, ಉಪಜಾತಿಗಳ ರೂಪದಲ್ಲಿರಲು ಮಾತ್ರ ಸಾಧ್ಯ. ಅಂದರೆ, ಅವುಗಳ ಸಂಸ್ಕೃತಿಯಲ್ಲಿ ಅಲ್ಪ ಬದಲಾವಣೆ ಇದ್ದರೂ ದೇಶ,ದೇವರು, ಧರ್ಮಗ್ರಂಥ, ಪ್ರಾರ್ಥನಾ ಸ್ಥಳ, ಹಬ್ಬ ಹರಿದಿನಗಳು, ಆಹಾರ ಪದ್ಧತಿ, ವೇಷಭೂಷಣಗಳು, ಭಾಷೆ, ... ಮುಂತಾದವುಗಳು ಒಂದೇ ರೀತಿಯದ್ದಾಗಿವೆ. ಆದರೆ, ನಮ್ಮಲ್ಲಿ ಒಂದೇ ಧರ್ಮದಲ್ಲಿ ಹಲವಾರು ಜಾತಿಗಳು,

# ಓದುಗರ ವೇದಿಕೆ

ಉಪಜಾತಿಗಳಿದ್ದು, ಜಾತಿಗೊಂದು ಮಠ, ದೇವರು, ಗಲ್ಲಿ, ಧರ್ಮ ಗ್ರಂಥ, ಆಚಾರ ವಿಚಾರಗಳು ವಿಭಿನ್ನವಾಗಿವೆ. ಹೀಗಾಗಿ, ಜನತೆಯಲ್ಲಿ ಒಗ್ಗಟ್ಟು, ಪರಸ್ಪರ ಕೊಟ್ಟು ತೆಗೆದುಕೊಳ್ಳುವ ಸಹಕಾರ, ಪ್ರೀತಿ, ವಿಶ್ವಾಸ, ಅಭಿವೃದ್ಧಿ... ಕಡಿಮೆಯಾಗಿ ಸಂಘರ್ಷಕ್ಕೆ ಎಡೆಮಾಡಿಕೊಡುತ್ತಿದೆ. ಇದು ಸಲ್ಲದು.

ಜಾತಿ ಜಾತಿಗಳವರ ನಡುವೆ ಆದಾಯದ ವ್ಯತ್ಯಾಸಗಳಿಂದ ಅವರಲ್ಲಿ ಮೇಲು ಕೀಳು ರೂಪ ತಾಳಿವೆ. ವಿವಿಧ ಜಾತಿಗಳಲ್ಲಿರುವ ಬಡತನ, ಅಜ್ಞಾನ, ಅನಕ್ಷರತೆ, ಅನಾರೋಗ್ಯ, ಅವೈಜ್ಞಾನಿಕ ರೂಢಿಗಳನ್ನು ತೊಡೆದುಹಾಕುವಲ್ಲಿ ಸಾರ್ವಜನಿಕರು, ಹಿತೈಷಿಗಳು, ಚಿಂತಕರು, ಸರಕಾರಗಳು ಮತ್ತು ಮಠಾಧೀಶರು ಪ್ರಮುಖ ಪಾತ್ರ ವಹಿಸಿ ಎಲ್ಲರನ್ನೂ ಸಾಮಾಜಿಕ-ಆರ್ಥಿಕವಾಗಿ ಉನ್ನತೀಕರಿಸಬೇಕು. ಆಗ ಮಾತ್ರ ಸಮಾಜದಲ್ಲಿ ಸಾಮರಸ್ಯವುಂಟಾಗುವುದು. ಎಲ್ಲಾ ಜಾತಿಗಳಲ್ಲಿ ಆರ್ಥಿಕ-ಸಾಮಾಜಿಕ ಅಂಶಗಳಲ್ಲಿ ಸಮಾನತೆ ಹೊಂದಿ ಅವು ಅಭಿವೃದ್ಧಿ ಪಥದಲ್ಲಿ ಮುಂದುವರಿದಲ್ಲಿ, ಆಗ ಯಾವ ಜಾತಿಯೂ 'ಶ್ರೇಷ್ಠ ಜಾತಿ' ಎಂಬುದನ್ನು ಪರಿಗಣಿಸಲಾಗುವುದಿಲ್ಲ. ಸಮಾಜದಲ್ಲಿ ಶಾಂತಿ ನೆಲೆಸುವುದು. ಆಂಧ್ರಪ್ರದೇಶದ ಒಬ್ಬ ವಿಪ್ರ ಮುಖ್ಯಕಾರ್ಯದರ್ಶಿಗಳು ತಮ್ಮ ಮಗಳನ್ನು ಪರಿಶಿಷ್ಟ ಐ.ಎ.ಎಸ್. ಯುವ ಅಧಿಕಾರಿಗೆ ಅದ್ದೂರಿಯಾಗಿ ಮದುವೆ ಮಾಡಿ ಕೊಟ್ಟರು. ಇಲ್ಲಿ ವಧು-ವರ ಇವರಿಬ್ಬರ ಕಡೆಯವರು ಆರ್ಥಿಕವಾಗಿ, ಶೈಕ್ಷಣಿಕವಾಗಿ ಸಮಸ್ಥಿತಿಯಲ್ಲಿದ್ದವರು. ಆದರೆ, ಅದೇ ಬೇರೆ ಪರಿಶಿಷ್ಟ ಪದವೀಧರ ಯುವಕ ನೌಕರನಿಗೆ ಈ ಅಧಿಕಾರಿಯು ತನ್ನ ಮಗಳನ್ನು ಮದುವೆ ಮಾಡಿಕೊಡುತ್ತಿದ್ದರೆ ? ಇಲ್ಲ ಎಂದೇ ಹೇಳಬಹುದು. ಕಾರಣ ಇಬ್ಬರ ಕಡೆಯವರಲ್ಲಿನ ಆರ್ಥಿಕ ಅಸಮಾನತೆ !

ಪೇಜಾವರ ಶ್ರೀಗಳು ಪರಿಶಿಷ್ಟರ ಕೇರಿಗೆ ಹೋಗಿ ಉಪದೇಶ ಮಾಡುವುದರಿಂದಾಗಲಿ, ಮಾದಾರ ಸ್ವಾಮಿಗಳು ವಿಪ್ರ ಸಮಾಜಕ್ಕೆ ಹೋಗಿ ಅವರಿಂದ ಪಾದಪೂಜೆ ಮಾಡಿಸಿಕೊಂಡು ಭವ್ಯ ಸ್ವಾಗತ ಪಡೆದರಾಗಲಿ, ಜನಿವಾರ ಧಾರಣದಿಂದಾಗಲಿ ಸಮಾಜದಲ್ಲಿ ಬೇರುಬಿಟ್ಟಿರುವ ಜಾತೀಯತೆ ಮಾಯವಾಗಿ, ನಾವೆಲ್ಲ ಒಂದು ಎನ್ನುವ ಭಾವನೆ ಬರಲು ಸಾಧ್ಯವಿಲ್ಲ. ಇದೊಂದು 'ರೋಡ್ ಶೋ' ಮತ್ತು ಜನಪ್ರಿಯತೆ ಗಳಿಸುವ ತಂತ್ರಗಾರಿಕೆ ಎಂದೇ ಹೇಳಬಹುದು.

**– ವಾಮನ ರಾವ್**

ಶ್ರೀ ದತ್ತ ನಿಲಯ, ೧೧ನೇ ಅಡ್ಡರಸ್ತೆ, ಜಯನಗರ ಪೂರ್ವ, ತುಮಕೂರು - ೨

* * *

**ಮಾ**ದಾರ ಸ್ವಾಮೀಜಿಯವರನ್ನು ಬ್ರಾಹ್ಮಣ ಓಣಿಯವರು ಸ್ವಾಗತಿಸಿದರು. ಪೇಜಾವರ ಸ್ವಾಮೀಜಿಗಳು ಮಾದಾರ ಓಣಿಗೆ ಹೋಗಿ ಆಶೀರ್ವಚನ ನೀಡಿದರು. ಈ ಮೂಲಕವಾದರೂ ಜನರಲ್ಲಿ ತಾವೆಲ್ಲರೂ ಒಂದೇ, ಜಾತಿ ಭೇದ ಮಾಡಬಾರದು ಎನ್ನುವ ಸಂದೇಶ ಸ್ವಾಮೀಜಿಗಳೇ ನೀಡಿರುವುದು ನಿಜಕ್ಕೂ ಮೆಚ್ಚತಕ್ಕದ್ದೇ. ಆದರೆ ಸ್ವಾಮೀಜಿಗಳೇ ! ತಾವೂ ಈ ಜಾತಿ ಸ್ವಾಮೀಜಿ, ಆ ಜಾತಿ ಸ್ವಾಮೀಜಿ ಎಂದು ಗುರುತಿಸಿ ಕೊಳ್ಳುತ್ತಿರುವುದು, ದಿನಕ್ಕೊಬ್ಬರಂತೆ ಜಾತಿ, ಉಪಜಾತಿಗೆ ಸ್ವಾಮೀಜಿಗಳು ಹುಟ್ಟಿ ಕೊಳ್ಳುತ್ತಿರುವುದು, ಅವರ ನೇತೃತ್ವದಲ್ಲಿ ಜಾತಿ ಸಮಾವೇಶಗಳು ನಡೆಯುತ್ತಿರುವುದು, ಅದರಲ್ಲಿ ಸ್ವಾಮೀಜಿಗಳು ರಾಜಕಾರಣಿಗಳನ್ನು ಮೀರಿಸುವಂತೆ ಮಾತನಾಡುತ್ತಿರುವುದು, ಸಮಾಜದಲ್ಲಿ ಜಾತಿ ಸಂಘರ್ಷಕ್ಕೆ ಅವರೇ ನಾಂದಿ ಹಾಡಿದಂತಲ್ಲವೇ... ?

ಹಿಂದುಳಿದ ವರ್ಗಗಳ ಸುಧಾರಣೆಗೆ ಯಾವುದೇ ಸ್ವಾಮೀಜಿಗಳು ಪ್ರಯತ್ನ ಮಾಡಿದರೆ ಅದು ನಿಜಕ್ಕೂ ಅಭಿನಂದನಾರ್ಹ. ಇದರಿಂದ ಸಾಕಷ್ಟು ಮೂಢನಂಬಿಕೆ ಗಳಿಂದ ಮೌಢ್ಯಗಳಿಂದ ಹಿಂದುಳಿದ ವರ್ಗ ಹೊರಬಂದಿರುವುದು ಸತ್ಯ. ಆದರೆ ಅದರ ಜೊತೆಗೆ ಪುರೋಹಿತಶಾಹಿಗಳಿಗೆ ನಾವೂ ಸಮನಾಗಬೇಕು ಎನ್ನುವ ಹಪಾಹಪಿಯಿಂದ ಅವರ ಮೌಢ್ಯಗಳನ್ನು ಹೊಸದಾಗಿ ತಾವು ಅಪ್ಪಿಕೊಳ್ಳುತ್ತಿರುವುದು ಅಷ್ಟೇ ಸತ್ಯ. ಜೊತೆಗೆ ನಮ್ಮ ಸಂಸ್ಕೃತಿಗಳನ್ನು ನಮಗೆ ಗೊತ್ತಿಲ್ಲದಂತೆ ಮರೆಯುತ್ತಿರುವುದು ಸಹ ದುರಂತ. ಉದಾಹರಣೆಗೆ ಸಂಕಷ್ಟಿ ಆಚರಣೆ, ಶುಕ್ರವಾರದ ಮಹಾಲಕ್ಷ್ಮೀ ಪೂಜೆ, ಅಕ್ಷಯ ತದಿಗೆ ದಿನ ಚಿನ್ನ ಖರೀದಿ ಮೊದಲಾದ ಆಚರಣೆಗಳು ಹಿಂದುಳಿದ ವರ್ಗಗಳಲ್ಲಿ ಕಂಡುಬಂದಿರುವುದು ಇತ್ತೀಚಿನ ವರ್ಷಗಳಲ್ಲಿ. ಮೊದಲೆಲ್ಲಾ ಈ ರೀತಿಯ ಆಚರಣೆಗಳು ಪುರೋಹಿತ ವರ್ಗಗಳಲ್ಲಿ, ಮುಂದುವರಿದ ವರ್ಗಗಳಲ್ಲಿ ಮಾತ್ರ ಕಂಡುಬರುತ್ತಿತ್ತು. ಈ ಆಚರಣೆಗಳನ್ನು ತಾವೂ ಮಾಡುವುದರ ಮೂಲಕ ಹಿಂದುಳಿದವರು ತಾವೂ ಮುಂದುವರಿದ ವರ್ಗಕ್ಕೆ ಸರಿಸಮಾನರು ಎಂದು ತೋರಿಸಿಕೊಳ್ಳಲು ಪ್ರಯತ್ನಿಸುತ್ತಿದ್ದಾರೆ. ಹಿಂದುಳಿದ ವರ್ಗದವರು ಆಚರಿಸುತ್ತಿರುವುದು ಸರಿಯೋ ತಪ್ಪೋ ಎನ್ನುವುದು ಮುಖ್ಯವಲ್ಲ. ಈ ರೀತಿ ಆಚರಣೆಗಳಿಂದ ಲಾಭ ಆಗಿದ್ದು ಮಾತ್ರ ಪುರೋಹಿತಶಾಹಿ ವರ್ಗಕ್ಕೆ. ಅವರ ಆಚರಣೆಗಳನ್ನು ಆಚರಿಸಲು ಹೋಗಿ ತಮ್ಮ ಆಚರಣೆಗಳಿಗೆ ತಿಲಾಂಜಲಿ ಬಿಟ್ಟಿದ್ದು ಮಾತ್ರ ದುರಂತ ಎನ್ನದೇ ವಿಧಿಯಿಲ್ಲ. ವೈವಿಧ್ಯಮಯ ಆಚರಣೆಗಳು, ಸಂಸ್ಕೃತಿಗಳು, ಪದ್ಧತಿಗಳು ಕಣ್ಮರೆಯಾಗುವುದರಲ್ಲಿ ಸ್ವಾಮೀಜಿಗಳ ಪಾತ್ರವೂ ಸಾಕಷ್ಟಿದೆ ಎಂದಾಯಿತು.

ಇನ್ನು ಸ್ವಾಮೀಜಿಗಳು ಬೀದಿಗೆ ಬಂದಿರುವ ವಿಚಾರ. ಒಳ್ಳೆಯದೋ, ಕೆಟ್ಟದ್ದೋ, ಒಟ್ಟಿನಲ್ಲಿ ಸ್ವಾಮೀಜಿಗಳು ದಿನನಿತ್ಯವೂ ಮಾಧ್ಯಮಗಳಲ್ಲಿ ಮಿಂಚುತ್ತಿದ್ದಾರೆ. ಇನ್ನು ಭಕ್ತರಿಗೋ ದೃಶ್ಯ ಮಾಧ್ಯಮಗಳಲ್ಲೇ ಸ್ವಾಮೀಜಿಗಳ ದರ್ಶನದ ಸೌ(ದೌ)ಭಾ(ರ್)ಗ್ಯ. ಸ್ವಾಮೀಜಿಗಳಿಗೂ ನಟ ನಟಿಯರಂತೆ ಸ್ಟಾರ್ ವ್ಯಾಲ್ಯು. ಜಪ ತಪಗಳಲ್ಲಿ ತಲ್ಲೀನರಾಗಿರಬೇಕಾದ ಸ್ವಾಮೀಜಿಗಳು ಈ ರೀತಿ ಬೀದಿಗೆ ಬಂದಿರೋದು ಎಷ್ಟರಮಟ್ಟಿಗೆ ಸರಿ ? ಸಮಾಜದಲ್ಲಿ ಬದಲಾವಣೆ ಆಗಬೇಕಾದರೆ ಇಲ್ಲವೇ ಸ್ವಾಮೀಜಿಗಳು ತಮ್ಮ ಅಸ್ತಿತ್ವ ಉಳಿಸಿಕೊಳ್ಳಬೇಕಾದರೆ ಬೀದಿಗೆ ಬರೋದು ಅನಿವಾರ್ಯಾನೋ, ಅವರೇ ಉತ್ತರಿಸಬೇಕು. ನಮ್ಮಲ್ಲಿ ಗೋಕರ್ಣಕ್ಕೆ ಹೋಗಿ ಬಂದ ನಂತರ ಹಿರಿಯರು ಒಂದು ಮಾತು ಹೇಳುತ್ತಾರೆ. ''ನಾವು ಗೋಕರ್ಣಕ್ಕೆ, ಗೋಕರ್ಣದವರು ಗಾಳಕ್ಕೆ.'' ನಾವೂ ಏನೋ ನಿರೀಕ್ಷೆಗಳನ್ನು ಇಟ್ಟುಕೊಂಡು ಹೋಗಿರುತ್ತೇವೆ. ನಿರೀಕ್ಷೆಗಳನ್ನು ಪೂರೈಸಬೇಕಾದವರೂ ಇನ್ನೆಲ್ಲಿಗೋ ಹೋಗಿರುತ್ತಾರೆ. ಮಹಾಬಲೇಶ್ವರ ಮಾತ್ರ ಸಮುದ್ರದ ಕಡೆ ಮುಖಮಾಡಿ ಭಕ್ತರ ಸಂಕಟ, ಪುರೋಹಿತರ ಸಂತೋಷ, ಸ್ವಾಮಿಗಳ ಉಪದೇಶ ಕೇಳುತ್ತ ನಗುತ್ತಿದ್ದಾನೆ.

**– ವಿನಾಯಕ ಎಲ್. ಪಟಗಾರ**

ಅಂಚೆ : ಬೆಟ್ಕುಳಿ - ೫೮೧ ೩೩೩, ಕುಮಟಾ ತಾಲೂಕು, ಉತ್ತರ ಕನ್ನಡ ಜಿಲ್ಲೆ

* * *

**ನ**ಮ್ಮ ಬೀದಿಯಲ್ಲೇ ನಡೆದುಹೋದ ಒಂದು ವಿದ್ಯಮಾನದ ಬಗ್ಗೆ 'ಹೊಸತು' ಪತ್ರಿಕೆ ಓದುಗರಿಗೆಂದು ರೂಪಿಸಿದ ಸಂವಾದ ಸ್ವಾಗತಾರ್ಹ. ಸಂವಾದಕ್ಕೆಂದು ಸೂಚಿಸಲಾದ ಪ್ರಶ್ನೆಗಳಲ್ಲಿ ಗಂಭೀರತೆಯ ಕೊರತೆ ಕಾಣುತ್ತದೆಯೆಂದು ಬಹಳ ಗೌರವದಿಂದಲೇ ಹೇಳಬಯಸುತ್ತೇನೆ.

ಮಾದಾರ ಸ್ವಾಮಿಗಳನ್ನು ಪೇಜಾವರರು ಕೇರಿಯಿಂದ ಬೀದಿಗೇಕೆ ಎಳೆದು ತಂದರು ? – ಎಂಬ ಪ್ರಶ್ನೆಯೇ ಇಡೀ ವಿದ್ಯಮಾನವನ್ನು ಅಸಡ್ಡೆಯಿಂದ ನೋಡಿರು ವುದನ್ನು ಸ್ಪಷ್ಟಪಡಿಸುತ್ತದೆ. ಮಾದಾರ ಸ್ವಾಮಿಗಳು ಪೇಜಾವರರ ಅನುಯಾಯಿ ಅಲ್ಲ. ವೈಚಾರಿಕವಾಗಿ ಭಿನ್ನಹಾದಿಯಲ್ಲಿರುವ ಚಿತ್ರದುರ್ಗದ ಮುರುಘಾಮಠದಿಂದ ದೀಕ್ಷೆ ಪಡೆದವರು. ಶೋಷಿತ ಜನಾಂಗದಿಂದ ಬಂದ ಸ್ವಾಮೀಜಿಯವರನ್ನು ಪೇಜಾವರರೋ, ಆರೆಸ್ಸೆಸ್ಸಿನವರೋ ಹೈಜಾಕ್ ಮಾಡಿಬಿಟ್ಟಿದ್ದಾರೆ ಎಂದು ಭಾವಿಸುವುದು ನಮ್ಮ ಆಲೋಚನೆಯ ಟೊಳ್ಳುತನವನ್ನು ಬಿಂಬಿಸುತ್ತದೆ.

ಮಾದಾರ ಚೆನ್ನಯ್ಯ ಸ್ವಾಮೀಜಿಯವರಿಗೆ ಸ್ವಂತಿಕೆ ಇಲ್ಲ, ವಿವೇಚನಾ ಶಕ್ತಿ ಇಲ್ಲ, ಎಂಬುದು ಈ ಪ್ರಶ್ನೆಯ ಹಿಂದಿರುವ ಆಂತರ್ಯವಾಗಿಬಿಡುವ ಅಪಾಯವಿದೆ.

ಪೇಜಾವರರ ದಲಿತಕೇರಿಯ ಪಾದಯಾತ್ರೆಗಳ ವ್ಯಾಪಕ ಚರ್ಚೆ ನಡೆಯುತ್ತಿದ್ದ ಸಂದರ್ಭದಲ್ಲಿ 'ಬ್ರಾಹ್ಮಣಕೇರಿಯಲ್ಲಿ ಪಾದಯಾತ್ರೆ' ಮಾಡುವುದಾಗಿ ಘೋಷಿಸಿ ದವರು ಮಾದಾರ ಚೆನ್ನಯ್ಯ ಸ್ವಾಮಿಗಳು. ನಮ್ಮ ಕೇರಿಯಲ್ಲಿ ಅನಕ್ಷರಸ್ಥರೇ ಹೆಚ್ಚು ಇದ್ದಾರೆ, ಮೌಢ್ಯವೂ ತುಂಬಿಕೊಂಡಿದೆ. ಅಂತಹ ದಲಿತರು ಪೇಜಾವರರನ್ನು ಸಂಭ್ರಮದಿಂದ ಸ್ವಾಗತಿಸುವುದು ಸಹಜ. ಬ್ರಾಹ್ಮಣ ಕೇರಿಯಲ್ಲಿ ಅನಕ್ಷರಸ್ಥರು ಇರುವುದಿಲ್ಲ, ವಿದ್ಯಾವಂತರು ಇರುತ್ತಾರೆ. ಅವರು ದಲಿತ ಸ್ವಾಮಿಗಳನ್ನು ಹೇಗೆ ಸ್ವಾಗತಿಸುತ್ತಾರೆ ಎಂಬುದು ಸಾಮಾಜಿಕವಾಗಿ ಮುಖ್ಯ – ಹೀಗೆ ಹೇಳಿದವರು ಮಾದಾರ ಚೆನ್ನಯ್ಯ ಸ್ವಾಮೀಜಿ (ಸೆಪ್ಟೆಂಬರ್ ೯, ಪ್ರಜಾವಾಣಿ, ಪುಟ ೯).

ಇಂತಹದೊಂದು ಸುದ್ದಿ ಓದಿ ಈ ಕಾರ್ಯಕ್ರಮ ಅರ್ಥಪೂರ್ಣವಾಗಿ ಆಗಬೇಕೆಂದು ನಾವು ಗೆಳೆಯರು ಬಯಸಿದೆವು. ಸಾಮರಸ್ಯ ವೇದಿಕೆಯವರು ಜೊತೆಗೂಡಿದರು. ಒಂದು ಸಾವಿರಕ್ಕೂ ಮಿಕ್ಕ ಜನರ ಸಮ್ಮುಖದಲ್ಲಿ ಪಾದಯಾತ್ರೆ ನಡೆಯಿತು. ಪಾದಪೂಜೆ ಮಾಡಿದವರೂ ಇದ್ದರು, ಹೂಗುಚ್ಛ ಕೊಟ್ಟವರೂ ಇದ್ದರು, ಪುಸ್ತಕ ಕೊಟ್ಟು ಸ್ವಾಗತಿಸಿದವರೂ ಇದ್ದರು, ಇಂತಹ ಆಶಯಗಳೊಂದಿಗೆ

ನಾವಿದ್ದೇವೆ ಎಂದು ಜೊತೆಗೆ ಹೆಜ್ಜೆ ಹಾಕಿದವರೂ ಇದ್ದರು.

ಇದರಿಂದ ಯಾವ ಕ್ರಾಂತಿಯೂ ಆಗುವುದಿಲ್ಲವೆಂದು ನಮಗೂ ಗೊತ್ತಿದೆ. ನಾಡಿನ ಅನೇಕ ಮಹನೀಯರು ಇದೊಂದು ಆರೋಗ್ಯಕರ ಬೆಳವಣಿಗೆ ಎಂದು ಶ್ಲಾಘಿಸಿದ್ದು ಖುಷಿ ತಂದಿದೆ.

ಅಸ್ಪೃಶ್ಯತೆ, ಅಸಮಾನತೆಯ ಆಚರಣೆ ಹೇಗೆ ಖಾಯಿಲೆಯೋ, ಹಾಗೆಯೇ ಒಳ್ಳೆಯ ಬೆಳವಣಿಗೆಯೊಂದನ್ನು ಸ್ವಾಗತಿಸಲಾಗದ ಮನಸ್ಸುಗಳೂ ಖಾಯಿಲೆ ಪೀಡಿತವೇ !

ರವಿ ಹೊಯ್ಸಳ

C/o ಹೊಯ್ಸಳ ಎಲೆಕ್ಟ್ರಿಕಲ್ಸ್, ೬ನೇ ತಿರುವು, ಕೃಷ್ಣಮೂರ್ತಿಪುರಂ, ಮೈಸೂರು

*  *  *

ಯಾರಿಗೆ ಗೊತ್ತು ಬೆರಳೆಣಿಕೆ ಎತ್ತರ ದಿವ್ಯ ದೃಷ್ಟಿ ಹೊರತಾಗಿ ?
ಮೊನ್ನೆ ಬಾಬ್ರಿ ಮಸೀದಿಯ ತೀರ್ಪಿಗೂ ಮುನ್ನ
ದಿವ್ಯ ರಾಜಕಾರಣಿ ಪ್ರಚಾರಪ್ರಿಯ ಶ್ರೀ ಶ್ರೀ ಶ್ರೀ ಸ್ವಾಮೀಜಿ ಪಾದಯಾತ್ರೆ
ಮಹಿಷಾಸುರನ ಮಹಿಷನೂರ ಮೈಸೂರಿನ ದಕ್ಷಿಣ ಮೂಲೆಗೆ
ಕೋಣಕುರಿ ಮಾರಮ್ಮ ತಾಯಿಗೆ ಬಲಿನೀಡಿ ಅದನ್ನ
ಪ್ರಸಾದವಾಗಿ ಉಣ್ಣೊ ಮತಂಗ ಮಾದಿಗಕೇರಿಗೆ ಈ ಸ್ವಾಮೀಜಿ
ಏಕಾಏಕಿ ಯಾಕೀ ಪೂರ್ವಭಾವಿ ಗುಪ್ತೋದ್ದೇಶ ಎಂಟ್ರಿ ?

ಬ್ರಾಹ್ಮಣ ವಸಿಷ್ಠ ಮಾದಿಗ ಚೆಲುವೆ ಆರಂಜ್ಯೋತಿ ಮದುವೆಯಾದ ಗುಪ್ತೋದ್ದೇಶ
ಆರಂಜ್ಯೋತಿ ತಂದೆ ಜಾಂಬುವಂತ ಬಳಿ ಇದ್ದ ಪಂಚಾಂಗ ಅಪಹರಿಸಲು
ಬುಡಕಟ್ಟು ದೈವ ಪುರಿ ಜಗನ್ನಾಥನನು ವೈದಿಕ ನೆಲೆ ಅಪಹರಿಸಿದ್ದು ಹೀಗೆಯೆ
ಈ ವಿಭಿನ್ನ ತಂತ್ರ ಕುತಂತ್ರದಲಿ ಪ್ರಾಣಿದಯೆ ಸಿದ್ಧಾಂತ ರೂಪದಲಿ
ಅವೈದಿಕ ಮಂಟೇಸ್ವಾಮಿ ಸಿದ್ದಪ್ಪಾಜಿ ರಾಚಪ್ಪಾಜಿ ಪರಂಪರೆ ಒಳಕ್ಕೂ ತನ್ನ
ಕೆಂಪು ಕೋರೆಹಲ್ಲ ಹೊರ ತೋರದೆ ನಡೆಸುವ ಅಸ್ತ್ರರಹಿತ ದಾಳಿ ದಲಿತ-ಶೂದ್ರ



# ಓದುಗರ ವೇದಿಕೆ

ಸಂಸ್ಕೃತಿ ವಿವೇಕ ಮಾಂಸಾಹಾರ ದೈವಗಳ ಬೇರು ಕತ್ತರಿಸಿ ದಿಕ್ಕು ತಪ್ಪಿಸುವ ನಯಗಾರಿಕೆ
ಅರಿವಿಗೂ ನಿಲುಕದು... ದಲಿತ ಕೇರಿಯಲಿ ಈ ಸ್ವಾಮೀಜಿ ಪಾದಯಾತ್ರೆಯೂ...!

ಬುದ್ಧನ ಟೀಕಿಸಿ ಆರ್‌ಎಸ್‌ಎಸ್ ಆರಾಧಿಸಿ ಶೈವಲಿಂಗ ದೀಕ್ಷೆ ತಪ್ಪಿಸುವ
ಮುಖಜ ಸ್ವಾಮಿಗಳಿಗೆ ಹಿಂದಿರುವ ಶೂದ್ರ ಸ್ವಾಮಿಗಳಿಗೆ ಏಕ ಮಾದರ ಚೆನ್ನ ಸಾಮಿಗೆ
ಮಾದಿಗ ಜಾಂಬುವ ಮುನಿ ಅಲ್ಲಮ ಬಸವ ಮಾದೇಶ್ವರ ಮಂಟೇಸ್ವಾಮಿ
ಅಂಬೇಡ್ಕರ್ ಪರಂಪರೆಯ ವೈಚಾರಿಕ ವಿದ್ವತ್ ಕಾಣಿಸಲಾರವು
ನೆನಪಿಸಿಕೊಂಡರೆ ಇಂಡಿಯಾ ಪ್ರತಿಭೆಯಾಗಿ ನಿತ್ಯ ಗಮಗಮಿಸುವ ಕೆಳ ಜಾತಿಯ
ವ್ಯಾಸ ವಾಲ್ಮೀಕಿ ಕಾಳಿದಾಸ ಏಕಲವ್ಯ ಜನಪದ ಮೌಖಿಕ ಮಹಾಕಾವ್ಯದ ಸ್ಮರಣೆಯನು
ನಿರ್ಲಕ್ಷಿಸುವ ಮೌನ ಸೂಕ್ಷ್ಮತೆ ಬ್ರಾಹ್ಮಣ್ಯ ಸಿದ್ಧಾಂತದ್ದು

ಹೆಂಡ ಮಾಂಸ ಬಿಟ್ಟು ಹೊರ ಶುದ್ಧಿ ಕಾಪಾಡಿಕೊಂಡ ಮಾದಿಗರಿಗೆ ಬಿಟ್ಟಿ
ವೈಷ್ಣವ ದೀಕ್ಷೆ! ೮೦ ಮುಟ್ಟಿದ ಸ್ವಾಮಿಯ ಶ್ರೇಷ್ಠ ಸಂಶೋಧನಾ ಬೋಧನೆ!!
ಕೇವಲ ಒಂದು ದಿನ ದಲಿತ ಪೌರರು ಭಾರತವನು ಮುಟ್ಟದಿದ್ದರೆ ಸಾಕು
ಶುದ್ಧತೆ ಪಾತಾಳ ಮುಟ್ಟಿ ಇಡೀ ದೇಶವೇ ಮೂಗುಮುಚ್ಚಿ ರೋಗಗ್ರಸ್ತವಾಗಬಲ್ಲದು !
ಮನಶುದ್ಧತೆ ತನು ಶುದ್ಧತೆ ದುಡಿಮೆ ಶುದ್ಧತೆ ಜಾತಿ ವ್ಯವಸ್ಥೆ ಇಲ್ಲದ ಸಂಸ್ಕೃತ
ಪುರಾಣ ಶುದ್ಧತೆ... ಮೊದಲು ಇಂತಹ ಪರಿವರ್ತನಾ ದೀಕ್ಷೆ ವ್ರತ ಕ್ರಿಯೆ ಅವರವರ
ಅಂತರಂಗ ಶುದ್ಧಿಯಿಂದ ಆರಂಭಿಸಿ ಯಾತ್ರೆಯಾಗಬೇಕಿದೆ
ಶುದ್ಧೀಕರಿಸುವವರು ತಮ್ಮೊಳಗೆ ಬೆಟ್ಟವಾದ ಜಾತಿಪದ್ಧತಿಯ ಮೊದಲು ನಿವಾರಿಸಿಕೊಳ್ಳಬೇಕು.

ನೀಗ್ರೊ ಬಗ್ಗೆ ಅಮೆರಿಕನ್ನರ ಪಾಪಪ್ರಜ್ಞೆ ಮೊಸಳೆ ಕಣ್ಣೀರಲ್ಲ
ಲಕ್ಷ ಕೃತಿ ಬರೆದು ಕೋಟ್ಯಂತರ ಡಾಲರ್ ವೆಚ್ಚದಲಿ ಆ ನೊಂದ ಬದುಕ ಕಟ್ಟಿದರು
ಹದಿನೈದನೇ ಶತಮಾನದಿಂದ ಈಗಿನ ಬಿಲ್ ಗೇಟ್ಸ್ ತನಕವು
ಮೂರು ಕಾಸ ಮೀಸಲಾತಿಗೆ ಮಹಾ ಎನ್ನುತಾ ಮೊಸಳೆ ಕಣ್ಣೀರ ಸ್ವಾಮಿ ರಾಜಕಾರಣ ಹಿಂಡು
ಜಾತಿ ಶ್ರೇಷ್ಠತೆ ಅಹಂ ಅಗ್ರಹಾರದಲಿ ಮಠ ದೇವಸ್ಥಾನ ಜಮೀನ್ದಾರಿ ಜಾತಿಗಳ ಆ
ಲಕ್ಷ ಡೊಂಕಿನ ಕೆಲ ರೆಂಬೆಗಳ ಮುರಿದು ಒಳ ಮೂಲದ ಬೃಹತ್ ವಿಷ
ಬೇರು ಕಡಿಯದಂಥ ಜೋಪಾನ ಜಾಗ್ರತೆಯಲಿ ಇದ್ದು ಇರುತಾ ಇದ್ದು

ಲಕ್ಷ ದಲಿತಕೇರಿಗೆ ಕೋಟಿ ಪಾದವಿಟ್ಟಂತೆ ಏಕ ದಲಿತ ಕೇರಿಯ
ಬೆರಳೆಣೆ ಡೊಂಕನು ಹೆಂಡ ದನಮಾಂಸ ಮಾರಮ್ಮ ಮತಾಂತರವನು
ವೈದಿಕ ವೈಷ್ಣವಾಸ್ತ್ರದಿಂದ ಕಡಿಯ ಬಂದ ಗೋಭಕ್ತ ಮುಖಜ ಸ್ವಾಮಿಯ
ಪಾದಯಾತ್ರಾ ಶಿರದಲಿ ಮನವಿಲ್ಲದ ಪರಿಯ ಕಂಡು ! ಬೆರಗಿನಲಿ
ಮಾರಮ್ಮ ಗುಡಿ ಮುಂದೆ ಅರಳಿಕಟ್ಟೆ ನೆರಳಿನಲಿ ಪೂರ್ವಿಕ
ಶ್ರೀ ಜಾಂಬವ ಮುನಿ ಸುತ್ತಕುಂತ ಮಾರಮ್ಮ ಚೌಡಮ್ಮ ಎಲ್ಲಮ್ಮ ಮಲೆ ಮಾದೇಶ್ವರ
ಮಂಟೇಸ್ವಾಮಿ ಅಲ್ಲಮ ಸಿದ್ದಪ್ಪಾಜಿ ರಾಚಪ್ಪಾಜಿ ಇವರುಗಳು

ಆ ಹಾರುವ ಪಾದಕ್ಕೆ ಮಾರಿಕೊಂಡವರನು... ಆ ಮೇಲು
ಮಧ್ಯಮ ತಳ ಜಾತಿ ಚಪ್ಪಾಳೆಯ ವಿಕೃತ ಸೊಲ್ಲನು
ವಿಷಾದ ನಗುವಿನಲಿ ನೋವ ಬೆರಗಿನಲಿ ನೋಡಿ ಆಲಿಸುತಾ
ಸಾವಿರಾರು ವರುಷದಿಂದ ನಿಂತಲೇ ಮಿಸುಕಾಡೊ ನಾಟಕ
ಕ್ರಿಯಾ ಚಲನೆ ಇಲ್ಲದ ಹಿಂದು ಮುಂದಾದ ಬಿಳಿ ಜೊಳ್ಳು ಪಾದಗಳ
ಪಾದಯಾತ್ರೆಯನು ವಿಸ್ಮಯದಿಂದ ನೋಡುತ್ತಿದ್ದರಲ್ಲಾ ದಲಿತ ಲೋಕದ
ಮಾರಮ್ಮ ತಾಯ ಗುಡಿ ನೆರಳಿನಿಂದ ಇವರುಗಳು...

ಈ ನಿಜವನರಿಯದ ಈಗ ಹುಟ್ಟಿದ ಎಳೆ ಕಾವಿ
ಮಾದಾರ ಚೆನ್ನ ಸಾಮಿ ಆ ಶಿರದ ಕರೆಗೆ ಕುರಿಯಾಗಿ
ಹಾರುವ ಕೇರಿಯಲಿ ನಡೆದು ಪಾದಪೂಜೆ ಪಡೆದ ಆ ಕ್ಷಣದ ಪರಿವರ್ತನೆಗೆ
ತಮ್ಮ ಮಾದಿಗ ಕೇರಿಯನು ಅವರ ದನ ಬಾಡನೂ ಮುಟ್ಟಿಸಿಕೊಳ್ಳದ
ಮಾರಿಕೊಂಡಂತಹ ದುಃಸ್ಥಿತಿ... ಅವರೊಳಗೆ
ತಿರುಗು ಮುರುಗು ಪಾದವಾಗಿ

– ರಾಮಸ್ವಾಮಿ ಪಿ. ನ್ಯೂ ಎಕ್ಸ್‌ಟೆನ್ಷನ್, ಮಡಿಕೇರಿ - ೫೭೧ ೨೦೧

ನ್ಯಾಯಮೂರ್ತಿ ಶ್ರೀ ವಿ. ಆರ್. ಕೃಷ್ಣ ಅಯ್ಯರ್ ಅವರ ಪರಿಚಯವನ್ನು ಮಾಡುವ ಅಗತ್ಯವಿಲ್ಲ. ಅವರ ಜೀವನ ತೆರೆದ ಪುಸ್ತಕವಾಗಿ ಜನಜನಿತವಾಗಿಬಿಟ್ಟಿದೆ. ಅನ್ಯಾಯಕ್ಕೆ ದಬ್ಬಾಳಿಕೆಗೆ ತಲೆಬಾಗದ ದಿಟ್ಟತನದ ಅವರ ವ್ಯಕ್ತಿತ್ವ ನಾಡಿನ ಸಮಕಾಲಿನ ಜೀವನದ ಭಾಗ. ನ್ಯಾಯಮೂರ್ತಿಯಾಗಿ, ರಾಜಕೀಯ ನಾಯಕನಾಗಿ, ಸಾಮಾಜಿಕ ವಿಮರ್ಶಕನಾಗಿ, ದಣಿವರಿಯದ ಕಾರ್ಯಕರ್ತನಾಗಿ, ನಿರಂತರ ನ್ಯಾಯವಾದಿಯಾಗಿ, ಸಾಮಾಜಿಕ ಜೀವಿಯಾಗಿ, ವಾಗ್ಮಿಯಾಗಿ, ಬರಹಗಾರನಾಗಿ, ಅಂಕಣಕಾರನಾಗಿ ಹೀಗೆ ಹತ್ತು ಮುಖಗಳ ಈ ಧೀರನಿಗೆ ಈಗ ೯೬ ವಯಸ್ಸಿನ ಯೌವನ! ಡಿಸೆಂಬರ್ ೩ ಮತ್ತು ೪ನೆಯ ತಾರೀಖು ಕೋಚಿಯಲ್ಲಿ ನಾನು ಪೂರ್ವಭಾವಿ ತಯಾರಿ ಇಲ್ಲದೆ, ಅವರನ್ನು ಅವರ ಮನೆ ''ಸದ್ಗಮಯ''ದಲ್ಲಿ ಸಂಧಿಸಿದಾಗ ಗಮನಿಸಿದ್ದು ದಿನಪೂರ್ತಿ ತುಂಬಿದ ಅವರ ದಿನಚರಿ. ಪತ್ರಿಕಾ, ದೂರದರ್ಶನ ಮತ್ತು ರೇಡಿಯೋ ಸಂದರ್ಶನ, ಯೂತ್ ಫೆಡರೇಷನ್ ಸಭೆ, ಮನೆಗೆ ಬರುವ ರಾಜಕೀಯ ಧುರೀಣರೊಡನೆ ಭೇಟಿ, ಪತ್ರಗಳಿಗೆ ಉತ್ತರ ಬರೆಯುವುದು, ತಮ್ಮ ಲೇಖನ, ಮರುಗಳಿಗೆ ಪುಸ್ತಕ, ತಾನೇ ಸ್ಥಾಪಿಸಿ ಅಧ್ಯಕ್ಷರಾಗಿರುವ ಕ್ಯಾನ್ಸರ್ ರಿಲೀಫ್ ಸೊಸೈಟಿಯಿಂದ ಸಹಾಯ ಬೇಡಿ ಬರುವವರಿಗೆ ಪ್ರತಿದಿನ ೧೫-೨೦ ಸಾವಿರ ರೂಪಾಯಿಗಳ ಸಹಾಯಧನ ವಿತರಣೆ, ಹೀಗೆ ಸಾಗುತ್ತದೆ ಅವರ ದಿನ. ಅವರ ತೀಕ್ಷ್ಣಮತಿಯಾಗಲಿ, ಕಂಚಿನ ಕಂಠದ ವಾಗ್ಝರಿಯಾಗಲಿ, ಸಮಕಾಲೀನ ಆಗುಹೋಗುಗಳ ತಿಳುವಳಿಕೆಯಲ್ಲಾಗಲಿ ಒಂದಿಷ್ಟೂ ಊನ ಬಂದಿಲ್ಲ! ಸಂಧಿಸಿದ ಸೀಮಿತ ಸಮಯದಲ್ಲೆ ಅವರೊಡನೆ 'ಹೊಸತು' ಪರವಾಗಿ ಕೆಲವು ಪ್ರಶ್ನೆಗಳನ್ನು ಕೇಳಲು ಬಳಸಿಕೊಂಡೆ. ಅವರ ಉತ್ತರಗಳನ್ನು ನಮ್ಮ ಓದುಗರೊಡನೆ ಇಲ್ಲಿ ಹಂಚಿಕೊಳ್ಳುತ್ತಿದ್ದೇನೆ.

**ಹೊಸತು :** ನಮ್ಮ ಸಂವಿಧಾನದಲ್ಲಿ ಇಂದಿರಾ ಗಾಂಧಿಯವರು 'ಸಮಾಜವಾದ' ಪದವನ್ನು ಸೇರಿಸಿದರಾದರೂ ನಮ್ಮ ದೇಶ ಇಂದು ಅದಕ್ಕೆ ವಿರುದ್ಧ ಗತಿಯಲ್ಲಿ ತೀವ್ರವಾಗಿ ಚಲಿಸುತ್ತಿದೆ. ಆಳುವ ವರ್ಗ ಈ ಪ್ರಜಾಪ್ರಭುತ್ವದಲ್ಲಿ ತಮ್ಮ ವರ್ಗಹಿತಕ್ಕೆ ಹೇಗಾದರೂ ಸರಿ ಅಗತ್ಯ ಬಿದ್ದಾಗ ಶಾಸನಾಂಗದಲ್ಲಿ ಬಹುಮತವನ್ನು ಗಿಟ್ಟಿಸಿಕೊಳ್ಳುವ ಚಾತುರ್ಯ ಪಡೆದಿದೆ. ಸದ್ಯದಲ್ಲೇ ಸಂವಿಧಾನಕ್ಕೆ ತಿದ್ದುಪಡಿ ತಂದು 'ಸಮಾಜವಾದ' ಪದವನ್ನು ಅಳಿಸಿಹಾಕಿಯಾರು. ನಮ್ಮ ನಾಡಿನಲ್ಲಿ ಸಮಾಜವಾದಕ್ಕೆ ಭವಿಷ್ಯವಿದೆಯೆ ?

**ವಿ. ಆರ್. ಕೃಷ್ಣ ಅಯ್ಯರ್ :** ಸಮಾಜವಾದ ಬರದೆ ಅನ್ಯಥಾ ಮಾರ್ಗವೇ ಇಲ್ಲ. ಈ ದೇಶದ ಭವಿಷ್ಯ ಚೆನ್ನಾಗಿರಬೇಕಾದರೆ, ದೇಶ ಒಂದಾಗಿ ಉಳಿಯಬೇಕಾದರೆ ಬಡವರೇ ದಲಿತರೇ ಹೆಚ್ಚು ಸಂಖ್ಯೆಯಲ್ಲಿರುವ ಈ ದೇಶದ ಸಂವಿಧಾನವನ್ನು ರಚಿಸಿದವರಲ್ಲಿ ಪ್ರಮುಖರಾದವರೇ ದಲಿತರ ಆಶಾಜ್ಯೋತಿ ಅಂಬೇಡ್ಕರ್ ಅವರು. ಈ ಜನ ಸಮಾಜವಾದ-ಸಾಮಾಜಿಕನ್ಯಾಯದ ಸಾಧನೆಗಾಗಿ ಒಗ್ಗಟ್ಟಾಗಿ ಹೋರಾಡಿಯೇ ತೀರುತ್ತಾರೆ. 'ಸಮಾಜವಾದ' ಪದವನ್ನು ತೆಗೆಯಲು ಪ್ರಯತ್ನಮಾಡಿದರೆ ಜನ ದಂಗೆ ಏಳುವುದು ಖಂಡಿತ. ಈ ದೇಶದ ಐಕ್ಯತೆಯನ್ನು ಉಳಿಸಬೇಕಾದರೆ ಈ ಸಂವಿಧಾನ ವೆಂಬುದು ಇವರೆಲ್ಲರೊಡನೆ ಒಂದು ಪವಿತ್ರ ಒಡಂಬಡಿಕೆ ಎಂಬುದನ್ನು ನೆನಪಿನಲ್ಲಿಡಬೇಕು. ಅದರೊಡನೆ ಸರಸ ಸಲ್ಲದು.

ಜವಾಹರಲಾಲ್ ನೆಹರೂ ಅವರು ಸಮಾಜವಾದವನ್ನು ''ಆರ್ಥಿಕ ಪ್ರಜಾಪ್ರಭುತ್ವ''

## ನ್ಯಾಯಮೂರ್ತಿ ಶ್ರೀ ವಿ. ಆರ್. ಕೃಷ್ಣ ಅಯ್ಯರ್ ಅವರೊಡನೆ ಒಂದು ಸಂದರ್ಶನ



ಎಂದು ವಿವರಿಸಿದರು. ಇಂದಿನ ಬೆಳವಣಿಗೆಯಲ್ಲಿ ಆ ಪ್ರಜಾಪ್ರಭುತ್ವಕ್ಕೆ ಪೆಟ್ಟು ಬೀಳುತ್ತಿದೆ. ಇದರ ವಿರುದ್ಧ ಜನ ಸಂಘಟಿತರಾಗಬೇಕು. ಇಂದಿನ ಹೋರಾಟದ ಉದ್ದೇಶ ಮತ್ತು ಸ್ವರೂಪ ಎರಡೂ ಪ್ರಜಾಪ್ರಭುತ್ವದ ಉಳಿವಿಗಾಗಿ, ಅದನ್ನು ಭದ್ರಪಡಿಸುವುದಕ್ಕಾಗಿ. ಹಿಂದೊಮ್ಮೆ ರಾಜರುಗಳ ಹಕ್ಕನ್ನು ಚ್ಯುತಿಗೊಳಿಸಿ ಪ್ರಜಾಪ್ರಭುತ್ವವನ್ನು ಎತ್ತಿಹಿಡಿದ ಉಚ್ಚ ನ್ಯಾಯಾಲಯ, ನಮ್ಮ ಸಂವಿಧಾನದ 'ಸಮಾಜವಾದ' ಸ್ವರೂಪವನ್ನು ರಕ್ಷಿಸುವ ಸಮಯಪ್ರಜ್ಞೆಯನ್ನು ಮೆರೆಯುತ್ತದೆ ಎಂದು ನಾನು ನಂಬಿದ್ದೇನೆ.

**ಹೊಸತು** : ಕಾರ್ಮಿಕ ಸಂಘಗಳು ಇಂದು ದಾರಿ ತಪ್ಪಿವೆ. ಅವುಗಳ ಬೇಡಿಕೆಯಲ್ಲಾಗಲಿ ಹೋರಾಟಗಳಲ್ಲಾಗಲಿ ಆತ್ಮವಿಶ್ವಾಸದ ಕೊರತೆಯೂ, ಅಸ್ಪಷ್ಟತೆಯೂ, ಗೊಂದಲವೂ ತಲೆದೋರಿದಂತಿದೆ. ಇಂದಿನ ರಾಜಕೀಯ ಆರ್ಥಿಕ ಬೆಳವಣಿಗೆಯ ಗತಿಯನ್ನು ಗಮನಿಸಿದರೆ ಕಾರ್ಮಿಕ ಸಂಘಗಳ ಹೋರಾಟಕ್ಕೆ ಭವಿಷ್ಯವಿದೆಯೆ ?

**ಅಯ್ಯರ್** : ಮೊದಲಿಗೆ ಅವರಲ್ಲಿ ಒಗ್ಗಟ್ಟು ಬೇಕು. ರಾಜಕೀಯ ಬಿರುಕುಗಳು ಇಲ್ಲಿ ತಲೆದೋರಬಾರದು. ಅವರ ಬೇಡಿಕೆಗಳು ಅವರ ಉದ್ಯಮಕ್ಕೇ ಮಾರಕವಾಗುವ ಮಟ್ಟಕ್ಕೆ ಹೋಗಬಾರದು. ನಾನು ನ್ಯಾಯಾಧೀಶನಾಗಿ ಒಮ್ಮೆ ಗುಜರಾತ್ ಸ್ಟೀಲ್ ಟ್ಯೂಬ್ಸ್ ಕಂಪನಿ ಮತ್ತು ಅವರ ಕಾರ್ಮಿಕರ ನಡುವಿನ ಬಿಕ್ಕಟ್ಟಿಗೆ ಒಂದು ಪರಿಹಾರವನ್ನು ಆದೇಶಿಸಿದೆ. ಪ್ರಾರಂಭದಲ್ಲಿ ಎರಡು ಬಣಗಳೂ ಅದನ್ನು ಒಪ್ಪಲಿಲ್ಲ. ಕಾರ್ಮಿಕರು ಅದು ಸಾಲದು ಎಂದರು. ಮಾಲಿಕ ತನ್ನ ಉದ್ದಿಮೆಯೇ ಹಾಳಾಗುವುದು ಎಂದರು. ಕೆಲವು ವರ್ಷಗಳ ನಂತರ ಅದೇ ಮಾಲಿಕರನ್ನು ಸಂಧಿಸುವ ಅವಕಾಶ ದೊರೆತಾಗ ಆತ ಹೇಳಿದ್ದು "ನಿಮ್ಮ ಚೌಕಾಸಿಯ ತೀರ್ಮಾನ ನನ್ನ ಉದ್ಯಮವನ್ನು ರಕ್ಷಿಸಿದೆ. ನನ್ನ ಕಾರ್ಮಿಕರೂ ಈಗ ಸಂತುಷ್ಟರಾಗಿದ್ದಾರೆ, ಎಂದು."

**ಹೊಸತು** : ಎಡ ಪಕ್ಷಗಳಲ್ಲಿನ ಒಡಕು ಸರಿ ಹೋಗುವುದು ಸಾಧ್ಯವೆ ? ಅವರಲ್ಲಿ ಒಗ್ಗಟ್ಟು ಬರುವುದು ಹೇಗೆ ?

**ಅಯ್ಯರ್** : ಅವರು ತಾವು ಉಳಿಯಬೇಕಾದರೆ ಪರಸ್ಪರ ಸಹಕರಿಸಬೇಕು, ಒಂದಾಗಬೇಕು. ನನ್ನ ಬಳಿ ಎರಡೂ ಬಣಗಳ ಪ್ರತಿನಿಧಿಗಳೂ ಬರುತ್ತಾರೆ. ನಾನು ಇಬ್ಬರಿಗೂ ಛೀಮಾರಿ ಹಾಕುತ್ತೇನೆ. ಇವರ ಒಗ್ಗಟ್ಟಿನ ಹೋರಾಟಕ್ಕೆ ಜನ ಬೆಂಬಲ ಸಿಗುತ್ತದೆ. ಒಂದಿಷ್ಟೇ ಜನ ನಕ್ಸಲರೇ ಸರ್ಕಾರಕ್ಕೆ ನುಂಗಲಾರದ ಸವಾಲಾಗಿರುವಾಗ, ಐಕ್ಯತೆಯ ಪ್ರಜಾಪ್ರಭುತ್ವ ಹೋರಾಟಕ್ಕೆ ಇನ್ನೆಷ್ಟು ಹೆದರಬೇಡ ? ಕಾರಣ ಸಂಘಟಿತ ಶೋಷಿತರ ಕೂಗಿಗೆ ಆಳುವ ವರ್ಗ ಹೆದರುತ್ತದೆ. ಎಡಪಂಥೀಯ ಹೋರಾಟಗಳಿಗೆ ಹಿಂದೆಂದಿಗಿಂತಲೂ ಉತ್ತಮ ಭವಿಷ್ಯವಿದೆ.

**ಹೊಸತು** : ನ್ಯಾಯಾಧೀಶರನ್ನು, ನ್ಯಾಯಾಲಯವನ್ನು, ಮಿಕ್ಕೆಲ್ಲ ಕ್ಷೇತ್ರವನ್ನು ಲಂಚದ ರೋಗ ಆವರಿಸಿರುವುದು ಜಗಜ್ಜಾಹೀರಾಗಿದೆ. ಈ ಕುರಿತು ನಿಮ್ಮ ಪ್ರತಿಕ್ರಿಯೆ ಏನು ?

**ಅಯ್ಯರ್** : ನ್ಯಾಯಾಧೀಶರ ಆಯ್ಕೆಯನ್ನು ಒಂದು ಸ್ವಾಯತ್ತ ಸಮಿತಿಗೆ ಒಪ್ಪಿಸಬೇಕು. ಹಾಗೆಯೇ ನ್ಯಾಯಾಧೀಶರ ವಿರುದ್ಧ ಬರುವ ಪುಕಾರುಗಳ ವಿಚಾರಣೆಗೂ ಒಂದು ಸ್ವಾಯತ್ತ ಸಂಸ್ಥೆ ಬೇಕು. ಇವುಗಳಿಗೆ ಪೂರ್ಣ ಅಧಿಕಾರ ಇರಬೇಕು. ಸಂವಿಧಾನದಲ್ಲಿ ಇದಕ್ಕೆ ಅವಕಾಶವಿದೆ. ಲೋಕಸಭೆ ಈ ಕೆಲಸವನ್ನು ಮಾಡಬೇಕು. ನ್ಯಾಯಾಧೀಶರನ್ನು ವಜಾ ಮಾಡಬೇಕಾದರೂ ಈಗಿರುವುದಕ್ಕಿಂತ ಸರಳ ಪ್ರಕ್ರಿಯೆ ಬೇಕು.

**ಹೊಸತು** : ಒಬ್ಬ ಕಮ್ಯುನಿಸ್ಟ್ ಸಿದ್ಧಾಂತವನ್ನು ಸ್ವೀಕರಿಸಿಯೂ, ಮತ ಧಾರ್ಮಿಕ ಅನುಷ್ಠಾನಗಳನ್ನು ವೈಯಕ್ತಿಕವಾಗಿ ಉಳಿಸಿಕೊಳ್ಳುವುದು ವಿರೋಧಾಭಾಸವಲ್ಲವೆ ?

**ಅಯ್ಯರ್** : ಇಲ್ಲ.

**ಹೊಸತು** : ಶ್ರದ್ಧೆಯಿಂದ ತನ್ನ ಮತಧರ್ಮವನ್ನು



ಪಾಲಿಸುತ್ತಲೇ, ಆ ಮತದ ಚಿಹ್ನೆಗಳನ್ನು ಮುಖಮುಂತಾಗಿ ಶರೀರದ ಮೇಲೆ ಧರಿಸಿಕೊಂಡು, ಕೋಮುಸೌಹಾರ್ದ, ದಲಿತಪರ ಹೋರಾಟಗಳು, ಕಮ್ಯುನಿಸ್ಟ್ ಚಳುವಳಿಗಳು ಮುಂತಾದವುಗಳಲ್ಲಿ ಭಾಗವಹಿಸುವುದಕ್ಕೆ ಕಷ್ಟವಾಗುತ್ತದೆಯೆ ?

**ಅಯ್ಯರ್** : ಇಲ್ಲ, ಖಂಡಿತ ಇಲ್ಲ!

**ಹೊಸತು** : ಕೋಮುವಾದವನ್ನು ಮತಧರ್ಮಕ್ಕೆ ಅನ್ವಯಿಸದೆ ವಿವರಿಸಬೇಕೆ ? ಹಾಗಾದರೆ ಜಾತ್ಯತೀತತೆ ಮತ್ತು ಧಾರ್ಮಿಕ ಅನುಷ್ಠಾನಗಳನ್ನು ಟೀಕಿಸದೆ ಕೋಮುವಾದವನ್ನು ವಿವರಿಸುವುದು ಹೇಗೆ ? ನಮ್ಮ ಸಂವಿಧಾನದಲ್ಲಿ ಈ ಕುರಿತು ದ್ವಂದ್ವ ನುಸುಳಿದೆಯೆ ?

**ಅಯ್ಯರ್** : ಹಾಗೇನೂ ಇಲ್ಲ. ನಿತ್ಯಜೀವನದಲ್ಲಿ ಕೋಮುವಾದ ಮತ್ತು ಜಾತೀಯತೆ ಪ್ರವೇಶಿಸಕೂಡದು.

**ಹೊಸತು** : ಭಯೋತ್ಪಾದನೆ ಎಂಬುದು ಮತ ಧಾರ್ಮಿಕತೆಯ ಸೆರಗಿನಲ್ಲಿ ಹುದುಗಿರುವ ಪಂಥವಾದದ ಪ್ರವೃತ್ತಿ ಎನ್ನುತ್ತಾರೆ. ಇದನ್ನು ಹತ್ತಿಕ್ಕಲು ಮತಧರ್ಮಕ್ಕೆ ಸಾಧ್ಯವಾಗಿಲ್ಲ. ಕಮ್ಯುನಿಸಂನಂಥ ಆಧುನಿಕ ಚಿಂತನೆಯಲ್ಲೂ ಪಂಥವಾದದ ಸೆಲೆಗಳು ಬಂದೇ ಇವೆ. ಹೀಗಾಗಿ ಇವು ಅಲ್ಪಸಂಖ್ಯಾತವೆಂದೆನಿಸಿದರೂ ಯಾವುದೇ ಸಿದ್ಧಾಂತದ ಅವಿನಾಭಾಗವೇ ಎನಿಸಿ, ಅವುಗಳೇ ಭಯೋತ್ಪಾದನಾ ವಿಕಾರಗಳಿಗೆ ಕಾರಣವಾದರೆ, ಅದನ್ನು ಮೂಲೋತ್ಪಾಟನೆ ಮಾಡುವುದು ಸಾಧ್ಯವೇ ಇಲ್ಲವೇ ? ನಿಮಗೆ ಏನನಿಸುತ್ತದೆ ?

**ಅಯ್ಯರ್** : ಅಹಿಂಸೆಯನ್ನು ಒಂದು ಧ್ಯೇಯವಾಗಿ ಸ್ವೀಕರಿಸಿದರೆ ಭಯೋತ್ಪಾದನೆಯನ್ನು ಹತ್ತಿಕ್ಕಲು ಸಾಧ್ಯ. ವೈಯಕ್ತಿಕ ನೆಲೆಯಲ್ಲಿ ಪ್ರಾಮಾಣಿಕ ಕಟಿಬದ್ಧತೆಯಿಂದ ಕೂಡಿದ ವಿಶ್ವಾಸದ ಗಾಂಧೀಜಿ ನೀಡಿದ ಜೀವನ ಮಾರ್ಗವನ್ನು ಅನುಸರಿಸುವುದು ಇದಕ್ಕೆ ಅಗತ್ಯ. ಭಯೋತ್ಪಾದನೆಯ ಮೂಲೋತ್ಪಾಟನೆ ಈ ಮಾರ್ಗದಲ್ಲಿ ಸಾಧ್ಯ.

**ಹೊಸತು** : ವಿಶೇಷ ಆರ್ಥಿಕ ವಲಯ ಮತ್ತು ಅದಕ್ಕಾಗಿ ಭೂಸ್ವಾಧೀನದ ಪ್ರಶ್ನೆ ಪಶ್ಚಿಮ ಬಂಗಾಳದ ಎಡಪಕ್ಷಗಳ ಸರ್ಕಾರಕ್ಕೆ ಧಕ್ಕೆ ಉಂಟುಮಾಡಿರುವಂತೆ ತೋರುತ್ತದೆ. ಈ ಬಾರಿ ಅವರು ಚುನಾವಣೆಯಲ್ಲಿ ಸೋಲಬಹುದು ಎನ್ನುತ್ತಾರೆ. ಭೂಸ್ವಾಧೀನ ಅಭಿವೃದ್ಧಿಗೆ ಅಗತ್ಯ ಎಂದುಕೊಂಡರೆ, ಎಡಪಕ್ಷಗಳು ಬೇರೆ ಯಾವ ಮಾರ್ಗ ಹಿಡಿಯಬೇಕಿತ್ತು ? ಎಡಪಂಥೀಯವೂ ಆಗಿ, ಬಲವಂತದ ಪ್ರಯೋಗವಿಲ್ಲದೆ ಭೂಸ್ವಾಧೀನ ಮಾಡಿಕೊಳ್ಳುವುದು ಹೇಗೆ ಸಾಧ್ಯ ?

**ಅಯ್ಯರ್** : ರೈತರ ಮನವೊಲಿಸಿ ಆ ಕೆಲಸ ಮಾಡಬೇಕು. ತಾವು ಮಾಡುವ ಕೆಲಸಗಳು ಜನತೆಯ ಹಿತಕ್ಕಾಗಿ ಎಂದು ಅವರು ಒಪ್ಪಬೇಕು, ಬಲ ಪ್ರಯೋಗದಿಂದ ಕೂಡದು, ವಿಶ್ವಾಸಕ್ಕೆ ಅವರನ್ನು ತೆಗೆದುಕೊಂಡೇ ಮಾಡಬೇಕು.

---

ಸಂದರ್ಶನಕಾರರು : **ಕೆ. ಎಸ್. ಪಾರ್ಥಸಾರಥಿ**
ನಂ. ೨೪೭, 'ಬೆಳಕು', ವನಸಿರಿ ಬಡಾವಣೆ, ವಿದ್ಯಾನಗರ
ಬೆಟ್ಟಹಲಸೂರು ಅಂಚೆ, ಬೆಂಗಳೂರು - ೫೬೨ ೧೫೭



# ರಂಗಭೂಮಿಯಲ್ಲಿ ಸ್ತ್ರೀ ಅಸ್ತಿತ್ವ - ಅನನ್ಯತೆ

ಡಾ|| ವಿಜಯಾ







**ರಂಗಭೂಮಿಗೆ ಮಹಿಳೆಯ ಕೊಡುಗೆ ಅಪರಿಮಿತವಾದ್ದು, ಒಂದು ಕಾಲಕ್ಕೆ ತನಗೆ ನಿಷಿದ್ಧವಾಗಿದ್ದ ಈ ಪ್ರಕಾರದಲ್ಲಿ ತಡವಾಗಿ ಪ್ರವೇಶಿಸಿಯೂ ತಾನು ಅನಿವಾರ್ಯ ಎಂಬ ಹಾಗೆ ಸ್ಥಾನವನ್ನು ಸಾಧಿಸಿಕೊಳ್ಳುವುದು ತುಂಬ ಸುಲಭದ ಸಂಗತಿಯಲ್ಲ. ಇದಕ್ಕಾಗಿ ಆಕೆ ಅನೇಕ ಸವಾಲು-ಸಮಸ್ಯೆಗಳನ್ನು ಎದುರಿಸುತ್ತ , ಒಂದು ಅರ್ಥದಲ್ಲಿ ಅಗ್ನಿದಿವ್ಯವನ್ನೇ ದಾಟಿ ಬಂದಿರುತ್ತಾಳೆ.**

**ರಂಗಭೂಮಿ ಪ್ರದರ್ಶನ ಕಲೆ. ಇಲ್ಲಿ ಅಭಿವ್ಯಕ್ತಿ ಪ್ರಧಾನ ಅಂಶ. ರಂಗಭೂಮಿಯ ಎಲ್ಲ ವಲಯಗಳಲ್ಲೂ ಮಹಿಳೆಯ ಅಭಿವ್ಯಕ್ತಿ ಸಾಮರ್ಥ್ಯ ಏನೆಂಬುದು ಹಲವು ಹಂತಗಳಲ್ಲಿ ಚರ್ಚೆಯ ವಸ್ತುವಾಗಿದೆ. ಅವಳು ಅದೆಷ್ಟೇ ಅನಿವಾರ್ಯ ಆದಾಗಲೂ ಆಕೆಯನ್ನು ಎರಡನೆಯ ದರ್ಜೆಯಲ್ಲೇ ನಿಲ್ಲಿಸುವ ಪರಿಪಾಠ ಇಂದಿಗೂ ಕಾಣುತ್ತೇವೆ. ಆದರೂ ಆಕೆ ತನ್ನ ಅಭಿವ್ಯಕ್ತಿ ಸಾಮರ್ಥ್ಯದಿಂದಲೇ ತನ್ನ ಶಕ್ತಿ -ಮಿತಿ, ಅದಾಗಲೇ ಇರುವ ಚೌಕಟ್ಟಿನ ಪರಿಮಿತಿಯನ್ನು ಅರ್ಥೈಸಿಕೊಂಡು ಆಗಿರುವಷ್ಟಕ್ಕೇ ಸಂಭ್ರಮಿಸಿ ಮೈಮರೆಯದೆ ಅದರಾಚೆಗೆ ಜಿಗಿಯುವ, ಜಿಗಿದು ನೆಲೆ ನಿಲ್ಲುವ, ತನ್ನದೇ ಅಸ್ತಿತ್ವ ಸ್ಥಾಪಿಸುವ ಹೊಸದಾರಿ ಕಂಡುಕೊಳ್ಳಬೇಕಾಗಿದೆ.**

೧೯೯೦ರಲ್ಲಿ ಕೆಲವು ಮಹಿಳಾ ಸಂಘಟನೆಗಳು ಭಾರತೀಯ ಸಂದರ್ಭದಲ್ಲಿ 'ಎಕ್ಸ್‌ಪ್ರೆಷನ್' (ಅಭಿವ್ಯಕ್ತಿ) ಎನ್ನುವ ಒಂದು ಸಮಾವೇಶವನ್ನು ಯೋಜಿಸುವವು. ನೆನಪುಗಳನ್ನು ತಿಳಿಯಲು ೧೯೩೦ರ ಕಾಲಘಟ್ಟದ ರಂಗಕಲಾವಿದೆಯರನ್ನು ಸೇರಿಸುವ ಪ್ರಯತ್ನ ಮಾಡುತ್ತಾರೆ. ಆದರೆ ಕಲಾವಿದೆಯರ ವಯಸ್ಸಿನ ಕಾರಣದಿಂದಾಗಿ ನೆನಪು ಮಾಸಿದ್ದು, ಅದಕ್ಕಿಂತ ಮಿಗಿಲಾಗಿ ಅವರ ಕುಟುಂಬದವರ ಅಸಹಕಾರದಿಂದ ಯೋಜನೆ ಸಫಲವಾಗಲಿಲ್ಲ. ಅನಂತರ ದೇವದಾಸಿಯರೂ, ಕಲಾವಿದೆಯರೂ ಆಗಿದ್ದ ಹಿನ್ನೆಲೆಯಲ್ಲಿ ಅವರನ್ನು ಸೇರಿಸುವ ಪ್ರಯತ್ನ ಮಾಡಿದರು. ಆಗಲೂ ಅವರ ಮಕ್ಕಳು ತಮ್ಮ ಕುಟುಂಬದ ಹಿರಿಯರನ್ನು ಹೀಗೆ ಗುರುತಿಸಿಕೊಳ್ಳುವುದು ಅಗೌರವ ಎಂದು ಅವಕಾಶವನ್ನೇ ಕೊಡಲಿಲ್ಲ. ಹೀಗಾಗಿ ಪ್ರದರ್ಶನ ಕಲೆಗಳ ಸಂದರ್ಭದಲ್ಲಿ ಕಲಾವಿದೆಯರ ಸಾಧನೆಯನ್ನು ಗುರುತಿಸಲು ಆಗದಷ್ಟು ಅಗೋಚರರಾಗಿದ್ದಾರೆ. ಈ ಸಂಬಂಧದ ಇತಿಹಾಸ ಸುಲಭಸಾಧ್ಯವಂತೂ ಅಲ್ಲ. ಹೆಣ್ಣು ಮತ್ತು ರಂಗಭೂಮಿ ಕುರಿತ ಚರ್ಚೆ ೧೯೦೪ರಿಂದಲೇ ಪ್ರಾರಂಭವಾಗಿದೆ. ೧೯೨೦ರಲ್ಲೇ ಸ್ತ್ರೀಪಾತ್ರವನ್ನು ಪುರುಷರು ನಿರ್ವಹಿಸುವ ಬಗ್ಗೆ ಗಂಭೀರವಾದ ಚರ್ಚೆಯಾಗಿದೆ. ಹದಿನೆಂಟರ ಹಾಗೂ ಯಮುನಾಬಾಯಿ ವಾಯಿಡ್ ಖ್ಯಾತ ನಾಟಕಕಾರ ಖಾಂಡೇಕರ್ ಅವರ ನಾಟಕಗಳ ಸ್ತ್ರೀಪಾತ್ರ ಚಿತ್ರಣದಲ್ಲಿಯ ಅಸಹಜತೆಯನ್ನು ಹಾಗೂ ಸ್ತ್ರೀಪಾತ್ರ ನಿರ್ವಹಿಸುವಲ್ಲಿ ಅಪ್ರತಿಮರೆನಿಸಿದ್ದ ಬಾಲಗಂಧರ್ವರ ಅಭಿನಯ, ಬಿಯ್ಯಾರದ ಅತಿರೇಕವನ್ನು ಕಂಡಿಸುತ್ತಾಳೆ. ರುಕ್ಮಿಣಿ, ದ್ರೌಪದಿ ಪಾತ್ರಚಿತ್ರಣ ಸ್ತ್ರೀ ಸಹಜವೆಂಬಂತೆ ಚಿತ್ರಿತವಾಗಿ ...ಸುತ್ತಾಳೆ.

ಕರ್ನಾಟಕದ ಸಂದರ್ಭದಲ್ಲೂ ವರದಾಚಾರ್ಯರ ಸೋದರ ... ಕನಕಲಕ್ಷ್ಮಮ್ಮನವರು ನಾಟಕಗಳನ್ನು ಗಂಭೀರವಾಗಿ ವಿಮರ್ಶಿಸಬಲ್ಲವರಾಗಿದ್ದರು. ಕನಕಲಕ್ಷ್ಮಮ್ಮ ವಿದೇಶದಲ್ಲಿ ಇಂಗ್ಲಿಷ್ ಕಲಿತ ಪದವೀಧರೆ; ಮೈಸೂರಿನಲ್ಲಿ ಪ್ರಾಧ್ಯಾಪಕರಾಗಿದ್ದರು. ಮುಂದೆ ಅವರು 'ಭಕ್ತಧ್ರುವ' ಎಂಬ ಮೊದಲ ವಾಕ್ಚಿತ್ರವನ್ನೂ

ನಿರ್ಮಿಸಿದರು. ಉತ್ತಮ ನಟಿಯೂ ಆಗಿದ್ದರು. ಈಕೆ ನಾಗೇಂದ್ರರಾಯರೇ ಮೊದಲಾಗಿ ಹಲವರು ಪುರುಷರು ನಿರ್ವಹಿಸುತ್ತಿದ್ದ ಸ್ತ್ರೀಪಾತ್ರಗಳನ್ನು 'ಹೆಣ್ಣೆಂದರೆ ಕೇವಲ ಒನಪು ಒಯ್ಯಾರವಲ್ಲ, ಅತಿಯಾದ ಆಂಗಿಕಾಭಿನಯವೂ ಸಲ್ಲ, ಸ್ತ್ರೀ ಪಾತ್ರಗಳು ವಯೋಮಾನ, ಸಾಮಾಜಿಕ ಸ್ಥಾನಮಾನಕ್ಕೆ ಹೊಂದುವಂತೆ ಅಭಿನಯಿಸಬೇಕು' ಎಂದು ವಾದಿಸುತ್ತಾರೆ. ಇವರ ರಂಗವಿಮರ್ಶೆಗಳು 'ರಂಗಭೂಮಿ' ಪತ್ರಿಕೆಯಲ್ಲಿ ಲಭ್ಯವಿವೆ.

ತೆಲುಗಿನ ಸ್ಥಾಣಂ ನರಸಿಂಹರಾವ್ ಅವರು ಬಾಲಗಂಧರ್ವರಿಗಿಂತಲೂ ಒಂದು ಕೈ ಮಿಗಿಲಾಗಿ ಸ್ತ್ರೀಪಾತ್ರ ನಿರ್ವಹಿಸುತ್ತಿದ್ದರೆಂದು ಪ್ರತೀತಿ. ಅವರು ಚಿತ್ರಾಂಗಿಯಾಗಿ ಅಭಿನಯಿಸಿದರೆ ಪ್ರೇಕ್ಷಕರು ಚಿತ್ರಾಂಗಿಯ ಕೆಟ್ಟತನಕ್ಕೆ ರೋಸಿ 'ಚಿತ್ರಾಂಗೀನ ಕೊಂದು ಹಾಕಿ' ಎಂದು ರೊಚ್ಚಿಗೆದ್ದು ಕೂಗುತ್ತಿದ್ದರಂತೆ. ಇವರ ತಂಡ ಬೆಂಗಳೂರಿಗೂ ಬಂದು ಪ್ರದರ್ಶನಗಳನ್ನಿತ್ತಾಗ ಮಾಪಾಟಿ ಸರೋಜಾದೇವಿ ಎಂಬ ಅಭಿನೇತ್ರಿ (ಈಕೆ ಎಡಿಎ ಸಂಸ್ಥೆಯಲ್ಲಿ ಪ್ರದರ್ಶಿಸುತ್ತಿದ್ದ ಸಿ.ಕೆ. ವೆಂಕಟರಾಮಯ್ಯನವರ 'ಮಂಡೋದರಿ' ನಾಟಕದಲ್ಲಿ ಮಂಡೋದರಿ ಪಾತ್ರ ಮಾಡುತ್ತಿದ್ದರು) ಸ್ಥಾಣಂ ಅವರ ಸ್ತ್ರೀಪಾತ್ರಗಳು ಔಚಿತ್ಯವಿಲ್ಲದವು, ಆಭಾಸಕರ ಎಂದು ಕಟುವಾಗಿ ವಿಮರ್ಶಿಸುತ್ತಾರೆ. ಇವರ ವಿಮರ್ಶೆಗಳು ಅ. ನ. ಸುಬ್ಬರಾಯರು ಸಂಪಾದಿಸುತ್ತಿದ್ದ 'ಕಲಾ' ಪತ್ರಿಕೆಯಲ್ಲಿ ಲಭ್ಯವಿವೆ.

ಮಹಿಳೆಯರೇ ಪಾತ್ರ ನಿರ್ವಹಿಸಲು ಪ್ರಾರಂಭಿಸಿದ ಮೇಲೂ ಔಚಿತ್ಯಕ್ಕೆ ಆದ್ಯತೆ ಕೊಡದ ಅತಿರೇಕದ ಪಾತ್ರ ನಿರ್ವಹಣೆ ಮುಂದುವರಿದದ್ದೂ ಹೌದು. ಏಕೆಂದರೆ ಮಹಿಳೆ ಅದಾಗಲೇ ಪುರುಷರು ಅಭಿನಯಿಸಿದ್ದ/ಅಭಿನಯಿಸುತ್ತಿದ್ದ ಸ್ತ್ರೀಪಾತ್ರಗಳ ಖ್ಯಾತಿಯ ಹಿನ್ನೆಲೆಯಲ್ಲಿ ಪ್ರಬಲ ಪೈಪೋಟಿಯನ್ನು ಎದುರಿಸಿ ನಿಲ್ಲಬೇಕಿತ್ತು.

ಮುಂದೆ ಸ್ತ್ರೀಯರೇ ಪುರುಷ ಪಾತ್ರಗಳನ್ನು ನಿರ್ವಹಿಸಿದ ಅನೇಕ ಉದಾಹರಣೆಗಳೂ ಇವೆ. ಸ್ತ್ರೀಯರೇ ಎಲ್ಲ ಪಾತ್ರಗಳನ್ನೂ ನಿರ್ವಹಿಸುವ ಮಹಿಳೆಯರದೇ ನಾಟಕ ಕಂಪನಿಗಳೂ ಉದಯಿಸಿದವು. ಇವೆಲ್ಲ ಎಷ್ಟೇ ಪ್ರಶಂಸೆಗೆ ಒಳಗಾಗಿದ್ದರೂ ಮಹಿಳೆ ಪುರುಷನಿಗಿಂತ ಯಾವ ಕಾರಣಕ್ಕೂ ಕಡಿಮೆಯಲ್ಲ ಎಂಬ ಸವಾಲನ್ನು ಎದುರಿಸಿರ ಬಹುದಾಗಲೀ ಅದೇ ಎಲ್ಲವೂ ಅಲ್ಲ. ಸ್ತ್ರೀ ಸ್ತ್ರೀಯಾಗೇ ತನ್ನ ಅಸ್ತಿತ್ವವನ್ನು ಸ್ಥಾಪಿಸ ಬೇಕಾಗಲೀ ಗಂಡಿನಂತಾಗುವ ಮೂಲಕ ಅಲ್ಲ. ಪುರುಷನ ಸ್ತ್ರೀವೇಷ ಹೇಗೋ ಹಾಗೇ ಸ್ತ್ರೀಯ ಪುರುಷವೇಷವೂ ಸಹಜತೆ, ಔಚಿತ್ಯರಾಹಿತ್ಯವಾಗಿ ರಸಾನುಭವ, ಕಲಾತ್ಮಕತೆಯನ್ನು ತುಂಬಿಕೊಡಲಾರವು. ಸ್ತ್ರೀಯೊಬ್ಬಳು ಕಂಸ, ಭೀಮ, ರಾವಣನಾಗಿ ಅಬ್ಬರಿಸುವ ಬಗೆಯನ್ನು ವಿಸ್ಮಯದಿಂದ ನೋಡಿ ಮೆಚ್ಚಬಹುದಾಗಲೀ ಅದೇ ನಿಜವಾದ ಕಲೆಯಂತೂ ಅಲ್ಲ. ಅವಳ ಅಸಿತ್ವ, ಅಸ್ಮಿತೆಗಳು ಅವನಾಗಿ ಅಲ್ಲ, ಅವಳಾಗಿಯೇ ಸ್ಥಾಪಿಸಬೇಕಾದ್ದು ಮುಖ್ಯ.

ಸ್ತ್ರೀಯರ ರಂಗಪ್ರವೇಶದ ಹಿಂದೆ ಆಕೆಗೆ ಇರುವ ಸಮಸ್ಯೆ, ಸವಾಲುಗಳು ಹಲವು ಬಗೆಯವು. ರಂಗಪ್ರವೇಶವೇ ಸವಾಲು. ರಂಗದೊಳಗೆ ಬಂದಮೇಲೂ ರಂಗದೊಳಗಣ ರಾಜಕೀಯಗಳು ಹಲವು. ಹತ್ತಾರು ರೀತಿಯಲ್ಲಿ ರಾಜಿ ಮಾಡಿಕೊಂಡು ಮುಂದೆ ಸರಿಯುವ ಅನಿವಾರ್ಯ. ಇನ್ನು ರಂಗದಮೇಲೆ ಸಮರ್ಥವಾಗಿ ತನ್ನ ಪಾತ್ರ ನಿರ್ವಹಿಸುವುದಕ್ಕೂ ಹಲವು ತೊಡಕುಗಳಿವೆ. ಅದನ್ನೆಲ್ಲ ದಾಟಿ ಪ್ರೇಕ್ಷಕನ 'ಅಭಿರುಚಿ'ಯನ್ನು (ಇಲ್ಲಿ ಬಹುಪಾಲು ವಿಕೃತಿಯೇ ಇದೆ) ತಣಿಸುವ ಅನಿವಾರ್ಯ. ಇವೆಲ್ಲವನ್ನೂ ದಾಟಿದರೂ ಅಭಿನೇತ್ರಿಯರನ್ನು ಸಮಾಜ ನೋಡುವ ರೀತಿಯಲ್ಲೂ ಹಲವು ವೈಚಿತ್ರ್ಯಗಳಿವೆ. ಇನ್ನು ತನ್ನ ಕುಟುಂಬದ ಒಳಗಿನ ಸಮಸ್ಯೆಗಳೂ ಒಂದೆರಡಲ್ಲ. ಈ ಎಲ್ಲ ಹಂತಗಳಲ್ಲೂ ಅಪಮಾನ, ಲೈಂಗಿಕ ಕಿರುಕುಳ, ಅಸಹನೆ, ಅಸೂಯೆ, ಪೈಪೋಟಿ, ಜನಪ್ರಿಯತೆಗಾಗಿ ಅಗತ್ಯಕ್ಕಿಂತ ಹೆಚ್ಚಿನ ರಾಜಿ ಮಾಡಿಕೊಳ್ಳುವ ಅನಿವಾರ್ಯ, ಬದುಕುವ ಸಲುವಾಗಿ ಸೋಲುತ್ತಲೇ ಗೆಲ್ಲುವ ದಾರಿ ಹುಡುಕಿಕೊಳ್ಳುವ ಒಳ-ಹೊರ ದಾರಿಗಳ ಅನ್ವೇಷಣೆ ಹೀಗೆ ಬೆಳೆಯುತ್ತಲೇ ಹೋಗುತ್ತದೆ ಅವಳ ಬವಣೆಗಳ ಪಟ್ಟಿ. ಇಂಥ ಕ್ಲಿಷ್ಟ ಸನ್ನಿವೇಶದಲ್ಲೂ ಅವಳು ಬದುಕನ್ನೂ ಮೀರಿ ಕಲಾವಿದೆಯಾಗಿ ಉಳಿಯುವ ಸಾಹಸ ಮಾಡುತ್ತಲೇ ಇರುತ್ತಾಳೆ. ಈ ಎಲ್ಲ ನೆಲೆಯಲ್ಲಿ ಮಹಿಳೆಯನ್ನು ಅರ್ಥೈಸಿಕೊಳ್ಳ ಬೇಕಾಗುತ್ತದೆ; ಅವಳ ಸಾಮರ್ಥ್ಯ ಗುರುತಿಸಬೇಕಾಗುತ್ತದೆ. ಅದು ನಾಟಕರಚನೆ, ನಿರ್ದೇಶನ, ಅಭಿನಯ ಯಾವುದೇ ಆದರೂ 'ಎಕ್ಸ್‌ಪ್ರೆಷನ್ಸ್'ನಿಂದಲೇ ಸಾಧಿತವಾಗು ವಂಥದ್ದು. ಸಂಗೀತ, ಚಿತ್ರಕಲೆ, ನೃತ್ಯ ಮೊದಲಾದ ಪ್ರಕಾರಗಳಲ್ಲೂ ಸವಾಲುಗಳಿವೆ. ಆದರೆ ಈ ಪ್ರಕಾರಗಳಲ್ಲಿ ಕಲಾವಿದೆ ಏಕಾಂಗಿಯಾಗಿಯೂ ತನ್ನಿಚ್ಛೆಯಂತೆ ಆತ್ಮತೃಪ್ತಿಗಾಗಿ ಕಲೆಯನ್ನು ಬಳಸಿ, ರಸಾನುಭವ ಪಡೆಯುವುದು ಸಾಧ್ಯ. ಆದರೆ ರಂಗಭೂಮಿಯಲ್ಲಿ ಅದು ಸಾಧಿತವಾಗಲಾರದು. ರಂಗಭೂಮಿ ಒಂದು ಸಮೂಹ

ಕಲೆ. ಆದ್ದರಿಂದಲೇ ಇಲ್ಲಿ ಹಕ್ಕುಗಳಿಗಾಗಿ ಹೋರಾಟ, ಲಿಂಗಾಧಾರಿತ ಹೋರಾಟ ಇತ್ಯಾದಿ ಗೊತ್ತಾದ ನೆಲೆಯ ಹೋರಾಟವೂ ಸಾಧ್ಯವಿಲ್ಲ.

ಇಂಥ ವಿಚಾರಗಳು ಬಂದಾಗಲೆಲ್ಲ ರಂಗದಲ್ಲಿರುವ ಕಲಾವಿದೆಯರ ಹೆಸರುಗಳ ದೊಡ್ಡಪಟ್ಟಿಯನ್ನೇ ಮುಂದಿಡಲಾಗುತ್ತದೆ. ಕೆಲವೊಮ್ಮೆ ನಾಲ್ಕಾರು ಹೆಸರು ಹೇಳಿ ಇವರೆಲ್ಲರ ಸಾಧನೆಯನ್ನೇ ಒಟ್ಟಾರೆ ಸ್ತ್ರೀ ಸಮುದಾಯದ ಸಾಧನೆ-ಸವಲತ್ತು ಎಂದು ಬಿಂಬಿಸಲಾಗುತ್ತದೆ. ಆದರೆ ಬಹುತೇಕ ಹೀಗೆ ಗುರುತಿಸುವ ಕಲಾವಿದೆಯರಿಗೆ ವಂಶಪಾರಂಪರ್ಯವಾಗಿ ಬಂದ ಕಲೆ-ವೃತ್ತಿ ಆಗಿರುವುದು, ಕೆಲವು ಕಲಾವಿದರು ವೈಯಕ್ತಿಕ ಪರಿಶ್ರಮ ಅಥವಾ ಬದುಕಿನ ಕೆಲವು ಅನಿವಾರ್ಯಗಳಿಂದ ದೊಡ್ಡದನ್ನು ಸಾಧಿಸಿರಬಹುದು. ಒಬ್ಬಿಬ್ಬರ ಬೆಳವಣಿಗೆಯೇ ಇಡೀ ಸ್ತ್ರೀ ಸಮುದಾಯದ ಸಾಧನೆ ಎಂದು ತೋರಿಸುವುದು ಅರ್ಥಹೀನವಾಗುತ್ತದೆ. ಇಂಥ ಒಂದೆರಡು ಪ್ರತಿಭಾವಂತರಿಗೆ ಎಲ್ಲ ದಿಕ್ಕಿನಿಂದ ಪ್ರೋತ್ಸಾಹ, ಬೆಂಬಲ, ಮೆಚ್ಚಿಕೆಯೂ ಸಿಕ್ಕಿರಬಹುದು. ಆದರೆ ಆಗಿರುವುದಷ್ಟೇ ಎಲ್ಲವೂ ಅಲ್ಲ. ವ್ಯಕ್ತಿಗೆ ತೋರಿಸುವ ಆಸಕ್ತಿ ಒಂದು ಸಮುದಾಯವೇ ಆದಾಗ ತೋರಿಸುತ್ತಾರೆಯೆ? ಒಂದು ಇಡೀ ಸ್ತ್ರೀ ಸಮುದಾಯವೇ ಎದುರು ನಿಂತಾಗ ಪುರುಷ ಸಮಾಜ ಸುಲಭದಲ್ಲಿ ಒಪ್ಪಿಕೊಳ್ಳುವುದಿಲ್ಲ. ಒಬ್ಬ ಇಂದಿರಾ ಗಾಂಧಿ ಅಥವಾ ಅಂಥ ಕೆಲವರು ಬಂದಾಗ ಸಹಿಸಿದವರು ಒಟ್ಟಾರೆ ಮೀಸಲಾತಿ ಕೇಳಿದಾಗ ಹಿಂಜರಿಯುತ್ತಿರುವುದನ್ನು ಗಮನಿಸಿ. ಕಲೆಕ್ಟಿವ್ ಆದ್ದನ್ನು ಅವರು ಒಪ್ಪರು; ಸಹಿಸರು. ಹತ್ತಿಕ್ಕುವ ಪ್ರಯತ್ನಗಳಾಗುತ್ತವೆ. ಅಗತ್ಯಗಳು ಎಂದ ಕೂಡಲೇ ಕೇಳಿ ಬರುವ ಮಾಸಾಶನ, ಶಿಕ್ಷಣ, ವಸತಿ, ಬಸ್‌ಪಾಸ್, ರೇಷನ್‌ನಂಥ ಸಂಗತಿಗಳು ಮಾತ್ರ ಅಲ್ಲ. ಅವೆಲ್ಲದರ ಆಚೆಗೆ ಸ್ತ್ರೀ ತನ್ನ ಅಸ್ಮಿತೆಯನ್ನು ಕಂಡುಕೊಳ್ಳಬೇಕಿದೆ. ಮತ್ತೆ ಮತ್ತೆ ಹೇಳಬೇಕೆನಿಸುವುದು ಆಕೆ ಎಲ್ಲರನ್ನೂ, ಎಲ್ಲವನ್ನೂ ಜೊತೆಗಿಟ್ಟುಕೊಂಡೇ ತನ್ನ ಎಕ್ಸ್‌ಪ್ರೆಷನ್‌ನ ಅನನ್ಯತೆಯನ್ನು ಮೆರೆದು ಅಸ್ತಿತ್ವ ಸ್ಥಾಪಿಸಬೇಕೆಂಬುದನ್ನು. ಇದಕ್ಕಾಗಿ ಆಕೆ ನಾಟಕ ರಚನೆ, ನಿರ್ದೇಶನ, ರಂಗ ವಿನ್ಯಾಸ, ಬೆಳಕು ವಿನ್ಯಾಸವನ್ನೂ ಮೊದಲ್ಗೊಂಡು ಎಲ್ಲ ಪ್ರಕಾರಗಳಿಗೂ ಲಗ್ಗೆಯಿಡಬೇಕು ಮತ್ತು ಅಲ್ಲಿಯೂ ಗಂಡಿನಂತೆ ಚಿಂತಿಸಿ, ಗಂಡಿನಂತಾಗುವುದೇ ಗುರಿಯಾಗದೆ ಅವಳದೇ ಆದ ಸೂಕ್ಷ್ಮ ಅಭಿವ್ಯಕ್ತಿಯ ಮೂಲಕ ತೊಡಗಿಸಿಕೊಳ್ಳಬೇಕು. ಅವಳಲ್ಲಿ ಅವನು ಗ್ರಹಿಸಲಾಗದ್ದು ಎದ್ದು ಕಾಣಬೇಕು. ಇಂಥ ಹೊಸ ನೋಟಗಳಾವುದೆಂದು ಗುರುತಿಸಲು ಅಕಾಡೆಮಿಕ್ ವಲಯ ನೆರವಾಗಬೇಕು. ಕಾಲದಿಂದಲೂ ಪುರುಷನ ಅಧೀನದಲ್ಲಿ ಅವನಿಟ್ಟ ಗೊತ್ತು-ಗುರಿಯಲ್ಲಿ ಅದೇ ಸಹಜ, ಅದೇ ಮೌಲ್ಯ ಅಂದುಕೊಂಡು ರೂಢಿಸಿಕೊಂಡು ಬಂದಿರುವ ಮಹಿಳೆಗೆ ತನ್ನದೇ ಆದ ಅನನ್ಯತೆ ಎಲ್ಲಿದೆ ಎಂಬುದನ್ನು ಗ್ರಹಿಸಲು ವೈದೇಹಿ, ಎಂ. ಎಸ್. ವೇದಾ ಮೊದಲಾದ ಸೂಕ್ಷ್ಮ ಸಂವೇದನೆಯ ಲೇಖಕಿಯರ ಕೃತಿಗಳು ನೆರವಿಗೆ ಬರುತ್ತಿವೆ. ಸಂಘಟನೆಗಳು, ಅಕಾಡೆಮಿಯಂಥ ವ್ಯವಸ್ಥೆಗಳ ಬೆಂಬಲ, ಅಕಾಡೆಮಿಕ್ ವಲಯದ ಮಾರ್ಗದರ್ಶನ ಎಲ್ಲವೂ ಒಂದುಗೂಡಿ ಕಾರ್ಯ ನಿರ್ವಹಿಸಿದರೆ ಮಹಿಳೆಯ ಅಸ್ತಿತ್ವವನ್ನು ಸ್ಥಾಪಿಸುವುದು ಸಾಧ್ಯವಾದೀತು.

ಮಹಿಳೆ ಅಭಿನಯ, ಹೆಚ್ಚೆಂದರೆ ವಸ್ತ್ರವಿನ್ಯಾಸ ಮಾಡುತ್ತಾಳಷ್ಟೆ. ಆಕೆ ಅಲಂಕಾರ ಪ್ರಿಯೆ, ಪ್ರದರ್ಶನ ಪ್ರಿಯೆ ಎಂಬೆಲ್ಲ ಮಾತುಗಳಿವೆ. ಆದರೆ ಅಂಥ ಮಿತಿಯನ್ನು ದಾಟಿಕೊಂಡು ನಿರ್ದೇಶನ, ಬೆಳಕು ವಿನ್ಯಾಸ, ರಂಗವಿನ್ಯಾಸವೇ ಮೊದಲಾದ ಎಲ್ಲ ಕ್ಷೇತ್ರಗಳಲ್ಲೂ ದುಡಿಯುತ್ತಿರುವ ಮಹಿಳಾ ರಂಗಕರ್ಮಿಗಳು ಈಗ ಹೆಚ್ಚು ಕಾಣುತ್ತಿದ್ದಾರೆ. ಇವೆಲ್ಲ ಭರವಸೆ ಹುಟ್ಟಿಸುವ ಸಂಗತಿಗಳು.

ಮಹಿಳೆ ನಾಟಕ ರಚನೆಗೆ ಮುಂದಾಗುತ್ತಿಲ್ಲ ಎನ್ನುತ್ತಲೇ ಸುದೀರ್ಘ ಪಟ್ಟಿಯೊಂದನ್ನು ನಾಟಕ ರಚನೆಯ ಸಂದರ್ಭದಲ್ಲಿ ಕೊಡುತ್ತಾರೆ. ಸಹಜವಾಗೇ ಅವು ಕ್ವಚಿತ್ ರಂಗಸಾಧ್ಯತೆಯುಳ್ಳ, ಬಹುತೇಕ ಸಂಭಾಷಣೆಯೇ ಪ್ರಧಾನವಾಗಿ, ರಂಗಸ್ಥಳಕ್ಕೆ ಹೊಂದುವುದಿಲ್ಲವೆಂಬ ಆಪಾದನೆ ಇದೆ. ಮುಖ್ಯವಾಗಿ ಈಗಾಗಲೇ ಜನಪ್ರಿಯರಾಗಿರುವ, ಶ್ರೇಷ್ಠರೆನ್ನಿಸಿಕೊಂಡಿರುವ ನಾಟಕಕಾರರ ನಾಟಕಗಳೂ ವಾಚಾಳಿಗಳೆಂಬ ಆಪಾದನೆ ಇದೆಯಲ್ಲ! ಶ್ರೀರಂಗರ ನಾಟಕಗಳೆಲ್ಲ ರಂಗಸಾಧ್ಯತೆಯುಳ್ಳವೆ? ಕುವೆಂಪು, ಮಾಸ್ತಿ, ಪು.ತಿ.ನ. ಮೊದಲಾದರ ನಾಟಕಗಳಿಗೆ ರಂಗಸಾಧ್ಯತೆಯಿತ್ತೆ? ಇಷ್ಟಕ್ಕೂ ರಂಗಪ್ರಯೋಗಗಳು ಶಾಲಾಮಟ್ಟದ ಪ್ರಯೋಗವನ್ನು ಮೀರಿ ಹೊಸ ಸಾಧ್ಯತೆಗಳಿಗೆ ತೆರೆದುಕೊಂಡದ್ದೇ ಇತ್ತೀಚಿನ ಕೆಲವು ದಶಕಗಳಲ್ಲಿ. ಅಲ್ಲಿಯವರೆಗೆ ನಮ್ಮ ಎಷ್ಟು ನಾಟಕಗಳು ರಂಗಭೂಮಿಯ ಸಾಧ್ಯತೆ, ಸಂಜ್ಞೆ (ಸೀಮಿಯಾಟಿಕ್ಸ್), ಬೆಳಕು, ನೇಪಥ್ಯ ಇತ್ಯಾದಿಗಳನ್ನು ಬಳಸಿಕೊಂಡು ಪ್ರದರ್ಶನ ನೀಡಿದ್ದವು? ಪಾಶ್ಚಾತ್ಯ ನಾಟಕಗಳನ್ನು ನೋಡಿ, ಪ್ರಯೋಗ ವಿವರಗಳನ್ನು ಓದಿ ತಿಳಿದುಕೊಂಡ ಬಿ.ಎಲ್.ಟಿ. ಸಂಸ್ಥೆಯ ಇಂಗ್ಲಿಷ್ ನಾಟಕಗಳನ್ನು ಬಿಟ್ಟರೆ, ಪ್ರೊ|| ಬಿ. ಸಿ. (ಬಿ. ಚಂದ್ರಶೇಖರ) ಅವರ ಕೆಲವು ಪ್ರಯೋಗಗಳು ಮಾತ್ರ ಗಮನಾರ್ಹವಾದವು. ಅನಂತರ ರಾಷ್ಟ್ರೀಯ ರಂಗಶಾಲೆಯ ಕಲಿಕೆ, ವೃತ್ತಿರಂಗಭೂಮಿಯ ಅನುಭವಗಳನ್ನು ಕಸಿ ಮಾಡುತ್ತಲೇ ಹೊಸದನ್ನು ಕಟ್ಟಿದವರು ಬಿ. ವಿ. ಕಾರಂತರು ಮತ್ತು ಅನಂತರದ ಪೀಳಿಗೆಯವರು. ಇಷ್ಟು ಅರ್ವಾಚೀನ ಪ್ರಯೋಗ ಶೀಲತೆ ಕಣ್ಣೆದುರೇ ಇರುವಾಗ ಅಭಿನೀತವಾಗಬಲ್ಲ ಸಮರ್ಥ ನಾಟಕ ರಚನೆಯ ಸಾಧ್ಯತೆಯನ್ನು ಇನ್ನೂ ಹುಡುಕುತ್ತಲೇ ಇದ್ದೇವೆ. ಇಂಥ ಸಂಕ್ರಮಣ ಘಟ್ಟದಲ್ಲಿ ಸ್ತ್ರೀಯರ ಅಸ್ಮಿತೆಯನ್ನು ಗುರುತಿಸ ಹೊರಟು, ಅವರನ್ನು ಎರಡನೆಯ ದರ್ಜೆಯಲ್ಲೇ ನಿಲ್ಲಿಸುವ ಹಿತಾಸಕ್ತಿಗಳು ವಿಜೃಂಭಿಸುತ್ತವೆ. ಸ್ತ್ರೀಯರ ಸಾಮರ್ಥ್ಯಕ್ಕೊಂದು ಮಾನದಂಡ ಹಿಡಿದು ದರ್ಜೆಗಳನ್ನು ನಿರ್ಧರಿಸುವ ಅಧಿಕಾರ ಯಾರು ಕೊಟ್ಟರು? ಸ್ತ್ರೀಯರಂತೂ ಎಂದೂ ಕೇಳಲಿಲ್ಲ. ಪುರುಷ ಪ್ರಧಾನ ಸಮಾಜದ ಈ ಮಾನದಂಡ ಸ್ತ್ರೀಯರಿಗೆ ನಗಣ್ಯ ಮತ್ತು ಎಂದೂ ನೀವು ಕೊಡುವವರು ನಾವು ಪಡೆವವರು ಎಂಬ ದೈನ್ಯವನ್ನು ಮಹಿಳೆ ಪ್ರಕಟಿಸಿಲ್ಲ. ಆದ್ದರಿಂದಲೇ ಆಕೆ ಇವನ್ನೆಲ್ಲ ಬದಿಗೊತ್ತಿರಿಸಿ ತನಗೆ ಸೂಕ್ತ ಕಂಡ ದಾರಿಗಳನ್ನು ಹುಡುಕಿಕೊಳ್ಳುತ್ತಾ ಸಾಗುತ್ತಿರುತ್ತಾಳೆ.

ಇಂಥ ಹುಡುಕಾಟದಲ್ಲೇ ಏಕವ್ಯಕ್ತಿ ಪ್ರಸ್ತುತಿಯಂಥ ರಂಗ ಪ್ರಯೋಗವನ್ನು ಗುರುತಿಸಲಾಯಿತು. ಅದನ್ನು ಆಕೆ ಆಪ್ತವಾಗಿಸಿಕೊಂಡದ್ದು, ಆ ಮೂಲಕ ತನ್ನ ಅಂತರಂಗದಲ್ಲೇ ಹತ್ತಿಕ್ಕಲಾಗಿದ್ದ ಭಾವನೆಗಳಿಗೆ ದನಿಯನ್ನು ಕೊಡಲು ಪ್ರಯತ್ನಿಸಿದ್ದೂ ಉಂಟಷ್ಟೆ. ಇದು ನಿಜವಾದ ಅರ್ಥದಲ್ಲಿ ಸ್ತ್ರೀ ಸಂವೇದನೆಯನ್ನು ಅಭಿವ್ಯಕ್ತಿಸಬಲ್ಲ ಸ್ತ್ರೀವಾದಿ ರಂಗಪ್ರಕಾರವಾಗುವ ಎಲ್ಲ ಸಾಧ್ಯತೆಗಳನ್ನೂ ಹೊಂದಿತ್ತು. ಪಾಶ್ಚಾತ್ಯರಲ್ಲಿ ತುಂಬ ವಿಶೇಷವಾಗಿ ಬೆಳೆದಿರುವ 'ಫೆಮಿನಿಸ್ಟ್ ಥಿಯೇಟರ್' ಇಲ್ಲಿಯೂ ಬೆಳೆಯುವ ಅವಕಾಶಗಳಿದ್ದವು. ಈ ಪ್ರಕಾರದಲ್ಲಿ ಅವರೆಗೆ ಇದ್ದ ಪುರುಷ ಪ್ರಧಾನ ರಂಗ ಸಾಹಿತ್ಯದಲ್ಲಿ ಕೇವಲ ಪರಿಕರದಂತೆ ಬಳಕೆಯಾಗುತ್ತಿದ್ದ ಸ್ತ್ರೀ ಪಾತ್ರಗಳ ರೀತಿಗಿಂತ ಭಿನ್ನವಾಗಿ ಅವಳ ಸಂಪೂರ್ಣವಾದ ಅಭಿವ್ಯಕ್ತಿಗೆ ಅವಕಾಶವಿದ್ದ ಪ್ರಕಾರ ಇದಾಗಬಹುದಿತ್ತು.

ಆದರೆ ಬಹುಬೇಗ ಪುರುಷ ಈ ಪ್ರಕಾರವನ್ನೂ ಆಕ್ರಮಿಸಿದ. ಬಹುತೇಕರಿಗೆ ಏಕವ್ಯಕ್ತಿ ಪ್ರಸ್ತುತಿ ಏಕದಾ



ಆರ್. ನಾಗರತ್ನಮ್ಮನವರ ಶ್ರೀ ಸ್ತ್ರೀ ನಾಟಕ ಮಂಡಳಿ

ಸಭಾಸಕ್ಕೆ ನೆರವಾದದ್ದೂ ಹೌದು. ಮತ್ತೊಂದೆಡೆ ಏಕವ್ಯಕ್ತಿ ಪ್ರಸ್ತುತಿಯಿಂದಾಗಿ ಒಂದು ಸಮೂಹದಿಂದಾಗುವ ಕಲೆಯನ್ನು ಸೀಮಿತಗೊಳಿಸಿದರೆಂಬ ಟೀಕೆಗಳೂ ವಿಜೃಂಭಿಸಿವೆ. ಹೀಗೆ ಟೀಕಿಸುವವರಿಗೆ ರಂಗದ ಮೇಲೆ ಮಾತ್ರ ಏಕವ್ಯಕ್ತಿ, ಉಳಿದಂತೆ ಎಲ್ಲವೂ ಸಮೂಹದಿಂದ ಇದಾಗಿ ಸಮೂಹಕ್ಕೆ ತಲುಪುತ್ತಿದೆಯೆಂಬ ಪರಿಜ್ಞಾನ ಇರಲಿಲ್ಲ. ಭಾಗೀರಥಿ ಬಾಯಿಯ 'ಅಭಿಜ್ಞಾನ ಶಾಕುಂತಲ'ದಂಥ ಏಕವ್ಯಕ್ತಿ ಪ್ರಸ್ತುತಿ ಪ್ರೇಕ್ಷಕರ ಕಣ್ಣಂಚಿನಲ್ಲಿ ನೀರಾಡಿಸಿ, ಬಹುಕಾಲ ಯೋಚಿಸುವಂತೆ ಮಾಡಿದರೆ ಅದು ಸಮೂಹವನ್ನು ತಲುಪಿದಂತಲ್ಲವೆ ?

ಕೆ. ಮರುಳಸಿದ್ದಪ್ಪನವರು ಹೇಳುವಂತೆ ಸ್ತ್ರೀ ಪಾತ್ರಗಳ ಸಂವೇದನೆಯನ್ನು ಸ್ತ್ರೀಯರೇ ಅಭಿವ್ಯಕ್ತಿಸಿದಾಗ, ಅದಕ್ಕಾಗಿ ಅವರೇ ರಂಗಕೃತಿ ಸಿದ್ಧಪಡಿಸಿದಾಗ ಪುರುಷಾಧಿಕಾರದ, ಅವನೊಪ್ಪಿದ ಮೌಲ್ಯಗಳ ಪ್ರತಿಪಾದನೆಗಿಂತ ಭಿನ್ನವಾದ ನಾಟಕಗಳು ಬರುವ ಸಾಧ್ಯತೆ ಹೆಚ್ಚು. ಪ್ರತಿಯೊಂದು ಯುದ್ಧ, ದುರಂತ, ಕ್ಷೋಭೆ ಏನೇ ಆದಾಗಲೂ ಸ್ತ್ರೀಯೇ ಶಿಕ್ಷೆಗೊಳಗಾಗುತ್ತಾಳೆ ಎಂಬುದಕ್ಕೆ ಮರುಳಸಿದ್ದಪ್ಪನವರು ದ್ರೌಪದಿಯನ್ನೇ ಒಂದು ಮೆಟಫರ್ ಆಗಿ ಉದಾಹರಿಸಿದ್ದರು.

ಸ್ತ್ರೀಯರು ನಾಟಕಗಳನ್ನು ಬರೆಯುತ್ತಿಲ್ಲ, ಬರೆದರೂ ಅವು ನಾಟಕಗಳಂತಿಲ್ಲ ಎಂಬ ಆಕ್ಷೇಪದ ಜೊತೆಗೆ ವಿಮರ್ಶಕರು ಇನ್ನೂ ಕೆಲವು ಆರೋಪಗಳನ್ನು ಮಾಡುವುದುಂಟು. ಮೊದಲನೆಯದಾಗಿ, ನಾಟಕ ರಚನೆ ಅತ್ಯಂತ ವಸ್ತುನಿಷ್ಠ ಕಲ್ಪನೆಯನ್ನು ಅಪೇಕ್ಷಿಸುತ್ತದೆ. ಮಹಿಳೆಯರು ಈ ನಿಟ್ಟಿನಿಂದ ತಮ್ಮನ್ನು, ತಾವು ನಿರ್ಮಿಸುತ್ತಿರುವ ವಸ್ತು / ಪಾತ್ರ / ಸನ್ನಿವೇಶಗಳಿಂದ ಪ್ರತ್ಯೇಕಿಸಿಕೊಂಡು ವೀಕ್ಷಿಸುವ ಸಾಮರ್ಥ್ಯ ಬೆಳೆಸಿಕೊಂಡಿಲ್ಲವಾಗಿ ಅವರಿಂದ ಗಮನಾರ್ಹ ನಾಟಕ ಕೃತಿಗಳು ಹುಟ್ಟಿ ಬಂದಿಲ್ಲ ಎಂಬ ಆರೋಪ...

ಎರಡನೆಯದಾಗಿ, ಸದಾ ಬಾಯಿಮುಚ್ಚಿಕೊಂಡು ಸ್ವಂತದ ನೋವು, ಆಸೆ ಆಕಾಂಕ್ಷೆಗಳನ್ನು ಬೇರೆಯವರ ಹಿತಾಸಕ್ತಿಗಾಗಿ ಬದಿಗೆ ತಳ್ಳಿಕೊಳ್ಳುವ, ಅದುಮಿಡುವ ಸಾಂಸ್ಕೃತಿಕ ಛಾಪಿನಿಂದ ಮಹಿಳೆಯರು ಪೂರ್ಣವಾಗಿ ಹೊರಬರಲು ಸಾಧ್ಯವಾಗಿಲ್ಲ ಎಂಬ ಆರೋಪ...

ಮೂರನೆಯದಾಗಿ, ಸಾಂಸ್ಕೃತಿಕವಾದ ಮಡಿವಂತಿಕೆ, ನೀತಿ ನಿಷೇಧ ಮುಂತಾದವು ದೀರ್ಘಕಾಲದಿಂದ ಮಹಿಳೆಯರು ನಾಟಕಗಳಿಗೆ ನೇರ ಸಂಬಂಧವನ್ನು ಹೊಂದಗೊಡದಂತೆ ಮಾನಸಿಕವಾಗಿ ಅವರಿಗೆ ಅಡ್ಡಿಗಳನ್ನು ಸೃಷ್ಟಿಸಿದ್ದವು. ಆಧುನಿಕ ಕಾಲದಲ್ಲಿ ಈ Inhibition ಕಡಿಮೆ ಆಗುತ್ತಿರುವುದು ಕಂಡುಬರುತ್ತಿದ್ದರೂ ತಮ್ಮನ್ನು ತಾವು ಮುಕ್ತವಾಗಿ ಅಭಿವ್ಯಕ್ತಿಸಿಕೊಳ್ಳುವ ನಿಟ್ಟಿನಲ್ಲಿ ಮಹಿಳೆಯರಿಗೆ ಇನ್ನೂ ತರಬೇತಿಯ ಅವಶ್ಯಕತೆಯಿದೆ ಎಂಬ ವಾದ.

ನಾಲ್ಕನೆಯದಾಗಿ, ಬರಹದಲ್ಲಿ ಶಕ್ತಿ ಇದ್ದ ಮಹಿಳೆಯರು ಮಾನಸಿಕವಾಗಿ ಸ್ವಮೋಹಿತರು, ಆತ್ಮರತಿಯುಳ್ಳವರು, ಆದ್ದರಿಂದ ತಮ್ಮನ್ನೇ, ತಮ್ಮ ಅನುಭವಗಳನ್ನೇ ಪ್ರತ್ಯಕ್ಷವಾಗಿ/ ಪರೋಕ್ಷವಾಗಿ ಹೇಳಿಕೊಳ್ಳಲು ಸಹಾಯಕವಾಗುವ ಕಥೆ, ಕಾದಂಬರಿಗಳಲ್ಲಿ ಮಾತ್ರವೇ ಅವರು ಅಭಿವ್ಯಕ್ತಿ ಸಾಧ್ಯತೆ ಕಂಡುಕೊಳ್ಳುತ್ತಾರೆ. ಆದರೆ ತನ್ನಿಂದ ವಸ್ತು ಪ್ರಪಂಚವನ್ನು ಹೊರಗಿಟ್ಟು ವ್ಯಕ್ತಿ ನಿರಪೇಕ್ಷವಾಗಿ (objective) ನೋಡುವ ಸ್ವಭಾವವೇ ಅವರಿಗೆ ರೂಢಿಯಲ್ಲಿಲ್ಲ. ನಾಟಕ ರಚನೆಗೆ ಬೇಕಾಗುವುದೇ ಇಂಥ objectivity. ಹಾಗಾಗಿ ಈ ಕ್ಷೇತ್ರದಲ್ಲಿ ಅವರ ಸಾಮರ್ಥ್ಯ ತೋರಿಸಿಲ್ಲ ಎಂಬ ವಾದವನ್ನೂ ಮುಂದಿಡಲಾಗುತ್ತದೆ.

ಈ ಎಲ್ಲ ಆಪಾದನೆಗಳ ಹಿಂದೆ ಎಷ್ಟು ಸತ್ಯಾಂಶವಿದೆ ಅಥವಾ ಸ್ವಾರ್ಥ, ಅಹಂ ಇದೆ ಎಂಬುದನ್ನು ಗಮನಿಸಬೇಕು. ವರ್ತಮಾನದ ಸಂದರ್ಭದಲ್ಲಿ ಮೇಲೆ ಹೇಳಿದ ಯಾವ ಆಪಾದನೆಯೂ ಅನ್ವಯವಾಗುವುದಿಲ್ಲ. ರಂಗ ಶಿಕ್ಷಣ ಪಡೆದು ಬಂದ ನಿರ್ದೇಶಕ-ನಟರಿಗೆ ಸವಾಲಾಗುವಂಥ ನಾಟಕಗಳ ರಚನೆ ಪುರುಷನಿಂದಲೂ ಆಗುತ್ತಿಲ್ಲ. ರಂಗಕ್ರಿಯೆಗೆ ಇರುವ ಈ ಕ್ಷಣದ ಅಗತ್ಯಗಳಿಗೆ ಲೇಖಕರು ಸ್ಪಂದಿಸುವುದೂ ಇಲ್ಲ. ಅವರ ದಿವ್ಯ ನಿರ್ಲಕ್ಷ್ಯ, ಅಥವಾ ತನ್ನ ಕೃತಿಯೇ ಸರ್ವಶ್ರೇಷ್ಠವೆಂಬ ಅಹಂಭಾವ, ಮುಖ್ಯವಾಗಿ ರಂಗೋತ್ಸಾಹಿಗಳಿಗೆ ಸವಾಲಾಗುವಂಥದನ್ನು ಕಟ್ಟಿಕೊಡದ ಇವರ ಅಸಹಾಯಕತೆಯಿಂದಾಗಿಯೇ ನಿರ್ದೇಶಕನೇ ನಾಟಕಕಾರನಾಗಿ ಅಥವಾ ಬರಹಬಲ್ಲವನಿಂದ ತಾನೇ ಬರೆಯಿಸಿ, ಅನುವಾದಿಸಿ, ರೂಪಾಂತರಿಸಿ ನಾಟಕಗಳನ್ನು ಸಿದ್ಧ ಮಾಡಿಕೊಂಡದ್ದನ್ನು ಕಾಣುತ್ತೇವೆ. ಸ್ತ್ರೀಯರ ನಾಟಕ ರಚನೆಯ ಬಗ್ಗೆ ವ್ಯಾಖ್ಯಾನ ಮಾಡುವ ಟೀಕಾಕಾರರು ಕೊಂಚ ಬೆನ್ನು ನೋಡಿಕೊಂಡರೆ ಉತ್ತಮ.







ನಾಟಕ ಯಾರು ಬರೆದರೇನು ಒಂದೊಳ್ಳೆಯ ವಸ್ತು ಅನಾವರಣಗೊಂಡಿದೆ ಅನ್ನಿಸಿದಾಗ ಸಿದ್ಧನಾಟಕದ ಆಕೃತಿಯನ್ನು ಬದಿಗಿಟ್ಟು ರಂಗಪಠ್ಯವೊಂದನ್ನು ಹೊಸದಾಗಿ ರಂಗಭಾಷೆಯನ್ನು ಗಮನದಲ್ಲಿಟ್ಟು ಸಿದ್ಧಪಡಿಸುವ ಪರಿಪಾಠವಿದೆಯಷ್ಟೇ. ಪು.ತಿ.ನ., ಕುವೆಂಪು ಮೊದಲಾದವರ ನಾಟಕಗಳು ಇಂಥ ರಂಗಪಠ್ಯದ ಮೂಲಕವೇ ಯಶಸ್ವೀ ಪ್ರಯೋಗಗಳಾದವು. ಶ್ರೀರಂಗರಂಥ ನಾಟಕಕಾರರ ಕೃತಿಗಳೂ ರಂಗಪಠ್ಯದಿಂದ ಹೊಸ ನೋಟಗಳನ್ನು ಪಡೆದು ಅನನ್ಯವೆನಿಸಿದವು. ಅಂಥ ರಂಗಪಠ್ಯವಾಗಿಸುವಂಥ ವಸ್ತು ಸ್ತ್ರೀಯರು ಬರೆದ ನಾಟಕಗಳಲ್ಲಿ ಇಲ್ಲವೆ? ಎಷ್ಟು ನಾಟಕಗಳನ್ನು ರಂಗಕೃತಿಯಾಗಿಸುವ ಪ್ರಯತ್ನ ಮಾಡಿದ್ದಾರೆ? ವೈದೇಹಿ, ನಾಗವೇಣಿ ಅವರ ಕತೆ, ಕಾದಂಬರಿಗಳು ರಂಗಕೃತಿಯಾಗಲು ಮಹಿಳೆಯರೇ ನಿರ್ದೇಶಕಿಯರಾಗಿ ಅಖಾಡಕ್ಕಿಳಿಯ ಬೇಕಾಯಿತಲ್ಲ!

ಮಹಿಳೆಯರು ನಾಟಕ ಬರೆದಿಲ್ಲ, ಅವರಿಗೆ ನಾಟಕ ರಚನೆ ತಿಳಿಯದು ಎನ್ನುವುದಕ್ಕಿಂತ ಸ್ತ್ರೀ ಸಂವೇದನೆಯುಳ್ಳ ನಾಟಕಗಳ ಸಂಖ್ಯೆ ಕಡಿಮೆ ಎಂಬ ಮಾತಿನಲ್ಲಿ ಅರ್ಥವಿದೆ.

ಇಲ್ಲಿಯೂ ಮಹಿಳೆಗೆ ಸಾಮಾಜಿಕ ಸಮಸ್ಯೆಗಳೇ ದೊಡ್ಡದಾಗುತ್ತವೆ. ಆಕೆ ಎಲ್ಲ ಜವಾಬ್ದಾರಿಯನ್ನೂ ಹೊರುತ್ತಾಳೆ. ಹೀಗಾದಾಗ ತತ್ಕಾಲೀನ ಸಂದರ್ಭದ ಗುರುತರ ಸಮಸ್ಯೆಯಾಗಿ ಕಾಣುವ ಇನ್ನಿತರ ವಲಯಗಳು ಹಾಗೂ ಸಾಮಾಜಿಕ ಸಮಸ್ಯೆಗಳಿಗೆ ಸ್ಪಂದಿಸುವುದು ಪ್ರಧಾನವಾಗಿ ಸ್ತ್ರೀತ್ವದ ಆಂತರಿಕ ಅಭಿವ್ಯಕ್ತಿ ಹಿಂದೆ ಸರಿಯುತ್ತದೆ. ಜಲ ಪರಿಕೆ, ಯುದ್ಧ, ಸಾವು, ನೋವು, ಮಕ್ಕಳ ಸಮಸ್ಯೆಗಳು, ಶಿಕ್ಷಣ, ಮಹಿಳಾ ಸಮಸ್ಯೆಯಲ್ಲೂ ತೀವ್ರವಾಗಿರುವ ವರದಕ್ಷಿಣೆ ಸಾವು ಇತ್ಯಾದಿಗಳು ತಕ್ಷಣಕ್ಕೆ ಸ್ಪಂದಿಸಲು ಪ್ರೇರಿಸಿವೆ. ಅತ್ಯಂತ ಸೂಕ್ಷ್ಮ ನೆಲೆಯ ಮಹಿಳಾ ಸಂವೇದನೆಯೊಂದು ಅವಗಣಿಸಲ್ಪಟ್ಟಿದೆ ಎಂಬ ಅಂಶ ಈಚಿನ ದಿನಗಳಲ್ಲಿ ಆಕೆಯ ಗಮನಕ್ಕೆ ಬರತೊಡಗಿದೆ. ಅದು ಸಾಧ್ಯವಾದದ್ದು ತೀವ್ರವಾಗುತ್ತಿರುವ ಮಹಿಳಾ ಚಳವಳಿಗಳು, ಸ್ತ್ರೀಸಂವೇದನೆಯ ಬಹುಮುಖತೆಯನ್ನು ಗುರುತಿಸುವ ಕೆಲವು ಪ್ರಜ್ಞಾವಂತ ಲೇಖಕಿಯರ ಬರಹಗಳು, ಆಕೆಗೆ ಸಿಗುತ್ತಿರುವ ಶಿಕ್ಷಣ, ಹೊಸ ಬದುಕಿಗೆ ಮುಖಾಮುಖಿಯಾಗುತ್ತಿರುವ ರೀತಿ, ಉದ್ಯೋಗಾವಕಾಶ ಸಮಾಜದ ಹಲವು ಸಮಸ್ಯೆಗಳಿಗೆ ಆಕೆ ನೇರವಾಗಿ ಸ್ಪಂದಿಸಬೇಕಾದ ಸಂದರ್ಭಗಳಿಂದಾಗಿ.

ಇವತ್ತೂ ಶ್ರೇಷ್ಠವೆಂದು, ಸಮಗ್ರ ದೃಷ್ಟಿಕೋನವೆಂದು ಯಾವ, ಯಾರ ನಾಟಕವನ್ನು ಗುರುತಿಸಲಾದೀತು? ಸ್ತ್ರೀ ಸಂವೇದನೆಯನ್ನು ನಾಟಕದಲ್ಲಿ ತಂದೆವೆಂದು ಬೀಗುವ ಅನೇಕ ಶ್ರೇಷ್ಠ ನಾಟಕಕಾರರು ಬರೆದ ನಾಟಕಗಳು ನಿಜವಾಗಿಯೂ ಶ್ರೇಷ್ಠವೆ? ಅವು ಸ್ತ್ರೀ ಸಂವೇದನೆಯನ್ನು ಹೇಳಿವೆಯೆ? ಹೆಣ್ಣಿನ ದೇಹ, ಸುಖ, ಅನೈತಿಕತೆ, ಅತೃಪ್ತಿ, ವಿವಾಹೇತರ ಸಂಬಂಧ, ಹಾದರ ಮಾಡುವುದೇ ನಿಜವಾದ ಸ್ತ್ರೀ ಸಂವೇದನೆ ಎಂದು ಪ್ರತಿಪಾದಿಸಿದ್ದನ್ನು ಶ್ರೇಷ್ಠ ನಾಟಕವೆಂದು ಯಾವ ಸ್ತ್ರೀಯೂ ಒಪ್ಪುವುದಿಲ್ಲ. ಅದು ಶ್ರೇಷ್ಠತೆಯ ಮಾನದಂಡವೂ ಅಲ್ಲ. ಪುರುಷರ ಸಮ್ಮತಿ, ಮೆಚ್ಚಿಕೆಯನ್ನು ನೆಚ್ಚಿಕೊಂಡು, ಅವರ ಇರುವಿಕೆಯೇ ಪ್ರಧಾನವಾಹಿನಿ ಎಂದು ಅಲ್ಲಿ ಸೇರ್ಪಡೆಯಾಗಿ ಗುರುತಿಸಿಕೊಳ್ಳುವುದೇ ಪರಮಗುರಿ ಎಂಬ ನಿಲುವು ಬದಲಾಗುತ್ತಿದೆ. ಸಮಾನ ಚಿಂತನೆ ಇದ್ದರೆ ಒಪ್ಪೋಣ ಇಲ್ಲವಾದರೆ ಹಾಗಾಗುವವರೆಗೆ ಸ್ತ್ರೀ ತನ್ನದೇ ಮಾನದಂಡ ರೂಪಿಸಿಕೊಳ್ಳಲು ಶಕ್ತಳು; ರೂಪಿಸಿಕೊಳ್ಳುತ್ತಿದ್ದಾಳೆ.

ಜಾಗತೀಕರಣದ ಹಿನ್ನೆಲೆಯಲ್ಲಿ ಸವಾಲನ್ನೆದುರಿಸಲು ಜನಪದವನ್ನು ಮುಂದಿಡಲಾಯಿತು. ಅಲ್ಲಿಯೂ ಇದ್ದುದನ್ನು ಇದ್ದಂತೆ ಒಪ್ಪಲು ಮಹಿಳೆಗೆ ಸಾಧ್ಯವಿಲ್ಲವಾಯಿತು. ಜನಪದವೆಲ್ಲವೂ ಸ್ತ್ರೀಪರವೆ? 'ಕೆರೆಗೆ ಹಾರ'ದಂಥ ಕಥಾಭಾಗದಲ್ಲಿ ವಿಧಿಯಿಲ್ಲದೆ ಕರೆಗೆ ಹಾರವಾಗುವಂತಾದರೆ ಇಂದೂ ಅದನ್ನು ನಾವೇಕೆ ಒಪ್ಪಬೇಕು ಎಂಬ ಪ್ರಶ್ನೆ ಎದ್ದಿತು. ಬಹುತೇಕ ಜನಪದದಲ್ಲಿ ಊಳಿಗಮಾನ್ಯ ಸಂಸ್ಕೃತಿಯೊಂದು ಅಡಕವಾಗುವುದರಿಂದ ಅಧೀನತೆ ಮತ್ತು ಹೇರಿದ್ದಾದರೂ ಒಪ್ಪಿತ ಮೌಲ್ಯಗಳನ್ನು ಒಪ್ಪಿಕೊಳ್ಳುವ ಅನಿವಾರ್ಯ ಇದ್ದೇ ಇದೆ. ಧಾರ್ಮಿಕ ಆಚರಣೆಗಳಲ್ಲಂತೂ ಅತಿ ಹೆಚ್ಚಿನ ನಿಷೇಧಗಳು ಇವೆ. ಉದಾಹರಣೆಗೆ 'ಕರಗ'ದ ಪದ್ಧತಿ. ಅದು ದ್ರೌಪದಿಯ ಆರಾಧನೆ, ಸ್ತ್ರೀಯರಿಗೆ ಅವಕಾಶವಿಲ್ಲ! ಇಂಥ ವಿರೋಧಾಭಾಸಗಳಿಗೆ ಕೊನೆಮೊದಲಿಲ್ಲ. ಇಂದಿಗೂ ಕೆಲವು ಸ್ಥಾನಗಳಿಗೆ ಪ್ರವೇಶವಿಲ್ಲ. ಸ್ತ್ರೀಯರ ಮುಟ್ಟಿನ ಸಂಗತಿಯಂತೂ ಒಂದು ದೊಡ್ಡ ಸಮಸ್ಯೆ. ಪುರುಷ ಸಮಾಜಕ್ಕೆ, ಪ್ರಕೃತಿ ಸಹಜವಾದ ಋತುಸ್ರಾವವನ್ನು ಮೈಲಿಗೆಯೆಂದು ಅದಕ್ಕಾಗಿ ಸ್ತ್ರೀಯರಿಗೆ ನಿಷೇಧಗಳನ್ನಿಡುವ ಪುರುಷ ಸಮಾಜಕ್ಕೆ ಆ ಮೈಲಿಗೆ ಸ್ತ್ರೀಗೆ ಮಾತ್ರ ಏಕೆ? ಪುರುಷನಿಗೂ ಅಂಥ 'ಮೈಲಿಗೆ' ಉಂಟಲ್ಲ ಎಂಬ ಪರಿಜ್ಞಾನವಿಲ್ಲ. ಪುರುಷನ ಸಂಯಮರಾಹಿತ್ಯದ ರಕ್ಷಣೆಗೆ ಸ್ತ್ರೀಯನ್ನು ವಿಧಿ-ನಿಷೇಧಗಳ ಮೂಲಕ ಶಿಕ್ಷಿಸುವುದಾಗುತ್ತಿದೆ. ಈ ಹಿನ್ನೆಲೆಯಲ್ಲಿ ಜನಪದರಲ್ಲಿ ಅಭಿವ್ಯಕ್ತಿಗೆ ಮುಕ್ತತೆ ಕೊಂಚಮಟ್ಟಿಗೆ ಇದೆಯಾದರೂ ಸಂಪೂರ್ಣವಾಗಿ ಅಲ್ಲ. ಜನಪದರಲ್ಲಿ ಪ್ರತಿಭಟನೆಯ ದನಿಗಳಿವೆ. ಉದಾಹರಣೆಗೆ ಜನಪದ ಮಹಾಭಾರತದ ಹಲವು ಪದ್ಯಗಳನ್ನು ಗಮನಿಸಿ. ರಾಮಾಯಣವನ್ನು ಬೇರೆ ಬೇರೆ ಪ್ರದೇಶದ ಜನಪದ ಸ್ತ್ರೀಯರು ಹೇಗೆ ಕಟ್ಟಿಕೊಂಡರು-ಪ್ರತಿಭಟಿಸಿದರು ಎಂಬುದಕ್ಕೆ ಒಂದೆರಡು ಉದಾಹರಣೆಗಳನ್ನು ನೋಡಿ:

ಸೀತೆಯ ಒಂಟಿತನವನ್ನು ಕುರಿತು ಬಂಗಾಳಿಯ ಚಂದ್ರಬತಿ ಹೀಗೆನ್ನುತ್ತಾಳೆ:

*ತಂದೆ-ತಾಯಿ ಇಲ್ಲದವಳು*
*ನೇಗಿಲ ಕುಳಕೆ ತಗುಲಿಕೊಂಡವಳು*
*ತಂದೆ, ತಾಯಿ, ಸೋದರ*
*ಯಾರೆಂದರಿಯದವಳು*



ನದಿಯ ಪಾಚಿಯಂದದಿ
ತೀರದಿಂದ ತೀರಕೆ ತೇಲುವವಳು...

ಮರಾಠಿಯಲ್ಲಿ:

ತಂದೆ-ತಾಯಿಯರ ಕಾಣದವಳು
ಕಾಡು ಹಣ್ಣುಗಳ ತಿಂದು ಕಾಡಲ್ಲಿ ಬೆಳೆದವಳು
ಸೋದರ-ಸೋದರಿಯನರಿಯದವಳು
ಗಡೀಪಾರಾಗಿದೆ ತನ್ನಾತ್ಮ
ಈ ದಟ್ಟ ಬನದ ಬದುಕಿನಲ್ಲಿ...

ಮರಾಠಿಯ ಸಸುರಬಾ ಎಂಬ ಜನಪದ ಗೀತೆಯಲ್ಲಿ:

ಸೀತೆಯ ಹಣೆಯ ಮೇಲೆ
ಅದೃಷ್ಟ ರೇಖೆಯನೆಳೆದಾಗ
ಬ್ರಹ್ಮ ಆತುರದಲ್ಲಿದ್ದ
ರೇಖೆ ಡೊಂಕಾಯಿತು...

ಅದೇ ಸಸುರಬಾದಲ್ಲಿ:

ರಾಮ ಸೀತೆಗೆ ತನ್ನ ಪ್ರೀತಿಯ ಕೊಟ್ಟ
ಸಣ್ಣ ಹುಣಿಸೆ ಎಲೆಯೊಂದರಲಿ
ವಿಷವ ಸುರಿದಳು ಕೈಕೇಯಿ ರಾಮನ ಕಿವಿಗಳಲಿ
ಕಾದಳು ಚೇಳಿನಂತೆ ಬಾಗಿಲ ಮರೆಯಲಿ
ರಾಮನೊಬ್ಬನೇ ತಾಂಬೂಲವ ಜಗಿಯುವನು
ತಾನೊಬ್ಬನೇ... ಒಂಟಿಯಾಗಿ

(ಹುಣಿಸೆ ಎಲೆಗಳು ಅತಿ ಚಿಕ್ಕದಾಗಿರುತ್ತವೆ. ರಾಮ ಸೀತೆಗೆ ಕೊಡುವ ಪ್ರೀತಿಯ ಪ್ರಮಾಣ ಅಷ್ಟೆ. ಅವನಲ್ಲಿ ಅದಕ್ಕಿಂತ ಹೆಚ್ಚೇನೂ ಇರಲಿಲ್ಲ ಎಂಬ ವ್ಯಂಗ್ಯ ಧ್ವನಿಸಿದರೆ, 'ಒಬ್ಬನೇ ತಾಂಬೂಲ ಜಗಿಯುವುದು, ಸೀತೆಗೆ ರಾಮನ ಸಂಗ ದೊರಕುತ್ತಿಲ್ಲ, ಮಲತಾಯಿ ಅದಕ್ಕೂ ಅಡ್ಡಿ ಬರುತ್ತಿದ್ದಳೆಂದು ಹೇಳುತ್ತಿದೆ)

"ಸೀತೆಯು ಪ್ರತಿಯೊಬ್ಬರಿಂದಲೂ ಹಿಂಸೆಗೆ ಒಳಗಾಗುತ್ತಿದ್ದಳು. ಹನ್ನೆರಡು ವರ್ಷಗಳ ಕಾಲ ಅವಳಿಗೆ ಕೇವಲ ಬೇವಿನೆಲೆಯನ್ನು ಕೊಟ್ಟರು. ಹನ್ನೆರಡು ವರ್ಷಗಳ ಕಾಲ ಹಣೆಗೆ ಕುಂಕುಮವಿಡಲು ಬಿಡುತ್ತಿರಲಿಲ್ಲ. ಅವಳ ಕೂದಲು ಸಿಕ್ಕಾಗಿದೆ. ಅದನ್ನು ಹನ್ನೆರಡು ವರ್ಷಗಳ ಕಾಲ ತೊಳೆಯಲೂ ಬಿಡಲಿಲ್ಲ..." ಎನ್ನುತ್ತಾ ಮುಂದುವರಿದು,

ಅವಳು ತನ್ನ ಮಲಗುವ ಕೋಣೆಯಲ್ಲೇ
ಗಡೀಪಾರಾಗಿದ್ದಾಳೆ
ಹನ್ನೆರಡು ವರುಷಗಳವರೆಗೆ ರಾಮ
ಹಾಸಿಗೆಯನ್ನು ಅವಳೊಂದಿಗೆ ಹಂಚಿಕೊಳ್ಳಲಿಲ್ಲ,
ಅವಳು ಏಳು ಬಾಗಿಲುಗಳ ಹಿಂದೆ
ಬಂಧಿಯಾಗಿದ್ದಳು
ರಾಮ ತನ್ನದೇ ವ್ಯಾಪಾರದಲ್ಲಿ ಮುಳುಗಿದ್ದ
ಪಾಪದ ಸೀತೆಯ ಯೌವನ
ಹೀಗೆ ವ್ಯರ್ಥವಾಯಿತು.

ರಾಮ ಸೀತೆಯನ್ನು ಕಾಡಿಗೆ ಕಳಿಸಿದ ನಂತರ ಸೀತೆಗಾಗಿ ದುಃಖಿಸಿದ. ಆದರೆ ಏಕೆ ದುಃಖಿಸಿದ ನೋಡಿ:

"ಸೀತೆಯಂಥ ರಾಣಿಯನ್ನು ಎಲ್ಲಿಂದ ತರಲಿ? ನೆಲಕ್ಕೆ ನೀರನ್ನು ಅವಳಷ್ಟು ಚೆನ್ನಾಗಿ ಹಾಕುವವರು ಯಾರಿದ್ದಾರೆ? ನನ್ನ ಧೋತಿಗಳನ್ನು ಯಾರು ಒಗೆದು ಕೊಡುತ್ತಾರೆ? ಸೀತೆ ಕೊಡುತ್ತಿದ್ದಂಥ ಊಟವನ್ನು ಯಾರು ಕೊಡುತ್ತಾರೆ? ಸೀತೆ ಗಡೀಪಾರಾಗಿದ್ದಾಳೆ. ಈಗ ನನಗೆ ಒಳ್ಳೆಯ ಹಾಸಿಗೆಯನ್ನು ಹಾಸುವವರ್ಯಾರು? ಗಂಧವನ್ನು ತೇದು ಕೊಡುವವರಾರು? ತಮ್ಮಾ ಲಕ್ಷ್ಮಣ, ಈ ಸುಖದ ಅರಮನೆಯನ್ನು ಮುಚ್ಚಿಬಿಡೋಣ," ಎನ್ನುತ್ತಾ ಮಂಚವನ್ನು ಬೋರಲಾಗುವಂತೆ ಒದೆಯುತ್ತಾನಂತೆ! ಹೀಗೆ ರಾಮನಿಗೆ ಸೀತೆ ಒಬ್ಬ ಸೇವಕಿ, ಅಡಿಗೆಯವಳು, ಹಾಸಿಗೆ ಹಾಸುವವಳು, ಮನೆ ನಿರ್ವಹಿಸುವವಳು ಮತ್ತು ಲೈಂಗಿಕ ಸುಖವನ್ನು ನೀಡುವವಳು ಮಾತ್ರ!

ಸೀತೆ ನಿರ್ಜನವಾದ ಕಾಡಿನಲ್ಲಿ ಪ್ರಸವಿಸಿದಳು. ಮರಾಠಿ ಜನಪದದಲ್ಲಿ ಒಂಟಿ ಮಹಿಳೆಯ ಪ್ರಸವದ ಸಂಕಟ ಹೀಗೆ ವರ್ಣಿತವಾಗಿದೆ:

... ಪ್ರಸವಿಸಿದ್ದಾಳೆ ಸೀತಾಬಾಯಿ
ಎಲ್ಲಿದೆ ಹಾಸಿಗೆ ಸೀತಾಬಾಯಿಗೆ?
ಕಪ್ಪು ಚೆಲುವೆ ಸೀತಾಬಾಯಿ
ಹಾಸಿ ಬಂಡೆಗಲ್ಲುಗಳ ಹಾಸಿಗೆ
ಪ್ರಸವಿಸಿದ್ದಾಳೆ ಸೀತಾಬಾಯಿ
ಎಲ್ಲಿದೆ ಆಹಾರ ಸೀತೆಗೆ?
ಮಾಡುವರಿಲ್ಲ ಅಡಿಗೆ ಅವಳಿಗೆ.
ಗಡೀಪಾರಾಗಿರುವಳು ಸೀತೆ
ತೊಟ್ಟಿಲುಗಳಿಲ್ಲ ಮಕ್ಕಳಿಗೆ
ಹೂವ ಹಾಸಿಗೆಯ ಹಾಸಿದಳು ಸೀತೆ
ಇಟ್ಟಳು ತನ್ನವಳಿ ಮಕ್ಕಳನದರ ಮೇಲೆ
ಪ್ರಸವಿಸಿದ್ದಾಳೆ ಸೀತಾಬಾಯಿ
ಸಂತಸ ಪಡುತಿವೆ ಬೆಟ್ಟಕಾಡುಗಳು
ಅವಳಿಗಿಲ್ಲ ತನ್ನವರೆನ್ನುವರು

*ತಿರಸ್ಕಾರದ ಬದುಕ ಬದುಕಿರುವೆ*
*ಹೇಳುವಳು ಸೀತೆ*
*ಬದುಕಿನುದ್ದಕೂ ಕಡೆಗಣಿಸಿದ ರಾಮು*
*ಹೌದು, ಅವಳ ಬದುಕಿನುದ್ದಕ್ಕೂ*

ಇನ್ನೊಂದೆಡೆ :

*ಅವಳು ಹೆಣ್ಣು*
*ತಿರಸ್ಕಾರ-ವಂಚನೆಗಳನೆದುರಿಸಬೇಕಿತ್ತು*
*ಸೀತೆ ಒಬ್ಬ ಹೆಣ್ಣು*
*ಅನಾಗರಿಕರ ಸೊಲ್ಲಿಗೆ ಕಿವಿಗೊಟ್ಟ ರಾಮು*
*ಗುಣವತಿ ಸೀತೆಯ ಕಾಡಿಗಟ್ಟಿರುವೆ !*

ಬಂಗಾಳಿಯಲ್ಲಿ :

*ಗಡೀಪಾರಾದ ಸೀತೆ ಕೆಲವು ಹೆಜ್ಜೆಗಳನ್ನಿಡುತ್ತಾಳೆ*
*ಮತ್ತೆ ಕೆಲವು ಬಾರಿ ಹಿಂದಿರುಗಿ ನೋಡುತ್ತಾಳೆ :*
*ಆದರೇನು ! ಆ ಪಾಪಿಷ್ಠ ರಾಮನ*
*ಅರಮನೆ ಮತ್ತಷ್ಟು ಎತ್ತರಕ್ಕೇರುತ್ತದೆ...*

ಲೋಕದ ದೃಷ್ಟಿಯಲ್ಲಿ 'ಕರುಣಾಸಿಂಧು', 'ದಯಾಸಾಗರ' ಹೆಣ್ಣಿನ ದೃಷ್ಟಿಯಲ್ಲಿ ಪಾಪಿಷ್ಠ ಆಗುವುದರ ಹಿಂದಿನ ಸಿಟ್ಟು ಏನೆಂಥದು. ತಾನೇ ಒಬ್ಬ ಪಾಪಿಯಾಗಿ ಪಾಪಿಗಳನ್ನು ವಿಮುಕ್ತಿಗೊಳಿಸುವ 'ಪತಿತ ಪಾವನ' ಹೇಗಾದಾನು ಎನ್ನುತ್ತದೆ ಜನಪದ ಮಹಿಳಾಲೋಕ.

ಜನಪದರಲ್ಲಿ ಕಂಡುಬರುವ ಈ ಮುಕ್ತ ಅಭಿವ್ಯಕ್ತಿ ಅಂತಿಮವಾಗಿ ಅಧೀನತೆಗೇ ವಾಲುವ ಅನಿವಾರ್ಯವಾಗುವ ಬಗೆಯೂ ಇದೆ. ಎಲ್ಲ ಕಾಲದಲ್ಲೂ ಸ್ತ್ರೀ ತನಗೆ ಒದಗಿದ್ದನ್ನೆಲ್ಲ ಒಲ್ಲದಿದ್ದರೂ ಸಹಿಸಿದಳು; ಒಳಗೊಳಗೇ ಅದನ್ನು ತನ್ನದೇ ರೀತಿಯಲ್ಲಿ ಪ್ರತಿಭಟಿಸಿದಳು ಎಂಬುದು ಗಮನಾರ್ಹ.

ರಂಗಭೂಮಿ ಮೊದಲಾದವು ಪ್ರದರ್ಶಕ ಕಲೆಗಳು. ಸಮೂಹ ಕಲೆಗಳು. ಅಲ್ಲಿ ಕಲಾತ್ಮಕತೆಯೂ ಉಳಿದು, ಸರಿಯಾದ ಸಂವಹನ ಸಾಧ್ಯವಾಗುವುದು ಸ್ತ್ರೀ ಪುರುಷರು ಸಮಾನವಾಗಿ ತೊಡಗಿದಾಗಲೇ. ಆದ್ದರಿಂದಲೇ ಇಲ್ಲಿ ಇನ್ನಿತರ ಚಳವಳಿಗಳ ಹಾಗೆ ಲಿಂಗಾಧರಿತ ಹಕ್ಕಿನ ಚಳವಳಿ ಸಲ್ಲ; ಆದರೆ ಲಿಂಗ ಸಮಾನತೆಯ ಬೇಡಿಕೆ ಅಗತ್ಯವಾದ್ದು. ಆದ್ದರಿಂದಲೇ ಸಾಮಾಜಿಕ ಒಪ್ಪಿಗೆ, ಧಾರ್ಮಿಕ ಒಪ್ಪಿಗೆ ಅದರಲ್ಲೂ ಕೆಲವು ಆಚರಣೆ ನಿಷೇಧಗಳನ್ನು ದೂರ ಮಾಡಿಕೊಳ್ಳುವುದು ಮುಖ್ಯವಾಗುತ್ತದೆ. ಅದು ಪುರುಷ ಪ್ರಧಾನ ಸಮಾಜದಲ್ಲಿ ಸುಲಭಸಾಧ್ಯವಲ್ಲ.

ನನ್ನ ಈ ಎಲ್ಲ ಮಾತುಗಳನ್ನು ಪುರುಷ ವಿರೋಧೀ ಧೋರಣೆ ಎಂದು ಭಾವಿಸಬೇಕಿಲ್ಲ. ರಂಗಭೂಮಿಯ ವಿಷಯಕ್ಕೆ ಹಿಂತಿರುಗುವುದಾದರೆ, ಈ ದಿನಗಳಲ್ಲಿ ರಂಗತರಬೇತಿ ಪಡೆದ ನಿರ್ದೇಶಕಿಯರು ಮುಂದೆ ಬರುತ್ತಿದ್ದಾರೆ. ಅವರಿಗೂ ದೊಡ್ಡ ಪ್ರಮಾಣದಲ್ಲಿ, ಸಮಗ್ರ ಪ್ರೇಕ್ಷಕ ಸಮುದಾಯದೆದುರು ನಾಟಕ ನಿರ್ದೇಶಿಸಿ ಪ್ರದರ್ಶಿಸಲು ಸಂಪನ್ಮೂಲದಿಂದ ಹಿಡಿದು ಅನೇಕ ರೀತಿಯ ಪುರುಷ ಪ್ರಧಾನ ವ್ಯವಸ್ಥೆಯನ್ನು ಅವಲಂಬಿಸಬೇಕಾಗುತ್ತದೆ.

ಈ ಅವಲಂಬನೆ ಸ್ತ್ರೀ-ಪುರುಷರಿಬ್ಬರಿಗೂ ರಂಗಭೂಮಿ ಯಂಥ ಸಾಮುದಾಯಿಕ ಕ್ಷೇತ್ರದಲ್ಲಿ ಅನಿವಾರ್ಯ. ಆದರೆ ಪರಂಪರೆಯಿಂದ ಅಧೀನ ನೆಲೆಯಲ್ಲೇ ಉಳಿಸಿರುವ ಮಹಿಳೆಯರ ಬಗೆಗಿನ ಸಾಂಪ್ರದಾಯಿಕವಾಗಿ ಬೇರೂರಿದ ಅಲಕ್ಷ್ಯ, ಅನಾದರಗಳು ಶಿಕ್ಷಣ ಮಾತ್ರದಿಂದ ಹೊರಟು ಹೋಗುವುದಿಲ್ಲ. ಆದ್ದರಿಂದ ಒಂದು ಸಾರ್ವಜನಿಕ ನಾಟಕ ಪ್ರಯೋಗಕ್ಕಾಗಿ ಈ ಪರಸ್ಪರಾವಲಂಬನೆ ಇನ್ನೂ ಹೆಚ್ಚಿನ ಪ್ರಮಾಣದ್ದು ಹಾಗೂ ಹೆಚ್ಚಿನ ಪರಿಶ್ರಮವನ್ನು ಬೇಡುವಂಥದ್ದು.

ಅನೇಕ ಸಂದರ್ಭಗಳಲ್ಲಿ ಮಹಿಳೆಯ ಸಾಧನೆ-

## ಶಾಪಗ್ರಸ್ತ ದೇವದೂತನ ಸ್ವಗತ



೧

ಸತ್ತ ಹಸುವಿನ ಹಣೆಯ ಮೇಲೆ
ಹಸಿದ ಹೊಲೆಯನ ಹೆಸರು ಬರೆದು
ದ್ಯಾವರು ಭೂಮಿಗೆ ಕಳುಹಿಸಿದ
ಶಾಪಗ್ರಸ್ತ ದೇವದೂತನು ನಾನು

ಈದ ಬಾಣಂತಿ ನಾಯಿ
ಹಸಿವ ತಾಳದೆ
ತನ್ನ ಕುನ್ನಿಯ ತಾನೇ ತಿಂದು
ಹಸಿದೊಡಲ ಹೊರೆದಂತೆ
ದೆಸೆದೆಸೆಗೆ ಕಂಗಾಲಾಗಿ
ಹಸಿದು ಕೈ ಚಾಚಿ
ನೆಲಕ್ಕೆ ಬೋರಲು ಬಿದ್ದು
ಹಲುಬುತ್ತಿದ್ದೇನೆ ಓರಂತೆ

ಒಡಲುಗೊಂಡನೆಂದು
ಹುಸಿಯಲಾರೆ
ಹಸಿವೆಯೆಂದು
ಅವರಿವರ ಅನ್ನವ ಕಸಿಯಲಾರೆ !

ಹಸಿದಿರಲಾರದೆ ಸತ್ತ
ಹಸುವ ತಿಂದೆ
ಹೊಲಸು ತಿಂದವನೆಂದು
ಹೊಲೆಯನೆಂದಿರಿ ನನ್ನ !

ಮೂವತ್ತು ಮೂರು ಕೋಟಿ
ದೇವರುಗಳ
ತನ್ನ ಮೈಯ್ಯಂತ ಮೈಯಲ್ಲಿ
ಹಾಲು ತುಂಬಿದ ಕೆಚ್ಚಲಲ್ಲಿ
ಹೇನು ತುಂಬಿದ ಬಾಲದಲ್ಲಿ
ಮಡಗಿಕೊಂಡೇ ಸತ್ತ
ಮುದಿ ದನವ ತಿಂದ
ಶತಮಾನದ ಹಸಿವು ನನಗೆ

೨

ಹಸಿದ ಹೊಲೆಯನ ಹೊಟ್ಟೆಯ ಮೇಲೆ
ಸತ್ತ ದನಗಳ ಹೆಸರು ಬರೆದು
ದೇವರು ಅಂಟಿಸಿದ ಬರೆಹವನು
ಅಳಿಸಬಾರದು ಯಾರು ?
ಭೂಸುರರ ಕಣ್ಣ ಪಾಸಲೆಯ
ರಕ್ಕಸರು ನಾವು
ಅವರ ದೇವ ಸಂಪ್ರೀತಿಯ
ಯಜ್ಞ ಕುಂಡಗಳಲ್ಲಿ ಬಲಿಪಶುಗಳು !
ನಮ್ಮ ಬೆವರು ನೆತ್ತರು ಸಮಿತ್ತುಗಳು

೩

ಕೇಳಬಾರದು ಅನ್ನವನು
ನಾವು ಅನ್ನ ಕಾಣದ ಅಬ್ಬೇಪಾರಿಗಳು
ನಮ್ಮ ತಟ್ಟೆಯ ತುಂಬಾ
ದೇವರ ಹೆಣಗಳೇ ಅನ್ನದ ಅಗುಳುಗಳು.


**ಪ್ರೊ|| ಟಿ. ಯಲ್ಲಪ್ಪ**
ಕನ್ನಡ ಅಧ್ಯಾಪಕ, ಸರ್ಕಾರಿ ಪ್ರಥಮ ದರ್ಜೆ ಕಾಲೇಜು
ಜಯನಗರ ೬ನೇ ಬ್ಲಾಕ್, [illegible]
ಬೆಂಗಳೂರು - [illegible]

ಸಾಮರ್ಥ್ಯಗಳು ಪ್ರಕಟವಾಗುವಲ್ಲಿ ಅವರನ್ನು ಬೆಂಬಲಿಸಿ, ಪ್ರೋತ್ಸಾಹಿಸುವ ಪುರುಷರು ಇದ್ದಾರೆ. ರಾಜಕೀಯ, ಕಲೆ, ಧರ್ಮ, ಸಮಾಜಸೇವೆ, ಚಳವಳಿಗಳು, ವಿಜ್ಞಾನ, ಸಾಹಿತ್ಯ ಈ ಎಲ್ಲ ನೆಲೆಗಳಲ್ಲಿ ಸಾಧಕಿಯರನೇಕರು ಪುರುಷ ಪ್ರಧಾನ ವ್ಯವಸ್ಥೆಯ ವಿರುದ್ಧ ಹೋರಾಡುತ್ತಲೇ ಉನ್ನತ ಸ್ಥಾನಕ್ಕೆ ಏರಿರುತ್ತಾರೆ ಎಂಬುದು ಅನೇಕ ಸಂದರ್ಭ ಗಳಲ್ಲಿ ನಿಜವೇ. ಆದರೆ ಪುರುಷರಲ್ಲೂ ಶೋಷಿಸುವವರು ಇರುವಂತೆಯೇ ಮಹಿಳೆಯರ ಪರ ಇದ್ದು ಅವರನ್ನು ಬೆಂಬಲಿಸಿ ಮುನ್ನಡೆಯಲು ಅವಕಾಶ ಒದಗಿಸುವ ಸಹೃದಯರು, ಲಿಂಗ ಸಮಾನತೆ, ಮಹಿಳೆಯ ಅನನ್ಯತೆಯಲ್ಲಿ ನಂಬಿಕೆ ಇರುವ ಪುರುಷರೂ ಇದ್ದಾರೆಂಬುದು ಸತ್ಯ ಸಂಗತಿ.

ಈ ಹೊತ್ತು ರಂಗಭೂಮಿಗೆಂದೇ ಸಂಪೂರ್ಣವಾಗಿ ತನ್ನ ಸರ್ವಶಕ್ತಿಯನ್ನೂ ಮಹಿಳೆಯರು ಧಾರೆಯೆರೆದು ಮಹಿಳಾ ಸಾಧನೆ-ಸಾಮರ್ಥ್ಯಗಳ ಚರಿತ್ರೆ ಕಟ್ಟುವ ಧ್ಯೇಯಕ್ಕೆ ಏಕಾಗ್ರವಾಗಿ ದುಡಿಯುವ ಅಗತ್ಯವೂ ಇದೆ. ಇವೆಲ್ಲಕ್ಕೂ ಒಂದು (ಸ್ಪೇಸ್) ಅವಕಾಶ ಕಲ್ಪಿಸುವುದು ಈ ಕ್ಷಣದ ತುರ್ತು ಎಂದು ಭಾವಿಸುತ್ತೇನೆ.

ನಾಟಕ ಕಲೆ, ಸಂಸ್ಕೃತಿ ಪೋಷಣೆಗಾಗಿಯೇ ರೂಪುಗೊಂಡಿರುವ ಅಕಾಡೆಮಿಗಳು, ಸಂಘ ಸಂಸ್ಥೆಗಳು ರಂಗಭೂಮಿಯಲ್ಲಿ 'ಪೂರಕ' ರೀತಿಯಲ್ಲಷ್ಟೇ ಮಹಿಳೆಯರಿಗೆ ಅವಕಾಶ – ಸ್ಥಾನ ಕೊಡುವ ಕೆಲಸ ಮಾಡುತ್ತಿವೆ. ಅವರೆಲ್ಲ ಇನ್ನೂ ಒಂದು ಹೆಜ್ಜೆ ಮುಂದುವರಿದು ಶಾಲಾ ಕಾಲೇಜುಗಳಲ್ಲಿ, ಗ್ರಾಮೀಣ ಪ್ರದೇಶಗಳಲ್ಲಿ ಎಲ್ಲೆಲ್ಲಿ Gender sensitization ಅನ್ನು




ಉಂಟುಮಾಡುವ ಸಮುದಾಯದ ಜನರಿದ್ದಾರೋ ಅಲ್ಲೆಲ್ಲ ಅವರೇ ನೇರವಾಗಿ ಪಾಲ್ಗೊಳ್ಳುವಂತಹ ನಾಟಕ ಪ್ರಯೋಗ ಇತ್ಯಾದಿ ಯೋಜನಾಬದ್ಧ ಕಾರ್ಯಕ್ರಮಗಳನ್ನು ರೂಪಿಸುವುದರಿಂದ ಮಹಿಳೆಯ ರಂಗಭೂಮಿ ಅರಿವನ್ನೂ ವಿಸ್ತರಿಸುವ ನೆಲೆಯಲ್ಲಿ ಒಂದು ಉಪಯುಕ್ತ ಕಾರ್ಯ ಆದೀತು.

ಒಮ್ಮೆ ಅರಿವಿನ ಕಣ್ತೆರೆದರೆ ಆತ್ಮವಿಶ್ವಾಸ, ವಸ್ತುನಿಷ್ಠ ದರ್ಶನ ಸಾಮರ್ಥ್ಯಗಳು ಇನ್ನಷ್ಟು ತೀವ್ರಗೊಳ್ಳುವುದರಲ್ಲಿ ಸಂದೇಹವಿಲ್ಲ. ಅಕಾಡೆಮಿಕ್ ವಲಯ, ಲೇಖಕ-ಲೇಖಕಿಯರ ಬಳಗಗಳು ರಂಗಕರ್ಮಿ ಮಹಿಳಾ ಬಳಗದ ಜೊತೆಗೆ ಸ್ಪಂದಿಸಿ ಪರಸ್ಪರ ಪೂರಕ ಕೆಲಸ ಮಾಡಬೇಕಾದ್ದು ಮುಖ್ಯ.

ಎಲ್ಲವನ್ನೂ ಅಕಾಡೆಮಿ, ಸರ್ಕಾರದಂಥ ವ್ಯವಸ್ಥೆಯ ಅಡಿಯಲ್ಲಿ ತೂರಿಸದೆ ಮಹಿಳಾ ಸಮಸ್ಯೆ-ಸವಾಲುಗಳ ವಿಸ್ತೃತ ಚರ್ಚೆ-ವಿಶ್ಲೇಷಣೆಗಾಗಿ ಪ್ರತ್ಯೇಕ ಸಮಿತಿಗಳನ್ನು ರಚಿಸಿ, ಮೇಲೆ ಹೇಳಿದ ವ್ಯವಸ್ಥೆಗಳಿಂದ ಸಂಪನ್ಮೂಲಗಳನ್ನು ಮಾತ್ರ ಒದಗಿಸಿಕೊಂಡು ಕೇವಲ 'ಸೆಮಿನಾರ್' ಗಳಾಗಲ್ಲದೆ, ಆದರಾಚೆಗಿನ ಸ್ತ್ರೀ ಸಂವೇದನೆಯಂಥ ಬೌದ್ಧಿಕತೆಯುತ್ತಲೂ ಗಂಭೀರವಾದ ಚರ್ಚೆಗಳಾಗಬೇಕು. ಕ್ರಿಯಾಶೀಲ ತೊಡಗುವಿಕೆಗೆ ಮಾರ್ಗದರ್ಶನ, ಹೊಸ ನೋಟಗಳನ್ನು ದಕ್ಕಿಸಿಕೊಡುವ ಪಂಥಗಳಾಗಬೇಕು. ಇದಕ್ಕೆಲ್ಲ ಅಗತ್ಯವಾದ ಒಂದು ತಾತ್ವಿಕ ಚೌಕಟ್ಟನ್ನು (Framework) ಹಾಕಿಕೊಂಡು ಕಾರ್ಯಪ್ರವೃತ್ತರಾಗಬೇಕಾಗಿದೆ. ಅಂಥ ಕೆಲಸ ಪ್ರಾರಂಭವಾಗಲಿ.

*(ಲೇಖನದಲ್ಲಿ ಉದ್ಧರಿಸಿರುವ [illegible] ಸಾಲುಗಳನ್ನು ಅಕ್ಟೋಬರ್ ೨೦೦೩ರ 'ಮಾನಸ' ಪತ್ರಿಕೆಯಿಂದ ಆಯ್ದುಕೊಳ್ಳಲಾಗಿದೆ. ಕರ್ನಾಟಕ ನಾಟಕ ಅಕಾಡೆಮಿಯು ಆಯೋಜಿಸಿದ್ದ ಪ್ರಥಮ ರಂಗ ಮಹಿಳಾ ಸಮಾವೇಶದ ಸಮಾರೋಪ ಭಾಷಣದ ಸಂಗ್ರಹ ರೂಪ.)*

**ಡಾ|| ವಿಜಯಾ**
[illegible], ನಂ. ೩೬, ೧೦ ಅಡಿ ರಸ್ತೆ, ರಾಘವನಗರ,
ನ್ಯೂ ಟಿಂಬರ್‌ಯಾರ್ಡ್ ಬಡಾವಣೆ, ಬೆಂಗಳೂರು - ೫೬೦ ೦೨೬



# ಜಾತಿ ಜನಗಣತಿ: ಒಂದು ಚರ್ಚೆ – ಸಂವಾದ

೨೦೧೧ರಲ್ಲಿ ನಮ್ಮ ದೇಶದಲ್ಲಿ ಜನಗಣತಿ ನಡೆಯಬೇಕಿದೆ. ಆ ಸಂದರ್ಭದಲ್ಲಿ ವ್ಯಕ್ತಿಗಳ ಜಾತಿಯನ್ನು ನಮೂದಿಸಲು ಅವಕಾಶವಿರಬೇಕೆಂಬ ಒತ್ತಾಯ ಬಂದಿದೆ. ಹಿಂದೆ ಆ ಪದ್ಧತಿ ಇತ್ತು ಮತ್ತು ೧೯೩೧ರಲ್ಲಿ ಅದನ್ನು ರದ್ದುಮಾಡಲಾಯಿತು. ಕೆಳಸ್ತರದ ಜನಗಳ ಅಭಿವೃದ್ಧಿಗೆ ಜಾತಿ ಜನಗಣತಿಯು ಸಾಧನವಾಗಬಲ್ಲದೆಂಬ ವಾದ ಈಚೆಗೆ ಪ್ರಬಲವಾಗಿ ಕೇಳಿಬಂದಿದೆ. ಅದನ್ನು ವಿರೋಧಿಸಿದ್ದ ರಾಜಕೀಯ ಪಕ್ಷಗಳೂ ಕ್ರಮೇಣ ವಿರೋಧವನ್ನು ಕೈಬಿಟ್ಟವು. ಇಡೀ ದೇಶದ ಅಭಿವೃದ್ಧಿಯನ್ನು ಸಮಗ್ರವಾಗಿ, ಸೂಕ್ತವಾಗಿ ಮತ್ತು ಯಶಸ್ವಿಯಾಗಿ ಆಯೋಜಿಸಿದರೆ ಎಲ್ಲ ಜಾತಿಗಳವರ ಅಭಿವೃದ್ಧಿಯೂ ತಾನಾಗಿಯೇ ಆಗುತ್ತದೆಯೆಂಬ ಭಾವನೆಯ ಜಾಗದಲ್ಲಿ ಪರ್ಯಾಯ ಅಭಿಪ್ರಾಯವು ಕೇಳಿಬರುತ್ತಿತ್ತು; ಈಗ ಅದು ಹೆಚ್ಚು ವ್ಯಾಪಕವಾಗಿದೆ. ಜನಗಣತಿಯಲ್ಲಿ ಜಾತಿಯನ್ನು ನಮೂದಿಸಬೇಕೆ, ಅದರ ವಿಶೇಷ ಅವಶ್ಯಕತೆಯುಂಟೆ, ಅದರ ಪ್ರಯೋಜನವೇನು, ಸಾಧಕ-ಬಾಧಕಗಳೇನು, ಎಂಬುದನ್ನು ಸಾರ್ವಜನಿಕ ವೇದಿಕೆಯಲ್ಲಿ ಚರ್ಚೆಗೆ ತರಬೇಕೆಂದು 'ಹೊಸತು' ಉದ್ದೇಶಿಸಿದೆ. ಅದರ ಅಂಗವಾಗಿ ಪ್ರೊ॥ ರವಿವರ್ಮಕುಮಾರ್ ಅವರ ಕಚೇರಿಯಲ್ಲಿ ಸೇರಿ ಸಂವಾದ ನಡೆಸಲು ಅವರು ಅನುಕೂಲ ಕಲ್ಪಿಸಿಕೊಟ್ಟಿದ್ದಕ್ಕೆ ಅವರಿಗೆ 'ಹೊಸತು' ಋಣಿಯಾಗಿದೆ. ಶ್ರೀಯುತರು ರಾಜ್ಯ ಹಿಂದುಳಿದ ವರ್ಗಗಳ ಆಯೋಗದ ಅಧ್ಯಕ್ಷರಾಗಿ ವ್ಯಾಪಕ ಕ್ಷೇತ್ರಕಾರ್ಯ ನಡೆಸಿದ್ದಾರೆ, ಹೊಸ ಕಾರ್ಯಕ್ರಮಗಳನ್ನು ರೂಪಿಸಿದ್ದಾರೆ. ರಾಜ್ಯವಿಧಾನ ಪರಿಷತ್ತಿನ ಸದಸ್ಯರಾಗಿದ್ದ ಡಾ॥ ಎಲ್. ಹನುಮಂತಯ್ಯ ಮತ್ತು ಹಿರಿಯ ಪತ್ರಕರ್ತ ಶ್ರೀ. ಸನತ್ಕುಮಾರ್ ಬೆಳಗಲಿ, ಹೊಸತು ಸಂಪಾದಕ ಬಳಗದ ಶ್ರೀ. ಕೆ. ಎಸ್. ಪಾರ್ಥಸಾರಥಿ ಮತ್ತು ಡಾ॥ ಜಿ. ರಾಮಕೃಷ್ಣ, ಸಂವಾದದಲ್ಲಿ ಭಾಗವಹಿಸಿದ್ದಾರೆ. ಚರ್ಚೆ – ಸಂವಾದವನ್ನು 'ಹೊಸತು'ಗಾಗಿ ಆಯೋಜಿಸಿ ನಡೆಸಿಕೊಡುವ ಕಾರ್ಯಭಾರವನ್ನು ಡಾ॥ ವಸುಂಧರಾ ಭೂಪತಿ ಹೊತ್ತಿದ್ದಾರೆ. ಅಲ್ಲದೆ ಸಂವಾದವನ್ನೆಲ್ಲಾ ಅಚ್ಚುಕಟ್ಟಾಗಿ ಲೇಖನರೂಪಕ್ಕೆ ತಂದಿರುವ ಡಾ॥ ವಸುಂಧರಾ ಭೂಪತಿಯವರಿಗೆ 'ಹೊಸತು' ಆಭಾರಿಯಾಗಿದೆ. ಚರ್ಚೆಯನ್ನು ಮುಂದುವರಿಸಬೇಕೆಂಬುದು ಪತ್ರಿಕೆಯ ಆಶಯವಾಗಿದೆ.

***ಸಂವಾದದ ಸಂಯೋಜನೆ ಮತ್ತು ಲೇಖನ : ಡಾ॥ ವಸುಂಧರಾ ಭೂಪತಿ; ಛಾಯಾಚಿತ್ರಗಳು : ಶ್ರೀ ಕೆ. ಪಿ. ಸ್ವಾಮಿ***


ಸಾಗರ್ ಪ್ರಕಾಶನ
ನಂ. 695, 10ನೇ ಮುಖ್ಯರಸ್ತೆ,
80 ಅಡಿರಸ್ತೆ, ವಿನಾಯಕ ಲೇಔಟ್,
ನಾಗರಭಾವಿ 2ನೇ ಹಂತ,
ಬೆಂಗಳೂರು – 560 072
ಮೊ : 9448494632
ದೂ : 080–26607214
ಕನಕದಾಸ
ಪುಟ: 456 ಬೆಲೆ: 250–00
ಪುಟ: 572 ಬೆಲೆ: 320–00
ಭಾರತೀಯ
ಪುಟ: 744 ಬೆಲೆ: 390–00
ಪುಟ: 184 ಬೆಲೆ: 90–00
ಭಾರತೀಯ ಕಲಾದರ್ಶನ
ಪುಟ: 488 ಬೆಲೆ: 260–00
ಪುಟ: 712 ಬೆಲೆ: 380–00
ಪುಟ: 810 ಬೆಲೆ: 430–00
ಪುಟ: 144 ಬೆಲೆ: 75–00
ಪುಟ: 480 ಬೆಲೆ: 240–00
ಪುಟ: 408 ಬೆಲೆ: 230–00
ಪುಟ: 576 ಬೆಲೆ: 300–00
ಪುಟ: 616 ಬೆಲೆ: 340–00
ಪುಟ: 112 ಬೆಲೆ: 50–00
ಪುಟ: 360 ಬೆಲೆ: 200–00
ಪುಟ: 754 ಬೆಲೆ: 375–00
ಕಾದಂಬರಿ ಸಾರ್ವಭೌಮ ಅ.ನ.ಕೃ.ರವರ
ಎಲ್ಲಾ ಕೃತಿಗಳು ಮರುಮುದ್ರಣವಾಗಿವೆ.
e-mail : sagarprakashana@gmail.com

**ಡಾ॥ ವಸುಂಧರಾ ಭೂಪತಿ :** ಜನಗಣತಿಯಲ್ಲಿ ಜಾತಿ ಸಮೀಕ್ಷೆ ಮಾಡಿದ್ದುದು ಯಾವಾಗ ? ಈ ಕಾರ್ಯದ ಉದ್ದೇಶವೇನಿತ್ತು? ಅದನ್ನು ನಿಲ್ಲಿಸಿದ್ದು ಯಾವಾಗ ? ಇದಕ್ಕೆ ಕಾರಣಗಳೇನಿರಬಹುದು ?

**ಪ್ರೊ॥ ರವಿವರ್ಮಕುಮಾರ್ :** ಜನಗಣತಿ ಜಗತ್ತಿನಲ್ಲಿ ಎಲ್ಲಕ್ಕಿಂತ ಮೊದಲು, ಯೂರೋಪ್‌ಗಿಂತಲೂ ಮುಂಚೆ, ಭಾರತದಲ್ಲಿ ನಡೆದಿದೆ. ಕೌಟಿಲ್ಯನ ಅರ್ಥಶಾಸ್ತ್ರದಲ್ಲಿ ಜನ ಗಣತಿ ಬಗ್ಗೆ ಪ್ರಸ್ತಾಪವಿದೆ. ಅದರಲ್ಲಿಯೂ ಮುಖ್ಯವಾಗಿ ಜಾತಿ ಜನಗಣತಿ ಬಗ್ಗೆ ಉಲ್ಲೇಖಿಸಲಾಗಿದೆ. ಅದರ ಬಗ್ಗೆ ಖಚಿತ ದಾಖಲೆಗಳು ಸಿಗುತ್ತವೆ. ಚಾಣಕ್ಯನ ನಂತರ ಬ್ರಿಟಿಷರು ೧೮೭೨ರಲ್ಲಿ ಮೊದಲು ಜನಗಣತಿ ನಡೆಸಿದರು. ದೇಶಕ್ಕೆ ಸ್ವಾತಂತ್ರ್ಯ ಬಂದನಂತರ ೧೯೫೧ರಲ್ಲಿ ಜಾತಿ ಜನಗಣತಿಗೆ ಪ್ರಧಾನಮಂತ್ರಿ ಜವಾಹರಲಾಲ್ ನೆಹರೂ ರವರ ಸರ್ಕಾರ ಒಪ್ಪಿಗೆ ನೀಡಲಿಲ್ಲ. ಏಕೆಂದರೆ ಇದರಿಂದ ಜಾತಿವಿಭಜನೆ ತೀವ್ರಗೊಂಡು ದೇಶದ ಏಕತೆಗೆ ಧಕ್ಕೆ ಉಂಟಾಗುತ್ತದೆ ಎಂಬುದು ನೆಹರೂ ವಾದವಾಗಿತ್ತು. ಆದರೆ ಜಾತಿ ಜನಗಣತಿ ನಡೆಯಲಿಲ್ಲವೆಂದು ಈ ದೇಶದಲ್ಲಿ ಜಾತೀಯತೆ ಕಡಿಮೆಯಾಗಿಲ್ಲ. ಆರು ದಶಕಗಳಿಂದ ಜಾತಿ ಜನಗಣತಿ ನಡೆಯದಿದ್ದರೂ ಜಾತಿ ಇನ್ನಷ್ಟು ಗಟ್ಟಿಯಾಯಿತು. ಈ ದೇಶದಲ್ಲಿ ಜಾತಿ ಆಧಾರದಲ್ಲಿ ಸಮಾಜ ಮೊದಲಿನಿಂದಲೂ ವಿಭಜನೆಯಾಗಿದೆ. ಮದ್ರಾಸ್ ಸಚಿವ ಸಂಪುಟದಲ್ಲಿ ಬ್ರಾಹ್ಮಣರಿಗೆ ಪ್ರಾತಿನಿಧ್ಯ ನೀಡದಿದ್ದಾಗ ಜಾತಿ ಪ್ರಾತಿನಿಧ್ಯ ನೀಡಬೇಕೆಂದು ನೆಹರೂ ದೂರವಾಣಿ ಕರೆ ಮಾಡಿ ತಿಳಿಸಿದರು. ಕರ್ನಾಟಕದಲ್ಲಿ ಮೀಸಲಾತಿಯನ್ನು ಹುಟ್ಟುಹಾಕಿದವರು ಬ್ರಾಹ್ಮಣರು. ಮೈಸೂರು ಸಂಸ್ಥಾನದಲ್ಲಿ ತಮಿಳುನಾಡಿನ ಅಯ್ಯರ್ ರವರು ದಿವಾನರಾಗುತ್ತಿದ್ದರು. ಆಡಳಿತದಲ್ಲಿ ಸಿಂಹಪಾಲು ಪಡೆಯುತ್ತಿದ್ದರು. ಇದನ್ನು ವಿರೋಧಿಸಿ ಕರ್ನಾಟಕದ ಬ್ರಾಹ್ಮಣರು ಬಂಡಾಯವೆದ್ದರು. ಆಗ ಕರ್ನಾಟಕದ ಬ್ರಾಹ್ಮಣರಿಗೆ ಅವಕಾಶ ದೊರಕಿತು. ಸರ್ ಎಂ. ವಿಶ್ವೇಶ್ವರಯ್ಯನವರು ಅದರ ಮೊದಲ ಫಲಾನುಭವಿ.

೧೮೭೨ರ ನಂತರ ೧೯೧೧, ೧೯೨೧ ಮತ್ತು ೧೯೩೧ರಲ್ಲಿ ಜನಗಣತಿ ನಡೆಯಿತು. ಆದರೆ ೧೯೪೧ರಲ್ಲಿ ಜನಗಣತಿ ನಡೆದರೂ ಎರಡನೆ ಮಹಾಯುದ್ಧದ ಕಾರಣ ಅಂಕಿ-ಅಂಶಗಳು ಪ್ರಕಟವಾಗಲಿಲ್ಲ. ಆಗ ನಿಂತು ಹೋದ ಜಾತಿ ಜನಗಣತಿ ಇಲ್ಲಿಯವರೆಗೂ ನಡೆದಿಲ್ಲ. ೧೯೯೧ರಲ್ಲಿ ಪ್ರಪ್ರಥಮ ಬಾರಿಗೆ ಮಧು ಲಿಮಯೆ ಅವರು ಜಾತಿ ಜನಗಣತಿ ಆಗಬೇಕೆಂದು ಮಂಡಲ್ ಪ್ರಕರಣದಲ್ಲಿ ಸುಪ್ರೀಂ ಕೋರ್ಟಿಗೆ ಅರ್ಜಿ ಸಲ್ಲಿಸಿದ್ದರು. ಇಲ್ಲಿಯವರೆಗೂ ಕಾರ್ಯ ನಿರ್ವಹಿಸಿರುವ ಎಲ್ಲಾ ಹಿಂದುಳಿದ ವರ್ಗಗಳ ಆಯೋಗಗಳೂ, ಅದರಲ್ಲಿಯೂ ವಿಶೇಷವಾಗಿ ಕರ್ನಾಟಕದ ಹಾವನೂರ್ ಆಯೋಗವು, ೧೯೭೫ರಲ್ಲಿ ಜನಗಣತಿಯಲ್ಲಿ ಜಾತಿ ಸಮೀಕ್ಷೆ ಮಾಡಲೇ ಬೇಕೆಂದು ಒತ್ತಾಯಿಸಿತ್ತಿವೆ. ಜಾತಿ ಸಮೀಕ್ಷೆ ನಡೆಯದಿದ್ದರೆ ಯಾವ ಪ್ರಯೋಜನವೂ ಇಲ್ಲ. ೨೦೦೦ನೇ ಇಸವಿಯಲ್ಲಿ ನಾನು ಹಿಂದುಳಿದ ವರ್ಗಗಳ ಆಯೋಗದ ಅಧ್ಯಕ್ಷನಾಗಿದ್ದಾಗ ಜಾತಿ ಸಮೀಕ್ಷೆ ನಡೆಯಬೇಕೆಂದು ಒತ್ತಾಯಿಸಿ ಕೇಂದ್ರ ಸರ್ಕಾರಕ್ಕೆ ಪತ್ರ ಬರೆದೆ. ಆಗಿನ ಉಪ ಪ್ರಧಾನಿ ಎಲ್. ಕೆ. ಅಡ್ವಾಣಿಯವರಿಗೇ ಬರೆದಿದ್ದೆ. ಆಗ ಅವರು ಅದನ್ನು ಒಪ್ಪಿದ್ದರು. ಆ ಬಗ್ಗೆ ಪತ್ರಿಕಾ ಹೇಳಿಕೆಯನ್ನು ನೀಡಿದ್ದರು. ಆದರೆ ರಾಜಕೀಯ ಕಾರಣಗಳಿಂದಾಗಿ ಅದು ನಡೆಯಲಿಲ್ಲ. ಅವರು ಒತ್ತಡಕ್ಕೆ ಒಳಗಾಗಿ ಜಾತಿ ಜನಗಣತಿಯನ್ನು ಮಾಡಿಸಲಿಲ್ಲ. ರಾಜಕಾರಣದಲ್ಲಿ ಮೇಲ್ಜಾತಿಯ ಪ್ರಾಬಲ್ಯದಿಂದಾಗಿ ಈ ತರಹದ ತೀರ್ಮಾನಗಳು ಜಾರಿಯಾಗುವುದು ಕಷ್ಟ. ಏಕೆಂದರೆ ಜಾತಿವಾರು ಸಮೀಕ್ಷೆ ನಡೆದರೆ ಕೆಲವೇ ಬೆರಳೆಣಿಕೆಯಷ್ಟು ಜಾತಿಗಳು, ಸಮುದಾಯಗಳು, ಎಲ್ಲ ಸೌಲಭ್ಯಗಳನ್ನೂ ಅನುಭವಿಸುತ್ತಿರುವ ಸತ್ಯ ಸಾರ್ವಜನಿಕವಾಗಿ ದೃಢಪಡುತ್ತದೆನ್ನುವ ಭಯವಿದೆ. ಅಲ್ಲದೆ ಕೇಂದ್ರದಲ್ಲಿ ಸ್ಥಿರವಾದ ಸರ್ಕಾರಗಳಿಲ್ಲ ದಿದ್ದುದರಿಂದ ಜಾತಿ ಜನಗಣತಿಗೆ ಒಪ್ಪಲಿಲ್ಲ. ಬ್ರಿಟಿಷರ ಆಳ್ವಿಕೆಯಲ್ಲಿ ಅವರು ಜನತೆಯ ನಡುವೆ ಒಡೆದು ಆಳುವ ನೀತಿ ಅನುಸರಿಸಲು ಈ ಜಾತಿ ಜನಗಣತಿ ಮಾಡಿದರು ಎನ್ನುವ ಅಭಿಪ್ರಾಯವೂ ಹಲವರಲ್ಲಿದೆ. ಜಾತಿ ಜನಗಣತಿಯಿಂದ ಸಮಾಜ ವಿಭಜನೆ ಆಗುವುದಾದರೆ ಧರ್ಮದ ಜನಗಣತಿ ಮತ್ತು ಭಾಷಾ ಜನಗಣತಿ ಯಿಂದೆಲ್ಲ ಸಮಾಜ ಇಷ್ಟೊತ್ತಿಗೆ ವಿಭಜನೆ ಆಗಬೇಕಿತ್ತಲ್ಲವೆ ?

**ಪಾರ್ಥಸಾರಥಿ :** ಜನಗಣತಿಯಲ್ಲದೆ ಬೇರೆ ಸಂದರ್ಭದಲ್ಲಿ ಅಂದರೆ ಯು.ಐ.ಡಿ.ಯಲ್ಲಿ ಜಾತಿಗಣತಿ ನಡೆಸಿದರೆ ತೊಂದರೆಯಿದೆಯೆ ? ಹೇಗೆ ?

**ಪ್ರೊ॥ ರವಿವರ್ಮಕುಮಾರ್ :** ಜಾತಿ ಜನಗಣತಿಗೆ ತನ್ನದೇ ಆದ ಮಹತ್ವ, ಪಾವಿತ್ರ್ಯತೆ ಇದೆ. ಇದಕ್ಕೆ ಲೋಕಸಭೆ ಒಪ್ಪಿಗೆ ನೀಡಿದೆ. ಹಾಗಾಗಿ ಈ ವಿಷಯವನ್ನು ನ್ಯಾಯಾಲಯದಲ್ಲಿ ಪ್ರಶ್ನೆ ಮಾಡಲು ಬರುವುದಿಲ್ಲ. ಜನಗಣತಿಯಲ್ಲಿ ಜಾತಿವಾರು ಸಮೀಕ್ಷೆ ಮಾಡದೆ ಅದನ್ನು ಯು.ಐ.ಡಿ.ಯಲ್ಲಿ ಮಾಡಲು ಬರುವುದಿಲ್ಲ. ಅದು ವ್ಯಕ್ತಿಕೇಂದ್ರಿತವಾದ ಸಮೀಕ್ಷೆ. ಕೇಂದ್ರ ಸರ್ಕಾರದ ಆಡಳಿತ ಯಂತ್ರದ ಮುಖಾಂತರ ಮಾಡುವ ಜನಗಣತಿ ಯನ್ನು ಪಾರದರ್ಶಕ, ನಿಷ್ಪಕ್ಷಪಾತ, ಅಧಿಕೃತ ಮತ್ತು ಕಾನೂನುಬದ್ಧವಾದದ್ದು ಎಂದು ಪರಿಗಣಿಸಲಾಗಿದೆ. ಯು.ಐ.ಡಿ. ಸಮೀಕ್ಷೆಯಲ್ಲಿ ನಿಷ್ಪಕ್ಷಪಾತ, ಪಾರದರ್ಶಕತೆ ಇರುತ್ತದೆಂದು ಹೇಳೋಕ್ಕಾಗಲ್ಲ. ಅಲ್ಲದೇ ಯು.ಐ.ಡಿ. ೧೫ ವರ್ಷ ವಯಸ್ಸಿಗಿಂತ ಕೆಳಗಿನವರಿಗೆ ಅನ್ವಯಿಸುವುದಿಲ್ಲ. ಅಲ್ಲದೆ ಅಲ್ಲಿ ಬೇರೆ ಕೈವಾಡಗಳು ಇರುತ್ತವೆ. ಏಕೆಂದರೆ ಯು.ಐ.ಡಿ. ಕಾರ್ಯಕ್ರಮದ ಮುಖ್ಯಸ್ಥರು ಕೂಡ ಒಂದು ಜಾತಿಗೆ ಸೇರಿದವರು. ನಮ್ಮ ಸಮಾಜದಲ್ಲಿ ಜಾತಿಯ ವಿಷಯಕ್ಕೆ ಬಂದಾಗ ತಮ್ಮ ಜಾತಿಯ ಜನಗಳ ಸಂಖ್ಯೆ ಹೆಚ್ಚಿದೆಯೆಂದೂ, ಬೇರೆ ಜಾತಿಗಳ ಜನರ ಸಂಖ್ಯೆ ಕಡಿಮೆ ಎಂದೂ ಹೇಳುವ ಪ್ರವೃತ್ತಿ ಬೆಳೆದು ಬಂದಿದೆ. ಉದಾಹರಣೆಗೆ ಹೇಳುವುದಾದರೆ, ನಾನು ಹಿಂದುಳಿದ ವರ್ಗಗಳ ಆಯೋಗದ ಅಧ್ಯಕ್ಷನಾಗಿದ್ದಾಗ ನನ್ನ ಮುಂದೆ ಹಾಜರಾದ ಪ್ರತಿಯೊಂದು ಜಾತಿಯ ಅಂಕಿ-ಅಂಶಗಳನ್ನು ಕೂಡಿದ್ದರೆ ಕರ್ನಾಟಕದ ಜನಸಂಖ್ಯೆ ೧೫ ಕೋಟಿ ಆಗಿಬಿಡುತ್ತಿತ್ತು. ಇಂತಹ ಪ್ರವೃತ್ತಿ ನಮ್ಮ ಸಮಾಜದಲ್ಲಿರುವುದರಿಂದ ಯು.ಐ.ಡಿ. ಸಮೀಕ್ಷೆಯಿಂದ ಜಾತಿ ಜನಗಣತಿಯನ್ನು ಸರಿಯಾಗಿ ಗುರುತಿಸಲಾಗುವುದಿಲ್ಲ. ೧೫ ವರ್ಷದ ಕೆಳಗಿನವರನ್ನು ಯು.ಐ.ಡಿ. ವ್ಯಾಪ್ತಿಗೆ ಒಳಪಡಿಸುವುದಿಲ್ಲವೆಂದಾದರೆ ಶೇಕಡ ೫೦ರಷ್ಟು ಜನರನ್ನು ಜಾತಿ ಸಮೀಕ್ಷೆಯಿಂದ ಹೊರತಾಗಿಸಿದಂತಾಗುತ್ತದೆ. ಆಗ ಎಣಿಕೆ ಸಹಜವಾಗಿಯೇ









ನ್ಯೂನತೆಯಿಂದ ಕೂಡಿರುತ್ತದೆ.

**ಪಾರ್ಥಸಾರಥಿ** : ಜಾತಿ ಜನಗಣತಿ ಸಂದರ್ಭದಲ್ಲಿ ಯಾರಾದರೂ ತಮಗೆ 'ಜಾತಿ ಇಲ್ಲ' ಎಂದು ಹೇಳಿದರೆ ಅದನ್ನು ಜನಗಣತಿಯಲ್ಲಿ ದಾಖಲಿಸಿಕೊಳ್ಳಬಹುದೆ ?

**ಪ್ರೊ॥ ರವಿವರ್ಮಕುಮಾರ್** : ಇಲ್ಲ, ಜಾತಿಯಲ್ಲಿ ನಂಬಿಕೆಯಿಲ್ಲದವರು 'ಇಲ್ಲ' ಎಂದು ಹೇಳಬಹುದು. ಆದರೆ ಯಾರೂ ತಮ್ಮ ಜಾತಿಯನ್ನು ಬಿಟ್ಟುಕೊಡುವುದಿಲ್ಲ. ಎಂತಹ ಕಾಸ್ಮಾಪಾಲಿಟನ್ ಆದರೂ ತಮ್ಮ ಜಾತಿಯನ್ನು ದಾಖಲಿಸುತ್ತಾರೆ.

**ಪಾರ್ಥಸಾರಥಿ** : ಮುಂದುವರಿದ ಜಾತಿಗಳವರು ತಮ್ಮ ಜಾತಿಯ ಸಂಖ್ಯೆ ಕಡಿಮೆ ಎಂದು ದಾಖಲಿಸಲು ಹಿಂಜರಿಯುತ್ತಾರೆ ಎಂದರೆ ಇದರಿಂದ ಸಮಾಜದಲ್ಲಿ ವಿಭಜನೆಯಾಗುವುದಿಲ್ಲವೆ ?

**ಪ್ರೊ॥ ರವಿವರ್ಮಕುಮಾರ್** : ಸಮಾಜದಲ್ಲಿ ಈಗಾಗಲೇ ವಿಭಜನೆಯಿದೆ. ಜಾತಿ ಜನಗಣತಿಯಿಂದ ಖಂಡಿತ ಬೇರೊಂದು ವಿಭಜನೆಯಾಗುವುದಿಲ್ಲ. ಈ ದೇಶದಲ್ಲಿ ಎಲ್ಲವನ್ನೂ ಜಾತಿಯೇ ನಿರ್ಧರಿಸುತ್ತದೆ. ಯಾರಾದರೂ ಜಾತಿಯನ್ನೂ ಬಿಟ್ಟಿದ್ದಾರೆಂದರೆ ಅದೊಂದು ಅಪವಾದವಷ್ಟೇ. ಭಾರತೀಯ ಸಮಾಜದಲ್ಲಿ ಮದುವೆ, ಶಿಕ್ಷಣ, ವೃತ್ತಿ, ಸ್ಥಾನಮಾನ ಎಲ್ಲವನ್ನೂ ಜಾತಿಯಿಂದಲೇ ನಿರ್ಧರಿಸಲಾಗುತ್ತದೆ. ಜಾತಿಯೇ ನಿರ್ಣಾಯಕವಾಗುತ್ತದೆ.

**ಡಾ॥ ಜಿ. ರಾಮಕೃಷ್ಣ**: ಕುವೆಂಪು ವಿಶ್ವವಿದ್ಯಾಲಯದಲ್ಲಿ ಒಂದು ಅಧ್ಯಯನ ಪೀಠವಿದೆ. ಬೆಲ್ಜಿಯಂನ ಬಾಲ ಗಂಗಾಧರ ಅದರ ನಿರ್ದೇಶಕರು. ಅವರು ಹೇಳುವುದೇನೆಂದರೆ ಜಾತಿಗಳಿರಬಹುದು, ಅದರಿಂದ ಅನುಕೂಲ ಪ್ರತಿಕೂಲ ಇಲ್ಲ. ಉದಾಹರಣೆಗೆ ಹೇಳುವುದಾದರೆ, ಒಂದು ಹಳ್ಳಿಗೆ ಹೋಗಿ ಯಾರನ್ನಾದರೂ ಕೇಳಿದರೆ ''ನನಗೆ ಅನಾನುಕೂಲ ಇದೆ. ಆದರೆ ಜಾತಿಯಿಂದ ಯಾವುದೇ ಅನಾನುಕೂಲ ಇಲ್ಲ'' ಎನ್ನುತ್ತಾರೆ. ಈ ಕುರಿತು ಬಹುದೊಡ್ಡ ಚರ್ಚೆ ನಡೆಯುತ್ತಿದೆ. ಈ ಅಧ್ಯಯನ ಪೀಠದಲ್ಲಿ ಕೋಟಿಗಟ್ಟಲೆ ಖರ್ಚು ಮಾಡುತ್ತಾರೆ. ಅವರ ಪ್ರಕಾರ ಜಾತಿ ''ವ್ಯವಸ್ಥೆ'' ಎಂಬುದೇನೂ ಇಲ್ಲ. ಜಾತಿಯಿಂದ ಯಾವುದೇ ತೊಂದರೆಯಾಗಿಲ್ಲ ಎಂಬುದು ಅವರ ವಾದ. ಹೊಸದಾಗಿ ಹುಟ್ಟಿಸಿದ ಸಿದ್ಧಾಂತ.

**ಪಾರ್ಥಸಾರಥಿ** : ನೆದರ್‌ಲ್ಯಾಂಡ್ ಮತ್ತು ಬೆಲ್ಜಿಯಂನಲ್ಲಿ ಭಾರತೀಯ ಇತಿಹಾಸ ಅಧ್ಯಯನ ಮಾಡುವ ಪ್ರಮುಖ ಕೇಂದ್ರಗಳಿವೆ. ಅಲ್ಲಿಂದ ಬಹಳ ವಿದ್ವಾಂಸರು ಬರುತ್ತಿದ್ದಾರೆ. ಅಲ್ಲಿಂದ ಹಣವೂ ಬರುತ್ತಿದೆ.

**ಪ್ರೊ॥ ರವಿವರ್ಮಕುಮಾರ್** : ಇದೊಂದು ಅನುಕೂಲ ಸಿಂಧು ಸಿದ್ಧಾಂತ. ಇದು ಸೂಕ್ಷ್ಮ ವಿಷಯ. ಪಟ್ಟಭದ್ರ ಹಿತಾಸಕ್ತಿಗಳು ಸೃಷ್ಟಿಸಿದ ಸಿದ್ಧಾಂತ. ಇಂತಹ ವಿಷಯಗಳು ಜನಸಾಮಾನ್ಯರಲ್ಲಿ ಭಾವಾವೇಶ ಹುಟ್ಟುಹಾಕುತ್ತವೆ. ವಸ್ತುಸ್ಥಿತಿ ಹೇಳುವುದಾದರೆ ನಾನು ಯಾವ ಜಾತಿಗೂ ಸೇರುವವನಲ್ಲ. ಮಕ್ಕಳ ವಿಷಯದಲ್ಲಿ ಯಾವುದೇ ಜಾತಿ, ಧರ್ಮ ಘೋಷಿಸಿಕೊಂಡಿಲ್ಲ. ಮಕ್ಕಳನ್ನೇ ಕೇಳಿದೆ. ಅವರೂ ಜಾತ್ಯತೀತ ಮನೋಭಾವವನ್ನೇ ಹೊಂದಿದ್ದಾರೆ. ದೇವನೂರ ಮಹಾದೇವರವರು ಅವರ ಮಕ್ಕಳು ಯಾವುದೇ ಮೀಸಲಾತಿ ತೆಗೆದುಕೊಂಡಿಲ್ಲ. ಆದರೆ, ಬಹುತೇಕ ಜನರು ಜಾತಿಯಿಲ್ಲ ಎಂದು ಹೇಳುವವರೂ




ಮೀಸಲಾತಿ ವಿಷಯ ಬಂದಾಗ ಜಾತಿ ನೀಡಿ ಸೌಲಭ್ಯ ಪಡೆಯುತ್ತಾರೆ. ಹಾಗೆ ಜಾತಿಯಿಂದ ನಮ್ಮಲ್ಲಿ ಅನಾನುಕೂಲಗಳಾಗಿಲ್ಲ ಎನ್ನುವುದಾದರೆ ಡಾ॥ ಬಿ. ಆರ್. ಅಂಬೇಡ್ಕರ್ ಯಾಕೆ ಹೋರಾಟ ಮಾಡಬೇಕಿತ್ತು? ಸತ್ಯಸ್ಥಿತಿ ಅದಲ್ಲ. ಇದೊಂದು ವಿತಂಡವಾದ ಅಷ್ಟೇ. ಅಂಬೇಡ್ಕರ್ ಅವರು ಜಾತಿವಿನಾಶದ ಕುರಿತು ಸ್ಪಷ್ಟವಾದ ನಿಲುವು ತಳೆದಿದ್ದರು. ಜಾತಿ ವ್ಯವಸ್ಥೆ ಭ್ರಮಾತ್ಮಕ ಎನ್ನುವುದಾದರೆ ಒಬ್ಬ ಭಂಗಿ ಬ್ರಾಹ್ಮಣನಾದ ಒಂದೇ ಒಂದು ಉದಾಹರಣೆ ತೋರಿಸಿ, ಬಾಲ ಕಾರ್ಮಿಕರ ಬಗ್ಗೆ ಸಮೀಕ್ಷೆ ಮಾಡಿದಾಗ ಅವರಲ್ಲಿ ಒಬ್ಬನೇ ಒಬ್ಬ ಬ್ರಾಹ್ಮಣ ಹುಡುಗ ಸಿಗಲಿಲ್ಲ. ಹೋಟೆಲ್‌ನಲ್ಲಿ ಕಾರ್ಮಿಕರು ಬ್ರಾಹ್ಮಣರು ಯಾಕಿರುತ್ತಾರೆಂದರೆ ದಲಿತರನ್ನು ಕೆಲಸಕ್ಕೆ ತೆಗೆದುಕೊಂಡರೆ ವ್ಯಾಪಾರ ನಡೆಯುವುದಿಲ್ಲವೆಂಬ ಆತಂಕ ಇರುತ್ತದೆ.

**ಪಾರ್ಥಸಾರಥಿ** : ದಲಿತರು ಮತ್ತು ಹಿಂದುಳಿದವರು ತಮ್ಮ ಜಾತಿಗಳ ಬಗ್ಗೆ ಹೆಚ್ಚು ಅಭಿಮಾನಿಗಳಾಗಿರುವುದು ಯಾಕೆ ?

**ಪ್ರೊ॥ ರವಿವರ್ಮಕುಮಾರ್** : ಅದು ಒಂದು ಐಡೆಂಟಿಟಿ ಪ್ರಶ್ನೆ. ಜಾತಿ ಇಲ್ಲದಿದ್ದರೆ ಆ ವ್ಯಕ್ತಿ ಅಂತರ್ ಪಿಶಾಚಿ ಆಗಿ ಬಿಡ್ತಾನೆ. ಜಾತಿಯಿಂದ ಸಿಗುವ ಮೀಸಲಾತಿಯು ಜಾತಿಯ ಜೊತೆಗೆ ಗುರುತಿಸಿ ಕೊಳ್ಳದಿದ್ದರೆ ಸಿಗುವುದಿಲ್ಲ.

**ಡಾ॥ ಎಲ್. ಹನುಮಂತಯ್ಯ** : ಜಾತಿ ಎಂಬುದು ಈ ದೇಶದ ವಾಸ್ತವ. ಪರಿಶಿಷ್ಟವರ್ಗ ಎಂದರೆ ಅದು ಒಂದೇ ಜಾತಿಯಲ್ಲ. ಹಲವಾರು ಜಾತಿಗಳು ಇದರಲ್ಲಿ ಸೇರಿಕೊಂಡಿವೆ. ಆದರೆ ಈ ಜಾತಿಗಳ ನಡುವೆಯೂ ವೈವಾಹಿಕ ಸಂಬಂಧ ಜಾರಿಯಲ್ಲಿಲ್ಲದಿರುವುದು ವಿಪರ್ಯಾಸ. ಜಾತಿಯಲ್ಲಿ ಮತ್ತು ಅಭಿವೃದ್ಧಿಯಲ್ಲಿ ಹಿಂದುಳಿದವರಿಗೆಲ್ಲಾ ಮುಂದುವರಿದವರಿಗೆ ಸಿಗುವ ಸೌಲಭ್ಯ, ಸವಲತ್ತುಗಳು ಯಾವುವೆಂದು ಗೊತ್ತಿರಬೇಕು.

**ಡಾ॥ ವಸುಂಧರಾ ಭೂಪತಿ** : ಜಾತಿ ಜನಗಣತಿಯಿಂದ ಜಾತಿ ತಾರತಮ್ಯ ಹೆಚ್ಚಾಗುವುದಿಲ್ಲವೆ? ಜಾತ್ಯತೀತ ವ್ಯವಸ್ಥೆಗೆ ಧಕ್ಕೆ ಬರುತ್ತದೆಂಬ ವಾದಕ್ಕೆ ನಿಮ್ಮ ಉತ್ತರವೇನು ?

**ಪ್ರೊ॥ ರವಿವರ್ಮಕುಮಾರ್** : ಜಾತಿ ಸಮಾನತೆಯನ್ನು ನೀಡುವುದೇ ಜಾತಿ ಜನಗಣತಿಯ ಮುಖ್ಯ ಉದ್ದೇಶ. ಇದಕ್ಕೆ ಡಾ॥ ಅಂಬೇಡ್ಕರ್‌ರವರು ಪ್ರಾಮಾಣಿಕ ಪ್ರಯತ್ನ ಮಾಡಿದರು. ರಾಜ್ಯಾಂಗ ರಚನಾ ಸಮಿತಿಯಲ್ಲಿ

ಜಾತಿವಿನಾಶದ ಪ್ರಸ್ತಾವನೆಯನ್ನು ಅವರು ಮುಂದಿಟ್ಟರು. ಆದರೆ ಇದನ್ನು ಒಪ್ಪದ ಕೆ. ಎಂ. ಮುನ್ಷಿ ಜಾತಿ ಬಗ್ಗೆ ಪ್ರಸ್ತಾಪಿಸದೆ "ಅಸ್ಪೃಶ್ಯತೆ ನಿವಾರಣೆ" ಘೋಷಣೆ ಮುಂದೆ ಮಾಡಿದರು. ಅದನ್ನು ಎಲ್ಲರೂ ಒಪ್ಪಿದರು. ಹಾಗಾಗಿ ಜಾತಿನಿರ್ಮೂಲನವೆಂಬ ಡಾ|| ಅಂಬೇಡ್ಕರ್ ರವರ ಘೋಷಣೆಗೆ ಪ್ರಾಮುಖ್ಯತೆ ಸಿಗಲಿಲ್ಲ. ಗಾಯವಾದಾಗ ಕೇವಲ ಕೀವು ತೆಗೆದರೆ ಗಾಯ ವಾಸಿಯಾಗುವುದಿಲ್ಲ. ಗಾಯಕ್ಕೆ ಕಾರಣವಾದ ಸೋಂಕು ನಿವಾರಣೆ ಆಗಬೇಕು.

ಜಾತಿ ಜನಗಣತಿ ಮಾಡದೆ ಹೋದರೆ ಜಾತೀಯತೆ ಹೆಚ್ಚಾಗುತ್ತದೆ. ಬಲಾಢ್ಯ ಜಾತಿಗಳು ತಮ್ಮ ಜಾತಿ ಪ್ರಾಬಲ್ಯವನ್ನು ಮತ್ತಷ್ಟು ಹೆಚ್ಚಿಸಿಕೊಳ್ಳುತ್ತವೆ. ಕೆಳಜಾತಿಗಳನ್ನು ಮೂಲೆ ಗುಂಪು ಮಾಡುತ್ತವೆ. ಸಂಘಪರಿವಾರ ಜಾತಿ ಜನಗಣತಿಗೆ ವಿರೋಧವಾಗಿದೆ. ಅದಕ್ಕೆ ಬ್ರಾಹ್ಮಣರ ಯಜಮಾನಿಕೆ ಮುಂದುವರಿಯುವುದು ಬೇಕಾಗಿದೆ. ಪೇಶ್ವೆಗಳ ಕಾಲದಲ್ಲಿನ ಭಾರತದಲ್ಲಿನ ವ್ಯವಸ್ಥೆ ಅವರಿಗೆ ಬೇಕಾಗಿದೆ.

**ಡಾ|| ಎಲ್. ಹನುಮಂತಯ್ಯ**: ಜಾತಿಗಳ ಬಗ್ಗೆ ಸಮಗ್ರ ವಿವರ ಬೇಕಾದರೆ ಜಾತಿಗಳ ಜನಗಣತಿ ನಡೆಯಲೇ ಬೇಕು. ಯಾರು ಮುಂದುವರಿದಿದ್ದಾರೆ ಮತ್ತು ಯಾರು ಹಿಂದುಳಿದಿದ್ದಾರೆ ಎಂದು ತಿಳಿಯಬೇಕಾದರೆ ಜಾತಿ ಜನಗಣತಿ ನಡೆಯಲೇಬೇಕು. ಹಿಂದುಳಿಯುವಿಕೆಗೆ ಮಾನದಂಡ ನಿಗದಿಪಡಿಸಬೇಕಾದರೆ ಇಂಥ ಸಮೀಕ್ಷೆ ಅವಶ್ಯಕ ಮತ್ತು ಅಗತ್ಯ.

**ಡಾ|| ಜಿ. ರಾಮಕೃಷ್ಣ**: ಯಾರು ಹಿಂದುಳಿದವರು ಎಂದು ಗೊತ್ತಾದರೆ ಅವರಿಗೆ ಪರಿಹಾರ ನೀಡುವ ಸಾಮರ್ಥ್ಯ ನಮ್ಮ ವ್ಯವಸ್ಥೆಗೆ ಇದೆಯೆ ? ಕೃಷಿ ಕಾರ್ಮಿಕರ ಬಗ್ಗೆ ಯಾವ ಕಾನೂನೂ ಇಲ್ಲ. ಅವರಲ್ಲಿ ಬೇರೆಬೇರೆ ಜಾತಿಯವರಿದ್ದಾರೆ.

**ಪ್ರೊ|| ರವಿವರ್ಮಕುಮಾರ್**: ಖಂಡಿತ ಸಾಧ್ಯವಿದೆ. ಜಾತಿ ಜನಗಣತಿಯಿಂದ ಹಿಂದುಳಿದವರ ಸಮಗ್ರ ಚಿತ್ರಣ ಸಿಗಬಹುದು. ಆಗ ಅವರಲ್ಲಿ ಜಾಗೃತಿ ಮೂಡಿಸಲು ಸಾಧ್ಯವಾಗುತ್ತದೆ.

**ಡಾ|| ಎಲ್. ಹನುಮಂತಯ್ಯ**: ಆಂಧ್ರದಲ್ಲಿ ಪರಿಶಿಷ್ಟವರ್ಗದಲ್ಲಿಯೇ ಹಿಂದುಳಿದ, ಅತಿ ಹಿಂದುಳಿದ ಎಂದು ವಿಂಗಡಣೆ ಮಾಡಲಾಗಿದೆ. ಮೀಸಲಾತಿ ಪ್ರಶ್ನೆ ಬಂದರೆ ಅತಿ ಹಿಂದುಳಿದವರಿಗೆ ಮೊದಲ ಆದ್ಯತೆ ಸಿಗುತ್ತದೆ.

**ಪ್ರೊ|| ರವಿವರ್ಮಕುಮಾರ್** : ಜಾತಿ ಎಂಬುದು ಬಾಹ್ಯವಾಗಿಯಾಗಲಿ, ಅಂತರಂಗದಿಂದಾಗಲೀ ಚಲನಶೀಲವಾಗಿಲ್ಲ. ಜಾತಿಯಲ್ಲಿ ಚಲನಶೀಲತ ಇಲ್ಲ. ಅದು ಜಡವಾಗಿದೆ.

**ಡಾ|| ಜಿ. ರಾಮಕೃಷ್ಣ**: ಜಾತಿ ಜನಗಣತಿಯಿಂದ ದೊರಕುವ ಅಂಕಿ-ಅಂಶಗಳಿಂದ ಯಾವ ಪರಿಹಾರ ಮಾರ್ಗ ಕಂಡುಹಿಡಿಯಬಹುದು ?

**ಪ್ರೊ|| ರವಿವರ್ಮಕುಮಾರ್** : ಜಾತಿ ಜನಗಣತಿ ಯಿಂದ ಖಚಿತ ಅಂಕಿ-ಅಂಶಗಳು ದೊರಕಿದ ನಂತರ ಹಿಂದುಳಿದವರಿಗಾಗಿ ಪರಿಹಾರ ಮಾರ್ಗ ರೂಪಿಸಬಹುದು. ಆದರೆ ಸರ್ಕಾರಿ ನೌಕರಿಯಲ್ಲಿ ಮೀಸಲಾತಿ ಯಿಂದ ಸಿಗುವ ಅವಕಾಶ ಮಾತ್ರವಲ್ಲ, ಅವರು ಏಕೆ ಹಿಂದುಳಿದಿದ್ದಾರೆ ಎಂಬುದು ತಿಳಿಯುತ್ತದೆ. ಬಡತನ, ಅನಕ್ಷರತೆ, ನಿರುದ್ಯೋಗ ಸಮಸ್ಯೆಗಳಿಗೆ ಕೂಡ ಪರಿಹಾರ ದೊರಕಿಸಬಹುದು. ಮೀಸಲಾತಿಯನ್ನೇ ಎಲ್ಲರೂ ಬೃಹತ್ ಆಗಿ ಮಾಡುತ್ತಿದ್ದಾರೆ. ಅದೊಂದು ಕನಿಷ್ಠ ಸೌಲಭ್ಯ ಅಷ್ಟೇ. ಅತಿ ಹಿಂದುಳಿದವರ ಪಟ್ಟಿ ಮಾಡಿ ೧, ೨, ೩, ೪ ಎಂದು ಆಯಾ ಜಾತಿಗಳ ಹಿಂದುಳಿದಿರುವಿಕೆಗೆ ಅನುಗುಣವಾಗಿ ಒಂದೊಂದು ವಾರಕ್ಕೆ ಒಂದೊಂದು ಜಾತಿಯ ಸಮಸ್ಯೆಗಳನ್ನು ಪರಿಹರಿಸಲು ಸಾಧ್ಯವಿದೆ. ನಮ್ಮ ರಾಜ್ಯದಲ್ಲಿ ೨೦ ಜಾತಿಗಳು ಶೇಕಡ ೦.೧ಕ್ಕಿಂತ ಹೆಚ್ಚು ಇವೆ. ಒಂದು ಸಾವಿರಕ್ಕೂ ಮಿಕ್ಕ ಜಾತಿಗಳು ಶೇಕಡ ೦.೧ಕ್ಕಿಂತ ಕಡಿಮೆ ಇವೆ. ಇವೆಲ್ಲವೂ ಸಣ್ಣ ಸಣ್ಣ ಜಾತಿಗಳು. ವೃತ್ತಿ ಆಧಾರಿತವಾಗಿರುವವುಗಳು. ಮಡಿವಾಳ, ಕುಂಬಾರ ಮುಂತಾದ ಜಾತಿಗಳು. ಸಾಮಾನ್ಯವಾಗಿ ಎಲ್ಲರೂ ನಿರ್ಗತಿಕರಾಗಿರುವುದಿಲ್ಲ. ಆಯಾ ಜಾತಿಯ ಒಟ್ಟು ಸಂಖ್ಯೆಯಲ್ಲಿ ಶೇಕಡ ೨೦ ಮಾತ್ರ ನಿರ್ಗತಿಕರಿರಬಹುದು. ಆದ್ದರಿಂದ ಅಂಕಿ-ಅಂಶಗಳು ದೊರೆತರೆ ತುಂಬ ಸುಲಭವಾಗಿ ಪರಿಹಾರ ದೊರಕಿಸಿಕೊಡುವುದು ಸಾಧ್ಯ.

**ಪಾರ್ಥಸಾರಥಿ**: ಅರ್ಥಶಾಸ್ತ್ರಜ್ಞ ರಣಧೀರ್ ಸಿಂಗ್‌ರವರು ಮಾನವ ಅಭಿವೃದ್ಧಿ ಸೂಚ್ಯಂಕವನ್ನು ಹಳ್ಳಿಗಳಿಗನುಸಾರ ಮಾಡಬೇಕು ಎಂದಿದ್ದಾರಲ್ಲ.

**ಪ್ರೊ|| ರವಿವರ್ಮಕುಮಾರ್** : ಹೌದು. ಅದನ್ನೂ ಮಾಡಬೇಕು.

**ಡಾ|| ಎಲ್. ಹನುಮಂತಯ್ಯ** : ಅಲೆಮಾರಿಗಳಿಗೆ ಮನೆಯಿಲ್ಲ. ಅವರಿಗೆ ಮನೆ



ಕಟ್ಟಬೇಕೆನ್ನುವ ಯೋಚನೆ ಬಂದಿಲ್ಲ. ಎಲ್ಲ ಸೇರಿ ಅವರಿಗೆ ೨೦,೦೦೦ ಮನೆ ಕಟ್ಟಿಕೊಟ್ಟರೆ ಆಗುತ್ತದೆ. ಜಾಗ ಗುರುತಿಸಿ ಕಟ್ಟಿಕೊಡಬೇಕು. ಆದರೆ ಅವರು ಒಂದೆಡೆ ಇರಬೇಕೆಂದರೆ ಅವರಿಗೊಂದು ಜೀವನ ಕಲ್ಪಿಸಬೇಕು. ನಮ್ಮ ವ್ಯವಸ್ಥೆಯ ವಿಪರ್ಯಾಸ ಏನೆಂದರೆ ಅವರಿಗೆ ಬೇಕಾದದ್ದು ನಾವು ಕೊಡೋದಿಲ್ಲ, ನಾವು ಕೊಟ್ಟದ್ದು ಅವರಿಗೆ ಬೇಕಿರಲ್ಲ. ಈಗ ನಮ್ಮ ದೇಶದ ಯೋಜನಾ ಆಯೋಗ ಇದ್ದಹಾಗೆ. ಜನರ ಸಮಸ್ಯೆಯೇ ಬೇರೆ, ಅವರು ಯೋಜಿಸುವ ರೂಪು-ರೇಷೆಗಳೇ ಬೇರೆ ಇರುತ್ತವೆ. ಆಂಧ್ರಪ್ರದೇಶದಲ್ಲಿ ಈಗಿರುವಂತಹ ಮೀಸಲಾತಿ ಬರುವುದಕ್ಕೆ ಮುಂಚೆ ಇಂಜಿನಿಯರಿಂಗ್ ಕಾಲೇಜುಗಳಲ್ಲಿ ೧೦೦ ಜನ ಮಾತ್ರ ಇಂಜಿನಿಯರ್ ಆಗಿದ್ದರು. ಈಗ ಹೆಚ್ಚಿನ ಮೀಸಲಾತಿ ಬಂದನಂತರ ೫೦೦ ಜನ ಇಂಜಿನಿಯರ್ ಆಗಿದ್ದಾರೆ. ಹೆಚ್ಚು ಜನರು ವೈದ್ಯರಾಗಿದ್ದಾರೆ, ಹೆಚ್ಚು ಶಿಕ್ಷಕರಿದ್ದಾರೆ. ಅವರ ಆರ್ಥಿಕ ಮಟ್ಟ ಹೆಚ್ಚಿದೆ. ಅವರ ಸಾಮಾಜಿಕ ಅಂತಸ್ತು ಹೆಚ್ಚಾಗಿದೆ. ಹೆಚ್ಚು ಜನ ಇದರಿಂದ ಪ್ರಭಾವಿತರಾಗಿ ಶಿಕ್ಷಣದತ್ತ ಮುಖ ಮಾಡುತ್ತಾರೆ.

**ಡಾ|| ಜಿ. ರಾಮಕೃಷ್ಣ** : ದೆಹಲಿಯ ಅಖಿಲ ಭಾರತ ವೈದ್ಯಕೀಯ ಸಂಸ್ಥೆಯಲ್ಲಿ ಒಬ್ಬ ದಲಿತ ವಿದ್ಯಾರ್ಥಿ ಸೀಟು ಪಡೆಯುವುದರಿಂದ ಹಿಡಿದು ಎಲ್ಲ ಕಡೆಗೂ ಮೀಸಲಾತಿಗಾಗಿ ಹೋರಾಟ ನಡೆಸಬೇಕಾದಾಗ 'ನಾನು ವೈದ್ಯ ಆಗದಿದ್ದರೂ ಪರವಾಗಿಲ್ಲ, ಈ ಸಂಸ್ಥೆ ನನ್ನನ್ನು ಹೋರಾಟಗಾರನನ್ನಾಗಿ ರೂಪಿಸಿತು', ಎಂದಿದ್ದಾನೆ.

**ಪ್ರೊ|| ರವಿವರ್ಮಕುಮಾರ್** : ಕಾಕತೀಯ ವಿಶ್ವ ವಿದ್ಯಾಲಯದಲ್ಲಿ, ಪ್ರೊ|| ಸಂಪಾತಿಯವರು ದಲಿತರು, ಹಿಂದುಳಿದವರಿಗೆ ಹೆಚ್ಚಿನ ಅವಕಾಶಗಳನ್ನು ಕೊಟ್ಟಿದ್ದರಿಂದ ಅನೇಕರು ವಿದ್ಯಾವಂತರಾಗಲು ಸಾಧ್ಯವಾಯಿತು. ಪ್ರತಿಭೆ ಇದ್ದವರಿಗೆ ಅವಕಾಶ, ತರಬೇತಿ ಕೊಟ್ಟಲ್ಲಿ ಖಂಡಿತ ಅವರ ಜೀವನಮಟ್ಟ ಸುಧಾರಣೆಯಾಗುತ್ತದೆ. ನಾನು ಮೊದಲೇ ಹೇಳಿದ ಹಾಗೆ ಜನಗಣತಿಯಲ್ಲಿ ಜಾತಿಯಾಧಾರಿತ ಸಮೀಕ್ಷೆ ನಡೆದಲ್ಲಿ ಒಂದೇ ವಾರದಲ್ಲಿ ಪರಿಹಾರ ದೊರಕಿಸಲು ಸಾಧ್ಯ. ೫೨ ವಾರಗಳಲ್ಲಿ ೩೦ ಜಿಲ್ಲಾಧಿಕಾರಿಗಳಿಗೆ ೫೨ ಜಾತಿಗಳಿಗೆ ಒಂದೊಂದು ವಾರ ನಿಗದಿ ಮಾಡಬೇಕು. ಉದಾಹರಣೆಗೆ ಹೇಳುವುದಾದರೆ ಕುಂಬಾರರಿಗೆ ಇಡೀ ರಾಜ್ಯದಲ್ಲಿ ಒಂದು ವಾರ ನಿಗದಿಪಡಿಸಬೇಕು. ಅದೇರೀತಿ ಮಡಿವಾಳರಿಗೆ ಇಡೀ ರಾಜ್ಯದಲ್ಲಿ ಒಂದು ವಾರ ನಿಗದಿಪಡಿಸಬೇಕು. ಅವರ ನಿರ್ದಿಷ್ಟ ಸಮಸ್ಯೆಗಳ ಕುರಿತು ಅಹವಾಲುಗಳನ್ನು ಪಡೆಯಬೇಕು. ೩೦ x ೫೦ = ೧೫೦೦ ಜಾತಿಗಳ ಸಮೀಕ್ಷೆ ನಡೆಸಬಹುದು.

**ಡಾ|| ಜಿ. ರಾಮಕೃಷ್ಣ** : ಇದರಿಂದ ಏನಾಗುತ್ತದೆ ? ಪರಿಹಾರ ಏನು ನೀಡಲು ಸಾಧ್ಯ ?

**ಪ್ರೊ|| ರವಿವರ್ಮಕುಮಾರ್** : ಯಾವ ಕಾರಣದಿಂದ ಹಿಂದುಳಿದವರಾಗಿದ್ದಾರೆ ಎಂಬುದನ್ನು ಗಮನಿಸಿ ಅವರಿಗೆ ಹಣಕಾಸಿನ ಸಹಾಯ ಮಾಡಿದಲ್ಲಿ ಅವರ ಜೀವನಮಟ್ಟ ಸುಧಾರಿಸ ಬಹುದಾಗಿದೆ. ಅವರ ಜೀವನೋಪಾಯಕ್ಕಾಗಿ ದಾರಿ ತೋರಿಸಬಹುದಾಗಿದೆ.

**ಡಾ|| ಎಲ್. ಹನುಮಂತಯ್ಯ** : ಈ ಕಾಲದಲ್ಲೂ ನಮ್ಮ ರಾಜ್ಯದಲ್ಲಿ ದಲಿತರ ತಲೆ ಮೇಲೆ ಮಲ ಹೊರುವ ಪದ್ಧತಿ ಇದೆಯೆಂಬುದು ನಾಚಿಕೆಗೇಡಿನ ಸಂಗತಿ. ತಹಸೀಲ್ದಾರರಿಗೆ ಜವಾಬ್ದಾರಿ ನೀಡಿ ಎಲ್ಲೆಲ್ಲಿ ಮಲ ಹೊರುವ ಪದ್ಧತಿ ಇದೆಯೆಂದು ಗುರುತಿಸಿ ಅವರಿಗೆ ಪರ್ಯಾಯ ವೃತ್ತಿ ಕಲ್ಪಿಸಲು ನಿರ್ದೇಶಿಸಬೇಕು. ಉದಾಹರಣೆಗೆ, ಒಂದು ಹಸು ಕೊಡಿಸಬಹುದು, ಒಂದು ಎಕರೆ ಜಮೀನು ನೀಡಿ ದುಡಿಯಲು ಹೇಳಬಹುದು. ಒಂದೊಂದು ಕುಟುಂಬಕ್ಕೆ ಒಂದೊಂದು ಹಸು ಕೊಟ್ಟಲ್ಲಿ ಅವರ ಜೀವನಕ್ಕೆ ದಾರಿಯಾಗುತ್ತದೆ. ತಮ್ಮ ಜವಾಬ್ದಾರಿ ನಿರ್ವಹಿಸುವಲ್ಲಿ ವಿಫಲರಾದರೆ ಅವರನ್ನು ನೌಕರಿಯಿಂದ ವಜಾ ಮಾಡುತ್ತೇವೆ ಅಂದಾಗಲೇ ಖಂಡಿತ ಈ ಮಲ ಹೊರುವ ಪದ್ಧತಿಯ ಸಂಪೂರ್ಣ ನಿಷೇಧ ಸಾಧ್ಯ.

**ಡಾ|| ವಸುಂಧರಾ ಭೂಪತಿ** : ಜಾತಿ ಜನಗಣತಿಯು ಲಿಂಗಭೇದ ಮತ್ತು ಲಿಂಗ ಅಸಮಾನತೆಯನ್ನು ತೊಡೆದುಹಾಕಲು ಸಹಾಯ ಮಾಡುತ್ತದೆಯೆ ?

**ಪ್ರೊ|| ರವಿವರ್ಮಕುಮಾರ್** : ಖಂಡಿತ ತೊಡೆದುಹಾಕುತ್ತದೆ. ನಾವು ಇದರಿಂದ ಲಿಂಗ ಅನುಪಾತ ಇಳಿಮುಖವಾಗುತ್ತಿರುವ ಅಂಶಗಳನ್ನು ಯಾವ ಜಾತಿಯಲ್ಲಿ ಅಧಿಕ ಎಂದು ಗುರುತಿಸಬಹುದು. ಹೆಣ್ಣುಭ್ರೂಣಗಳ ಹತ್ಯೆ ಸಂಖ್ಯೆ ಮತ್ತು ಯಾವ ಜಾತಿಯಲ್ಲಿ ಹೆಚ್ಚು ಶಿಶುಗಳ ಮರಣ ಹೆಚ್ಚು ಎಂಬುದನ್ನು ಗುರುತಿಸಬಹುದಾಗಿದೆ.

**ಡಾ|| ಎಲ್. ಹನುಮಂತಯ್ಯ** : ಯಾವ್ಯಾವ ಜಾತಿಗಳಲ್ಲಿ ಬಾಲ್ಯವಿವಾಹ ಜರುಗುತ್ತದೆಂದು ನಿಖರವಾಗಿ ಪತ್ತೆಹಚ್ಚಬಹುದು. ಯಾವ್ಯಾವ ಜಾತಿಗಳಲ್ಲಿ ಲಿಂಗಾನುಪಾತ ಇಳಿಮುಖ, ಶಾಲೆಬಿಟ್ಟ ಮಕ್ಕಳ ಸಂಖ್ಯೆ ಎಷ್ಟು ತಿಳಿಯುತ್ತದೆ.






**ಡಾ॥ ವಸುಂಧರಾ ಭೂಪತಿ**: ಜಾತಿ ಜನಗಣತಿಯ ಬಗ್ಗೆ ಡಾ॥ ರಾಮ ಮನೋಹರ್ ಲೋಹಿಯಾ ನಿಲುವೇನಿತ್ತು?

**ಪ್ರೊ॥ ರವಿವರ್ಮಕುಮಾರ್** : ರಾಮ ಮನೋಹರ್ ಲೋಹಿಯಾರವರು ''ಆಡಳಿತ ಮತ್ತು ಸಶಸ್ತ್ರಪಡೆಗಳ ನೇಮಕಾತಿಗಾಗಿ ಇತರ ಅರ್ಹತೆಗಳ ಜೊತೆಗೆ ಶೂದ್ರ ಮತ್ತು ದ್ವಿಜರ ನಡುವಿನ ವಿವಾಹವನ್ನು ಒಂದು ಅರ್ಹತೆ ಎಂಬುದಾಗಿ ಪರಿಗಣಿಸಿದ ದಿನದಂದು ಮತ್ತು ಸಹಭೋಜನದ ನಿರಾಕರಣೆಯನ್ನು ಒಂದು ಸಕಾರಾತ್ಮಕ ಅನರ್ಹತೆ ಎಂಬುದಾಗಿ ಪರಿಗಣಿಸಿದ ದಿನದಂದು ಜಾತಿ ಕುರಿತ ಹೋರಾಟ ತೀವ್ರವಾಗಿ ಪ್ರಾರಂಭವಾಗುತ್ತದೆ'' ಎಂದಿದ್ದಾರೆ. ಮಿಲಿಟರಿ ಮತ್ತು ಪೊಲೀಸ್ ಪಡೆಗಳಲ್ಲಿ ನೌಕರಿಗೆ ಸೇರಿಸಿಕೊಳ್ಳುವಾಗ ಅಂತರ್ಜಾತಿ ವಿವಾಹ ಒಂದು ಅರ್ಹತೆಯಾಗಬೇಕು. ಆಗ ಮಾತ್ರ ದೇಶದಲ್ಲಿ ಹೆಚ್ಚುತ್ತಿರುವ ಕೋಮುಗಲಭೆಗಳನ್ನು ತಡೆಗಟ್ಟಲು ಮತ್ತು ಕೋಮುಸೌಹಾರ್ದತೆ ಮೂಡಿಸಲು ಸಾಧ್ಯ. ಜಾತಿ ಜನಗಣತಿಯಿಂದ ಜಾತಿವೈಷಮ್ಯ ಹೆಚ್ಚುತ್ತದೆಯೆನ್ನುವವರು ಅಂತರ್ಜಾತಿ ಮದುವೆಗೆ ಒಪ್ಪಲಿ.

**ಡಾ॥ ವಸುಂಧರಾ ಭೂಪತಿ** : ಜಾತಿ ಜನಗಣತಿಯ ಬಗ್ಗೆ ವಿವಿಧ ರಾಜಕೀಯ ಪಕ್ಷಗಳ ನಿಲುವು ಏನು ?

**ಪ್ರೊ॥ ರವಿವರ್ಮಕುಮಾರ್** : ಪಕ್ಷಾತೀತವಾಗಿ ಎಲ್ಲರೂ ಜಾತಿ ಜನಗಣತಿಗೆ ಒಪ್ಪಿರುವುದು ಸ್ವಾಗತಾರ್ಹ. ಕೆಲವು ಪಕ್ಷಗಳಲ್ಲಿ ಭಿನ್ನಾಭಿಪ್ರಾಯವಿದ್ದರೂ ಅದನ್ನು ವಿರೋಧಿಸಿಲ್ಲ. ಆದರೆ ಇದು ಜನಗಣತಿಯ ಒಂದು ಭಾಗವಾಗಬೇಕು. ಬೇರೆ ಇನ್ನಾವುದೇ ರೀತಿಯಲ್ಲಿ, ಯಾವ ಖಾಸಗಿ ಸಂಘಸಂಸ್ಥೆಗಳಿಗೂ ಈ ಜಾತಿಗಣತಿ ಮಾಡಲು ಬಿಡಬಾರದು. ಜನಗಣತಿಯೆಲ್ಲಾ ಸರ್ಕಾರದಿಂದಲೇ ನಡೆಯಬೇಕು. ಆಗ ಮಾತ್ರ ನಿಷ್ಪಕ್ಷಪಾತವಾಗಿರುತ್ತದೆ.

**ಡಾ॥ ವಸುಂಧರಾ ಭೂಪತಿ** : ಜಾತಿ ಜನಗಣತಿ ಕುರಿತು ಭಾರತದ ಸರ್ವೋಚ್ಚ ನ್ಯಾಯಾಲಯ ಏನು ಹೇಳಿದೆ ? ಭಾರತ ಸರ್ಕಾರ ಕೈಗೊಳ್ಳಬಹುದಾದ ಕ್ರಮಗಳೇನು ?

**ಪ್ರೊ॥ ರವಿವರ್ಮಕುಮಾರ್** : ಸರ್ವೋಚ್ಚ ನ್ಯಾಯಾಲಯವು ಎಲ್ಲ ಜಾತಿಗಳ ಗಣತಿ ಆಗಬೇಕೆಂದು ಘಂಟಾಘೋಷವಾಗಿ ಹೇಳಿದೆ. ಇತ್ತೀಚಿಗಿನ 'ನಾಗರಾಜ್' ಮೊಕದ್ದಮೆಯಲ್ಲಿ ಅಂಕಿ-ಅಂಶ ಇಲ್ಲದೆ ಮೀಸಲಾತಿ ನೀಡುವುದಕ್ಕೆ ಬರುವುದಿಲ್ಲ ಎಂಬ ತೀರ್ಪು ಬಂದಿದೆ. ಭಾರತ ಸರ್ಕಾರವು ಫೆಬ್ರವರಿ ತಿಂಗಳಲ್ಲಿ ಜಾತಿ ಜನಗಣತಿ ನಡೆಸುವುದಾಗಿ ತಿಳಿಸಿದೆ.




**ಡಾ॥ ಜಿ. ರಾಮಕೃಷ್ಣ** : ಈ ಸಲ ಜಾರಿಯಾಗಲು ಸಾಧ್ಯವೆ ?

**ಪ್ರೊ॥ ರವಿವರ್ಮಕುಮಾರ್** : ಫೆಬ್ರವರಿ ತಿಂಗಳಲ್ಲಿ ನಡೆಸಲೇಬೇಕು ಎಂಬುದು ನಮ್ಮೆಲ್ಲರ ಒಕ್ಕೊರಲಿನ ಅಭಿಪ್ರಾಯ. ಈ ಫೆಬ್ರವರಿಯಲ್ಲಿ ಖಂಡಿತ ಆಗಲೇಬೇಕು.

**ಡಾ॥ ಎಲ್. ಹನುಮಂತಯ್ಯ** : ಜಾತಿ ಜನಗಣತಿ ನಡೆಯುತ್ತದೆ, ನಡೆಯಲೇಬೇಕು.

**ಸನತ್‌ಕುಮಾರ್ ಬೆಳಗಲಿ** : ಜಾತಿ ಜನಗಣತಿ, ಮೀಸಲಾತಿ ಇವುಗಳ ಅಂತಿಮ ಗುರಿ ಜಾತಿವಿನಾಶ ಆಗಬೇಕಲ್ಲವೆ ?

**ಪ್ರೊ॥ ರವಿವರ್ಮಕುಮಾರ್** : ಮೀಸಲಾತಿ ಒಂದು ಸಣ್ಣ ಪರಿಹಾರ ಅಷ್ಟೆ. ಮೀಸಲಾತಿಯಿಂದ ಸರ್ಕಾರಿ ನೌಕರಿಯಲ್ಲಿ ಸೂಕ್ತ ಪ್ರಾತಿನಿಧ್ಯ ಮಾತ್ರ ಆಗುತ್ತದೆ. ಆದರೆ ಜಾತಿ ಜನಗಣತಿಯಿಂದ ಇದಕ್ಕಿಂತ ಹೆಚ್ಚಿನ ಪರಿಹಾರ ದೊರೆಯುತ್ತದೆ.

**ಸನತ್‌ಕುಮಾರ್ ಬೆಳಗಲಿ** : ಜಾಗತೀಕರಣದಿಂದ ಉದ್ಯೋಗಾವಕಾಶಗಳು ಕಡಿಮೆಯಾಗಿವೆ. ಮೀಸಲಾತಿ ಎಲ್ಲಿ ಕೊಡಲು ಸಾಧ್ಯ ?

**ಪ್ರೊ॥ ರವಿವರ್ಮಕುಮಾರ್** : ಅಂಕಿ-ಅಂಶಗಳು ದೊರಕಿದಲ್ಲಿ ದಲಿತರಿಗೆ ಹಿಂದುಳಿದವರಿಗೆ ಶೇರ್ ಮತ್ತು ಸ್ಟಾಕ್‌ನಲ್ಲಿ ಶೇಕಡ ೫೦ ಭಾಗ ಶೇರ್ ಕೊಡಿ.

**ಡಾ॥ ಜಿ. ರಾಮಕೃಷ್ಣ**: ಪರಿಶಿಷ್ಟ ಜಾತಿ, ಪರಿಶಿಷ್ಟ ವರ್ಗದವರು ಶೇರ್ ಕೊಳ್ಳುವಷ್ಟು ಸಮರ್ಥರಾಗಿದ್ದಾರೇನು ?

**ಡಾ॥ ಎಲ್. ಹನುಮಂತಯ್ಯ** : ಕೊಳ್ಳುವವರಿಗೆ ಕೊಡಬಹುದು. ಅವರನ್ನು ಆರ್ಥಿಕವಾಗಿ ಸಬಲರನ್ನಾಗಿಸಬೇಕು. ವಿದ್ಯಾವಂತರಿಗೆ ಖಾಸಗಿ ಉದ್ಯೋಗ ದೊರಕಬೇಕು. ಎಷ್ಟೋ ಕ್ಷೇತ್ರಗಳಲ್ಲಿ ಮೀಸಲಾತಿ ಇಲ್ಲ. ಅಬಕಾರಿ ಇಲಾಖೆಯಲ್ಲಿ ದಲಿತರಿಗೆ ಲೈಸೆನ್ಸ್ ಕೊಟ್ಟಿಲ್ಲ. ಗಣಿಗಾರಿಕೆಯಲ್ಲಿ ಅವರಿಗೆ ಲೈಸೆನ್ಸ್ ಕೊಟ್ಟಿಲ್ಲ. ನ್ಯಾಯಬೆಲೆ ಅಂಗಡಿಗಳಲ್ಲಿ ಲೈಸೆನ್ಸ್ ಕೊಡುವುದಿಲ್ಲ. ಬ್ಯಾಂಕ್‌ನಲ್ಲಿ ಸ್ವಯಂ ಉದ್ಯೋಗಕ್ಕಾಗಿ ಸಾಲ ಕೇಳಲು ಅರ್ಜಿ ಸಲ್ಲಿಸಿದರೆ ಸಾಲ ನೀಡುವುದಿಲ್ಲ. ಜನಸಂಖ್ಯೆಯಲ್ಲಿ ಶೇಕಡ ೨೫ ಪರಿಶಿಷ್ಟಜಾತಿ, ಪರಿಶಿಷ್ಟವರ್ಗಗಳಿವೆ. ಅವರಿಗೆ ಸಾಲ ಸೌಲಭ್ಯದಲ್ಲಿ ಶೇಕಡ ೨೫ ಮೀಸಲಿಟ್ಟರೂ ಸಾಕು.

**ಪ್ರೊ॥ ರವಿವರ್ಮಕುಮಾರ್** : ಜಾತಿಗಳ ಸಂಖ್ಯೆ ನಿಖರವಾಗಿ ತಿಳಿದಲ್ಲಿ ಹಿಂದುಳಿದ ಮತ್ತು ದಲಿತ ಸಮುದಾಯಗಳಿಗೆ ಅರ್ಜಿ ಹಾಕಿದ ೧೫ ದಿನದಲ್ಲಿ ಕೆಲಸ ಸಿಗಬೇಕು. ಅರ್ಜಿ ಹಾಕಿದ ೧೫ ದಿನಗಳಲ್ಲಿ ಸಾಲ ದೊರೆಯಬೇಕು. ನಮ್ಮ ರಾಜ್ಯದಲ್ಲಿ ೨೭,೦೦೦ ಹಳ್ಳಿಗಳಿವೆ. ೩೬ ಸಾವಿರ ದಲಿತರ ಹಟ್ಟಿಗಳಿವೆ. ಒಂದೇ ಜಾತಿಗೆ ಸೀಮಿತವಾಗಿರುವವುಗಳು. ೨೦೦೧ರ ಜನಗಣತಿಯ ಪ್ರಕಾರ ಪ್ರತ್ಯೇಕ ಗೊಲ್ಲಹಟ್ಟಿ, ಕುರುಬರ ಹಟ್ಟಿ, ಮಾದಿಗರ ಹಟ್ಟಿಗಳಿವೆ. ಅಲ್ಲಿ ಅಸ್ಪೃಶ್ಯತೆ ಹೋಗಿಲ್ಲ, ನಿರುದ್ಯೋಗ ತಾಂಡವವಾಡುತ್ತಿದೆ, ಗ್ರಾಮದ ಸೌಲಭ್ಯಗಳಿಲ್ಲ. ನಾನು ಹಿಂದುಳಿದ ವರ್ಗಗಳ ಆಯೋಗದ ಅಧ್ಯಕ್ಷನಾಗಿದ್ದಾಗ ೧೪೦೦ ಗೊಲ್ಲರಹಟ್ಟಿ ಸರ್ವೆ ಮಾಡಿದೆ. ಒಂದು ಗೊಲ್ಲರಹಟ್ಟಿಯಲ್ಲಿಯೂ ಯಾವುದೇ ಸೌಕರ್ಯ ಇಲ್ಲ. ಅಲ್ಲಿ ಕರೆಂಟ್ ಹಾಕೋದಿಕ್ಕೆ ಅವರು ಬಿಟ್ಟಿಲ್ಲ. ಅವರಿಗೆ ಶಿಕ್ಷಣ ಬೇಕು. ಅಕ್ಷರ ಕಲಿತರೆ ಅವರ ಯೋಚನಾ ಧಾಟಿಯೇ ಬದಲಾಗುತ್ತದೆ. ಮೂಲಭೂತ ಸೌಲಭ್ಯ ದೊರೆಯಬೇಕು. ಕಿಶನ್ ಪಟ್ನಾಯಕ್‌ರವರು ತಾಲ್ಲೂಕು ಮಟ್ಟದ ಸಾಮಾಜಿಕ ಮತ್ತು ಶೈಕ್ಷಣಿಕ ಅಂಕಿ-ಅಂಶಗಳನ್ನು ಸರ್ವೆ ಮಾಡಿದರು. ನಿತೀಶ್‌ಕುಮಾರ್, ಅವರ ಶಿಷ್ಯ. ಹಾಗಾಗಿ ಅವರಿಗೆ ಬಿಹಾರದ ನರನಾಡಿಯ ಪರಿಚಯವಿದೆ. ಆದ್ದರಿಂದ ಅವರು ಯಶಸ್ವಿಯಾಗೋದಕ್ಕೂ ಸಾಧ್ಯವಾಗಿದೆ.

**ಪಾರ್ಥಸಾರಥಿ** : ಪ್ರತಾಪ್ ಭಾನು ಮೆಹ್ತಾ ಜಾತಿ ಜನಗಣತಿಯನ್ನು ವಿರೋಧಿಸಿದ್ದಾರಲ್ಲ, ಏಕೆ ?

**ಡಾ॥ ರವಿವರ್ಮಕುಮಾರ್** : ಮೆಹ್ತಾ ಎಂಬುದು ಏನು ? ಅವರು ಮೊದಲು ತಮ್ಮ ಜಾತಿಸೂಚಕ ಹೆಸರನ್ನು ತೆಗೆದುಹಾಕಲಿ. ಮೊದಲು ನಾವೆಲ್ಲಾ ಒಕ್ಕೊರಲಿನಿಂದ ಒತ್ತಾಯಿಸಬೇಕಾದ್ದು ೨೦೧೧ರಲ್ಲಿ ಜರುಗುವ ಜನಗಣತಿಯಲ್ಲಿ ಜಾತಿ ಸಮೀಕ್ಷೆ ಆಗಲೇಬೇಕು, ಎಂದು. 'ಹೊಸತು' ಅದಕ್ಕಾಗಿ ಆಗ್ರಹಿಸಬೇಕು.

**ಡಾ॥ ವಸುಂಧರಾ ಭೂಪತಿ** : ಸಂವಾದದಲ್ಲಿ ಭಾಗವಹಿಸಿದ ನಿಮಗೆಲ್ಲಾ 'ಹೊಸತು' ಪರವಾಗಿ ಧನ್ಯವಾದಗಳು. ಚರ್ಚೆ ಮುಂದುವರಿಯಲಿ. ಸದ್ಯದಲ್ಲೇ ಸರಿಯಾದ ತೀರ್ಮಾನ ಜಾರಿಯಾಗಲಿ ಎಂದು ಆಶಿಸೋಣ.


ಡಾ॥ ವಸುಂಧರಾ ಭೂಪತಿ
ನಂ. ೨೩೩, ೨ನೇ 'ಇ' ಅಡ್ಡರಸ್ತೆ, ೩ನೇ ಬ್ಲಾಕ್, ೩ನೇ ಹಂತ ಬಸವೇಶ್ವರನಗರ
ಬೆಂಗಳೂರು - ೫೬೦ ೦೭೯
























## ಪುಸ್ತಕ ಪ್ರಕಾಶನ

91, 9ನೇ ಮುಖ್ಯರಸ್ತೆ
ಸರಸ್ವತಿಪುರಂ
ಮೈಸೂರು - 570 009
ಫೋನ್ : 0821-2545774

ಪುಸ್ತಕ ಪ್ರಕಾಶನ

ಅಂಚೆ ಮೂಲಕ ತರಿಸಿಕೊಳ್ಳುವವರಿಗೆ :

## ಪುಸ್ತಕ ಪ್ರಕಾಶನ

ಬುಕ್‌ಪೋಸ್ಟ್ ಸರ್ವೀಸ್
ಪಿ. ಬಿ. ನಂ. 58, ಮೂಡಿಗೆರೆ
ಚಿಕ್ಕಮಗಳೂರು ಜಿಲ್ಲೆ-577132
ಫೋನ್ : 08263-228353, 240202
ಮೊಬೈಲ್ : 94482 03730
e-mail : praghu2@sancharnet.in

### ಪುಸ್ತಕ ಬೆಲೆ ಪಟ್ಟಿ - 2009*

**ಶ್ರೀ ಕೆ. ಪಿ. ಪೂರ್ಣಚಂದ್ರ ತೇಜಸ್ವಿ:**

| | |
|---|---|
| ಕಿರಗೂರಿನ ಗಯ್ಯಾಳಿಗಳು | 72.00 |
| ಕರ್ವಾಲೊ | 84.00 |
| ಚಿದಂಬರ ರಹಸ್ಯ | 150.00 |
| ಸಹಜ ಕೃಷಿ | 51.00 |
| ಪರಿಸರದ ಕತೆ | 87.00 |
| ಮಿಸ್ಸಿಂಗ್ ಲಿಂಕ್ | 72.00 |
| ಅಲೆಮಾರಿಯ ಅಂಡಮಾನ್ ಹಾಗೂ ಮಹಾನದಿ ನೈಲ್ | 93.00 |
| ಜುಗಾರಿ ಕ್ರಾಸ್ | 150.00 |
| ಏರೋಪ್ಲೇನ್ ಚಿಟ್ಟೆ ಮತ್ತು ಇತರ ಕತೆಗಳು | 63.00 |
| ಫ್ಲೈಯಿಂಗ್ ಸಾಸರ್ಸ್ (1) | 63.00 |
| ಫ್ಲೈಯಿಂಗ್ ಸಾಸರ್ಸ್ (2) | 63.00 |
| ಕಾಡಿನ ಕತೆಗಳು 1, 2, 3, 4 ಪ್ರತಿಯೊಂದೂ | 63.00 |
| ರುದ್ರಪ್ರಯಾಗದ ಭಯಾನಕ ನರಭಕ್ಷಕ | 84.00 |
| ಕನ್ನಡನಾಡಿನ ಹಕ್ಕಿಗಳು (1) - ಮಿಂಚುಳ್ಳಿ | 81.00 |
| (2) - ಹೆಜ್ಜೆ ಮೂಡದ ಹಾದಿ | 69.00 |
| ಹಕ್ಕಿ-ಪುಕ್ಕ | 369.00 |
| ಅಣ್ಣನ ನೆನಪುಗಳು | 150.00 |
| ಹುಲಿಯೂರಿನ ಸರಹದ್ದು | 75.00 |
| ಅಬಚೂರಿನ ಪೋಸ್ಟಾಫೀಸು | 78.00 |
| ಮಿಲನಿಯಮ್ (1) - ಹುಡುಕಾಟ | 63.00 |
| ಮಿಲನಿಯಮ್ (2) - ಜೀವನ ಸಂಗ್ರಾಮ | 63.00 |
| ಮಿಲನಿಯಮ್ (3) - ಪೆಸಿಫಿಕ್ ದ್ವೀಪಗಳು | 63.00 |
| ಮಿಲನಿಯಮ್ (4) - ಚಂದ್ರನ ಚೂರು | 63.00 |
| ಮಿಲನಿಯಮ್ (5) - ನೆರೆಹೊರೆಯ ಗೆಳೆಯರು | 66.00 |
| ಮಿಲನಿಯಮ್ (6) - ಮಹಾಯುದ್ಧ (1) | 63.00 |
| ಮಿಲನಿಯಮ್ (7) - ಮಹಾಯುದ್ಧ (2) | 63.00 |
| ಮಿಲನಿಯಮ್ (8) - ಮಹಾಯುದ್ಧ (3) | 63.00 |
| ಮಿಲನಿಯಮ್ (9) - ದೇಶ ವಿದೇಶ (1) | 66.00 |
| ಮಿಲನಿಯಮ್ (10) - ದೇಶ ವಿದೇಶ (2) | 66.00 |
| ಮಿಲನಿಯಮ್ (11) - ದೇಶ ವಿದೇಶ (3) | 66.00 |
| ಮಿಲನಿಯಮ್ (12) - ದೇಶ ವಿದೇಶ (4) | 63.00 |
| ಮಿಲನಿಯಮ್ (13) - ವಿಸ್ಮಯ ವಿಶ್ವ (1) | 63.00 |
| ಮಿಲನಿಯಮ್ (14) - ಮಹಾಪಲಾಯನ | 66.00 |
| ಮಿಲನಿಯಮ್ (15) - ವಿಸ್ಮಯ ವಿಶ್ವ (2) | 63.00 |
| ಮಿಲನಿಯಮ್ (16) - ಅಡ್ವೆಂಚರ್ | 63.00 |
| ಮಾಯಾಲೋಕ - 1 | 210.00 |
| The Stories of My Environment | 144.00 |
| ಪಾಕ ಕ್ರಾಂತಿ ಮತ್ತು ಇತರ ಕತೆಗಳು | 63.00 |
| ವ್ಯಕ್ತಿ ವಿಶಿಷ್ಟ ಸಿದ್ಧಾಂತ ಮತ್ತು ಯಮಳ ಪ್ರಶ್ನೆ | 51.00 |
| ಬೃಹನ್ನಳೆ ಸೋಮುವಿನ ಸ್ವಗತ ಲಹರಿ ಮತ್ತು ಇತರ ಕವನಗಳು | 60.00 |
| ವಿಮರ್ಶೆಯ ವಿಮರ್ಶೆ | 160.00 |
| 'ಮಾಯೆಯ ಮುಖಗಳು' (ಚಿತ್ರಸಂಪುಟ - ನಾಲ್ಕು ವರ್ಣಗಳಲ್ಲಿ) | 600.00 |

**ಶ್ರೀ ಕೆ. ಪಿ. ಪೂರ್ಣಚಂದ್ರ ತೇಜಸ್ವಿ - ಶ್ರೀ ಪ್ರದೀಪ ಕೆಂಜಿಗೆ :**

| | |
|---|---|
| ವಿಸ್ಮಯ (1) (2) (3) ಪ್ರತಿಯೊಂದೂ | 63.00 |
| ಪ್ಯಾಪಿಲಾನ್ (1) (2) ಪ್ರತಿಯೊಂದೂ | 132.00 |

**ಶ್ರೀ ಕೆ. ಪಿ. ಪೂರ್ಣಚಂದ್ರ ತೇಜಸ್ವಿ - ಡಾ|| ವಿ. ವಿ. ಬೆಳವಾಡಿ :**

| | |
|---|---|
| ನಡೆಯುವ ಕಡ್ಡಿ! ಹಾರುವ ಎಲೆ! | 63.00 |

**ಶ್ರೀ ಪ್ರದೀಪ ಕೆಂಜಿಗೆ :**

| | |
|---|---|
| ಬರ್ಮುಡಾ ಟ್ರ್ಯಾಂಗಲ್ | 57.00 |
| ಅದ್ಭುತ ಯಾನ | 90.00 |

**ಶ್ರೀ ಜಿ. ಪಿ. ಬಸವರಾಜು**

| | |
|---|---|
| ಭೂಕಂಪದ ಅಂತರಂಗ | 40.00 |

**ಶ್ರೀ ಎಮ್. ಶಿವಕುಮಾರ್**

| | |
|---|---|
| ಸೈಕಲ್ ವಾಲ | 40.00 |
| ಯೋಗಿ ಮತ್ತು ಅಪ್ಸರೆ | 66.00 |
| ಕಂಪ್ಯೂಟರ್ ಕಲಿಯಿರಿ | 150.00 |
| 'ಗಡಿಯಾರ' ವಿಕಾಸದ ಹಾದಿಯಲ್ಲಿ | 66.00 |

**ವಿದ್ವಾನ್ ಶ್ರೀ ಕೊಳಂಬೆ ಪುಟ್ಟಣ್ಣ ಗೌಡರು :**

| | |
|---|---|
| ಅಚ್ಚ ಕನ್ನಡ ನುಡಿಕೋಶ | 360.00 |

**ಶ್ರೀ ನರೇಂದ್ರ ರೈ ದೇರ್ಲ :**

| | |
|---|---|
| ಸಾವಯವ ಕೃಷಿ | 51.00 |

**ಶ್ರೀ ಕೃಪಾಕರ - ಸೇನಾನಿ :**

| | |
|---|---|
| ಸೆರೆಯಲ್ಲಿ ಕಳೆದ ಹದಿನಾಲ್ಕು ದಿನಗಳು | 93.00 |

**ಶ್ರೀ ಕೃಷ್ಣ ಆಲನಹಳ್ಳಿ : ಗೋಡೆ** 66.00

**ಡಾ|| ಎಸ್. ಎಂ. ವೃಷಭೇಂದ್ರ ಸ್ವಾಮಿ :**

| | |
|---|---|
| ತರಗತಿಗಳಲ್ಲಿ ಕುವೆಂಪು | 180.00 |

**ಶ್ರೀ ದೇವನೂರು ಮಹಾದೇವ**

| | |
|---|---|
| ಕುಸುಮಬಾಲೆ | 60.00 |

**ಶ್ರೀಮತಿ ತಾರಿಣಿ ಚಿದಾನಂದ :**

| | |
|---|---|
| ಮಗಳು ಕಂಡ ಕುವೆಂಪು | 330.00 |

**ಶ್ರೀಮತಿ ಪದ್ಮಾಶ್ರೀರಾಮು :**

| | |
|---|---|
| ಗಿಡಗಂಟೆಯಾ ಕೊರಳು | 69.00 |

*ಹೊಸ ಆವೃತ್ತಿ (Edition) ಬಿಡುಗಡೆಗೊಂಡಾಗ್ಯೂ ಮುಖಪುಟ ಬೆಲೆಯಲ್ಲಿ ವ್ಯತ್ಯಾಸವಿರುವುದು.*



ಉಪನಿಷತ್ತು , ಮಹಾಭಾರತ, ಚರಕಾದಿ ಸಂಹಿತೆಗಳಲ್ಲಿ ಪ್ರತಿಪಾದ್ಯವಾದ ಸಾಂಖ್ಯಮತಗಳಲ್ಲಿ ಅಲ್ಪಸ್ವಲ್ಪ ವ್ಯತ್ಯಾಸಗಳಿದ್ದರೂ ಜಗತ್ತನ್ನು ವೇದಮಂತ್ರಗಳಲ್ಲಿ ಇರುವಂತೆ ಕೇವಲ ವಿಸ್ಮಯದಿಂದಲಾಗಲಿ, ಅದರ ಹಿಂದೆ ದೇವತ್ವ ಕಲ್ಪನೆಯಿಂದಾಗಲಿ ನೋಡದೆ ಜಗತ್ತನ್ನು ನೇರವಾಗಿ ವಿಶ್ಲೇಷಿಸುವ ಮೊದಲ ದರ್ಶನ ಇದೆಂದು ಗೊತ್ತಾಗುತ್ತದೆ. ಎಂದರೆ ತತ್ವಶಾಸ್ತ್ರದ ಆದ್ಯಪ್ರವರ್ತಕನೇ ಕಪಿಲ ! ಆದರೆ ಬೇರೆ ಗ್ರಂಥಗಳಲ್ಲಿ ದೊರೆಯುವ ಆತನ ಸಿದ್ಧಾಂತಗಳು ಅವನ ಹೆಸರಿನ ಸೂತ್ರ ಗ್ರಂಥದಲ್ಲಿ ತಿಳಿಸಿದೆಯಾದರೂ ಅದು ಅರ್ವಾಚೀನ ಕೃತಿ ಎಂದೇ ಬಹುಪಾಲು ಪಂಡಿತರ ಅಭಿಮತ. ಆದ್ದರಿಂದ ಸೂತ್ರಕಾಲಕ್ಕಿಂತ ಮುಂದಿನ ಕಾರಿಕೆಗಳ ಕಾಲಕ್ಕೆ ಸೇರಿದ ಈಶ್ವರ ಕೃಷ್ಣ ಎಂಬುವನ ಸಾಂಖ್ಯಕಾರಿಕ ಪ್ರಾಚೀನವೂ ಸುಸಂಬದ್ಧವೂ ಸುಪ್ರತಿಷ್ಠಿತವೂ ಆದ ಕೃತಿ. ಅದಕ್ಕೆ ಶಂಕರರ ಗುಗ್ಗುರುಗಳೆಂದು ಪ್ರಸಿದ್ಧರಾದ ಗೌಡಪಾದರೇ ಬರೆದ ವ್ಯಾಖ್ಯೆ ಪ್ರಾಚೀನವಾದದ್ದು.

# ಕಾಪಿಲ ಸಿದ್ಧಾಂತ

'ಸಿದ್ಧಾನಾಂ ಕಪಿಲೋ ಮುನಿಃ' ಸಿದ್ಧರಲ್ಲಿ ತಾನು ಕಪಿಲ ಎಂದು ಕೃಷ್ಣ ಗೀತೆಯಲ್ಲಿ ಹೇಳಿಕೊಂಡ (೧೦-೨೬). ಅದೇ ಮಹಾಭಾರತದ ವಿಷ್ಣು ಸಹಸ್ರನಾಮ ಕಪಿಲನನ್ನು ವಿಷ್ಣುವೆಂದೇ ಕರೆಯಿತು. ರಾಮಾಯಣದಲ್ಲಿ ಸಗರನ ೬೦ ಸಾವಿರ ಮಕ್ಕಳನ್ನು ಸುಟ್ಟವನು ಕಪಿಲ ಮುನಿ ! ಎಂದರೆ ರಾಮಾಯಣ, ಮಹಾಭಾರತದ ಕಾಲಕ್ಕೆ ಕಪಿಲ ಮುನಿ ಪ್ರಸಿದ್ಧ. ಬುದ್ಧನು ತನ್ನ ದೀರ್ಘ ಹುಡುಕಾಟದಲ್ಲಿ ಗಯೆಗೆ ಹೋಗಿ ಬೋಧಿವೃಕ್ಷದ ಕೆಳಗೆ ಕೂಡುವ ಮೊದಲು ಅರಾಡನೆಂಬ ತಪಸ್ವಿಯನ್ನು ಭೆಟ್ಟಿಯಾದ. ಆ ಅರಾಡ ಬುದ್ಧನಿಗೆ ಇದೇ ಕಪಿಲನ ಸಿದ್ಧಾಂತಗಳನ್ನು ತಿಳಿಸಿ 'ಸ ಶಿಷ್ಯಃ ಕಪಿಲಶ್ಚೇಹ ಪ್ರತಿಬುದ್ಧ ಇತಿ ಸ್ಮೃತಃ' ಎಂದು ತಿಳಿಸಿದ (ಬುದ್ಧಚರಿತೆ ೧೨-೨೧). ಜೈನರೂ ಅರಹಂತರ ನಂತರ ವಂದಿಸುವುದು ಸಿದ್ಧರಿಗೆ. ಅವರಲ್ಲಿ ಕಪಿಲ ಶ್ರೇಷ್ಠ. ಮತಧರ್ಮಗಳಲ್ಲಲ್ಲದೆ ಆಯುರ್ವೇದದಂತಹ ಶಾಸ್ತ್ರದಲ್ಲೂ ಸಾಂಖ್ಯಮತಕ್ಕೆ ಮಹತ್ವದ ಸ್ಥಾನವಿದೆ. ಚರಕ ಸುಶ್ರುತ ಸಂಹಿತೆಗಳ ಶಾರೀರಿಕ ಸ್ಥಾನಗಳಲ್ಲಿ ಸಾಂಖ್ಯಮತ ಪ್ರತಿಪಾದನೆ ಇದೆ. ಹೀಗೆ ವೈದಿಕ, ಅವೈದಿಕ ಪಂಥಗಳೆಲ್ಲರಿಗೂ ಪರಿಚಿತನೂ ಪೂಜ್ಯನೂ ಆದ ಕಪಿಲನೇ ಬರೆದ ಕೃತಿ ನಮಗೆ ದಕ್ಕುತ್ತಿಲ್ಲ. ಆದರೆ ಭಾರತೀಯ ದರ್ಶನ ಶಾಸ್ತ್ರ ಪರಂಪರೆಯಲ್ಲಿ ಸಾವಿರಾರು ವರ್ಷ ಆತನ ಸಾಂಖ್ಯ ಸಿದ್ಧಾಂತ ಪ್ರಭಾವಶಾಲಿಯಾಗಿತ್ತು. ಮೊದಲ ಬಾರಿಗೆ ದರ್ಶನಗಳ ಒಟ್ಟು ಪರಿಚಯ ಮಾಡಿಕೊಡುವ ಹರಿಭದ್ರಸೂರಿ 'ಪಕ್ಷಪಾತೋ ನ ಮೇ ವೀರೇ ನ ಮೇ ದ್ವೇಷೋಸ್ತಿ ಕಾಪಿಲೇ' ಎಂದ. ಬ್ರಹ್ಮಸೂತ್ರಗಳಲ್ಲಿ ೨ನೇ ಅಧ್ಯಾಯ ಆರಂಭವಾಗುವುದು 'ಸ್ಮೃತ್ಯನವಕಾಶ ದೋಷಾದಿತಿ ಚೇತ್ ನ ಅನ್ಯಸ್ಮೃತ್ಯನವಕಾಶ ದೋಷಾತ್' ಎಂಬಲ್ಲಿ ಸ್ಮೃತಿ ಎಂದರೆ ಮನುಷ್ಯರು ಪ್ರತಿಪಾದಿಸಿದ ಸಿದ್ಧಾಂತವೆಂದೂ ಅದರಲ್ಲಿ ಪರಿಗಣಿತವಾಗುವುದು ಕಪಿಲರ ಸಾಂಖ್ಯಮತವೆಂದೂ ಶಂಕರಾದಿ ವ್ಯಾಖ್ಯಾನಕಾರರು ತೀರ್ಮಾನಿಸಿದ್ದಾರೆ. ಅದಕ್ಕೆ ಶಂಕರಭಾಷ್ಯದಲ್ಲಿ ಹೇಳುವ ಮಾತು ಸಾಂಖ್ಯರನ್ನು ಹೊಡೆದುಹಾಕಿದರೆ ಎಲ್ಲರನ್ನೂ ಸೋಲಿಸಿದಂತೆ ಎಂದು. ಅದಕ್ಕೆ ಪ್ರಧಾನಮಲ್ಲ ನಿಬರ್ಹಣ ನ್ಯಾಯವೆಂದು ಹೆಸರು. ಎಂದಮೇಲೆ ಕಪಿಲನೇ ಪ್ರಧಾನಮಲ್ಲ! ಇಷ್ಟೊಂದು ಪ್ರಭಾವಶಾಲಿಯಾದ ಕಪಿಲನ ಸಿದ್ಧಾಂತ ವೇದಾಂತದ ಭರದಲ್ಲಿ ಅನುಯಾಯಿಗಳಿಲ್ಲದೆ ಸ್ವತಂತ್ರ ಮತವಾಗಿ ಉಳಿಯದೇ ಹೋಯಿತು. ಆದರೆ ಅದರ ಪ್ರಾಯೋಗಿಕ ರೂಪವಾದ ಯೋಗ ಎಲ್ಲ ಮತಸ್ಥರಿಗೂ ಉಪಾದೇಯವಾಯಿತು. ಸ್ಮೃತಿ ಎಂದರೆ ಸಾಂಖ್ಯವೇ ಎಂಬ ಧೋರಣೆಯ ಬ್ರಹ್ಮಸೂತ್ರ ಅದನ್ನು ಖಂಡಿಸಿದರೆ ಯೋಗವನ್ನೂ ಖಂಡಿಸಿದಂತೆ ಎನ್ನುತ್ತದೆ. 'ಏತೇನ ಯೋಗಃ ಪ್ರತ್ಯುಕ್ತ' ಎನ್ನುವ ಸೂತ್ರದಲ್ಲಿ. ಆದರೆ ಅದರ ಭಾಷ್ಯದಲ್ಲಿ ಯೋಗದ ಸಾಂಖ್ಯ ಸಿದ್ಧಾಂತ ಬಿಟ್ಟುಬಿಟ್ಟರೂ ಯಮನಿಯಮಾದಿ ಅಷ್ಟಾಂಗಗಳನ್ನು ಒಪ್ಪತಕ್ಕದ್ದೆಂದು ಭಾಷ್ಯಕಾರರು ಹೇಳುತ್ತಾರೆ. ಎಲ್ಲರನ್ನೂ ಪ್ರಭಾವಿಸಿದ ಸಾಂಖ್ಯ ಹೀಗೆ ಬೇರೆ ಮತಗಳಲ್ಲಿ ಕರಗಿಹೋಗಿದ್ದು ಒಂದು ಕಡೆಯಾದರೆ ಪುರಾಣಗಳಲ್ಲಿ ಅದು ಬೇರೆ ದೈವಪರ ಮತಗಳ ಪ್ರಭಾವದಲ್ಲಿ ಸೇಶ್ವರ ಸಾಂಖ್ಯವಾಗಿ ಪರಿವರ್ತಿತವೂ ಆಯಿತು. ತಂತ್ರಶಾಸ್ತ್ರದಲ್ಲಿನ ಶಿವಶಕ್ತಿ ಸಂಬಂಧದಲ್ಲಿ ಸಹ ಸಾಂಖ್ಯರ ಪ್ರಕೃತಿ ಪುರುಷ ಸಂಬಂಧವೇ ಮೂಲವಾಗಿದೆ. ಶ್ವೇತಾಶ್ವತರ ಉಪನಿಷತ್ತಿನಲ್ಲಿ 'ಮಾಯಾಂ ತು ಪ್ರಕೃತಿಂ ವಿದ್ಯಾತ್ ಮಾಯಿನಂ ತು ಮಹೇಶ್ವರಂ' ಎನ್ನುವಲ್ಲೇ ಇದರ ಆರಂಭವಿದೆ.

ಉಪನಿಷತ್ತು, ಮಹಾಭಾರತ, ಚರಕಾದಿ ಸಂಹಿತೆಗಳಲ್ಲಿ ಪ್ರತಿಪಾದ್ಯವಾದ ಸಾಂಖ್ಯಮತಗಳಲ್ಲಿ ಅಲ್ಪಸ್ವಲ್ಪ ವ್ಯತ್ಯಾಸಗಳಿದ್ದರೂ ಜಗತ್ತನ್ನು ವೇದಮಂತ್ರಗಳಲ್ಲಿ ಇರುವಂತೆ ಕೇವಲ ವಿಸ್ಮಯದಿಂದಲಾಗಲಿ, ಅದರ ಹಿಂದೆ ದೇವತ್ವ ಕಲ್ಪನೆಯಿಂದಾಗಲಿ ನೋಡದೆ ಜಗತ್ತನ್ನು ನೇರವಾಗಿ ವಿಶ್ಲೇಷಿಸುವ ಮೊದಲ ದರ್ಶನ ಇದೆಂದು ಗೊತ್ತಾಗುತ್ತದೆ. ಎಂದರೆ ತತ್ವಶಾಸ್ತ್ರದ ಆದ್ಯಪ್ರವರ್ತಕನೇ ಕಪಿಲ ! ಆದರೆ ಬೇರೆ ಗ್ರಂಥಗಳಲ್ಲಿ ದೊರೆಯುವ ಆತನ ಸಿದ್ಧಾಂತಗಳು ಅವನ ಹೆಸರಿನ ಸೂತ್ರ ಗ್ರಂಥದಲ್ಲಿ ತಿಳಿಸಿದೆಯಾದರೂ ಅದು ಅರ್ವಾಚೀನ ಕೃತಿ ಎಂದೇ ಬಹುಪಾಲು ಪಂಡಿತರ ಅಭಿಮತ. ಆದ್ದರಿಂದ ಸೂತ್ರಕಾಲಕ್ಕಿಂತ ಮುಂದಿನ ಕಾರಿಕೆಗಳ ಕಾಲಕ್ಕೆ ಸೇರಿದ ಈಶ್ವರ ಕೃಷ್ಣ ಎಂಬುವನ ಸಾಂಖ್ಯಕಾರಿಕ ಪ್ರಾಚೀನವೂ ಸುಸಂಬದ್ಧವೂ ಸುಪ್ರತಿಷ್ಠಿತವೂ ಆದ ಕಲಿತಿ. ಅದಕ್ಕೆ ಶಂಕರರ ಗುಗ್ಗುರುಗಳೆಂದು ಪ್ರಸಿದ್ಧರಾದ ಗೌಡಪಾದರೇ ಬರೆದ ವ್ಯಾಖ್ಯೆ ಪ್ರಾಚೀನವಾದದ್ದು.

ಸಂಖ್ಯಾ ಎಂದರೆ ಜ್ಞಾನ. ಏಕೆಂದರೆ ಸಂಖ್ಯಾ ಎನ್ನುವುದರ ಮೂಲ ಅರ್ಥ ಎಣಿಕೆ ಎನ್ನುವುದು ವಿಂಗಡಿಸಿಕೊಳ್ಳುವ ಮತ್ತು ವಿಶ್ಲೇಷಿಸಿಕೊಳ್ಳುವ ಸಾಮರ್ಥ್ಯವನ್ನು ಸೂಚಿಸುತ್ತದೆ. ಇದೇ ಎಲ್ಲ ವಿಚಾರದ ಮೂಲ ಆದ್ದರಿಂದ ಅಮರಕೋಶ 'ಚರ್ಚಾ ಸಂಖ್ಯಾ ವಿಚಾರಣಾ' ಎಂಬ ಪದಗಳನ್ನು ಪರ್ಯಾಯವಾಗಿಕೊಟ್ಟಿದೆ. ಆದ್ದರಿಂದ ನಾನಾ ಮತ್ತು ವಿಧವಿಧ ಜಗತ್ತನ್ನು ಜ್ಞಾನಕ್ಕೆ ಒಳಪಡಿಸುವಲ್ಲಿ ಇದು ಅಗತ್ಯವಾದ ಮೊದಲ ಹೆಜ್ಜೆ. ಬಹುತ್ವದ ಅನುಭವದಲ್ಲಿ ಅವುಗಳ ಮೂಲ ಗುಣ ಆಧರಿಸಿ ಗುಂಪುಗಳನ್ನಾಗಿ ವಿಂಗಡಿಸಿಕೊಂಡಾಗ ಮಾತ್ರ ಅದರೊಂದಿಗೆ ಅನುಸಂಧಾನ ಸಾಧ್ಯ. ಅನುಭವಗಳು ಅನೇಕರಿಗೆ ವಿಧವಿಧವಾಗಿ ಇರುವುದರಿಂದ ಅನುಭವಿಸುವವರು ಅನೇಕ. ಎಲ್ಲರ ಅನುಭವಕ್ಕೂ ಬರುವ ಪ್ರಪಂಚ ಒಂದೇ ಆದ್ದರಿಂದ ಅದು ಮೂಲತಃ ಒಂದೇ. ಇದು ಈ ಲೆಕ್ಕಾಚಾರದ ಮೊದಲ ಪ್ರಮೇಯ.

## ಪ್ರಕೃತಿ-ಪುರುಷ

ಪ್ರಮೇಯಗಳು ಸಿದ್ಧಿಸುವುದು ಪ್ರಮಾಣದಿಂದಲೇ ('ಪ್ರಮೇಯಸಿದ್ಧಿಃ ಪ್ರಮಾಣಾದ್ಧಿ'). ಆದ್ದರಿಂದ

**ಜೆ. ಶ್ರೀನಿವಾಸ ಮೂರ್ತಿ**

ವಿಶ್ಲೇಷಣೆಯ ಮೂಲದಲ್ಲಿ ಅನುಭವಿಸುವವನು ಮತ್ತು ಅನುಭವಕ್ಕೆ ಬರುವುದು ಎಂದು ಎರಡು ತತ್ವಗಳು. ಇದನ್ನೆ ಅನುಭವ ಪಡೆಯುವ **ಪುರುಷ** ಮತ್ತು ಅನುಭವಕ್ಕೆ ಬರುವ **ಪ್ರಕೃತಿ** ಎಂದು ಎರಡು ಸ್ವತಂತ್ರ ತತ್ವಗಳನ್ನಾಗಿ ನೋಡಿದೆ. ಎರಡು ಕೂಡಿ ಅನುಭವವಾದ್ದರಿಂದ ಎರಡೂ ಕೂಡಿಯೇ ಜಗತ್ತು, ಸೃಷ್ಟಿ. ಅರಿವು ಜಗತ್ತುಗಳದ್ದು ಅವಿನಾಭಾವೀ ಸಂಬಂಧ. ಅರಿವು ಉಂಟಾಗುವುದು ಪ್ರಮಾಣಗಳಿಂದ ಎಂದರಲ್ಲ ಅವು ಮೂರು ರೀತಿ: (೧) ಪ್ರತ್ಯಕ್ಷ ಎಂದರೆ ನೇರ ಅನುಭವದಿಂದ, (೨) ಅನುಮಾನ (Inference) ಎಂದರೆ ನೆನಪು ಮತ್ತು ಅದರ ಊಹೆಯಿಂದ ಕಾಣದ್ದರ ಅರಿವು ಮತ್ತು (೩) ಶಬ್ದ ಎಂದರೆ ಬೇರೆಯವರು ಆದರೆ ಆಪ್ತರು ಹೇಳಿದ್ದರಿಂದ ಕಲಿತು ಕೊಂಡದ್ದು. ಪ್ರತಿಯೊಬ್ಬರಿಗೂ ತಾನು ಬೇರೆ ಎಂಬ ಅನುಭವ ಇರುವುದರಿಂದ ಎಷ್ಟು ಜನರ ಅನುಭವವಿದೆಯೋ ಅಷ್ಟು ಪುರುಷರು ಎಂದರೆ ಅನಂತ ಪುರುಷರು. ಎಲ್ಲರ ಅನುಭವಕ್ಕೆ ಬರುವ ವಿಷಯ ಒಂದೇ ಆದ್ದರಿಂದ ವಿಷಯವಾದ ಪ್ರಕೃತಿ ಒಂದೇ. ಈ ಎರಡು ತತ್ವಗಳೇ ಮೂಲವಾದ್ದರಿಂದ ಇದು ಆದಿ ದ್ವೈತ. ಇದನ್ನೇ ಮುಂದೆ ವಿಷಯಿ - ವಿಷಯ; ಅಸ್ಮತ್ ಪ್ರತ್ಯಯ ಗೋಚರ, ಯುಷ್ಮತ್ ಪ್ರತ್ಯಯ ಗೋಚರ, ತಾನು - ಇದಿರು ಎಂದೆಲ್ಲ ಕರೆಯಲ್ಪಟ್ಟಿದೆ. ಗೀತೆಯಲ್ಲಿ ಇದನ್ನು ಕ್ಷೇತ್ರ-ಕ್ಷೇತ್ರಜ್ಞ ಎಂದಿದೆ. ಪುರ ಎಂದರೆ ಶರೀರ. ಅದರೊಳಗಿರುವುದು ಪುರುಷ / ಶಾರೀರ. ಇದೇ ಆತ್ಮ. ಇದು ಏನೂ ಮಾಡುವುದಿಲ್ಲ, ಸುಮ್ಮನೆ ನೋಡುತ್ತದೆ. ಹಾಗೆ ಅದು ನೋಡುವುದು ಪ್ರಕೃತಿಯನ್ನು. ಪ್ರಕೃತಿಯೇ ಎಲ್ಲವನ್ನೂ ಮಾಡುತ್ತದೆ. ಸಂಸಾರವೆನ್ನುವುದು ಪ್ರಕೃತಿ-ಪುರುಷ ಸಂಯೋಗದಿಂದ; ಅದು ಕುರುಡು (ಪ್ರಕೃತಿ) ಹೆಳವ (ಪುರುಷ) ಇಬ್ಬರು ಕೂಡಿ ನಡೆದಂತೆ. ಚರಕ ಪುರುಷನನ್ನು ಎಣಿಕೆಗೆ ತೆಗೆದುಕೊಳ್ಳುವುದಿಲ್ಲ. ಆದರೆ ಸುಶ್ರುತ ಸಾಂಖ್ಯ ಕಾರಿಕೆಯ ರೀತಿಯಲ್ಲೇ ತತ್ವಗಳನ್ನು ಎಂಗಡಿಸಿಕೊಳ್ಳುತ್ತಾನೆ. ಅದರಂತೆ ಎರಡೂ ಅನಾದಿ, ಅನಂತ, ನಿತ್ಯ, ಒಂದು ಇನ್ನೊಂದಾಗುವುದಿಲ್ಲ, ಎಲ್ಲ ಕಡೆಗೂ ಇರುತ್ತವೆ ಮತ್ತು ಮೂಲತಃ ಅಮೂರ್ತ. ವ್ಯತ್ಯಾಸವೆಂದರೆ ಪ್ರಕೃತಿ ಅಚೇತನ, ಪುರುಷ ಚೇತನ. ಅಚೇತನ ಪ್ರಕೃತಿ ತಂತಾನೇ ಬದಲಾಗುತ್ತದೆ ಏಕೆಂದರೆ ಬದಲಾಗುವುದೇ ಅದರ ಸ್ವಭಾವ. ಹಾಗೆ ನಿರಂತರವಾಗಿ ಬದಲಾಗುವ ಪ್ರಕೃತಿಯ ತುದಿಯೇ ಮೂರ್ತವಾದ ಜಗತ್ತು. ಇದಕ್ಕೆ ಕಾರಣಗಳು ಅದರ ಒಡಲೊಳಗೇ ಇವೆ.

ರೆಸಾರ್ಟ್ ರಾಜಕಾರಣ



'ರೆಸಾರ್ಟ್ ಪಾರ್ಟಿ' ಎಂಬ ಹೊಸ ಪಕ್ಷ ಕಟ್ಟಿಕೊಂಡು ಜನರ ಮುಂದೆ ಓಟು ಕೇಳಲು ಬರಬಹುದೇನ್ರೀ...?

### ಪ್ರಕೃತಿ ಗುಣಗಳು

ಪ್ರಕೃತಿ ತ್ರಿಗುಣಗಳಿಂದ ಎಂದರೆ ಮೂರು ಗುಣಗಳಿಂದ ಕೂಡಿದ್ದು. ಕೂಡಿದ್ದು ಎಂದರೆ ಅದರಲ್ಲಿ ತುಂಬಿದೆ ಎಂದರ್ಥವಲ್ಲ, ಮೂರು ಗುಣಗಳೇ ಪ್ರಕೃತಿ. ಆ ಗುಣಗಳು ಸತ್ವ, ರಜಸ್ಸು, ತಮಸ್ಸು. ಇವು ಕ್ರಮವಾಗಿ ಅನುಭವದಲ್ಲಿ ಪ್ರೀತಿ, ಅಪ್ರೀತಿ, ವಿಷಾದವೆಂದೂ ವಸ್ತು ಪ್ರಪಂಚದಲ್ಲಿ ಪ್ರಕಾಶ, ಪ್ರವೃತ್ತಿ ಮತ್ತು ತಡೆ ಎಂದೂ ತೋರಿಕೊಳ್ಳುತ್ತದೆ. ಈ ಗುಣಗಳು ಒಂದು ಇನ್ನೊಂದನ್ನು ತುಳಿಯುತ್ತ/ಸೋಲಿಸುತ್ತಾ ಆದರೆ ಒಂದು ಇನ್ನೊಂದಕ್ಕೆ ಆಶ್ರಯವಾಗಿ ಹುಟ್ಟುಹಾಕುತ್ತಾ ಬೆರೆತು ನಡೆದಿರುತ್ತವೆ. ಇದು ಎಣ್ಣೆ (ಚಲನಶೀಲವಾದ ರಜೋಗುಣ), ಬತ್ತಿ (ತಡೆಯಂತೆ ಇರುವ ತಮೋಗುಣ) ಮತ್ತು ಬೆಂಕಿ (ಪ್ರಕಾಶಮಾನವಾದ ಸತ್ವಗುಣ) ಸೇರಿ ದೀಪವಾದಂತೆ. ದೀಪದಂತೆ ಉರಿದು ಹೋಗುತ್ತಿರುವ ಒಳ, ಹೊರ ಜಗತ್ತು ನಮಗೆ ಅನುಭವಕ್ಕೆ ಬರುತ್ತಿದೆ. ಆದರೆ ಅನಾದಿ ಅನಂತವಾದ ಈ ಜಗತ್ತು ಮೂಲದಲ್ಲಿ ನಿತ್ಯವಾಗಿದೆ ಎಂದು ಊಹಿಸಿಕೊಳ್ಳ ಬೇಕಾಗುತ್ತದೆ. ಹಾಗೆ ಮೂಲದಲ್ಲಿ ಅದು ತ್ರಿಗುಣಗಳ ಸಮತೋಲನದಲ್ಲಿರುತ್ತದೆ. ಅದನ್ನೇ ಪ್ರಕೃತಿ ಅಥವಾ ಮೂಲ ಪ್ರಕೃತಿ ಎನ್ನುವುದು. ಆದರೆ ಅದು ತಲ್ಲಣದಿಂದ ಒಂದು ಗುಣ ಇನ್ನೊಂದರೊಡನೆ ಸೆಣಸುತ್ತಾ ಈ ಸೃಷ್ಟಿಯಾಗಿದೆ.

### ಒಳ-ಹೊರಗಿನ ಸೃಷ್ಟಿ

ಸೃಷ್ಟಿ ಕೇವಲ ಪುರುಷನ ಸಾನ್ನಿಧ್ಯದಿಂದ ಆಗಿದೆಯೆ ಹೊರತು ಅದಕ್ಕೆ ಒಬ್ಬ ಸೃಷ್ಟಿಕರ್ತನಿಲ್ಲ ಎನ್ನುವುದು ಪ್ರಾಚೀನ ಸಾಂಖ್ಯ ಮತ. ಆದರೆ ಈ ಸೃಷ್ಟಿಯಲ್ಲಿ ಮೊದಲಿಗೆ ಇರುವುದು ಬೇಕು ಬೇಡ ಎನ್ನುವ ಸಂಕಲ್ಪ ವಿಕಲ್ಪ ರೂಪದ ಬುದ್ಧಿ. ಅದನ್ನೇ ಮಹತ್ ಎಂದು ಕರೆಯಲಾಗಿದೆ. ಇಲ್ಲಿಂದ ಮುಂದಿನದು ವ್ಯಕ್ತ-ಪ್ರಕೃತಿ. ಇವು ಬದಲಾಗಿರುವುದರಿಂದ, ವಿಕೃತಿ ಆದ್ದರಿಂದ ಅವಕ್ಕೆ ಕಾರಣಗಳೂ ಇರುತ್ತವೆ. ಮಹತ್‌ನಿಂದ ಅಹಂಕಾರ ಎಂದರೆ ತಾನು ಬೇರೆ ಎಂಬ ಗುರುತು; ಸತ್ವಪ್ರಧಾನವಾದ ಅಹಂಕಾರದಿಂದ ಮನಸ್ಸು, ಐದು ಜ್ಞಾನೇಂದ್ರಿಯಗಳೂ, ಐದು ಕರ್ಮೇಂದ್ರಿಯಗಳೂ; ತಮಸ್ಸು ಪ್ರಧಾನವಾದ ಅಹಂಕಾರದಿಂದ ಐದು ತನ್ಮಾತ್ರಗಳೂ ಅವುಗಳಿಂದ ಐದು ಭೂತಗಳು (ಎಂದರೆ ಪಾಂಚಭೌತಿಕ ಜಗತ್ತು) ಹುಟ್ಟುತ್ತದೆ. ರಜೋಗುಣವು ಅಹಂಕಾರದ ಎರಡೂ ಸೃಷ್ಟಿಗೆ ಕಾರಣ; ಏಕೆಂದರೆ ಚಾಲನೆ ಸಿಕ್ಕುವುದೇ ರಜೋಗುಣದಿಂದ. ಇದು ಸೃಷ್ಟಿಯ ಕ್ರಮ. ಇದರಲ್ಲಿ ಬುದ್ಧಿಯೇ ಮೊದಲು. ಅಹಂಕಾರ ಮತ್ತು ಅದರಿಂದ ಹೊರಟ ಮನಸ್ಸು ಬುದ್ಧಿಯ ಜತೆ ಸೇರಿ ಅಂತಃಕರಣ ಎನಿಸಿಕೊಳ್ಳುತ್ತದೆ. ಇದು ಒಳ ಜಗತ್ತು, ಮನೋಲೋಕ. ನೋಡುವ ಕಣ್ಣು, ಕೇಳುವ ಕಿವಿ, ಮೂಸುವ ಮೂಗು, ಚಪ್ಪರಿಸುವ ನಾಲಿಗೆ, ಸೋಕಿದ್ದು ತಿಳಿಯುವ ತೊಗಲು ಎಂಬ ಐದು ಜ್ಞಾನೇಂದ್ರಿಯಗಳು, ಮಾತು (ವಾಕ್), ಕೈಗಳು (ಪಾಣಿ), ಕಾಲುಗಳು (ಪಾದ) ಮಲವಿಸರ್ಜನೆಯ ಅಂಗ (ಪಾಯು), ಲೈಂಗಿಕ ಅಂಗ (ಉಪಸ್ಥ) ಎಂಬ ಐದು ಕರ್ಮೇಂದ್ರಿಯಗಳು. ಜೀವಲೋಕ ಮತ್ತು ಮಾನಸ ಲೋಕಗಳ ಮಧ್ಯದ ಸಂಪರ್ಕ ಇದರಿಂದ. ಮನಸ್ಸು ಜ್ಞಾನೇಂದ್ರಿಯ-ಕರ್ಮೇಂದ್ರಿಯಗಳ ಎರಡೂ ರೂಪ ಪಡೆದು ಅವೆರಡರ ನಡುವಿನ ಕೊಂಡಿಯಾಗಿ ನಾನಾ ರೂಪ ಪಡೆಯುತ್ತದೆ ಮತ್ತು ಹೊರಜಗತ್ತನ್ನು ಗ್ರಹಿಸುವುದಲ್ಲದೆ ಅದರ ಮೇಲೆ ಪ್ರಭಾವವನ್ನೂ ಬೀರುತ್ತದೆ ಮತ್ತು ನೆನಪು ಕನಸು ಕಲ್ಪನೆ ಮುಂತಾಗಿ ಒಂದು ಒಳ ಪ್ರಪಂಚವನ್ನು ಸೃಷ್ಟಿಸುತ್ತದೆ. ಆದ್ದರಿಂದ ಅದಕ್ಕೆ ಹಿಂದೆ ಇಂದು ಮುಂದೆ ಎಂಬ ತ್ರಿಕಾಲವಿದೆ. ಹೊರ ಇಂದ್ರಿಯಗಳಿಗೆ ವರ್ತಮಾನಕಾಲ ಒಂದೇ ಇರುತ್ತದೆ.

ಪ್ರಪಂಚ, ಎಂದರೆ ಐದು ಭೂತಗಳು, ತೋರುವುದು ಜ್ಞಾನೇಂದ್ರಿಯಗಳಿಂದ.

ಹಾಗೆ ಒಂದೊಂದು ಇಂದ್ರಿಯಕ್ಕೆ ಒಂದೊಂದು ಭೂತದ ನಿಯತ ಸ್ವರೂಪ ಮಾತ್ರ ತೋರುತ್ತದೆ. ಕಣ್ಣಿಗೆ ರೂಪ, ಮೂಗಿಗೆ ವಾಸನೆ, ನಾಲಿಗೆಗೆ ರುಚಿ, ಕಿವಿಗೆ ಶಬ್ದ, ಚರ್ಮಕ್ಕೆ ಸ್ಪರ್ಶ. ಇವು ಪಂಚಭೂತಗಳ ಮೂಲ ರೂಪ. ಅದಕ್ಕೆ ಇವನ್ನು ತನ್ಮಾತ್ರಗಳು ಎಂದಿದೆ. ಈ ತನ್ಮಾತ್ರಗಳಿಂದ ಕ್ರಮವಾಗಿ ರೂಪದಿಂದ ತೇಜಸ್ಸು, ಘ್ರಾಣದಿಂದ ಪೃಥ್ವೀ, ರಸದಿಂದ ಅಪ್(ನೀರು), ಶಬ್ದದಿಂದ ಆಕಾಶ, ಸ್ಪರ್ಶದಿಂದ ವಾಯು ಗೋಚರಿಸುತ್ತವೆ. ಹೀಗೆ ತೋರುವ ಪೃಥಿವೀ ಅಪ್ ಮುಂತಾದವು ತಮ್ಮೊಳಗೇ ಬೆರೆತು ಬದಲಾಗುತ್ತಾ ಹೊರಪ್ರಪಂಚವಾಗಿರುತ್ತದೆ. ಅವು ಬದಲಾದಾಗಲೂ ಅಲ್ಲಿಂದ ಮುಂದೆ ಬೇರೆ ತತ್ವಗಳು ಇಲ್ಲ. ಆದ್ದರಿಂದ ಅವು ಕೇವಲ ವಿಕೃತಿ. ಹೀಗೆ ಮೂರು ಅಂತಃಕರಣ, ಹತ್ತು ಇಂದ್ರಿಯಗಳು, ಐದು ತನ್ಮಾತ್ರ ಮತ್ತು ಐದು ಭೂತಗಳು ವ್ಯಕ್ತ ಜಗತ್ತು. ಅದರ ಹಿಂದೆ ಮೂಲ ಪ್ರಕೃತಿ ಇದೆ ಎನ್ನುವುದು ಸಂಶ್ಲೇಷಣೆಯಿಂದ ಅನುಮಾನ ಪ್ರಮಾಣದಿಂದ ಕಂಡುಕೊಳ್ಳುವುದು. ಹೀಗೆ ೨೪ ತತ್ವಗಳ ಪ್ರತಿಪಾದನೆಯೇ ಸಾಂಖ್ಯ. ಇದರ ಜತೆಗೆ ಪುರುಷ/ಆತ್ಮ ಸೇರಿದರೆ ೨೫ ತತ್ವಗಳು. ಇವುಗಳಲ್ಲಿ ಹಿಂದಿನದು ಮುಂದಿನದಕ್ಕಿಂತ ಬಲಿಷ್ಠವಾಗಿದ್ದು ನಿಯಂತ್ರಿಸುತ್ತದೆ. ಉದಾಹರಣೆಗೆ, ಇಂದ್ರಿಯಗಳು ಭೌತಿಕ ವಸ್ತುಗಳನ್ನೂ ಮನಸ್ಸು ಇವೆರಡನ್ನೂ ನಿಯಂತ್ರಿಸುತ್ತದೆ.

ಒಳ ಲೋಕದ ಅಂತಃಕರಣವು ಇಂದ್ರಿಯಗಳ ಜತೆಯಲ್ಲಿ ಒಟ್ಟೊಟ್ಟಿಗೆ ಪ್ರವರ್ತಿಸುತ್ತದೆ. ಹೀಗೆ ಪ್ರವರ್ತಿಸುವುದು ಪ್ರಾಣ, ಅಪಾನ, ವ್ಯಾನ, ಉದಾನ, ಸಮಾನ ಎಂಬ ಪಂಚ ಪ್ರಾಣಗಳಾಗಿ ಮನಸ್ಸು ಜೀವ ಭೌತಿಕ ಜಗತ್ತಿನ ಸಂಬಂಧ ಏರ್ಪಟ್ಟಿದೆ. ಈ ಸಂಬಂಧ ತಪ್ಪಿದರೆ ಸಾವು. ಅದಕ್ಕೆ ಪ್ರಾಣ ಹೋಯಿತು ಎನ್ನುತ್ತೇವೆ. ಆದ್ದರಿಂದ ಭೌತಿಕ ನಮ್ಮ ಅನುಭವಕ್ಕೆ ಬರುವ ಪ್ರಪಂಚವೂ ಅದರಂತೆ ಕಾಣುವ ಶರೀರವೂ ಜಡವಾದ್ದು, ಸ್ಥೂಲ. ತಾಯಿ ತಂದೆಯರಿಂದ ಬಂದ ಶರೀರ ಜೀವಂತ. ಇದರಲ್ಲಿ ಹೊರ ಒಳ ಪ್ರಪಂಚಗಳೆರಡೂ ಇದ್ದು ಭಾವ-ಅನುಭವ ಹೊಂದುವಂತಹುದು, ನಶ್ವರ. ಅಂತಃಕರಣ, ಇಂದ್ರಿಯಗಳು ಮತ್ತು ತನ್ಮಾತ್ರ (ಇವಕ್ಕೆ ಸೂಕ್ಷ್ಮ ಭೂತಗಳೆಂದೂ ಹೆಸರು) ಇವು ಕೂಡಿಕೊಂಡ ವ್ಯಕ್ತಿವಿಶೇಷ ಸೂಕ್ಷ್ಮ ಶರೀರ. ಇದು ಸತ್ತ ಮೇಲೂ ಮುಂದುವರಿಯುತ್ತದೆ. ಬೇರೆ ಶರೀರಗಳನ್ನು ತೆಗೆದುಕೊಳ್ಳುತ್ತದೆ. ಅದರಲ್ಲಿಯೇ ಎಲ್ಲ ಸಂಸ್ಕಾರಗಳು ಇರುತ್ತವೆ. ಅದಕ್ಕೆ ತಂತಾನೆ ಅನುಭವಿಸಲು ಸಾಧ್ಯವಿಲ್ಲ. ಎಲ್ಲ ಅನುಭವಗಳೂ ಇಂದ್ರಿಯಗಳ ಮುಖಾಂತರ ಬುದ್ಧಿಯೇ ಪ್ರಧಾನವಾದ ಅಂತಃಕರಣಕ್ಕೆ ಒಪ್ಪಿಸಲಾಗುತ್ತದೆ. ಇದು ಪ್ರಕೃತಿಯದೇ ಭಾಗವಾದರೂ ಇದು ತಾನೇ ಪುರುಷನೆಂದೂ ಪುರುಷ ತಾನೇ ಇದೆಂದು ತಿಳಿದು ಜೀವಾತ್ಮ ಎನಿಸುತ್ತದೆ. ಇದೇ ಬಂಧನ. ಈ ಅನುಭವ ಒದಗಿಸಿರುವುದು ಅನುಭವ ಪಡೆದಿರುವುದು ಎಲ್ಲ ವ್ಯಕ್ತ ಜಗತ್ತು, ಅವ್ಯಕ್ತವಾದ ಪ್ರಕೃತಿಗೆ ಸೇರಿದ್ದು. ತಾನು ಇದರಿಂದ ಬೇರೆ ಕೇವಲ ನೋಡುವ ಅರಿಯುವವನು ಎಂದು ತಿಳಿದರೆ ಅದೇ ಕೈವಲ್ಯ, ಮೋಕ್ಷ. ಇದನ್ನೇ ವ್ಯಕ್ತಾವ್ಯಕ್ತ-ಜ್ಞ ವಿಜ್ಞಾನ ಎಂದಿರುವುದು.

ಪ್ರಕೃತಿಯು, ವಿಭು, ಎಂದರೆ ಎಲ್ಲ ಕಡೆ ಇರುವುದು. ಬುದ್ಧಿಯೇ ಮೊದಲಾದವು ಎಲ್ಲರಲ್ಲೂ ಸಮಾನ ತತ್ವವಾಗಿದ್ದರೂ ಪ್ರತಿ ಪುರುಷನಿಗೆ ಬೇರೆ ಬೇರೆಯಾಗಿ ತೋರುವುದು. ಆದ್ದರಿಂದ ಹೊರಗಿನ ಪ್ರಪಂಚದಲ್ಲಿ ಇರುವ ಪ್ರಕೃತಿ ನಿಯಮದಂತೆ ಒಳ ಪ್ರಪಂಚದಲ್ಲೂ ನಿಯಮವಿದೆ ಮತ್ತು ಇವೆರಡೂ ಸಂಬದ್ಧವಾಗಿವೆ. ಹೊರ ಪ್ರಪಂಚದ ನಿಯಮ ಲೌಕಿಕಶಾಸ್ತ್ರ-ವಿಜ್ಞಾನವಾಗಿ ಬೆಳೆದರೆ ಒಳ ಪ್ರಪಂಚದ ನಿಯಮ ಧರ್ಮ-ಕರ್ಮ ಸಂಯೋಗವಾಗಿ ಇದೆ. ಇವುಗಳಲ್ಲಿ ಕೆಲವು ಸಹಜ (ಪ್ರಾಕೃತಿಕ) ಕೆಲವು ಹೇರಿಕೆಯಿಂದ ಬಂದವು (ವೈಕೃತಿಕ). ಇದರಲ್ಲಿ ಧರ್ಮದಿಂದ ಊರ್ಧ್ವಗಮನ, ಅಧರ್ಮದಿಂದ ಕೆಳಗೆ ಜಾರುವುದು, ಜ್ಞಾನದಿಂ ಮೋಕ್ಷ, ಅಜ್ಞಾನದಿಂದ ಬಂಧನ, ವೈರಾಗ್ಯದಿಂದ ಪ್ರಕೃತಿಲಯ, ರಾಜಸದಿಂ ಸಂಸಾರ, ಅಣಿಮಾದಿ (ಐಶ್ವರ್ಯ) ಸಿದ್ಧಿಯಿಂದ ತಡೆಯಿಲ್ಲದ ನಡೆ, ತಮಸ್ಸಿನಿಂದ ಅವುಗಳ ತಡೆ ಎಂದು ವೈಯಕ್ತಿಕ ಜಗತ್ತಿನ ನಡೆಯಿದೆ. ಅದನ್ನೇ ಪ್ರತ್ಯಯ ಸರ್ಗ ಎಂದಿದ್ದಾರೆ. ಇದರಲ್ಲಿ ವಿಪರ್ಯಯಾ (ತಪ್ಪು), ಅಶಕ್ತಿ, ತುಷ್ಟಿ ಮತ್ತು ಸಿದ್ಧಿ ಎಂಬ ನಾಲ್ಕು ಗುಣವೈಷಮ್ಯಗಳ ಮೇಲು ಕೀಳಾಟದಿಂದ ೫೦ ಭೇದಗಳಾಗಿ ಮನಸ್ಸಿನ ನಿರ್ಮಾಣ ಮತ್ತು ಕಾರ್ಯ ನಡೆಯುತ್ತದೆ. ಅದು ಸಾಂಖ್ಯ ಮನಃಶಾಸ್ತ್ರ, ಯೋಗಕ್ಕೆ ಮೂಲ.

## ಸತ್ಕಾರ್ಯವಾದ

ಸಾಂಖ್ಯ ದರ್ಶನದಲ್ಲಿ ಮುಖ್ಯವಾದ ಗುಣವೆಂದರೆ ಅಂತಃಕರಣ, ಮನಸ್ಸು, ಜೀವ ಮತ್ತು ಭೌತಿಕ ಜಗತ್ತಿನ ಅನುಸ್ಯೂತ ಸಂಬಂಧ. ಇದರಿಂದ ಜ್ಞಾನದ ಮೂಲವಾದ ಕಾರ್ಯ-ಕಾರಣ ಸಂಬಂಧದ ವಿವೇಚನೆಯೂ ಆಚಾನಕ್ ಆದದ್ದಲ್ಲ; ಬದಲಿಗೆ, ಸುಸಂಬದ್ಧವಾದದ್ದು ಎಂದು ಪ್ರತಿಪಾದಿಸಲಾಯಿತು. ಇರುವುದು ನಾಶವಾಗುವುದಿಲ್ಲ, ಬದಲಾಗುತ್ತದೆ; ಇಲ್ಲದ್ದು ಸುಮ್ಮನೆ ಮಾಂತ್ರಿಕವಾಗಿ ಸೃಷ್ಟಿಯಾಗುವುದಿಲ್ಲ. ಇರುವುದು ಬದಲಾಗುವುದು. ಬದಲಾದದ್ದರಲ್ಲಿ ಅದು ಯಾವುದರಿಂದ ಬದಲಾಯಿತೊ ಅದರ ಕುರುಹು ಇರುತ್ತದೆ. ಯಾವುದರಿಂದ ಏನೋ ಸೃಷ್ಟಿಯಾಗುವುದಿಲ್ಲ. ಯಾವುದರಲ್ಲಿ ಯಾವ ಸಾಧ್ಯತೆ/ಶಕ್ತಿ ಇರುತ್ತದೋ ಅದು ಮಾತ್ರ ಅಲ್ಲಿಂದ ಹೊರಹೊಮ್ಮುತ್ತದೆ. (ಅಸದಕರಣಾತ್ ಉಪಾದಾನಗ್ರಹಣಾತ್, ಸರ್ವಸಂಭವ ಅಭಾವಾತ್। ಶಕ್ತಸ್ಯ ಶಕ್ಯಕರಣಾತ್ ಕಾರಣಭಾವಾಚ್ಚ ಸತ್‌ಕಾರ್ಯಮ್). ಆದ್ದರಿಂದ ಕಾರ್ಯ ಎನ್ನುವುದು ಕಾರಣದಲ್ಲಿ ಇದ್ದೇ ಇದೆ. ಅದು ನಮಗೆ ತಿಳಿಯುವುದರಿಂದಲೇ ಎಲ್ಲ ಜ್ಞಾನ ವಿಜ್ಞಾನಗಳು ಸಾಧ್ಯವಾಗಿವೆ. ಮುಂದಿನ ಕಾರ್ಯಕ್ಕೆ ಈಗಿನ ಸ್ಥಿತಿ ಕಾರಣವಾಗಿದೆ. ಆದ್ದರಿಂದ ಜ್ಞಾನನಿಷ್ಠವಾಗಿ ವ್ಯವಹರಿಸಲು ಸಾಧ್ಯವಾಗಿದೆ. ಮನಸ್ಸು-ಜೀವ-ಭೌತಿಕ ಜಗತ್ತುಗಳ ನಡುವೆಯೂ ಇದೇ ಕಾರ್ಯಕಾರಣ ಸಂಬಂಧ ಇರುವುದರಿಂದ ಲೌಕಿಕಜ್ಞಾನ-ಧಾರ್ಮಿಕ ನಡವಳಿಕೆ ಸಹ ಅನುಸ್ಯೂತವಾಗಿರುತ್ತದೆ. ಪ್ರಕೃತಿಯೇ ಶಕ್ತಿ ಮತ್ತು ವಿಷಯ. ಅದರ ಸಾತತ್ಯವೆಂದರೆ ವಸ್ತು ಮತ್ತು ಶಕ್ತಿಗಳನ್ನು ಸೃಷ್ಟಿಸಲೂ ಸಾಧ್ಯವಿಲ್ಲ, ನಾಶಮಾಡಲೂ ಸಾಧ್ಯವಿಲ್ಲ, ಅದರ ನಿಯಮಗಳಿಗನುಗುಣವಾಗಿ ಬದಲಾಯಿಸಬಹುದು ಎಂಬ ವೈಜ್ಞಾನಿಕ ನೆಲೆಗಟ್ಟನ್ನು ಕಾಪಿಲ ದರ್ಶನ ಭಾರತದಲ್ಲಿ ನೆಲೆಗೊಳಿಸಿತು.

**ಜಿ. ಶ್ರೀನಿವಾಸ ಮೂರ್ತಿ**
ನಂ. ೩೫, ೨ನೇ ಅಡ್ಡರಸ್ತೆ, ಕೋದಂಡರಾಮಪುರ, ಮಲ್ಲೇಶ್ವರಂ, ಬೆಂಗಳೂರು - ೫೬೦ ೦೦೩.

## ಮೊಬೈಲು



ಒಂದಿಷ್ಟು ನೆನಪಿನ ನರಗಳು
ಮಿದುಳಿನಿಂದ
ಒಂದಿಷ್ಟು ಖಾಲಿ ಹಾಳೆಗಳು
ದಿನಚರಿಯಿಂದ
ಒಂದಿಷ್ಟು ಅಗೋಚರ ತಂತುಗಳು
ದೂರವಾಣಿ ಕಂಬಕ್ಕೆಳೆದ ತಾಮ್ರದಿಂದ
ಚೂರು ಚೂರು ಕಿತ್ತು ಮಾಡಿದ್ದು

ಉದ್ದುದ್ದ ಮಾತಿಗೆ
ಸಿಕ್ಕಿದ್ದು ಗೀಚಿ ಗೆರೆ ಎಳೆದು
ಗುಂಡಿ ಒತ್ತಿ ಲೆಕ್ಕಾಚಾರ ಮಾಡಿ
ಮತ್ತೊಂದರಿಂದ ನೆನಪ ಪ್ರಭಾವಿ
ಮನಸ್ಸನ್ನು ಮಾತ್ರ ಬರಿದುಮಾಡಿಸುವ
ಕೈ-ಪಿಡಿ
ಮೊಬೈಲು.

**ಮೂಡ್ನಾಕೂಡು ಚಿನ್ನಸ್ವಾಮಿ**
ಮುಖ್ಯ ಲೆಕ್ಕಾಧಿಕಾರಿ, ಕೆ.ಎಸ್.ಆರ್.ಟಿ.ಸಿ. ಕೇಂದ್ರ ಕಛೇರಿ,
ಕೆ. ಹೆಚ್. ರಸ್ತೆ, ಶಾಂತಿನಗರ, ಬೆಂಗಳೂರು - ೫೬೦ ೦೨೭



ಸಂದರ್ಶನ

ಸಂದರ್ಶನ, ಚಿತ್ರಗಳು ಮತ್ತು ನಿರೂಪಣೆ : ಜಿ. ಆರ್.

ಲೈಲಾ ಸರ್ರಾಸ್ ಪ್ಯಾಲಿಸ್ಟೈನಿನವರು, ಅವರ ಗಂಡ ಟಾಂ ಡ್ರೂರಿ ಅಮೆರಿಕಾದವರು. ಮಕ್ಕಳೊಡನೆ ಅವರು ಮ್ಯಾಸೆಚುಸೆಟ್ಸ್‌ನ ಪಿಟ್ಸ್‌ಫೀಲ್ಡ್‌ನಲ್ಲಿ ವಾಸಿಸುತ್ತಿದ್ದಾರೆ. ಅಮೆರಿಕಾದ ಪೂರ್ವ ಕರಾವಳಿಯ ನ್ಯೂ ಇಂಗ್ಲೆಂಡಿಗೆ ಸೇರಿದ ಒಂದು ಆಂಗ್ಲಿಕನ್ ಕುಟುಂಬದಲ್ಲಿ ಜನಿಸಿದ ಟಾಂ, ಹಾರ್ವರ್ಡ್ ವಿಶ್ವವಿದ್ಯಾನಿಲಯದ ಪದವೀಧರ ಮತ್ತು ಪ್ರಿನ್ಸ್‌ಟನ್‌ನ ಪಿಎಚ್.ಡಿ. ಪದವೀಧರ. ಸ್ಪ್ಯಾನಿಷ್ ಮತ್ತು ಅರಾಬಿಕ್ ಭಾಷೆ, ಸಾಹಿತ್ಯ ಮತ್ತು ಇತಿಹಾಸ ಅವರ ಪರಿಣತಿಯ ಕ್ಷೇತ್ರ. ವಾಷಿಂಗ್‌ಟನ್, ನೆಬ್ರಾಸ್ಕ ಮತ್ತು ಮ್ಯಾಸೆಚುಸೆಟ್ಸ್ ವಿಶ್ವವಿದ್ಯಾನಿಲಯಗಳಲ್ಲಿ ಮೂವತ್ತು ವರ್ಷ ಅವನ್ನು ಬೋಧಿಸಿದ್ದಾರೆ. ನಿವೃತ್ತರಾದಾಗ ಅಮ್ಹರ್ಸ್ಟ್‌ನಲ್ಲಿ ಪ್ರಾಧ್ಯಾಪಕ. "ಬೇರೆಷ್ಟೋ ಅಮೆರಿಕನ್ನರಿಗಿಂತ ಭಿನ್ನವಾಗಿ ನಾನು ವಿಶ್ವದ ವಿದ್ಯಮಾನಗಳಲ್ಲಿ ತೀವ್ರ ಆಸಕ್ತಿಯುಳ್ಳವನು, ವಿಶ್ವವನ್ನು ಪ್ರೀತಿಸಲು ನನ್ನ ತಾಯಿ-ತಂದೆ ಕಲಿಸಿದರು" ಎಂದು ಹೇಳುತ್ತಾರೆ. ಉದಾರವಾದಿ ಪ್ರಗತಿಪರ ಕುಟುಂಬಕ್ಕೆ ಸೇರಿದ್ದ ಟಾಂನ ತಂದೆ ಎರಡನೆಯ ಮಹಾಯುದ್ಧದ ಕಾಲದಲ್ಲಿ ಸೈನಿಕನಾಗಲು ನಿರಾಕರಿಸಿದ್ದ ಅಪರೂಪದ ವ್ಯಕ್ತಿ. ಯುದ್ಧ ವಿರೋಧಿಯೆಂಬ ಕಾರಣಕ್ಕೆ ಆತನನ್ನು ಹುಚ್ಚಾಸ್ಪತ್ರೆಯೊಂದರಲ್ಲಿ ಕೆಲಸ ಮಾಡಲು ಅಟ್ಟಲಾಗಿತ್ತು. ಅವರೂ ಹಾರ್ವರ್ಡ್ ಪದವೀಧರ, ಖ್ಯಾತ ಲೇಖಕ. ಶೇಕ್ಸ್‌ಪಿಯರ್‌ನ ಸಮಕಾಲೀನ ಥಾಮಸ್ ಕ್ಯಾಂಪಿಯನ್ ಬಗೆಗಿನ ಅವರ ಗ್ರಂಥ ಉತ್ತಮ ಶ್ರೇಣಿಯದು. "ದೇಶದ ಕೆಲಸಕ್ಕೆ ವಿಮುಖನಾದವನು" ಎಂದು ಜರಿದು ಕುಟುಂಬದ

# ನೆಗೆವ್ ಮರುಭೂಮಿಯನ್ನೇಕೆ ಇಸ್ರೇಲ್ ಫಲವತ್ತಾಗಿಸಬಾರದು !

- ಲೈಲಾ ಮತ್ತು ಟಾಂ ಡ್ರೂರಿ

ಇತರರು ಅವರಿಗೆ ಬಹಿಷ್ಕಾರ ಹಾಕಿದರು. "ನಾನೂ ಯುದ್ಧ ವಿರೋಧಿಯೇ. ನನ್ನ ದೇಶ ಯಾವಾಗಲೂ ಯುದ್ಧಕೋರನಾಗಿ ಬೇರೆ ದೇಶಗಳ ಹಾಗೂ ಸಂಸ್ಕೃತಿಗಳ ಮೇಲೆ ಹಲ್ಲೆ ಮಾಡುವುದನ್ನು ಖಂಡಿಸುತ್ತೇನೆ " ಎನ್ನುತ್ತಾರೆ ಟಾಂ. ತಂದೆ-ತಾಯಿ ಆಂಗ್ಲಿಕನ್ ಚರ್ಚಿಗೆ ಸೇರಿದ್ದರೂ ಕ್ವೇಕರ್ ಪಂಥದಲ್ಲಿ ಒಲವಿದ್ದವರು. "ನಮ್ಮ ಕುಟುಂಬವು ನೈಜ ಪ್ರಜಾಪ್ರಭುತ್ವವನ್ನು ಗೌರವಿಸುವಂಥದು" ಎನ್ನುವ ಟಾಂ ನಿಧಾನಸ್ಥ, ಸ್ನೇಹಪರ, ವಿದ್ವಾಂಸ ಮತ್ತು ಜಾನಪದ ತಜ್ಞ. ಲೈಲಾ ಪ್ಯಾಲಿಸ್ಟೈನಿನ ಕ್ರೈಸ್ತ ಕುಟುಂಬವೊಂದಕ್ಕೆ ಸೇರಿದವರು. ಬೇಟ್ ಜಾಲ ಎಂಬ ತನ್ನೂರಿನಲ್ಲಿ, ನಂತರ ಹತ್ತಿರದ ಬೆತ್ಲೆಹಂ ಪಟ್ಟಣದಲ್ಲಿ, ಪ್ರೌಢಶಾಲೆಯ ವ್ಯಾಸಂಗ; ನಂತರ ಜೋರ್ಡಾನಿನ ವಿದ್ಯಾರ್ಥಿವೇತನ ಪಡೆದು ಲೆಬನಾನ್‌ನ ಬೇರೂತ್‌ನಲ್ಲಿ ಕಾಲೇಜು ಸೇರಿ ಆಂಗ್ಲಭಾಷಾ ಸಾಹಿತ್ಯ ಮತ್ತು ಶಿಕ್ಷಣದಲ್ಲಿ ಪದವಿ ಪಡೆದರು. ಪ್ಯಾಲಿಸ್ಟೈನಿನ ಭಾಗವಾದ ಪಶ್ಚಿಮ ದಂಡೆಯ ಶಾಲೆಗಳಲ್ಲಿ ಕೆಲಕಾಲ ಬೋಧಕಿಯಾಗಿದ್ದು ೧೯೬೭ರ ಯುದ್ಧದ ನಂತರ ಬ್ರಿಟನ್ನಿನ ವೇಲ್ಸ್ ವಿಶ್ವವಿದ್ಯಾನಿಲಯದಲ್ಲಿ ಬ್ರಿಟಿಷ್ ಕೌನ್ಸಿಲ್‌ನ ಶಿಷ್ಯವೇತನ ಪಡೆದು ಸ್ನಾತಕೋತ್ತರ ಪದವಿಗೆ ಭಾಜನರಾದ ಲೈಲಾ ಮತ್ತೆರಡು ವರ್ಷ ಅಮೆರಿಕಾದ ವಿಶ್ವವಿದ್ಯಾನಿಲಯವೊಂದರಲ್ಲಿ ವ್ಯಾಸಂಗ ಮಾಡಿ ಮಧ್ಯ ಪ್ರಾಚ್ಯ ಭಾಷೆ ಮತ್ತು ಸಾಹಿತ್ಯದಲ್ಲಿ ಸ್ನಾತಕೋತ್ತರ ಪದವಿ ಪಡೆದಿದ್ದಾರೆ. ವಿವಾಹದ ನಂತರ ನೆಬ್ರಾಸ್ಕ ವಿಶ್ವವಿದ್ಯಾನಿಲಯ ಸೇರಿ ಸಮಾಜ ಕಾರ್ಯ ವಿಭಾಗದಲ್ಲಿ ಸ್ನಾತಕೋತ್ತರ ಪದವಿ ಹೊಂದಿ ಅದನ್ನೇ ವೃತ್ತಿಯನ್ನಾಗಿ ಮಾಡಿಕೊಂಡಿದ್ದಾರೆ. ಪಿಟ್ಸ್‌ಫೀಲ್ಡ್‌ನ ಆಸ್ಪತ್ರೆಯಲ್ಲಿ ಆಕೆ ಆಪ್ತಸಲಹಾಗಾರ್ತಿ, ಕೌಟುಂಬಿಕ ಸಮಸ್ಯೆಗಳ ಪರಿಹಾರ ಕಾರ್ಯದಲ್ಲಿ ಪರಿಣತೆ.

ಲೈಲಾ ಮತ್ತು ಟಾಂ ಡ್ರೂರಿ ದಂಪತಿಗಳೊಡನೆ ಪಿಟ್ಸ್‌ಫೀಲ್ಡ್‌ನಲ್ಲಿ ಐದಾರು ದಿನ ಕಳೆದ ಜಿ. ಆರ್. ಆ ಕುಟುಂಬಕ್ಕೆ ಹತ್ತಿರದವರು. ೨೦೧೦ರ ನವೆಂಬರ್ ೨೧ರಂದು ಅವರ ಮನೆಯಲ್ಲೇ ಕೂತು ಲೈಲಾ ಮತ್ತು ಟಾಂ ಇಬ್ಬರನ್ನೂ 'ಹೊಸತು'ಗಾಗಿ ಸಂದರ್ಶಿಸಿದ್ದುದರ ಸಂಕ್ಷಿಪ್ತ ವರದಿ ಇಲ್ಲಿದೆ.

**ಹೊಸತು** : ಲೈಲಾ, ವೇಲ್ಸ್‌ನಲ್ಲಿ ನನ್ನ ಸಹಪಾಠಿಯಾಗಿದ್ದ ನೀವು ಪ್ಯಾಲಿಸ್ಟೈನ್‌ನವರು. ಆಗ ನಿಮಗಿನ್ನೂ ಟಾಂ ಪರಿಚಯವಾಗಿರಲಿಲ್ಲ. ನೆಬ್ರಾಸ್ಕದಲ್ಲಿ ಅವರ ಪರಿಚಯವಾಗಿ ಮದುವೆಯಾಗಿದ್ದೀರಿ. ಇಸ್ರೇಲ್‌ನ ಪಕ್ಷಪಾತಿಯಾದ ಅಮೆರಿಕಾಕ್ಕೆ ಸೇರಿದ ಟಾಂ, ಸ್ಪ್ಯಾನಿಷ್ ಸಾಹಿತ್ಯ-ಸಂಸ್ಕೃತಿಗಳ ಅಧ್ಯಾಪನ ಮಾಡುವವರು ಮತ್ತು ಪ್ಯಾಲಿಸ್ಟೈನಿನ ನೀವು ಆಪ್ತಸಲಹಾಗಾರರು. ಈ ಜೋಡಿ ಸ್ವಾರಸ್ಯವಾಗಿದೆ. ಇರಲಿ, ಇಂದಿಗೆ ಸರಿಯಾಗಿ ಇಪ್ಪತ್ತು ವರ್ಷಗಳ ಹಿಂದೆ ಲೆಬನಾನಿನಲ್ಲಿ ಸಾಬ್ರ ಮತ್ತು ಶತೀಲಾಗಳಲ್ಲಿ ಪ್ಯಾಲಿಸ್ಟೈನ್ ನಿರಾಶ್ರಿತರ ಶಿಬಿರಗಳ ಮೇಲೆ ಇಸ್ರೇಲ್ ತೀವ್ರ ಹಲ್ಲೆ ನಡೆಸಿ ನೂರಾರು ಜನರನ್ನು ಕೊಂದಿತ್ತು. ಐವತ್ತು ವರ್ಷಗಳಿಗೂ ಮಿಗಿಲಾಗಿ ನಿಮ್ಮ ದೇಶ ಸಂಘರ್ಷಗಳ ಮಡಿಲಲ್ಲಿ ಮುಳುಗಿದೆ. ಈ ಪ್ರಕರಣ ನಿಮಗೇನನಿಸುತ್ತದೆ ?

**ಲೈಲಾ** : ನನಗೆ ಮಾತ್ರವಲ್ಲ, ಎಲ್ಲ ಪ್ಯಾಲಿಸ್ಟೈನ್ ನಾಗರಿಕರಿಗೆ ಅದು ತಲ್ಲಣ ಉಂಟು ಮಾಡಿದೆ, ಉಗ್ರವಾದ ಕೋಪ ತಂದಿದೆ, ನಮ್ಮ ಜೀವನವನ್ನು ಹಾಳುಗೆಡವಿದೆ. ನನ್ನ ಭಾವನೆಯೇ ಟಾಂನ ಭಾವನೆಗಳೂ ಆಗಿವೆಯೆಂದರೆ ನೀವೇನೂ ಅಚ್ಚರಿಗೊಳ್ಳಬೇಕಾಗಿಲ್ಲ.

**ಹೊಸತು** : ಪ್ಯಾಲಿಸ್ಟೈನ್ ಸಮಸ್ಯೆಯ ಉಗಮವಾಗಿದ್ದು ಹೇಗೆ ?

**ಲೈಲಾ** : ಬ್ರಿಟನ್ನಿನ ಸರ್ಕಾರದ ಪರವಾಗಿ ಅಂದಿನ ವಿದೇಶಾಂಗ ಸಚಿವ ಬಾಲ್ಫರ್ ಪ್ಯಾಲಿಸ್ಟೈನ್‌ನ ಜನರನ್ನೇನೂ ಕೇಳದೆ, ಆ ದೇಶ ಅವನ ಸ್ವತ್ತೇನೋ ಎಂಬಂತೆ, ಆ ದೇಶವನ್ನು ಇಸ್ರೇಲ್ ಎಂದು ಘೋಷಿಸಿದ ಮತ್ತು ವಿಶ್ವದ ಎಲ್ಲ ಯಹೂದಿಗಳೂ ಅಲ್ಲಿಗೆ ಬಂದು ನೆಲೆಸಬಹುದೆಂದು ತಿಳಿಸಿದ. ಅಲ್ಲಿದ್ದ ನಾವೆಲ್ಲಾ ಎಲ್ಲಿ ಹೋಗಬೇಕೆಂದು ನಿರೀಕ್ಷಿಸಿದ್ದನೋ ಏನೋ, ಅಂತೂ ನಮ್ಮ ಮನೆ-ಮಠ ಎಲ್ಲಾ ಬೇರೆಯವರದಾಯಿತು, ನಾವು ನಿರ್ವಸಿತಗೊಂಡೆವು. ೧೯೪೮ರಿಂದಲೂ ನಾವಿದನ್ನು ಪ್ರತಿಭಟಿಸಿ ಹೋರಾಡುತ್ತಾ ಬಂದಿದ್ದೇವೆ, ಅದನ್ನು ಮುಂದುವರಿಸುತ್ತೇವೆ. ನಮ್ಮ ದೇಶವನ್ನು ಆಕ್ರಮಿಸಿರುವ ಇಸ್ರೇಲ್ ಬಳಿ ಭಾರಿ ಶಸ್ತ್ರಾಸ್ತ್ರಗಳಿವೆ, ನಮ್ಮಲ್ಲಿಲ್ಲ. ಹೀಗಾಗಿ ಸತತವಾಗಿ ಪ್ಯಾಲಿಸ್ಟೈನಿನ ಜನ ಭೂಮಿಯನ್ನು ಕಳೆದುಕೊಳ್ಳುತ್ತಲೇ ಇದ್ದಾರೆ. ಹಿಂದೆಲ್ಲಾ ಏನಾಗುತ್ತಿತ್ತು ಗೊತ್ತೆ? ನಮ್ಮ ಎಷ್ಟೋ ಜನ ಬೇರೆ ದೇಶಗಳಿಗೆ ಉದ್ಯೋಗವನ್ನರಸಿ ಹೋಗುತ್ತಿದ್ದರು, ಅವರ ಕುಟುಂಬದ ಇತರರು ಅಲ್ಲೇ ಉಳಿದು ಕೃಷಿ ಮಾಡಿಕೊಂಡಿರುತ್ತಿದ್ದರು. ನನ್ನ ತಾಯಿಯ ತಂದೆ ಪೆರುಗೆ ಹೋಗಿದ್ದರು. ನನ್ನ ತಾಯಿ ಹುಟ್ಟಿದ್ದು ಅಲ್ಲೇ. ಆಮೇಲೆ ಅವರು ಬೇಟ್ ಜಾಲಾಕ್ಕೆ ಹಿಂದಿರುಗಿದ್ದರು. ಅಂಥವರೆಲ್ಲರ ಭೂಮಿ ಈಗ ಇಸ್ರೇಲಿನ ವಶವಾಗಿದೆ. ಅಮೀರಾ ಹಾಸ್ ಎಂಬೊಬ್ಬ ಅರಬ್ಬೀ ಮಹಿಳೆ ಇದ್ದಳು. ಆಕೆ ಯಹೂದಿ, ಹಾರೆಟ್ಸ್‌ನವಳು. ಆಕೆ ಪತ್ರಕರ್ತೆ. ಒಂದು ಪುಸ್ತಕ ಬರೆದಿದ್ದಾಳೆ, ''ಸಾಗರವನ್ನು ಕುಡಿಯುವುದು'' ಎಂದು ಅದರ ಶೀರ್ಷಿಕೆ. ಅಂದರೇನು ಗೊತ್ತೆ? ತೀರಾ ನಿಸ್ಸಹಾಯಕರು ಅಂತ. ೧೯೪೮ರಲ್ಲಿ ನನ್ನೂರು ಬೇಟ್ ಜಾಲಾದ ಮೇಲೆ ಬಾಂಬುಗಳ ಸುರಿಮಳೆಯಾದಾಗ ನಾನಲ್ಲಿದ್ದವಳು. ತೋಟಗಳಲ್ಲಿ ಆಲಿವ್ ಸಂಗ್ರಹಿಸುತ್ತಿದ್ದವರೆಲ್ಲಾ ಅಲ್ಲಲ್ಲೇ ಸತ್ತರು. ಜೆರೂಸಲೆಮ್ಮಿನಿಂದ ನನ್ನೂರಿಗೆ ೧೫ ಮೈಲಿ, ಅಷ್ಟೆ. ೧೯೪೮ರಲ್ಲಿ ಇಸ್ರೇಲಿ ಪಡೆ ಸಂಪೂರ್ಣವಾಗಿ ನಾಶಮಾಡಿದ ಹಳ್ಳಿ ದೆಯಾರ್‌ಯಾಸಿನ್ ನಮ್ಮೂರಿಗೆ ಹತ್ತಿರ. ಅಲ್ಲಿದ್ದ ಜನರೆಲ್ಲಾ ಹತರಾಗಿ ಹೋದರು. ಜೆರೂಸಲೆಂನಿಂದ ನಡೆದು ಬಂದವರು ದಾರಿಯುದ್ದಕ್ಕೂ ಅವರು ಕಂಡಿದ್ದ ಭೀಕರ ಹತ್ಯೆಗಳನ್ನು ಕುರಿತು ಹೇಳುತ್ತಿದ್ದರು. ಬ್ರಿಟನ್ನಿನ ಏಕಪಕ್ಷೀಯ ತೀರ್ಮಾನವನ್ನು ಪ್ರಪಂಚ ವಿರೋಧಿಸಲಿಲ್ಲ. ಅದರ ಪರಿಣಾಮವೇ ಈ ಹತ್ಯೆಗಳು, ಇಸ್ರೇಲಿನ ಪಾತಕಿ ಧೋರಣೆ, ಇತ್ಯಾದಿ.

**ಹೊಸತು** : ಟಾಂ, ಪಶ್ಚಿಮ ಏಷ್ಯಾದ ರಾಜಕೀಯವನ್ನು ನೀವು ಹೇಗೆ ವಿಶ್ಲೇಷಿಸುತ್ತೀರಿ ?

**ಟಾಂ** : ಪ್ಯಾಲಿಸ್ಟೈನಿನ ನ್ಯಾಯಯುತ ಸಂಗತಿಯನ್ನು ಪಶ್ಚಿಮದ ರಾಷ್ಟ್ರಗಳು ಮನವರಿಕೆ ಮಾಡಿಕೊಂಡಿಲ್ಲ. ಆ ದೇಶಗಳ ಮಾಧ್ಯಮಗಳು ಸನ್ನಿವೇಶವನ್ನು ತಿರುಚಿಯೇ ವರದಿ ಮಾಡುತ್ತವೆ. ಸೌದಿ ಅರೇಬಿಯಾದ ಬಂದೇರ್ ಎಂಬ ರಾಜಕುವರ ಏನು ಹೇಳಿದ್ದ ನೋಡಿ : ಇಸ್ರೇಲ್ ೧೯೬೭ರ ಗಡಿಗಳಿಗೆ ತೆರಳಿದರೆ ಅರಬ್ ರಾಷ್ಟ್ರಗಳು ಇಸ್ರೇಲಿಗೆ ಮಾನ್ಯತೆ ನೀಡಲು ಸಿದ್ಧ, ಎಂದು. ಸಿರಿಯಾಕ್ಕೆ ಗೋಲನ್ ಬೆಟ್ಟಪ್ರದೇಶ, ಹಾಗೂ ಪಶ್ಚಿಮ ದಂಡೆ ಮತ್ತು ಗಾಜಾ ಪ್ಯಾಲಿಸ್ಟೈನಿಗೆ ಮೊದಲು ದಕ್ಕಬೇಕು. ಬ್ರಿಟನ್ ಪ್ಯಾಲಿಸ್ಟೈನಿನಿಂದ ತೆರಳಿದಾಗ ಪಶ್ಚಿಮ ದಂಡೆಯನ್ನು ಜೋರ್ಡಾನ್ ಪಡೆಯಿತು. ೧೯೬೭ರಲ್ಲಿ ಲೈಲಾ ಬ್ರಿಟನ್ನಿನಿಂದ ವ್ಯಾಸಂಗ ಮುಗಿಸಿ ಹಿಂದಿರುಗಿದಾಗ ಇಸ್ರೇಲಿ ಸೈನಿಕರು ಆಕೆಯನ್ನು ತನ್ನೂರಿಗೆ ಹೋಗಲು ಎಷ್ಟು ಸತಾಯಿಸಿದ್ದರು ಎಂಬುದು ನಿಮಗೇ ಗೊತ್ತಿದೆ. ಗಾಜಾ ಈಜಿಪ್ಟಿನ ಅಧೀನದಲ್ಲಿತ್ತು. ಈಜಿಪ್ಟಿನಲ್ಲಿ ಜನರ ಮೇಲೆ ನಡೆಯುತ್ತಿರುವ ದಬ್ಬಾಳಿಕೆಯನ್ನು ಪಶ್ಚಿಮ ರಾಷ್ಟ್ರಗಳ ಮಾಧ್ಯಮ ಎಂದೂ ಬಿಂಬಿಸುವುದಿಲ್ಲ. ನಮ್ಮ ದೇಶದ ಟಿ.ವಿ.ಯಲ್ಲಿ ಎಂದಾದರೂ ಅದರ ಬಗ್ಗೆ ವರದಿಯನ್ನು ನೀವು ನೋಡಿದಿರಾ ? ಅಮೆರಿಕಾದಿಂದ ಹೇರಳವಾಗಿ ಹಣ ಪಡೆಯುವ ರಾಷ್ಟ್ರಗಳ ಪೈಕಿ ಇಸ್ರೇಲ್ ಮೊದಲನೆಯದು, ಈಜಿಪ್ಟ್ ಎರಡನೆಯದು. ಪಶ್ಚಿಮ ಏಷ್ಯಾದ ರಾಷ್ಟ್ರಗಳಲ್ಲಿ ಆಳುವವರು ಮತ್ತು ಪ್ರಜೆಗಳ ನಡುವಣ ಕಂದಕ ಅಗಾಧವಾಗಿದೆ. ಅಮೆರಿಕಾದ ಆಣತಿಯಂತೆ ನಡೆಯುವುದು, ದೇಶದ ಜನರ ಮೇಲೆ ದೌರ್ಜನ್ಯವೆಸಗುವುದು, ಇವೆರಡೂ ಆ ದೇಶಗಳಲ್ಲಿ ಅತಿ ಸಾಮಾನ್ಯ. ಈಜಿಪ್ಟ್ ಮತ್ತು ಜೋರ್ಡಾನ್ ಸಂಪೂರ್ಣವಾಗಿ ಅಮೆರಿಕಾದ ಕೈಗೊಂಬೆಗಳಾಗಿವೆ. ಅಮೆರಿಕಾದ ಆಶ್ರಯವಿಲ್ಲದಿದ್ದರೆ ಅಲ್ಲಿಯ ಸರ್ಕಾರಗಳು ಎರಡು ದಿನಗಳಲ್ಲಿ ಕುಸಿದು ಮಣ್ಣುಪಾಲಾಗುತ್ತವೆ, ಗೊತ್ತೆ? ''ಮುಸ್ಲಿಂ ಬ್ರದರ್‌ಹುಡ್'' ಎಂಬ ಸಂಸ್ಥೆ ಈಜಿಪ್ಟಿನಲ್ಲೊಮ್ಮೆ ಬಸ್ಸೊಂದನ್ನು ಸುಟ್ಟುಹಾಕಿತು, ಈಗ ಅದು ತಲೆಮರೆಸಿ ನಡೆಯಬೇಕಾಗಿದೆ. ಅಲ್-ಕೈದಾ ಜೊತೆ ಸಂಪರ್ಕ ಹೊಂದಿದೆಯೆಂಬ ಆರೋಪ ಹೊರಿಸಲಾಗಿದೆ. ಯಾರನ್ನಾದರೂ ಮಟ್ಟಹಾಕಬೇಕಾದರೆ ಆ ಆರೋಪ ಸಾಕಲ್ಲ! ಆತಂಕಕಾರಿಯೆಂಬ ಪಟ್ಟ ನೀಡಿ ಯಾರನ್ನು ಬೇಕಾದರೂ ಸಂಹರಿಸಬಹುದು. ಪಶ್ಚಿಮ ಏಷ್ಯಾದಲ್ಲಿ ಇದು ಸರ್ವೇಸಾಮಾನ್ಯ.

**ಹೊಸತು** : ಪ್ಯಾಲಿಸ್ಟೈನಿನ ಇತಿಹಾಸ ಮತ್ತು ಝಿಯೋನಿಸಂ (ವಿಶ್ವದ ಯಹೂದಿಗಳೆಲ್ಲಾ ಇಸ್ರೇಲಿಗೆ ಬಂದು ನೆಲೆಸಬಹುದೆಂಬ ಭರವಸೆ ನೀಡುವುದು) ಇವೆರಡರ ನಡುವೆ ಸಂಧಾನ ಹೇಗೆ ? ಅಮೆರಿಕಾ ದೇಶದ ನಿಯತಕಾಲಿಕವೊಂದರಲ್ಲಿ ಇತ್ತೀಚೆಗೆ ಒಂದು ಲೇಖನ ಓದಿದೆ : ಪ್ಯಾಲಿಸ್ಟೈನಿನ ಜನ ತಾವೇ ಪಾಲಿಸ್ಟೈನಿಗೆ ಸ್ವತಃ ಎಲ್ಲಿಂದಲೋ ಬಂದು ನೆಲೆಸಿರುವವರು ಎಂದು ಅದರಲ್ಲಿ ಬರೆಯಲಾಗಿತ್ತು.

**ಲೈಲಾ** : ಪ್ಯಾಲಿಸ್ಟೈನಿನ ಜನರನ್ನು ಸರ್ವಥಾ ಕಡೆಗಣಿಸಿದಾಗ ಮಾತ್ರ ಝಿಯೋನಿಸಂಗೆ ಬಲ ತುಂಬಬಹುದು ! ಇಂದಿನ ಸನ್ನಿವೇಶದಲ್ಲಿ ಯಾವ ಒಪ್ಪಂದವೂ ಎರಡೂ ಕಡೆಯವರಿಗೆ ಸಮಾಧಾನ ತರಲಾರದು. ಭೂಮಿ, ಸಂಪನ್ಮೂಲಗಳು, ಎಲ್ಲವನ್ನೂ ಪ್ಯಾಲಿಸ್ಟೈನ್ ಜನರಿಂದ ಕಿತ್ತುಕೊಳ್ಳಲಾಗಿದೆ. ಪಶ್ಚಿಮ ದಂಡೆಯಲ್ಲಿ ಇಸ್ರೇಲಿನವರು ಮಾತ್ರವೇ ಬಳಸಬಹುದಾದ ರಸ್ತೆಗಳನ್ನು ಮಾಡಿಕೊಂಡಿದ್ದಾರೆಂದು ನಿಮಗೆ ತಿಳಿದಿದೆಯೆ ? ಅಲ್ಲಿ ಮನೆಗಳನ್ನು ಕಟ್ಟಿಕೊಂಡಿದ್ದಾರೆ, ದೊಡ್ಡ ಗೋಡೆ ಎಬ್ಬಿಸಿದ್ದಾರೆ ಅವರು !

**ಟಾಂ** : ಕೆಲವು ಇಸ್ರೇಲ್ ಜನರಿಗೆ ಇದು ಗೊತ್ತು ಮತ್ತು ಅವರು ಕಸಿವಿಸಿಗೊಳ್ಳುತ್ತಾರೆ. ''ಝಿಯೋನಿಸ್ಟರಿಗೆ ಎಲ್ಲವೂ ಸೇರಿದೆ, ಸೇರಬೇಕು'' ಎಂಬುದನ್ನವರು ಒಪ್ಪುವುದಿಲ್ಲ. ಎರಡೂ ಕಡೆಯವರಿಗೆ ಮಾನ್ಯವಾಗುವ ಒಪ್ಪಂದ ಅವರಿಗೆ ಬೇಕು. ಜಿನೀವಾ ಒಪ್ಪಂದವೊಂದರ ಪ್ರಕಾರ, ಯುದ್ಧದಲ್ಲಿ ಜಯಿಸಿದ ಭೂಭಾಗಗಳಲ್ಲಿ ಜಯಗಳಿಸಿದ ರಾಷ್ಟ್ರವು ಮನೆ-ಮಠ ಕಟ್ಟಿಕೊಳ್ಳುವಂತಿಲ್ಲ. ಇಸ್ರೇಲ್ ಆ ಒಪ್ಪಂದವನ್ನು ಮುರಿದಿದೆ. ಆದರೆ ಅಮೆರಿಕಾದ ಬೆಂಬಲ ಇರುವುದರಿಂದ ಅದನ್ನು ಮಾಡಲು ಸಾಧ್ಯವಾಗಿದೆ.

**ಹೊಸತು** : ಪ್ಯಾಲಿಸ್ಟೈನಿನ ಜನ ಹೊರಗಿನಿಂದ ಬಂದವರೆನ್ನುತ್ತಾರಲ್ಲ, ಅದಕ್ಕೇನು ಹೇಳುತ್ತೀರಿ ?

**ಲೈಲಾ** : ಎಷ್ಟು ಹಿಂದಕ್ಕೆ ಹೋಗುತ್ತೀರೆನ್ನುವುದನ್ನು ಆಧರಿಸಿ ಈ ಮಾತಿಗೆ ಉತ್ತರ ಕೊಡಬೇಕು. ಬುಡಕಟ್ಟುಗಳೇ ಇದ್ದ ಕಾಲಕ್ಕೆ ಸಂಬಂಧಿಸಿ ಹೇಳುವುದಾದರೆ ಅದು ಪ್ರಪಂಚದ ಎಲ್ಲ ದೇಶಗಳಿಗೂ ಅನ್ವಯಿಸುತ್ತದೆ. ಪ್ಯಾಲಿಸ್ಟೈನ್ ಎಂಬುದು ಚರಿತ್ರೆಯಲ್ಲಿ ಬಹಳ ಪುರಾತನವಾದ್ದು. ಬೈಬಲಿನಲ್ಲಿ ಆ ಭೂಭಾಗದ ಪ್ರಸ್ತಾಪವಿದೆ. ಅವರಿಗೆ ಅಲ್ಲಿ ''ಕ್ಯಾನನೈಟ್‌ಗಳು'' ಎಂಬ ಹೆಸರಿದೆ. ೧೯೪೮ರ ತರುವಾಯದಲ್ಲಿ ಅರಬ್ ರಾಷ್ಟ್ರಗಳ ಸೈನ್ಯ ಅಲ್ಲಿಗೆ ಪ್ರವೇಶಿಸಿತ್ತು, ಆದರೆ ಹಿಂದಕ್ಕೆ ಹೋಯಿತು. ಇಸ್ರೇಲಿಗೆ ಪಶ್ಚಿಮ ರಾಷ್ಟ್ರಗಳು ಅಪಾರ ಆಯುಧ ಸಾಮಗ್ರಿ ನೀಡಿದ್ದುವು. ಇಂಗ್ಲೆಂಡಿನಂತಹ ದೇಶಗಳಲ್ಲಿದ್ದ ಯಹೂದಿಗಳು ಆ ದೇಶಗಳನ್ನು ಬಿಟ್ಟುಬರಬೇಕಾಗಿತ್ತೇಕೆ ?



''ಸೆಟ್ಲರ್ಸ್'' ಎಂಬೊಂದು ಪುಸ್ತಕವಿದೆ. ಅದನ್ನೋದಿ, ಆಗ ನಿಮಗೆ ತಿಳಿಯುತ್ತದೆ, ಪ್ಯಾಲಿಸ್ಟೈನಿನೊಳಕ್ಕೆ ಯಹೂದಿಗಳು ಹೇಗೆ ನುಸುಳಿದರೆಂಬುದು.

**ಹೊಸತು** : ಈಗ ಇಸ್ರೇಲ್ ಇರುವ ಜಾಗ ನಿರ್ಜನವಾಗಿತ್ತು, ಮರುಭೂಮಿಯಾಗಿದ್ದ ಆ ಪ್ರದೇಶವನ್ನು ನಾವು ಹಸಿರಾಗಿಸಿದ್ದೇವೆ, ಅಲ್ಲಿ ಕೃಷಿಯೇ ಇರಲಿಲ್ಲ, ಎಂಬಿತ್ಯಾದಿ ಮಾತುಗಳನ್ನು ಇಸ್ರೇಲಿನ ನಾಯಕರು ಹಾಗೂ ಮಾಧ್ಯಮಗಳು ಆಗಾಗ್ಗೆ ಹೇಳುತ್ತಿರುವುದನ್ನು ಗಮನಿಸಿದ್ದೀರಾ ?

**ಲೈಲಾ** : ಅದೊಂದು ಅಪ್ಪಟ ಸುಳ್ಳು. ಪ್ಯಾಲಿಸ್ಟೈನ್ ಯಾವಾಗಲೂ ಹಸಿರಾಗಿಯೇ ಇತ್ತು. ನಮ್ಮ ಜಮೀನು ಸಹ ಅದಕ್ಕೊಂದು ಉದಾಹರಣೆ. ನಾವು ದ್ರಾಕ್ಷಿ, ಕಿತ್ತಳೆ, ಆಲಿವ್, ಎಲ್ಲಾ ಬೆಳೆಯುತ್ತಿದ್ದೆವು. ನಮ್ಮ ದ್ರಾಕ್ಷಿ ತೋಟ ದೊಡ್ಡದಾಗಿತ್ತು. ಅಲ್ಲಲ್ಲಿ ಕಲ್ಲುಪ್ರದೇಶವಿದೆ ಎಂಬುದನ್ನು ಬಿಟ್ಟರೆ ಪ್ಯಾಲಿಸ್ಟೈನ್ ಫಲಭರಿತವಾಗಿತ್ತು. ಅಂತಹ ಪ್ರದೇಶವನ್ನು ಕಿತ್ತುಕೊಂಡು ಇಸ್ರೇಲ್ ಮಾಡಿದ್ದೇನು ? ಸಂಪನ್ಮೂಲಗಳನ್ನು ವೃದ್ಧಿಗೊಳಿಸದಿರುವುದು. ಇಷ್ಟೇ ಏನು ಅವರ ತಂತ್ರಜ್ಞಾನ, ಕೃಷಿ ಪಾಂಡಿತ್ಯ ? ಸಸಿಗಳ ಬೆಳವಣಿಗೆಗೆ ಸಾಕಾಗುವಷ್ಟು ನೀರು ನಮ್ಮ ಭೂಮಿಯ ಅಡಿಯಲ್ಲಿ ಶೇಖರವಾಗಿದೆ. ನಾನು ಚಿಕ್ಕವಳಿದ್ದಾಗ ಒಂದು ಟೊಮೆಟೊ ಸಸಿಯಲ್ಲಿ ಹಣ್ಣು ಕೀಳಲು ನಾವು ಮೂವರು ಬೇಕಾಗುತ್ತಿತ್ತು. ಬೆತ್ಲೆಹೆಂ ಮತ್ತು ಹಿಬ್ರಾನ್ ನಡುವೆ ಇದೆ ನಮ್ಮ ಬೇಟ್ ಜಾಲ. ಶಾಲೆಯಿಂದ ಹಿಂದಿರುಗುವಾಗ ನಾವು ಹೊಲದ ಕೆಲಸಕ್ಕೆ



ಹೋಗುತ್ತಿದ್ದೆವು. ಹುರುಳಿಕಾಯಿ ಸಹ ಬೆಳೆಯುತ್ತಿದ್ದೆವು. ನಮ್ಮ ದ್ರಾಕ್ಷಿ ಇರಾಕ್ ಮತ್ತು ಕುವೈತ್‌ಗಳಿಗೆ ಕೂಡ ಹೋಗುತ್ತಿತ್ತು. ನಮ್ಮ ಕೃಷಿ ಉತ್ಪನ್ನಗಳನ್ನು ಮಾರಲು ನನ್ನ ಅಜ್ಜಿ ಜೆರೂಸಲೆಂಗೆ ಹೋಗುತ್ತಿದ್ದಳು, ಗೊತ್ತೆ ?

**ಟಾಂ** : ನಿಜ, ಪ್ಯಾಲಿಸ್ಟೈನಿನ ಭೂಮಿ ಹಸಿರಾದ್ದು ಮತ್ತು ಫಲವತ್ತಾದ್ದು. ಇಸ್ರೇಲ್ ನಾಯಕರು ಮತ್ತು ಮಾಧ್ಯಮ ಆ ಬಗ್ಗೆ ಬೊಗಳೆ ಬಿಡುವುದು ನಿಜ. ಆದರೆ ಪ್ಯಾಲಿಸ್ಟೈನ್ ತನ್ನ ವಾದವನ್ನು ಪ್ರಭಾವಯುತವಾಗಿ ಮಂಡಿಸಲು ಸಾಧ್ಯವಾಗಿಲ್ಲ. ಬ್ರಿಟನ್, ಫ್ರಾನ್ಸ್ ಮತ್ತು ಅಮೇರಿಕಾಗಳ ಯಹೂದ್ಯರು ಅದರಲ್ಲಿ ಗೆದ್ದಿದ್ದಾರೆ, ಸಫಲರಾಗಿದ್ದಾರೆ. ಹೀಗೇಕೆಂದು ನಾನು ಆಲೋಚಿಸುತ್ತಿರುತ್ತೇನೆ. ಪ್ಯಾಲಿಸ್ಟೈನ್ ಜನರ ಭಾಷೆ, ಉಡಿಗೆ-ತೊಡಿಗೆ, ಆಹಾರ ಪದ್ಧತಿ, ಎಲ್ಲಾ ಪಾಶ್ಚಿಮಾತ್ಯ ದೇಶಗಳಿಗಿಂತಲೂ ಭಿನ್ನ; ಆದರೆ ಇಸ್ರೇಲಿನ ನಾಯಕರದು ಹಾಗಲ್ಲ. ಮಾಧ್ಯಮಗಳನ್ನು ತನ್ನದಾಗಿಸಿಕೊಳ್ಳುವುದರಲ್ಲಿ ಇಸ್ರೇಲ್ ಗೆದ್ದದ್ದಕ್ಕೆ ಅದೂ ಒಂದು ಕಾರಣ. ಬೈಬಲ್ಲಿನ ಮೋಸೆಸ್, ಅಬ್ರಹಾಂ, ಎಲ್ಲಾ ಹೇಳಿಬಿಟ್ಟಿದ್ದಾರೆ, ಆ ಭೂಮಿಯನ್ನು ದೇವರು ಅವರಿಗೆ ಕರುಣಿಸಿದ, ಎಂದು! ಆಗಲೆ ನೀವು ಹೇಳುತ್ತಿದ್ದಿರಲ್ಲ ಸೂಸನ್ ನೇತನ್‌ಳ ಪುಸ್ತಕ ''ದ ಅದರ್ ಸೈಡ್ ಆಫ್ ಇಸ್ರೇಲ್'' ಬಗ್ಗೆ. ಇಸ್ರೇಲಿನ ನಿಜ ಬಣ್ಣ ಅಲ್ಲಿದೆ.

**ಹೊಸತು** : ಪ್ಯಾಲಿಸ್ಟೈನಿನ ಮಕ್ಕಳ ವಿದ್ಯಾಭ್ಯಾಸ ಹೇಗಿದೆ ?

**ಟಾಂ** : ನಾವು ಅಲ್ಲಿಗೆ ಹೋಗಿಬರುತ್ತಿರುತ್ತೇವೆ. ಇಸ್ರೇಲಿನಲ್ಲಿ ಅರಬ್ಬರು ಹೆಚ್ಚಾಗಿ ವಾಸಿಸುವ ಪ್ರದೇಶದಲ್ಲಿ ಈಚೆಗೆ ನಾನು ಕೆಲಕಾಲ ತಂಗಿದ್ದೆ : ಹೈಫಾ ಮುಂತಾದೆಡೆ. ಸಂಪನ್ಮೂಲಗಳನ್ನು ಇಸ್ರೇಲಿನಲ್ಲಿ ಸಮನಾಗಿ ಹಂಚುವುದಿಲ್ಲ. ಅರಬ್ಬರಿರುವ ಭಾಗದಲ್ಲಿ ರಸ್ತೆಗಳು, ಮನೆಗಳು, ಕೃಷಿ, ಆಲಿವ್ ತೋಟ, ಎಲ್ಲಾ ಹಾಳಾಗಿವೆ. ನಿಮ್ಮ ಕಣ್ಣೆದುರೇ ಇಸ್ರೇಲಿಗಳು ಆಲಿವ್ ಮರಗಳನ್ನು ಹೊಡೆದುರುಳಿಸುತ್ತಾರೆ. ಅವರಿಗೆ ಯಾವ ಅಂಕೆಯೂ ಇಲ್ಲ. ಹೀಗಿರುವಾಗ ಎಂತಹ ವಿದ್ಯಾಭ್ಯಾಸ ಸಾಧ್ಯ, ನೀವೇ ಹೇಳಿ.

**ಲೈಲಾ :** ಅನೇಕ ಅರಬ್ಬರು ಇಸ್ರೇಲಿನ ಭಾಗದಿಂದ ಹೊರಬಂದರು. ಕೆಲವರು ಅಲ್ಲೇ ಉಳಿದಿದ್ದಾರೆ. ಹಳ್ಳಿಗಳು ಮುಖವನ್ನೇ ಕಳೆದುಕೊಂಡಿವೆ, ಆದರೆ ಜನ ಇನ್ನೂ ಅಲ್ಲೇ ಇದ್ದಾರೆ. ವಿದ್ಯಾಭ್ಯಾಸವೆನ್ನುವುದು ವ್ಯವಸ್ಥಿತವಾಗಿ ನಡೆಯಲಾರದಂತಹ ಸನ್ನಿವೇಶ ಅಲ್ಲಿದೆ.

**ಹೊಸತು :** ಬೇರೆಬೇರೆ ಕಡೆ ಹಂಚಿಹೋಗಿರುವ ಪ್ಯಾಲಿಸ್ಟೈನ್ ಜನರ ಜೀವನದ ಬಗ್ಗೆ ಎರಡು ಮಾತು ಹೇಳುತ್ತೀರಾ ?

**ಲೈಲಾ :** ೧೯೬೭ರವರೆಗೆ ಜೋರ್ಡಾನ್‌ನಲ್ಲಿ ಅಂತರ್ಗತವಾಗಿದ್ದ ಪ್ರದೇಶದಲ್ಲಿ ಜೀವನ ಅಷ್ಟು ಕೆಟ್ಟಿರಲಿಲ್ಲ. ಆಮೇಲೆ ಉಪಟಳಗಳ ಸರಣಿಗೆ ಪಾರವಿಲ್ಲ. ಜೋರ್ಡಾನ್ ನದಿಯ ನೀರನ್ನು ಸಹ ಇಸ್ರೇಲ್ ತನ್ನ ಭೂಮಿಯತ್ತ ತಿರುಗಿಸಿ ಹರಿಸಿಕೊಂಡಿದೆ. ಮನೆಗಳ ಜಪ್ತಿ, ಜೈಲುಗಳು, ದಾರಿದಾರಿಯಲ್ಲಿ ಜನರನ್ನು ನಿಲ್ಲಿಸಿ ಹಿಂಸಿಸುವುದು, ಆಹಾರದ ಸರಬರಾಜು ಇಲ್ಲದಿರುವುದು, ಹೀಗೆ ಎಷ್ಟು ಹೃದಯವಿದ್ರಾವಕ ಸನ್ನಿವೇಶಗಳು...

**ಹೊಸತು :** ನೀವಿಬ್ಬರೂ ಅಮೆರಿಕಾದ ಪ್ರಜೆಗಳು : ಇಡೀ ಪ್ರಸಂಗದಲ್ಲಿ ಅಮೆರಿಕಾದ ಪಾತ್ರದ ಬಗ್ಗೆ ನಿಮಗೇನನಿಸುತ್ತದೆ ?

**ಟಾಂ :** ಭಯಾನಕವೆನಿಸುತ್ತದೆ; ಒಂದು ಜನರ ಮೇಲೆ ಇನ್ನೊಂದು ಜನವನ್ನು ಎತ್ತಿಕಟ್ಟುವುದು. ರಾಜಕೀಯ, ಹಣದ ವಿತರಣೆ, ವಿಶ್ವಸಂಸ್ಥೆಯಂತಹ ಕೇಂದ್ರಗಳಲ್ಲಿ ಅನುಸರಿಸುವ ನೀತಿ, ಇಸ್ರೇಲಿಗೆ ನೇಷರತ್ತು ಬೆಂಬಲ, ಎಲ್ಲಾ ದುರುಳತನವೇ. ಐಸೆನ್ ಹೋವರ್ ಅಧ್ಯಕ್ಷರಾಗಿದ್ದಾಗ ಸ್ವಲ್ಪಮಟ್ಟಿನ ಸಮಾನ ದೃಷ್ಟಿ ಇತ್ತು. ಆಮೇಲೆ ಇಸ್ರೇಲಿಗೆ ಪೂರ್ತಿ ಬೆಂಬಲ.

**ಲೈಲಾ :** ಇನ್ನೂ ಒಂದಂಶವಿದೆ : ಮಧ್ಯಪ್ರಾಚ್ಯದಲ್ಲಿ ಅಮೆರಿಕಾದ ಹಿತಾಸಕ್ತಿಗಳನ್ನು ಕಾಪಾಡುವ ಮಿತ್ರರಾಷ್ಟ್ರ ತಾನೆಂದು ಇಸ್ರೇಲ್ ಯಾವಾಗಲೂ ಅಮೆರಿಕಾಕ್ಕೆ ಹೇಳುತ್ತಿರುತ್ತದೆ, ಅದರ ಲಾಭ ಪಡೆಯುತ್ತದೆ. ಅಮೆರಿಕಾಕ್ಕೆ ಇಸ್ರೇಲ್ ಬೇಕು, ಇಲ್ಲದಿದ್ದರೆ ಮಧ್ಯ ಪ್ರಾಚ್ಯದಲ್ಲಿ ಅದಕ್ಕೆ ಕಾಲೂರಲು ಜಾಗವಿರುವುದಿಲ್ಲ.

**ಹೊಸತು :** ಪಶ್ಚಿಮ ಏಷ್ಯಾ ರಾಷ್ಟ್ರಗಳ ಪಾತ್ರವೇನು ? ಈಜಿಪ್ಟ್, ಸೌದಿ ಅರೇಬಿಯ, ಸಿರಿಯ, ಜೋರ್ಡನ್, ಇತ್ಯಾದಿ...

**ಟಾಂ :** ಆ ಎಲ್ಲ ದೇಶಗಳ ಜನರ ಮೇಲೆ ತನ್ನ ಅಭಿಪ್ರಾಯ ಹೇರಲು ಅಮೆರಿಕಾಕ್ಕೆ ಸಾಧ್ಯವಾಗಿಲ್ಲ. ಇದು ಶುಭ ಸೂಚನೆ.

**ಹೊಸತು :** ಸೌದಿ ಅರೇಬಿಯಾದ ರಾಜ ಮನೆತನವನ್ನು ಜನ ಹೊರದೂಡಿದರೆ...

**ಲೈಲಾ :** ಸದ್ಯಕ್ಕೆ ಅದೊಂದು ಕನಸು ನಿಮ್ಮದು. ಹಾಗೇನಾದರೂ ಆದರೆ ಸೌದಿ ಅರೇಬಿಯಾಕ್ಕೆ ಇಸ್ರೇಲ್ ಪ್ರವೇಶಿಸುವಂತೆ ಅಮೆರಿಕಾ ತಂತ್ರ ಹೂಡುತ್ತದೆ ನೋಡುತ್ತಿರಿ. ಇದನ್ನೆಲ್ಲಾ ಹೀಗೇ ಆಗುತ್ತದೆಂದು ಭವಿಷ್ಯ ನುಡಿಯುವುದು ಮೂರ್ಖತನ. ಬದಲಾವಣೆ ಬರಬೇಕಾದ್ದು ಜನಗಳಲ್ಲಿ ಮತ್ತು ಜನರಿಂದ.

**ಹೊಸತು :** ಅಮೆರಿಕಾ ಏಕೆ ಅಷ್ಟೊಂದು ಬೆಂಬಲ ನೀಡಬೇಕು ಇಸ್ರೇಲಿಗೆ...

**ಟಾಂ :** ಸರಳ ಉತ್ತರವಿದೆ : ತೈಲಕ್ಕಾಗಿ. ಪಶ್ಚಿಮ ಏಷ್ಯಾದ ರಾಜಕೀಯದಲ್ಲಿ ಅಮೆರಿಕಾದ ಪಾತ್ರವು ಇಡಿಯಾಗಿ ತೈಲವನ್ನವಲಂಬಿಸಿದೆ. ಅದರಿಂದ ಬೇರೆಯೆಲ್ಲಾ ಘಟಿಸುತ್ತದೆ.

**ಹೊಸತು :** ಪ್ಯಾಲಿಸ್ಟೈನ್ ಸಮಸ್ಯೆಗೆ ಯಾವ ಪರಿಹಾರ ಸೂಚಿಸುತ್ತೀರಿ ?

**ಟಾಂ :** ಎರಡು ಬಣಗಳಿಗೂ ನ್ಯಾಯ ದೊರಕ ಬೇಕು. ತೀರ್ಮಾನಗಳನ್ನು ಹೇರಿದರೆ ಪರಿಸ್ಥಿತಿ ಇನ್ನೂ ಉಲ್ಬಣಗೊಳ್ಳುತ್ತದೆ. ಪ್ಯಾಲಿಸ್ಟೈನ್ ಮತ್ತು ಇಸ್ರೇಲ್ ಎರಡೂ ಸ್ವತಂತ್ರ ರಾಷ್ಟ್ರಗಳಾಗಿ ಬಾಳುವಂತಾಗಬೇಕು.

**ಲೈಲಾ :** ಇದರಲ್ಲೂ ಚಿಕ್ಕಟ್ಟಿದೆ. ಸ್ವತಂತ್ರ ಪ್ಯಾಲಿಸ್ಟೈನ್ ಏನಾದರೂ ಇದ್ದರೆ ಅದಕ್ಕೆ ತನ್ನದೇ ಆದ ಸೈನ್ಯ ಕೂಡದೆಂದು ಇಸ್ರೇಲ್ ವಾದಿಸುತ್ತದೆ. ಅಂದರೇನು ? ಬೇಕಾದಾಗ ಆಕ್ರಮಣ ಮಾಡಿ ನುಂಗಿಹಾಕಬಹುದು, ಎಂದು. ಮೊಟ್ಟಮೊದಲು ಇಸ್ರೇಲ್‌ನ ಸತತವಾಗಿ ವಿಸ್ತರಿಸಿಕೊಳ್ಳುವ ಪ್ರವೃತ್ತಿಯನ್ನು ಅಂತರರಾಷ್ಟ್ರೀಯ ಸಂಸ್ಥೆಗಳು ತಡೆಯಬೇಕು. ಪ್ರಪಂಚದ ಎಲ್ಲ ಯಹೂದಿಗಳಿಗೂ ಇಸ್ರೇಲ್‌ಗೆ ಪ್ರವೇಶವಿದೆಯೆಂಬ ಮಾತನ್ನು ನಿಲ್ಲಿಸಬೇಕು. ಇಸ್ರೇಲ್ ತನ್ನ ತಂತ್ರಜ್ಞಾನದ ಹಿರಿಮೆಯನ್ನು ಅಷ್ಟು ಹೇಳಿಕೊಳ್ಳುತ್ತದಲ್ಲ, ಈ ಪ್ರಶ್ನೆ ಹಾಕಿ ಅದಕ್ಕೆ : ನೀವೇಕೆ ಪ್ಯಾಲಿಸ್ಟೈನ್‌ನ ಪ್ರದೇಶಕ್ಕೆ ನುಗ್ಗಿ ಬಡಾವಣೆಗಳನ್ನು ನಿರ್ಮಿಸುತ್ತಿದ್ದೀರಿ ? ನಿಮ್ಮ ದೇಶದ (ಅಂದರೆ ಇಸ್ರೇಲಿನ) ದಕ್ಷಿಣದಲ್ಲಿರುವ ನೆಗೆವ್ ಮರುಭೂಮಿಯನ್ನೇಕೆ ಫಲವತ್ತಾಗಿಸುವುದಿಲ್ಲ ? ಮರುಭೂಮಿಯನ್ನು ಹಸಿರಾಗಿಸುವ ಕೌಶಲ್ಯ ನಿಮ್ಮದೆಂದು ಬೊಗಳೆ ಬಿಡುತ್ತೀರಲ್ಲಾ, ಇದನ್ನು ಮಾಡಿ ತೋರಿಸಿ. ಆಗ ಪ್ಯಾಲಿಸ್ಟೈನಿಗೆ ಕನ್ನ ಹಾಕುವ ಬದಲು ನೆಗೆವ್‌ನಲ್ಲಿ ಬಡಾವಣೆಗಳನ್ನು ನಿರ್ಮಿಸಿಕೊಂಡು ನಿಮ್ಮ ಜನ ಅಲ್ಲಿ ನೆಲೆಸಬಹುದಲ್ಲವೆ ? ಈಗ ಅಲ್ಲೇನಿದೆ ? ಬೆದ್ವಿನ್ ಬುಡಕಟ್ಟು ಜನ ಮತ್ತು ಇಸ್ರೇಲಿನ ಪರಮಾಣು ಅಸ್ತ್ರಗಳ ಸ್ಥಾವರಗಳು ! ಕೆಂಪು ಸಮುದ್ರ ಇಸ್ರೇಲಿನ ದಕ್ಷಿಣಕ್ಕಿದೆ. ಎಲಾಟ್ ನಗರ ಇರುವುದು ಅಲ್ಲೇ. ಬೈಬಲ್ಲಿನಲ್ಲಿ 'ಬೀರ್ ಶೀಬಾ' ಪ್ರಖ್ಯಾತವಾಗಿದೆ. ಹಾಗೆಂದರೆ ''ಏಳು ಕೊಳಗಳು'' ಎಂದರ್ಥ. ಅದು ಓಯಸಿಸ್ ಪ್ರದೇಶ. ನೆಗೆವ್ ಮರುಭೂಮಿಯನ್ನು ಅಭಿವೃದ್ಧಿ ಗೊಳಿಸಿ ಪ್ಯಾಲಿಸ್ಟೈನ್‌ನಿಂದ ಇಸ್ರೇಲ್ ಕಾಲ್ತೆಗೆಯಲು ಏನು ಅಡ್ಡಿಯಿದೆ ? ಅವರನ್ನೇ ಕೇಳಿ ನೋಡಿ.



# ಕವನ

ಹುಟ್ಟುವ ಮೊದಲು
ಅಮೂರ್ತ
ಅದಕ್ಕೆ ಅಂಗಾಂಗಗಳು
ಅಂಟಿಕೊಳ್ಳುತ್ತಾ
ಬೆಳೆಬೆಳೆದು ಯಾವಾಗಲೋ
ಗರ್ಭವಾಗಿ ಬಿಡುತ್ತದೆ.
ಯಾವುದೋ ಗಳಿಗೆಯಲಿ
ಹರಿಗೆಯಾಗಿ ಬಿಡುತ್ತದೆ
ಒಂದು ಕಾಗದದ
ಚೂರಲ್ಲಿ

**ಕಮಲಂ ಅರಸು**
ನಂ. ೧೧, ೧೧ನೇ ಅಡ್ಡರಸ್ತೆ, ೩ನೇ ಬಡಾವಣೆ
ತ್ಯಾಗರಾಜನಗರ, ಬೆಂಗಳೂರು - ೨೮

**ಹೊಸತು :** ಪ್ಯಾಲಿಸ್ಟೈನ್‌ಗೆ ತನ್ನದೇ ಆದ ನಿಖರ ಸಂಸ್ಕೃತಿ ಏನಾದರೂ ಉಂಟೆ ?

**ಲೈಲಾ :** ಅವರನ್ನು ಅವರ ಪಾಡಿಗೆ ಬಿಟ್ಟರೆ ಸಂಸ್ಕೃತಿಯ ಚಿಂತೆ ಮಾಡಿಯಾರು. ಅವರ ಭಾಷೆ ಇದೆ, ಸಂಸ್ಕೃತಿ ಇದೆ, ಆಕಾಂಕ್ಷೆ ಇದೆ. ಪ್ಯಾಲಿಸ್ಟೈನಿನಲ್ಲಿ ಶೇಕಡ ಚಿರಪ್ಪು ಕ್ರೈಸ್ತರಿದ್ದಾರೆ. ಅವರಲ್ಲಿ ಪ್ಯಾಲಿಸ್ಟೈನ್ ವಿರೋಧಿ ಭಾವನೆಯೇನೂ ಇಲ್ಲ. ಪ್ಯಾಲಿಸ್ಟೈನ್ ಚುನಾವಣೆಗಳ ಅಧೀಕ್ಷಣೆಗೆ ಜಿಮ್ಮಿ ಕಾರ್ಟರ್ ಹೋಗಿದ್ದರಲ್ಲ, ಅವರಿಗಿದು ಗೊತ್ತಿಲ್ಲವೆ ? ಆತನಿಗೂ ಅಮೆರಿಕಾ-ಇಸ್ರೇಲ್ ಬಾಂಧವ್ಯದ್ದೇ ಆಶಯ. ಸದ್ಯಕ್ಕೆ ತಮ್ಮ ನಾಡನ್ನು ರಕ್ಷಿಸಿಕೊಳ್ಳುವ ಸಂಸ್ಕೃತಿ ಪ್ಯಾಲಿಸ್ಟೈನನ್ನು ಒಗ್ಗೂಡಿಸಿದೆ. ಇನ್ನುಳಿದ ಸಂಸ್ಕೃತಿಗೂ ಸ್ಥಾನವಿದೆ, ಆದರೆ ಅದಕ್ಕೆ ಆದ್ಯತೆ ಆಮೇಲೆ.

**ಟಾಂ :** ಬ್ರಿಟಿಷರ ಕಾಲದಲ್ಲಿ ಪ್ಯಾಲಿಸ್ಟೈನಿನ ಕ್ರೈಸ್ತರು ಬೇರೆಡೆಗಳಿಗೆ ಅಧಿಕ ಸಂಖ್ಯೆಯಲ್ಲಿ ಹೋದರು. ನಮ್ಮ ಡೆಟ್ರಾಯಿಟ್ ನೋಡಿ, ಇಲ್ಲವೆ ಚಿಲಿಯಲ್ಲಿ ನೋಡಿ. ಈಗಲೂ ಅವರ ವೈಶಿಷ್ಟ್ಯ ಹಿಂದಿನಂತೆಯೇ ಉಳಿದಿದೆ.

**ಹೊಸತು :** ಪ್ಯಾಲಿಸ್ಟೈನ್‌ಗೆ ಹೃತ್ಪೂರ್ವಕ ಬೆಂಬಲ ನೀಡಬೇಕೆನ್ನುವ ಮಂದಿ ಎಲ್ಲೆಡೆ ಇದ್ದಾರೆ. ಭಾರತದಲ್ಲೂ ಇದ್ದಾರೆ. ನಿಮ್ಮ ಪ್ರಕಾರ ಅವರೇನು ಮಾಡಬಹುದು ?

**ಟಾಂ :** ಹಠಾತ್ತನೆ ಏನನ್ನೂ ಮಾಡಲಾಗುವುದಿಲ್ಲ. ಪ್ಯಾಲಿಸ್ಟೈನ್‌ನ ಬಗ್ಗೆ, ಅಲ್ಲಿಯ ಜನರ ಬಗ್ಗೆ ವಿಶ್ವದಲ್ಲಿ, ಮಾಧ್ಯಮಗಳಲ್ಲಿ, ನಿಜ ಚಿತ್ರಣ ಇಲ್ಲ. ಬೇರೆ ದೇಶಗಳ ಜನರ ಮಧ್ಯಪ್ರವೇಶ ನೇರವಾಗಿ ಆಗಲಾರದು, ಆಗಬೇಕಾಗಿಲ್ಲ. ಆಯಾ ದೇಶಗಳ ಸರ್ಕಾರಗಳು, ಜನಪ್ರತಿನಿಧಿಗಳು, ಪ್ಯಾಲಿಸ್ಟೈನ್ ಬಗ್ಗೆ ಸರಿಯಾದ ತಿಳುವಳಿಕೆ ಪಡೆಯಬೇಕು. ಅದಕ್ಕೆ ಸಹಕಾರ ನೀಡಿದರೆ ಪ್ಯಾಲಿಸ್ಟೈನ್ ಜನಕ್ಕೆ ಬೆಂಬಲ ನೀಡಿದಂತೆ ಎಂದು ನನಗನಿಸುತ್ತದೆ. ನಿಮ್ಮ ಪತ್ರಿಕೆಯೂ ಅದನ್ನು ಮಾಡುತ್ತದೆಂದು ಆಶಿಸುವೆವು.

**ಹೊಸತು :** ನಿಮ್ಮಿಬ್ಬರಿಗೂ ಕೃತಜ್ಞ. ನಿಮ್ಮ ಆಶಯ ಫಲಿಸುವ ದಿನಗಳು ಬೇಗ ಬರಲಿ.



# ಮಾಧ್ಯಮ ಶಕ್ತಿ: ಸತ್ಯ ಮತ್ತು ಮಿಥ್ಯೆ

**ಇಂದು ಮಾಧ್ಯಮ ತನ್ನದೇ ಆದ ಶಕ್ತಿ, ಸ್ವಂತಿಕೆಗಳನ್ನು ಕಾಪಾಡಿಕೊಳ್ಳುವ ತುರ್ತು ಅಗತ್ಯವಿದೆ. ಕೆಲವು ರಾಜಕೀಯ, ಸಾಮಾಜಿಕ ಹಾಗೂ ಆರ್ಥಿಕ ಕಾರಣಗಳ ಹಿನ್ನೆಲೆಯಲ್ಲಿ ಮಾಧ್ಯಮ ಕ್ಷೇತ್ರದಲ್ಲಿ ಏರುಪೇರುಗಳು ಸಂಭವಿಸುತ್ತಿವೆ. ಈ ಎಲ್ಲ ಕಾರಣಗಳಿಂದ ನೋಡಿದರೆ ಮಾಧ್ಯಮದ ಶಕ್ತಿ ಎಂಬುದು ಸತ್ಯ. ವ್ಯಾವಹಾರಿಕವಾಗಿ ನೋಡಿದರೆ ಮಾಧ್ಯಮದ ಶಕ್ತಿ ಎಂಬುದು ಕೇವಲ ಮಿಥ್ಯೆ. ಎಲ್ಲಿಯವರೆಗೆ ಮಾಧ್ಯಮ ರಾಜಕೀಯ ಪಕ್ಷಗಳ ಕಾಸಿಗೆ ಮಾರಿಕೊಳ್ಳುವುದಿಲ್ಲವೋ ಅಲ್ಲಿಯವರೆಗೆ ಅವುಗಳ ಶಕ್ತಿ ಸತ್ಯ. ಯಾವಾಗ ಪ್ರಭಾವಿ ರಾಜಕಾರಣಿಗಳ ಹಾಗೂ ಜಾಹೀರಾತುದಾರರ ಆಮಿಷಗಳಿಗೆ ಅಡಿಯಾಳಾದವೋ ಆಗ ಮಾಧ್ಯಮಗಳ ಶಕ್ತಿಯೆಂಬುದು ಮಿಥ್ಯೆ.**

**ಡಾ|| ನಿರಂಜನ ವಾನಳ್ಳಿ**

ಇಂದು ನಮ್ಮಲ್ಲಿ ಅತ್ಯಂತ ಹೆಚ್ಚು ಚರ್ಚೆಯಾಗುವುದು ಮಾಧ್ಯಮವೇ ಎನಿಸುತ್ತದೆ. ಮೂರು ಜನ ಒಟ್ಟಿಗೆ ಸೇರಿದರೆ ಸಾಕು, ಇಂದು ಪತ್ರಿಕೆಗಳಲ್ಲಿ ಬಂದ ಸುದ್ದಿಯಾಗಲೀ ವಾಹಿನಿಯಲ್ಲಿ ಬಂದ ಧಾರಾವಾಹಿಯಾಗಲೀ ಮಾತಿನಲ್ಲಿ ಬಂದೇ ಬರುತ್ತದೆ. ಎಂಥ ಗಹನ ಚರ್ಚೆಯಾಗಲೀ ತಮಾಷೆಯ ಸಂಗತಿಯಾಗಲೀ ಮಾಧ್ಯಮದಿಂದ ಪ್ರಚೋದಿತವಾಗಿರುತ್ತದೆ ಅಥವಾ ಕೊನೆಗೆ ಅಲ್ಲಿಗೆ ಬಂದು ನಿಲ್ಲುತ್ತದೆ. ಮಾಧ್ಯಮ ಎನ್ನುವುದರ ಅರ್ಥವೇ ಇಬ್ಬರ ನಡುವಿನ ಕೊಂಡಿ, ಸೇತುವೆ ಎಂದು. ಮಾಧ್ಯಮ ಎಂದರೆ ನಡುವಿನ, ಮಾಧ್ಯಮಿಕ ಎಂದರೆ ಮಧ್ಯವರ್ತಿಯಾಗಿ ಎಂದೂ ಶಬ್ದಕೋಶಗಳು ತಿಳಿಸುತ್ತವೆ. ಮಾಧ್ಯಮ ಇವತ್ತು ಎಷ್ಟು ಬೃಹತ್ತಾಗಿ ಹಾಗೂ ಮಹತ್ತಾಗಿ ಬೆಳೆದು ನಿಂತಿದೆ ಎಂದರೆ ಅದು ಜನರ ನಡುವಿನ ಕೊಂಡಿಯೂ ಹೌದು ಇದ್ದಲ್ಲೇ ಎಲ್ಲ ಸಂಬಂಧಗಳನ್ನೂ ಕಳಚಿಕೊಂಡು ದ್ವೀಪವಾಗಿಸುವ ಸಾಧನವೂ ಹೌದು. ಅವನೊಬ್ಬ ರ‍್ಯಾಂಕು ವಿದ್ಯಾರ್ಥಿ ಹೇಳಿದನಂತೆ : ''ನನ್ನ ಬಳಿ ಮೊಬೈಲಿದೆ, ಕಂಪ್ಯೂಟರ್ ಇದೆ, ಇಂಟರ್‌ನೆಟ್ ಇದೆ, ನನಗೆ ಯಾರೂ ಸ್ನೇಹಿತರ ಅವಶ್ಯಕತೆಯೇ ಇಲ್ಲ!'' ಅಂದರೆ ಜನರನ್ನು ಪರಸ್ಪರ ಹತ್ತಿರ ತರುವ ಮಾಧ್ಯಮ ದೂರವೂ ತಳ್ಳಬಹುದು !

ಮಾಧ್ಯಮವೆಂದು ಸಮಾಜದಲ್ಲಿ ನಾವು ಗುರುತಿಸುವಾಗ ಮುಖ್ಯವಾಗಿ ದೃಷ್ಟಿಯಲ್ಲಿಟ್ಟುಕೊಳ್ಳುವುದು ಪತ್ರಿಕೆಗಳನ್ನು ಹಾಗೂ ಸುದ್ದಿವಾಹಿನಿಗಳನ್ನು. ರೇಡಿಯೋ ಅಥವಾ ಬಾನುಲಿ, ಎಫ್‌ಎಂ ರೂಪದಲ್ಲಿ ಮರುಜೀವ ಪಡೆಯಿತಾದರೂ ಮನರಂಜನಾ ಮಾಧ್ಯಮವಾಗಿ ಸ್ವೀಕೃತವಾಗಿರುವುದೇ ಹೆಚ್ಚು. ಹಾಗೆಯೇ ಮ್ಯಾಗಜಿನ್‌ಗಳು. ಇವು ಸುದ್ದಿಗಿಂತ ಹೆಚ್ಚಾಗಿ ನುಡಿಚಿತ್ರಗಳಿಗಾಗಿ ಜನಮನ್ನಣೆ ಪಡೆದವುಗಳು. ಹಿಂದೆಲ್ಲ ಮಾಧ್ಯಮಗಳನ್ನು ಮುದ್ರಣ ಮಾಧ್ಯಮ, ಇಲೆಕ್ಟ್ರಾನಿಕ್ ಮಾಧ್ಯಮ ಎಂಬುದಾಗಿ ವಿಂಗಡಿಸುತ್ತಿದ್ದೆವು. ಈಗ ಎಲ್ಲ ಮಾಧ್ಯಮಗಳೂ ಮಲ್ಟಿ ಮೀಡಿಯಾದಲ್ಲಿ ಒಂದುಗೂಡುವುದನ್ನು ಕಾಣುತ್ತೇವೆ. ಬದಲಿಗೆ ಮಾಧ್ಯಮಗಳನ್ನು ಸುದ್ದಿ ಮಾಧ್ಯಮ ಹಾಗೂ ಮನರಂಜನಾ ಮಾಧ್ಯಮಗಳೆಂದು ವಿಂಗಡಿಸುವುದು ಸೂಕ್ತವೆನಿಸುತ್ತದೆ.

ಮಾಧ್ಯಮಗಳಲ್ಲಿ ಹಲವು ವಿಧಗಳಿದ್ದರೂ ಸುದ್ದಿ ಮಾಧ್ಯಮಗಳೇ ನಮಗೆ ಮಾಧ್ಯಮವಾಗಿ ಮುಖ್ಯವೆನಿಸುವುದು. ಸುದ್ದಿ ಮಾಧ್ಯಮಗಳಿಂದ ನಾವು ನಿರೀಕ್ಷಿಸುವುದು ಪ್ರಜಾಪ್ರಭುತ್ವದಲ್ಲಿ ಪ್ರಜೆಗಳು ಮತ್ತು ಪ್ರಭುಗಳ ನಡುವಿನ ಸೇತುವೆಯಾಗಿ ಕೆಲಸ ಮಾಡಬೇಕೆಂದು, ಸಮಾಜದ ಕಣ್ಣು, ಕಿವಿ, ಬಾಯಿ ಮಾತ್ರವಲ್ಲ ಆತ್ಮಸಾಕ್ಷಿಯಾಗಿಯೂ ಕೆಲಸ ಮಾಡಬೇಕೆಂಬುದು. ನಿರೀಕ್ಷೆಗಳೇನೋ ಸಹಜ. ಆದರೆ ವಾಸ್ತವ ಪ್ರಪಂಚಕ್ಕೆ ಬಂದಾಗ ಇಂದಿನ ಮಾಧ್ಯಮಗಳು ಯಾರ ಆತ್ಮ, ಯಾರಿಗೆ ಸಾಕ್ಷಿ ಹಾಗೂ ಯಾರಿಗೆ ಮಾಧ್ಯಮ ಎಂಬ ಪ್ರಶ್ನೆಗಳು ಏಳುತ್ತವೆ. ಒಂದು ಉದಾಹರಣೆ ನೋಡಿ. ಮಾಧ್ಯಮ ಜನರ – ಜನಸಾಮಾನ್ಯರ, ದನಿಯಾಗಬೇಕಾದರೆ ಜನರಿಗೆ ಸಿಕ್ಕುವಂತಿರಬೇಕು. ಜನರ ಕೈಗೆ ಎಟಕುವಂತಿರಬೇಕು. ಪ್ರಜಾಪ್ರಭುತ್ವದ ತಳಸ್ತರದಲ್ಲಿ ಮಾಧ್ಯಮ ಜನರಿಗೆ ಎಷ್ಟು ದೂರ ಹಾಗೂ ಎಷ್ಟು ಹತ್ತಿರ ? ಸಿನಿಮಾದ ಪರದೆಯ ಮೇಲೆ ಕುಣಿಯುವ ನಾಯಕ ಪ್ರೇಕ್ಷಕನಿಗೆ ಎಷ್ಟು ಹತ್ತಿರವೋ ಮಾಧ್ಯಮಗಳೂ ಅಷ್ಟೇ ಹತ್ತಿರ ಎನ್ನಬಹುದು !

ಪತ್ರಿಕೆಗಳು ದಿನ ನಿತ್ಯ ಓದುಗ ಮಹಾಪ್ರಭುವಿನ ಮನೆಬಾಗಿಲಿಗೆ ಬಂದು ಬೀಳುತ್ತವೆ. ಹಾಗಂತ ಅವನ ಕೈಗೆ ಸಿಕ್ಕುತ್ತವೆಯೆ ? ಪತ್ರಿಕೆಯನ್ನು ರೂಪಿಸುವಲ್ಲಿ ಅವನ ಪಾತ್ರವಿದೆಯೆ ? ಬಹಳ ಆದರ್ಶವಾಗಿ ''ಓದುಗರೆ

ರೂಪಿಸಿದ ಮಾಧ್ಯಮ'' ಎಂದು ಪತ್ರಿಕೆಗಳು ಕರೆದುಕೊಂಡರೂ ವಾಸ್ತವವಾಗಿ ಜಾಹೀರಾತುದಾರರು, ಪ್ರಭಾವಿಗಳು, ಪತ್ರಿಕೆಯ ಒಲವು ನಿಲುವುಗಳನ್ನು ರೂಪಿಸುತ್ತಾರೆ. ಪತ್ರಿಕೆಗಳು ಜನರಿಗೆ ಬೇಕಾಗಿದ್ದನ್ನೇ ನೀಡುತ್ತವೆ. ಆದರೆ ಆ ಜನ ಯಾರು ಎಂಬುದು ಪ್ರಶ್ನೆ. ದೇಶದ ಮೂಲೆಯಲ್ಲೆಲ್ಲೋ ಕಷ್ಟದಲ್ಲಿರುವ ರೈತರ, ಆದಿವಾಸಿಗಳ ಬಗ್ಗೆ ಅದ್ಭುತವಾಗಿ ಬರೆಯುವ ಪತ್ರಿಕೆ ಮತ್ತೆ ಕರೆದರೆ ಬರುವುದೇ ಎಂಬುದು ಪ್ರಶ್ನೆ. ಉದಾಹರಣೆಗೆ, ಪತ್ರಿಕೆಗಳು ಪ್ರತಿಯೊಂದು ವಿಷಯವನ್ನೂ ಮುಟ್ಟುತ್ತವೆ ಮತ್ತು ಮುಂದೆ ಸಾಗುತ್ತವೆ. ಆಳಕ್ಕಿಳಿಯುವುದಿಲ್ಲ. ಒಂದೇ ವಿಷಯದ ಬಗ್ಗೆ ಎರಡನೇ ಸಾರಿ ಬರೆಯುವುದು, ಫಾಲೊ ಅಪ್ ಸ್ಟೋರಿ ಮಾಡುವುದು ವರದಿಗಾರನಿಗೆ ಸಾಧ್ಯವಾಗುವುದಿಲ್ಲ. ಈಗ ವರದಿಗಾರರ ಮಿತಿಯೆಂದರೆ ಬಹಳ ಮಹತ್ವಾಕಾಂಕ್ಷೆಯಿಂದ ಮಾಡಿದ ಅಭಿವೃದ್ಧಿಯ ವರದಿ ಕೂಡ ತನ್ನ ಪತ್ರಿಕೆಯಲ್ಲಿ ಪ್ರಕಟವಾಗುತ್ತದೆ ಎಂಬ ವಿಶ್ವಾಸವಿಲ್ಲ. ಹಾಗಂತ ಬೇರೆ ಪತ್ರಿಕೆಗೆ ಕೊಡುವಂತಿಲ್ಲ. ಯಾವುದೇ ವರದಿ ಯಾ ಬರಹ ತಮ್ಮ ಪ್ರಮುಖ ಜಾಹೀರಾತುದಾರರ ಆಸಕ್ತಿಗೆ ವಿರುದ್ಧವಾಗಿದ್ದರೆ ಅಂಥ ವರದಿಯನ್ನು ಪ್ರಕಟಿಸುವ ಧೈರ್ಯವನ್ನು ಪತ್ರಿಕೆಗಳು ಮಾಡುತ್ತಿಲ್ಲ. ಕಳೆದ ಒಂದು ದಶಕದಲ್ಲಿ ಭಾರತೀಯ ಪತ್ರಿಕೋದ್ಯಮದಲ್ಲಿ ಆದ ಪ್ರಮುಖ ಬದಲಾವಣೆಯೆಂದರೆ ಸಂಪಾದಕರುಗಳ ಪಾತ್ರ ಗೌಣವಾಗುತ್ತಾ ಸಾಗಿ ಅವರೂ 'ಮಾರ್ಕೆಟಿಂಗ್ ಲೀಡರು'ಗಳಾಗಿರುವುದು. ಈಗ ಮಾಲಿಕರುಗಳೇ ಪ್ರಧಾನ ಸಂಪಾದಕರುಗಳೆಂದು ಕರೆಸಿಕೊಳ್ಳುವುದು, ಸಂಪಾದಕೀಯ ನೀತಿಯ ನಿರ್ಣಾಯಕರಾಗುವುದು ಮಾಮೂಲು. ಇದನ್ನು ಸಂಪಾದಕರುಗಳಿಗೆ ಹಿಡಿದ ಗ್ರಹಣವೆಂದು ಕರೆಯಬಹುದು. ಮಾಲೀಕರುಗಳ ಇಚ್ಛೆಗೆ ವಿರುದ್ಧವಾಗಿ ಯಾವುದೇ ಪತ್ರಕರ್ತನನ್ನು ಪತ್ರಿಕೆಯಲ್ಲಿ ಉಳಿಸಿಕೊಳ್ಳುವ ತಾಕತ್ತು ಇವತ್ತಿನ ಸಂಪಾದಕರುಗಳಿಗೆ ಇಲ್ಲ ಎಂಬುದು ವಾಸ್ತವ. ಹೀಗಾಗಿ ಮಾಧ್ಯಮ ಜನರಿಗೆ ಸೇರಿದ್ದು ಎಂಬುದು ನಿಜವಾದರೂ ಜನರ ಕೈಗೆ ಎಟುಕದ ಮಾಯಾವಿ ಎಂಬುದೂ ಅಷ್ಟೇ ನಿಜ.

ಮಾಧ್ಯಮ ಬಹಳ ಶಕ್ತಿಯುತ. ಮನಸ್ಸು ಮಾಡಿದರೆ ಸರ್ಕಾರಗಳನ್ನು ಕಿತ್ತೊಗೆಯಬಹುದು. ಏನೂ ಅಲ್ಲದವರನ್ನೂ ಏನೆಲ್ಲಾ ಮಾಡಬಹುದು. ಹೀರೋಗಳನ್ನು ಜ಼ೀರೋ ಮಾಡಬಹುದು ಎಂಬುದೆಲ್ಲ ನಿಜ. ಅದೇ ವೇಳೆಗೆ ಮಾಧ್ಯಮದ ಈ ಶಕ್ತಿ ಉತ್ಪ್ರೇಕ್ಷಿತ ಎಂಬುದೂ ಅಷ್ಟೇ ನಿಜ. ಕಠಿಣ ಅಹಿತಕರ ಸ್ಪರ್ಧೆಯಿರುವ ಇಂದಿನ ವಾತಾವರಣದಲ್ಲಿ ಒಂದು ಮಾಧ್ಯಮ ಕಟ್ಟಿದ್ದನ್ನು ಇನ್ನೊಂದು ಮಾಧ್ಯಮ ಕೆಡವಬಹುದು. ಒಬ್ಬರು ಒಳ್ಳೆಯವರೆಂದು ಚಿತ್ರಿಸಿದ್ದನ್ನು ಇತರರು ಕೆಟ್ಟವರೆಂದು ಚಿತ್ರಿಸಬಹುದು. ಕನ್ನಡದ ಒಂದು ಪತ್ರಿಕೆ ಟಿ. ಎನ್. ಸೀತಾರಾಮ್ ಅವರ ರಾಧಾಮಾಧವ... ಸಿನಿಮಾಕ್ಕೆ ನೀಡಿದ ಅನಪೇಕ್ಷಿತ ಪ್ರಚಾರವೇ ಆ ಸಿನಿಮಾಕ್ಕೆ ಮುಳುವಾಯ್ತು, ಇತರ ಪತ್ರಿಕೆಗಳು ಹಿಗ್ಗಾಮುಗ್ಗಾ ಟೀಕಿಸಲು ಕಾರಣವಾಯ್ತು ಎಂಬ ವಾದವಿದೆ. ಹೀಗಾಗಿ ಮಾಧ್ಯಮಗಳ ಶಕ್ತಿ ಅಶಕ್ತಿಯೂ ಹೌದು. ಒಂದು ಕಾಲದಲ್ಲಿ ಅಂದರೆ ಮಾಧ್ಯಮಗಳು ಕಡಿಮೆಯಿದ್ದು ಅವೇ ಶಕ್ತಿಯುತವಾಗಿದ್ದ ಸಂದರ್ಭದಲ್ಲಿ ಜನ ಪತ್ರಿಕೆಗಳನ್ನು ಗಂಭೀರವಾಗಿ ತೆಗೆದುಕೊಳ್ಳುತ್ತಿದ್ದರು. ಉದಾಹರಣೆಗೆ, ಲಂಕೇಶ್ ಪತ್ರಿಕೆ ಏಕೈಕವಾಗಿದ್ದಾಗ ಅದಕ್ಕೆ ಸಿಕ್ಕ ಮನ್ನಣೆಯೇನು! ಈಗ ಊರೂರಲ್ಲಿ ಲಂಕೇಶ್ ಪತ್ರಿಕೆಗಳೂ, ಹಾಯ್ ಬೆಂಗಳೂರುಗಳೂ ಹುಟ್ಟಿಕೊಂಡಾಗ ಅವಕ್ಕೆ ಸಿಗುವ ಗೌರವ ಎಷ್ಟು? ಜನರು ಇಂದು ಟಿವಿ ಚಾನಲ್ಲುಗಳನ್ನು ನೋಡುತ್ತಾರೆ, ಗಮನಿಸುವುದಿಲ್ಲ. ರೇಡಿಯೋವನ್ನು ಕೇಳುತ್ತಾರೆ, ಗ್ರಹಿಸುವುದಿಲ್ಲ. ಜನ ಪತ್ರಿಕೆಗಳನ್ನು ನೋಡುತ್ತಾರೆ, ಓದುವುದಿಲ್ಲ, ಅರ್ಥಮಾಡಿಕೊಳ್ಳುವುದಿಲ್ಲ. ಇಪ್ಪತ್ತು ವರ್ಷದ ಹಿಂದೆ ನಾನು – ನನ್ನ ಸರೀಕರು ಪತ್ರಿಕಾ ಬರವಣಿಗೆಗೆ ಬಂದಾಗ ಒಂದು ಲೇಖನ ಬರೆದುಕೊಂಡು ಇಡೀ ಕರ್ನಾಟಕದಲ್ಲಿ ಪ್ರಸಿದ್ಧರಾದೆವೆಂದು ಹಿಗ್ಗುತ್ತಿದ್ದೆವು. ಇಡೀ ಕರ್ನಾಟಕಕ್ಕೆ ಒಂದೊಂದೇ ಆವೃತ್ತಿ (ಎಡಿಷನ್)ಗಳಿದ್ದು ಆ ಕಾಲದಲ್ಲಿ ಇಡೀ ರಾಜ್ಯವನ್ನು ತಲುಪುವ ಸಾಧ್ಯತೆಯೂ ಇತ್ತು. ಇವತ್ತು ಜಿಲ್ಲೆಗೊಂದು ಆವೃತ್ತಿಗಳ ಯುಗದಲ್ಲಿ ಮೈಸೂರು ಆವೃತ್ತಿಯಲ್ಲಿ ಬಂದ ಬರಹ ಪಕ್ಕದ ಶ್ರೀರಂಗಪಟ್ಟಣದಲ್ಲಿ ಸಿಕ್ಕದಿದ್ದರೆ ಆಶ್ಚರ್ಯವಿಲ್ಲ. ಇವತ್ತು ಎಷ್ಟು ಬರೆದರೂ ಜನರನ್ನು ಮುಟ್ಟಲು ಸೋಲುತ್ತಿದ್ದೇವೆ. ರಾಜ್ಯದಲ್ಲಿ ಇಷ್ಟೊಂದು ರಾಜಕೀಯ ಗೊಂದಲ, ಅರಾಜಕತೆಗಳಿದ್ದಾಗಲೂ ಅವುಗಳ ವಿರುದ್ಧ ಪ್ರಬಲ ಜನಾಂದೋಲನವನ್ನು ಹುಟ್ಟುಹಾಕಲು ಪತ್ರಿಕೆಗಳು ವಿಫಲವಾಗಿರುವುದನ್ನು ಈ ದಿಸೆಯಲ್ಲಿ ನೋಡಬೇಕು.

ಈಚಿನ ದಿನಗಳಲ್ಲಿ ಪತ್ರಿಕಾ ಲೋಕದಲ್ಲಿ ಬಹಳ ಚರ್ಚೆಯಾಗುತ್ತಿರುವ ವಿಚಾರ ಸುದ್ದಿಜಾಗದ ಮಾರಾಟ ಪದ್ಧತಿ : ಕಾಸು ಪಡೆದು ಸುದ್ದಿ ಹಾಕುವ ಅನಿಷ್ಟ ಸಂಪ್ರದಾಯ (ಪೇಡ್ ನ್ಯೂಸ್ ಪದ್ಧತಿ). ಪತ್ರಿಕೋದ್ಯಮವು ಲಾಗಾಯ್ತಿನಿಂದಲೂ ಕಾಪಾಡಿಕೊಂಡು ಬಂದ ಶಿಸ್ತು ಮತ್ತು ನೀತಿಯೆಂದರೆ ಸುದ್ದಿಯಿಂದ ಜಾಹೀರಾತುಗಳನ್ನು ಬೇರ್ಪಡಿಸುವುದು. ಪತ್ರಿಕೆಗಳಲ್ಲಿ ಸುದ್ದಿ ಹಾಗೂ ಜಾಹೀರಾತಿನ ಮಧ್ಯೆ ಸ್ಪಷ್ಟ

# ದೇವಿ ಪುರಾಣ

ಎಷ್ಟು ಸುಲಭವೆ ತಾಯಿ, ಮಾತಾಯಿ
ಕೈಯಲ್ಲಿ ಕತ್ತಿ ಹಿಡಿದು ನಾಲಿಗೆ ಹಿರಿದು
ಎದೆಮೆಟ್ಟಿ ರುಂಡ ಈಡಾಡಿ ರಕ್ತ ನೆತ್ತರ ಹಾಸಿ
ಧಿಮಿ ಧಿಮಿ ಕುಣಿದು ಕೆನೆದು ದೇವಿಯಾಗುವುದು.
ಮಹಿಷನನು ಅಸುರನೆಂದು ನೆತ್ತರೀಂಟುವುದು.
ಕಾಡಲಿಲ್ಲವೆ ಒಂದು ಗಳಿಗೆಯೂ ನಿನ್ನ ಈ ಮಣ್ಣು, ಈ ಮೋಹ

'ಇಲ್ಲ ಇಲ್ಲದ ಮೇಲೆ ಎಲ್ಲ ದೇವರೇ'
ಕೊಟ್ಟಿಗೆಯಲ್ಲಿ ಸಗಣಿ ಬಾಚುತ್ತ ನಿನ್ನ ಕಥೆ ನುಡಿಸುತ್ತ
ಅಜ್ಜಿ ಕೊಂಕುನಗೆಯಲ್ಲಿ ಕಾರಣಿಕ ಹೇಳಿದ್ದು
ನನ್ನ ಮಾಂಸಲ ಎದೆಗೂಡ ಪದರುಪದರೊಳಗೆ
ನೇಯ್ದು ಹೋಗಿದೆ.,
ಎಂಥದೋ ದಿಗಿಲು ಅವಳಿಗೆ ನಿನ್ನೊಂದಿಗೆ
ಸದಾ ತನ್ನ ಮಹಿಷನ ಕೊಂಬು ನೇವರಿಸಿ ಸಾಪಳಿಸಿದವಳಿಗೆ.

ಇದು ಬದುಕು ತಾಯಿ, ಮಾತಾಯಿ
ತೊಂಡುಮೇಯುವ ಬೇಲಿಹಾರುವ ಮಹಿಷವಾಡಿಯಿದು
ಕಡೆಗೂ ಕೋಣ ಕೊಟ್ಟಿಗೆಗೆ ಬಂತೋ
ಸೂರ್ಯದೇವನಿಗೆ ನಮಃ ಚಂದ್ರನಿಗೂ ನಮಃ
ಇರುವ ಹಿಟ್ಟಿನಲ್ಲೇ ರೊಟ್ಟಿ ನಾದುವ ಬಳೆ ನಿನಾದ
ಎಲ್ಲ ದೇವರಕಟ್ಟೆ ಮುಂದಿನ ಮಿಣಿ ದೀಪ ಬೇಡುತ್ತದೆ
ಮಹಿಷನ ಯೋಗಕ್ಷೇಮ. ಗೊರಸು ಕೆತ್ತದೆ
ಮೈ ತರಚದೆ ಇಲಾಜು ಬೇಡದೆ
ಬರಲಿ ದಿನವೂ ಹೊಸ್ತಿಲ ಒಳಗೆ
ಪಟ್ಟಮಹಿಷಿಯರ ಪ್ರಾರ್ಥನೆ.

ಕೊಟ್ಟಿಗೆಯಲಿ ಮಲಗಿ ಯಾವ ಬೆಟ್ಟದ್ದೋ ಮೆಲುಹುಲ್ಲ
ಮೆಲುಕಾಡಿಸುವ ಆಸುರೀತನ ಜೀವಕಂಟಿದ ಶಾಪ
ಗೆಲ್ಲಬೇಕು ತಾಯಿ, ಅನುದಿನದ ಸಗಣಿ ಗಂಜಲದ ನಾತ
ಎಲ್ಲ ಕೊಂಬು ಕಹಳೆಗಳ ಒಳಗೇ ಸುಳಿಮುರಿದು ಸಲುಹಬೇಕು
ಕಾಯಮಾಯದ ಭಾವ



ಗಂಜಲ, ಗಂಜಿ, ಕಣ್ಣೀರು, ಎಂಜಲುಬೆರೆತ ಅಜ್ಜಿಯ ನೆನಪು
ನಿನ್ನ ಕರ್ಪೂರ, ಧೂಪ, ಕುಂಕುಮಾರ್ಪಿತ ಪಲ್ಲಕ್ಕಿಗಿಂತ
ದೊಡ್ಡದು ಕಣೆ ನನಗೆ, ಇಳಿ ಇನ್ನಾದರೂ ಆ ಬೆಟ್ಟದಿಂದ
ನಿನ್ನ ದೇವಿ ಮಾಡಿದವರ ಸಹಸ್ರನಾಮಾರ್ಚನೆಯ ಘೋಷದಿಂದ
ಈ ಎಲುಬತೊಟ್ಟಿಲ ಹೊಸ್ತಿಲಿಗೆ
ಹೆಣ್ಣೆಂಬ ಸಂಭ್ರಮಕೆ, ಸಣ್ಣ ಸಂಕಟಕೆ,
ಮಹಿಷನ ಒಲವಿನ ಬೆಚ್ಚನೆಯ ಮಡಿಲಿಗೆ.

**ಡಾ|| ವಿನಯಾ,** 'ನೆಮ್ಮದಿ', ನಂ ೧೨೪, ಸಿಐಟಿಬಿ ಕಾಲೋನಿ, ಶ್ರೀನಗರ, ಧಾರವಾಡ - ೫೮೦ ೦೦೩.

ಗೆರೆಗಳಿದ್ದವು. ಸುದ್ದಿಯ ಜಾಗ ಜನರಿಗೆ ಸೇರಿದ್ದು ಹೀಗಾಗಿ ಫ್ರೀ – ಉಚಿತ. ಜಾಹೀರಾತುಗಳ ಜಾಗ ಮಾಲೀಕರಿಗೆ ಸೇರಿದ್ದು, ಹೀಗಾಗಿ ಹಣ ತೆರಬೇಕು ಎಂಬುದು ನಿಯಮ. ಮೊದಲ ಪತ್ರಿಕಾ ಆಯೋಗ ಜಾಹೀರಾತು ಹಾಗೂ ಸುದ್ದಿಯ ಪ್ರಮಾಣ ಶೇಕಡ ೬೦:೪೦ರನ್ನು ಮೀರಬಾರದೆಂದು ಶಿಫಾರಸ್ಸು ಮಾಡಿತ್ತು ಕೂಡ. ಆದರೆ ಇಂದು ಪತ್ರಿಕಾ ಆಯೋಗದ ಶಿಫಾರಸು ನಗೆಪಾಟಲಿಗೀಡಾಗಿದೆ. ನಮ್ಮ ಮುಖ್ಯವಾಹಿನಿಯ ಪತ್ರಿಕೆಗಳು ರಾಜಕೀಯ ಪಕ್ಷಗಳಿಂದ ಹಣಪಡೆದು ಸುದ್ದಿಯ ಅಂಕಣಗಳನ್ನು ತುಂಬಿಸುತ್ತಿರುವುದು ಸಾಬೀತಾಗಿದೆ. ಇದು ಪತ್ರಿಕೆ ಹಾಗೂ ರಾಜಕೀಯ ಪಕ್ಷದ ನಡುವಿನ ಗುಪ್ತ ಒಪ್ಪಂದದ ಮೂಲಕ ಅಥವಾ ಚುನಾವಣಾ ಅಭ್ಯರ್ಥಿಯೇ ಪತ್ರಿಕೆಯೊಂದಿಗೆ ಮಾಡಿಕೊಳ್ಳುವ ನೇರ ಒಪ್ಪಂದದ ಮೂಲಕ ಜಾರಿಗೊಳ್ಳುತ್ತದೆ. ಒಬ್ಬ ಅಭ್ಯರ್ಥಿಗೆ ಚುನಾವಣೆಯ ವೇಳೆ ಇಷ್ಟು ಪ್ರಚಾರ ಬೇಕಾದರೆ ಅಭ್ಯರ್ಥಿ ಇಷ್ಟು ಹಣ ಕೊಡಬೇಕೆಂದು ನಿಗದಿಯಾಗುತ್ತದೆ. ಅಷ್ಟು ಮೊತ್ತ ಕೊಡಲಾರದವನಿಗೆ ಪ್ರಚಾರ ಸಿಗದು. ನಮ್ಮ ದೇಶದ ದೊಡ್ಡ ದೊಡ್ಡ ಪತ್ರಿಕಾ ಸಮೂಹಗಳೇ ಹೀಗೆ ಮಾಡುತ್ತಿರುವ ಬಗ್ಗೆ ಪತ್ರಿಕಾ ಮಂಡಳಿಗೂ ಗೊತ್ತಾಗಿದೆ. ಓದುಗರಿಗೆ ಈ ಮೋಸ ಗೊತ್ತಿರದೇ ಪತ್ರಿಕೆಗಳಲ್ಲಿ ಬರುವ ಸುದ್ದಿಗಳಿಂದ ಪ್ರಭಾವಿತನಾಗುತ್ತಾರೆ!

ಈ ಬೆಳವಣಿಗೆ ನಿಜಕ್ಕೂ ಮಾಧ್ಯಮಗಳ ಶಕ್ತಿಯನ್ನು ಸೋಲಿಸುವ ನಡಿಗೆ. ಹಣಕ್ಕೆ ಮಾಧ್ಯಮಗಳು ಡೊಗ್ಗು ಸಲಾಮು ಹೊಡೆಯುವ ಇನ್ನೊಂದು ರೀತಿ. ಇದು ಪತ್ರಿಕಾ ಮೂಲತತ್ವಕ್ಕೆ ವಿರುದ್ಧವಾದುದು. ಚುನಾವಣಾ ಆಯೋಗವು ಅಭ್ಯರ್ಥಿಗಳ ಪ್ರಚಾರದ ಖರ್ಚು-ವೆಚ್ಚಗಳ ಮೇಲೆ ತೀವ್ರ ನಿಗಾಯಿಟ್ಟು ಕಟ್ಟುನಿಟ್ಟಿನ ಕ್ರಮ ಜಾರಿಗೊಳಿಸಿದ ಮೇಲೆ ರಾಜಕೀಯ ಪಕ್ಷಗಳು ಜನರನ್ನು ತಲುಪಲು ಈ ಅಡ್ಡದಾರಿ ಹಿಡಿದಿವೆಯೆನ್ನಲಾಗಿದೆ.

ಹಿಂದೆಲ್ಲಾ ವರದಿಗಾರರೇ ಅನಧಿಕೃತವಾಗಿ ಅನೈತಿಕವಾಗಿ ದುಡ್ಡುಪಡೆದು ರಾಜಕಾರಣಿಗಳಿಗೆ ಪ್ರಚಾರನೀಡುವ ಸಾಧ್ಯತೆಯಿತ್ತು. ಈ ಅಕ್ರಮ ತಪ್ಪಿಸಲು ಪತ್ರಿಕೆಗಳೇ ಅಧಿಕೃತ ಮಾರ್ಗ ಕಂಡುಕೊಂಡಿವೆ ಎಂದೂ ಕಾಸು ಪಡೆದು ಸುದ್ದಿ ಪ್ರಕಟಿಸುವ ನೀತಿಯನ್ನು ವ್ಯಾಖ್ಯಾನಿಸಲಾಗುತ್ತದೆ. ಇದು ಹೇಗೆಂದರೆ ಪೂಜಾರಿಗೆ ಆರತಿ ತಟ್ಟೆಯ ಮೂಲಕ ದಕ್ಷಿಣೆ ಸೇರುವುದನ್ನು ತಪ್ಪಿಸಲು ಆರತಿ ತಟ್ಟೆಯನ್ನೇ ರಾಷ್ಟ್ರೀಕರಿಸಿದಂತೆ.

ಹೀಗಾಗಿ ಈ ಮೇಲಿನ ಎಲ್ಲ ಕಾರಣಗಳಿಂದ ಭಾವುಕವಾಗಿ ನೋಡಿದರೆ ಇಂದು ಮಾಧ್ಯಮ ತನ್ನದೇ ಆದ ಶಕ್ತಿ, ಸ್ವಂತಿಕೆಗಳನ್ನು ಕಾಪಾಡಿಕೊಳ್ಳುವ ತುರ್ತು ಅಗತ್ಯವಿದೆ. ಕೆಲವು ರಾಜಕೀಯ, ಸಾಮಾಜಿಕ, ಹಾಗೂ ಆರ್ಥಿಕ ಕಾರಣಗಳ ಹಿನ್ನೆಲೆಯಲ್ಲಿ ಮಾಧ್ಯಮ ಕ್ಷೇತ್ರದಲ್ಲಿ ಏರುಪೇರುಗಳು ಸಂಭವಿಸುತ್ತಿವೆ. ಈ ಎಲ್ಲ ಕಾರಣಗಳ ಹಿನ್ನೆಲೆಯಲ್ಲಿ ನೋಡಿದರೆ ಮಾಧ್ಯಮದ ಶಕ್ತಿ ಎಂಬುದು ಸತ್ಯ. ವ್ಯಾವಹಾರಿಕವಾಗಿ ನೋಡಿದರೆ ಮಾಧ್ಯಮದ ಶಕ್ತಿ ಎಂಬುದು ಕೇವಲ ಮಿಥ್ಯೆ. ಎಲ್ಲಿಯವರೆಗೆ ಮಾಧ್ಯಮ ರಾಜಕೀಯ ಪಕ್ಷಗಳ ಕಾಸಿಗೆ ಮಾರಿಕೊಳ್ಳುವುದಿಲ್ಲವೋ ಅಲ್ಲಿಯವರೆಗೆ ಅವುಗಳ ಶಕ್ತಿ ಸತ್ಯ. ಯಾವಾಗ ಪ್ರಭಾವಿ ರಾಜಕಾರಣಿಗಳ ಹಾಗೂ ಜಾಹೀರಾತುದಾರರ ಆಮಿಷಗಳಿಗೆ ಅಡಿಯಾಳಾದವೋ ಆಗ ಮಾಧ್ಯಮಗಳ ಶಕ್ತಿಯೆಂಬುದು ಮಿಥ್ಯೆ.

ಮಾಧ್ಯಮಗಳನ್ನು ಶಕ್ತಿಯುತವಾಗಿ ಉಳಿಸಿಕೊಳ್ಳುವ ಅಥವಾ ಅಶಕ್ತವನ್ನಾಗಿ ಮಾಡುವ ಸಾಧ್ಯತೆ ಮಾಧ್ಯಮದ ಮಂದಿಯ ಕೈಯಲ್ಲಿದೆ.

ಡಾ|| ನಿರಂಜನ ವಾನಳ್ಳಿ
ನಂ. ೬೧, ಕೃಷ್ಣಮೂರ್ತಿ ಬಡಾವಣೆ, ತೊಣಚಿಕೊಪ್ಪಲು, ಮೈಸೂರು - ೫೭೦ ೦೦೯




# ನಿಮ್ಮೊಳಗೊಬ್ಬ ಜೀನಿಯಸ್

■ ಟಿ. ಆರ್. ಅನಂತರಾಮು

''ದುಡ್ಡು ಕೊಟ್ಟರೆ ಸಿಕ್ಕುವ ಜನ ಇವರಲ್ಲ, ಹುಟ್ಟುತ್ತಲೇ ಆ ಗುಣ ಬರಬೇಕು'' ಎಂದು ಐರಿಷ್ ಕವಿ, ನಾಟಕಕಾರ ಆಸ್ಕರ್ ವೈಲ್ಡ್ ಜೀನಿಯಸ್ ಕುರಿತು ಕೊಚ್ಚಿಕೊಂಡಿದ್ದಾನೆ. ''ಯಾಕೋ ಏನೋ ಜೀನಿಯಸ್‌ಗಳ ಆತ್ಮಕಥೆ ಬಲು ಹ್ರಸ್ವ. ಅವರ ದಾಯಾದಿಗಳನ್ನು ಕೇಳಿ, ಅವರ ಬಗ್ಗೆ ಏನೂ ತಿಳಿಯದೆ ಪಿಳಿಪಿಳಿ ಕಣ್ಣುಬಿಡುತ್ತಾರೆ'', ಎನ್ನುತ್ತಾನೆ ಚಿಂತಕ ರಾಲ್ಫ್ ಡಬ್ಲ್ಯೂ. ಎಮರ್‌ಸನ್. ''ಪ್ರತಿಭಾವಂತರು ಸಮಸ್ಯೆಗಳನ್ನು ಬಗೆಹರಿಸಲು ಹೊರಟರೆ ಜೀನಿಯಸ್‌ಗಳು ಅದನ್ನು ತಡೆಯುತ್ತಾರೆ'' ಎಂದು ಹೇಳುವುದೇ ಆಲ್ಬರ್ಟ್ ಐನ್‌ಸ್ಟೈನ್ ? ''ಒಂದಷ್ಟು ಹುಚ್ಚು ಇಲ್ಲದಿದ್ದರೆ ಅವನು ಜೀನಿಯಸ್ ಹೇಗಾಗುತ್ತಾನಪ್ಪ'' ಎಂದು ಕೇಳುತ್ತಾನೆ ಅರಿಸ್ಟಾಟಲ್. ನಾಟಕಕಾರ ಬರ್ನಾರ್ಡ್ ಷಾ ಅವರು ಜೀನಿಯಸ್ ಕುರಿತು ಆಡಿರುವ ಮಾತುಗಳು ಅವರ ಆತ್ಮಪ್ರಶಂಸೆಯೇನೋ ಎನ್ನುವಂತಿದೆ.

ಕಳೆದ ಅಕ್ಟೋಬರ್ ತಿಂಗಳ ೧೩ನ್ನು ಒಮ್ಮೆ ನೆನಪಿಸಿಕೊಳ್ಳಿ. 'ರನ್ ಮೆಷಿನ್, ಲಿಟ್ಲ್ ಚಾಂಪಿಯನ್, ಮಾಸ್ಟರ್ ಬ್ಲಾಸ್ಟರ್' ಎಂಬೆಲ್ಲ ಅಭಿಧಾನಕ್ಕೆ ಪಾತ್ರರಾದ, ಕ್ರಿಕೆಟ್ ಪರಿಭಾಷೆಯಲ್ಲಿ ದೇವತೆಯ ಸ್ಥಾನಕ್ಕೇರಿರುವ ಸಚಿನ್ ತೆಂಡೂಲ್ಕರ್, ಚಿನ್ನಸ್ವಾಮಿ ಕ್ರೀಡಾಂಗಣದಲ್ಲಿ ಆಸ್ಟ್ರೇಲಿಯದ ವಿರುದ್ಧ ಎರಡು ಶತಕಗಳನ್ನು ಬಾರಿಸಿದ್ದರು. ಅವರ ವೃತ್ತಿ ಜೀವನದಲ್ಲಿ ಒಟ್ಟು ೧೪,೦೦೦ ರನ್ನುಗಳ ಗುರಿ ಮುಟ್ಟಲು ಸಾಧ್ಯವಾದದ್ದು ಇದೇ ಟೆಸ್ಟ್‌ನಲ್ಲಿ. ಕ್ರಿಕೆಟ್‌ನ ಮತ್ತೊಬ್ಬ ಪ್ರತಿಭಾವಂತ ಮಾಜಿ ಕ್ಯಾಪ್ಟನ್ ಸುನಿಲ್ ಗವಾಸ್ಕರ್ ಇವರ ಸಾಧನೆಯನ್ನು ವರ್ಣಿಸಿದ್ದು ಹೀಗೆ :

''ಇನ್ನೊಂದು ಗ್ರಹದ ಮೇಲೆ ಇಳಿದ ಸಾಧನೆಗಿಂತ ಸಚಿನ್ ಸಾಧನೆ ಕಡಿಮೆಯೇನಲ್ಲ.'' ೩೭ ಪ್ರಾಯದ ಸಚಿನ್ ಸಾಧನೆಗೆ 'ಸಿಡ್ನಿ ಮಾರ್ನಿಂಗ್ ಸ್ಟಾರ್' ಕೂಡ ಜೈಕಾರ ಹಾಕಿತ್ತು. ಅಷ್ಟೇ ವಿನಯವಾಗಿ ಸಚಿನ್ ನುಡಿದಿದ್ದರು : ''ನಾನು ಇನ್ನೂ ಕ್ರಿಕೆಟ್ ವಿದ್ಯಾರ್ಥಿ.''

ಸಚಿನ್ ತೆಂಡೂಲ್ಕರರನ್ನು ಏನೆಂದು ಹೊಗಳಬೇಕು ? 'ರನ್ ಮೆಷಿನ್, ಎಂದೆ ?', ಅಥವಾ 'ಮಾಸ್ಟರ್ ಬ್ಲಾಸ್ಟರ್' ಎಂದೆ ? ಇವೆಲ್ಲ ಬಿಡಿ. ಕ್ರೀಡಾಪ್ರೇಮಿಗಳಿಗೆ ಪರಮಾನಂದವಾದಾಗ ಹೊರಬಿದ್ದ ಮೆಚ್ಚುಗೆಯ ಮಾತುಗಳು. ಆದರೆ ಅವರ ಸಾಧನೆಗಳನ್ನು ಸಾಮಾನ್ಯ ವಾಚಕಗಳಿಂದಲೂ ಹೇಳಬಹುದೆ ? ಇಂಟೆಲಿಜೆಂಟ್, ಟ್ಯಾಲೆಂಟೆಡ್, ಜೀನಿಯಸ್. ಸೀದಾ ಸಾದಾ ಮಾತುಗಳಲ್ಲಿ ಹೇಳಬೇಕೆಂದರೆ ಸಚಿನ್ ಒಬ್ಬ ನಿರಂತರ ಸಾಧಕ. ಹದಿನಾರನೇ ವಯಸ್ಸಿನಲ್ಲೇ ಕ್ರಿಕೆಟ್ ಲೋಕ ಪ್ರವೇಶಿಸಿ, ಮೂವತ್ತೇಳರ ಹರಯದಲ್ಲೂ ದ್ವಿಶತಕ ಬಾರಿಸಿ ಅದೇನೂ ಅಲ್ಲವೆಂಬಂತೆ ಇರುವುದಿದೆಯಲ್ಲ, ಬಹುಶಃ ಅದು ಎಲ್ಲದಕ್ಕಿಂತಲೂ ದೊಡ್ಡ ಸಾಧನೆ. ನಮ್ಮಲ್ಲಿ ಜೀನಿಯಸ್ ಎಂಬ ಪದಕ್ಕೆ ಇರುವ ಅರ್ಥ ಎರಡೇ. ಅಸಾಧಾರಣ ಶಕ್ತಿ - ಪ್ರತಿಭೆ. ಹಾಗಾದರೆ ನ್ಯೂಟನ್, ಡಾರ್ವಿನ್, ಐನ್‌ಸ್ಟೈನ್ ಅವರನ್ನು ಯಾವ ಮಾನದಂಡದಲ್ಲಿ ಅಳೆಯಬೇಕು ? ಅವರು ಜೀನಿಯಸ್ ಅಲ್ಲವೆ ? ಹಾಗಾದರೆ ಜೀನಿಯಸ್ ಎಂದು ಕರೆಯುವುದು ಯಾವಾಗ ?

ಸಚಿನ್ ತೆಂಡೂಲ್ಕರ್ ಅವರ ಸಹಪಾಠಿ ವಿನೋದ್ ಕಾಂಬ್ಳಿ ಅವರ ವಿಚಾರಕ್ಕೆ ಬರೋಣ. ಆತನಿಗೂ ಈಗ ಬರೋಬ್ಬರಿ ೩೭. ಶಾಲಾ ದಿನಗಳಲ್ಲಿ ತೆಂಡೂಲ್ಕರ್ ಜೊತೆ ಸೇರಿ ೬೬೪ ರನ್ ಪೇರಿಸಿದ್ದು ಒಂದು ರೆಕಾರ್ಡೇ ಸರಿ. ಮುಂದೆ ಆದದ್ದೇನು ? ೧೯೯೩ರಲ್ಲಿ ಈ ಎಡಗೈ ವೀರ ಕೋಲ್ಕತ್ತಾ ಟೆಸ್ಟ್‌ನಲ್ಲಿ ಇಂಗ್ಲೆಂಡ್ ವಿರುದ್ಧ ಆಡಿ ಟೆಸ್ಟ್ ಜೀವನಕ್ಕೆ ಪದಾರ್ಪಣೆ ಮಾಡಿದರು. ೧೯೯೫ರಲ್ಲಿ ತನ್ನ ೨೩ನೇ ವಯಸ್ಸಿನಲ್ಲಿ ಕಾಂಬ್ಳಿ ಕೊನೆಯ ಟೆಸ್ಟ್ ಆಡಿದ್ದರು. ಷಾರ್ಜಾದಲ್ಲಿ ಒಂದು ದಿನದ ಕ್ರಿಕೆಟ್ ಆಡಿ ೨೦೦೦ದಲ್ಲಿ ಕ್ರಿಕೆಟ್ ಜೀವನಕ್ಕೆ ವಿದಾಯ ಹೇಳಿದರು. ಏಕೆ ? ಕಾಂಬ್ಳಿಯಲ್ಲಿ ಪ್ರತಿಭೆ ಇರಲಿಲ್ಲವೆ ? ಇತ್ತು, ಮೊದಲ ಏಳು ಟೆಸ್ಟ್‌ಗಳಲ್ಲೇ ಎರಡು ಡಬಲ್ ಸೆಂಚುರಿ, ಒಂದು ಸೆಂಚುರಿ ಹೊಡೆದಿದ್ದರು. ಕಾಂಬ್ಳಿ ಮಿಂಚಿದ್ದರು. ಹಾಗೆಯೇ ಮಿಂಚಿ ಮಾಯವಾಗಿದ್ದರು. ಹೆಸರು ತಲೆ ಕೆಡಿಸಿತ್ತು, ಅಮಲು ತಲೆಗೇರಿತ್ತು, ಸಾಧನೆ ಶೂನ್ಯವಾಯಿತು. 'ಮಿಟೀಯೋರಿಕ್ ಫಾಲ್' ಎನ್ನುತ್ತಾರಲ್ಲ ಹಾಗೆ. ಅದು ಅರೆಕ್ಷಣದ ಮಿಂಚು. ಟೆಸ್ಟ್‌ನಲ್ಲಿ ಒಟ್ಟು ೧೦೮೪, ಒಂದು ದಿನದ ಆಟದಲ್ಲಿ ೨೪೭೭ ರನ್. ಬದುಕಿನುದ್ದಕ್ಕೂ ಈತ ನೆನಪಿಸಿಕೊಳ್ಳಬೇಕಾದ ಸಾಧನೆ ಇಷ್ಟೆ.

ಇನ್ನೂ ಮುಂದೆ ಆದದ್ದೇನು ? ಬಂದ ಅವಕಾಶಗಳನ್ನು ಆತ ಅದೇ ಎಡಗೈನಿಂದ ಆಚೆಗೆ ದಬ್ಬಿದ್ದ, ಬಿ.ಸಿ.ಸಿ.ಐ.ಅನ್ನು ತನ್ನ ಕುಲ ಮತ್ತು ಬಣ್ಣವನ್ನು ಅವಹೇಳನ ಮಾಡಿತ್ತೆಂದು ದೂರಿದ್ದ. ತನ್ನ ಅಸಾಮರ್ಥ್ಯಕ್ಕೆ ಕನಿಕರ ಪಡೆದುಕೊಳ್ಳಲು ಈ ತಂತ್ರ ಬಳಸಿಕೊಂಡಿದ್ದ. ೨೦೦೯ರಲ್ಲಿ ಮಹಾರಾಷ್ಟ್ರ ವಿಧಾನಸಭೆಗೆ ಲೋಕಭಾರತಿ ಎಂಬ ಪಕ್ಷದಿಂದ ಸ್ಪರ್ಧಿಸಿ ನೆಲಕಚ್ಚಿದ್ದ. ಅದಕ್ಕೂ ಹಿಂದಿನ ವರ್ಷ ಕುಡಿದು ಕಾರು ನಡೆಸಿ, ಮಹಿಳೆಯೊಂದಿಗೆ ಅಸಭ್ಯವಾಗಿ ವರ್ತಿಸಿ ಪೊಲೀಸ್ ಕೇಸ್ ಆಗಿತ್ತು. ಈ ಸಂಗತಿಯನ್ನು ಇಲ್ಲಿ ಬರೆದಿರುವುದು ಒಂದು ಕಾರಣವನ್ನು ನಿಮ್ಮ ಮುಂದೆ ಬಿಚ್ಚಿಡಲು. ನಿಜಕ್ಕೂ ಪ್ರತಿಭಾವಂತರು ಸದಾ ಸಾಧಕರಾಗಿರುತ್ತಾರೆ, ಅವಕಾಶ ಬಂದಾಗ ಅದನ್ನು ಒದೆಯುವುದಿಲ್ಲ, ಗುರಿಯನ್ನು ಅವರು ತಪಸ್ಸೆಂದು ಸ್ವೀಕರಿಸುತ್ತಾರೆ, ಅಂದಮೇಲೆ ಯಶಸ್ಸು ಕಟ್ಟಿಟ್ಟ ಬುತ್ತಿ.

ಜೀನಿಯಸ್ ಎಂದರೆ ಅವರೇನೂ ಆಕಾಶದಿಂದ ಇಳಿದು ಬಂದವರಲ್ಲ. ನಮ್ಮ ನಿಮ್ಮಲ್ಲೇ ಇರುವವರು. ತಮ್ಮ ಸಾಧನೆಯಿಂದಾಗಿ ಗುಂಪಿನಲ್ಲಿ ಎದ್ದು ಕಾಣುವವರು. ಅಷ್ಟೇ ಏಕೆ, ನಿಮ್ಮೊಳಗೆ ಒಬ್ಬ ಜೀನಿಯಸ್ ಅಡಗಿರಬಹುದು. ಮಹಾ ಮೇಧಾವಿಗಳನ್ನು, ಮಹಾ ಮೇಧಾವಿಗಳೇ ವ್ಯಾಖ್ಯಾನಿಸಿರುವುದುಂಟು. ''ಜೀನಿಯಸ್ ಎಂದರೆ ಮಹಾನುಭಾವರು ತೃಪ್ತಿಪಡುವಲ್ಲಿ ಸುಸ್ತಾದವರು'' ಎನ್ನುತ್ತಾನೆ ನೆಪೋಲಿಯನ್ ಬೋನೋಪಾರ್ಟೆ.

''ಯಾರನ್ನು ಜೀನಿಯಸ್ ಎನ್ನಬಹುದೋ ಆ ಮಂದಿ ಬಹುತೇಕ ವೇಳೆ ಬಾಲ್ಯದಲ್ಲಿ ದಡ್ಡರಾಗಿ ಕಾಣುತ್ತಾರೆ. ಇನ್ನು ಸಮಾಜದಲ್ಲಂತೂ ಅವರು ನಿಷ್ಕ್ರಿಯರು. ಅವರ ಬದುಕು ಉಲ್ಕಾಪಾತದ ಹಾಗೆ. ಉಲ್ಕೆ ಭೂಮಿಗೆ ಬಿದ್ದೊಡನೆ ಅದೊಂದು ಕಲ್ಲು'' ಎನ್ನುತ್ತಾನೆ, ಅಮೆರಿಕದ ಕವಿ ಲಾಂಗ್‌ಫೆಲೋ.

''ನೀವು ಎಷ್ಟೇ ಚುರುಕಾಗಿರಿ, ಅದರಲ್ಲಿ ಮಹೋನ್ನತ ಉದ್ದೇಶವಿಲ್ಲದಿದ್ದರೆ ಅಂತಹ ವ್ಯಕ್ತಿಯನ್ನು ಸುಮ್ಮಸುಮ್ಮನೆ ಯಾಕೆ ಜೀನಿಯಸ್ ಎಂದು ಕರೆಯುತ್ತೀರಿ'' ಎನ್ನುತ್ತಾನೆ ಡೆನ್ಮಾರ್ಕಿನ ತತ್ತ್ವಶಾಸ್ತ್ರಜ್ಞ ಕೀರ್ಕೆ ಗಾರ್ಡ್. ಅದೇ ಮನುಷ್ಯ ಇನ್ನೊಂದು ಸಂದರ್ಭದಲ್ಲಿ ಜೀನಿಯಸ್






ಗಳನ್ನು ಗುಡುಗು, ಮಿಂಚಿಗೆ ಹೋಲಿಸುತ್ತಾನೆ. 'ಗುಡುಗು, ಮಿಂಚಿಗೆ ಗಾಳಿಯ ಭಯವಿಲ್ಲ, ಜನ ಬೆಚ್ಚಿಬೀಳುತ್ತಾರೆ. ಗಾಳಿಯ ಮೂಲಕ ಅದು ನುಗ್ಗೇ ನುಗ್ಗುತ್ತದೆ.' ಎಂಥ ಉಪಮೆ !

''ದುಡ್ಡು ಕೊಟ್ಟರೆ ಸಿಕ್ಕುವ ಜನ ಇವರಲ್ಲ, ಹುಟ್ಟುತ್ತಲೇ ಆ ಗುಣ ಬರಬೇಕು'' ಎಂದು ಐರಿಷ್ ಕವಿ, ನಾಟಕಕಾರ ಆಸ್ಕರ್ ವೈಲ್ಡ್ ಜೀನಿಯಸ್ ಕುರಿತು ಕೊಚ್ಚಿಕೊಂಡಿದ್ದಾನೆ. ''ಯಾಕೋ ಏನೋ ಜೀನಿಯಸ್‌ಗಳ ಆತ್ಮಕಥೆ ಬಲು ಹ್ರಸ್ವ. ಅವರ ದಾಯಾದಿಗಳನ್ನು ಕೇಳಿ, ಅವರ ಬಗ್ಗೆ ಏನೂ ತಿಳಿಯದೆ ಪಿಳಿಪಿಳಿ ಕಣ್ಣುಬಿಡುತ್ತಾರೆ'' ಎನ್ನುತ್ತಾನೆ ಚಿಂತಕ ರಾಲ್ಫ್ ಡಬ್ಲ್ಯೂ. ಎಮರ್‌ಸನ್. ''ಪ್ರತಿಭಾವಂತರು ಸಮಸ್ಯೆಗಳನ್ನು ಬಗೆಹರಿಸಲು ಹೊರಟರೆ ಜೀನಿಯಸ್‌ಗಳು ಅದನ್ನು ತಡೆಯುತ್ತಾರೆ'' ಎಂದು ಹೇಳುವುದೇ ಆಲ್ಬರ್ಟ್ ಐನ್‌ಸ್ಟೈನ್ ? ''ಒಂದಷ್ಟು ಹುಚ್ಚು ಇಲ್ಲದಿದ್ದರೆ ಅವನು ಜೀನಿಯಸ್ ಹೇಗಾಗುತ್ತಾನಪ್ಪ'' ಎಂದು ಕೇಳುತ್ತಾನೆ ಅರಿಸ್ಟಾಟಲ್. ನಾಟಕಕಾರ ಬರ್ನಾರ್ಡ್ ಷಾ ಅವರು ಜೀನಿಯಸ್ ಕುರಿತು ಆಡಿರುವ ಮಾತುಗಳು ಅವರ ಆತ್ಮಪ್ರಶಂಸೆಯೇನೋ ಎನ್ನುವಂತಿದೆ :

''ಕೆಲವರು ವರ್ಷಕ್ಕೆ ಎರಡು ಸಲವೋ ಮೂರು ಸಲವೋ ಯೋಚಿಸುತ್ತಾರೆ. ನನಗೆ ಅಂತರರಾಷ್ಟ್ರೀಯ ಮನ್ನಣೆ ಏಕೆ ಸಿಕ್ಕಿದೆ ಗೊತ್ತೆ? ವಾರದಲ್ಲಿ ಒಂದು ಅಥವಾ ಎರಡು ಬಾರಿ ಯೋಚಿಸುತ್ತೇನೆ''

ಜೀನಿಯಸ್ ಕುರಿತು ಯಾವ ಮೇಧಾವಿ ಏನೇ ಹೇಳಲಿ, ನಮ್ಮ ಕಣ್ಣೆದುರಿಗೆ ಕೆಲವು ದೃಷ್ಟಾಂತಗಳಿವೆ. ಈ ಲೇಖನದ ಮುಂದಿನ ಭಾಗವೆಲ್ಲವೂ ಇಂಥ ಕೆಲವು ವ್ಯಕ್ತಿಗಳ ಬದುಕಿನ ಒಂದಷ್ಟು ಒಳನೋಟಗಳನ್ನು ಕೊಡುತ್ತದೆ.



ಪಾಶ್ಚಾತ್ಯ ಸಂಗೀತ ರಚನೆಕಾರರ ಪೈಕಿ ಮೊಸಾರ್ಟ್ (೧೭೫೬-೧೭೯೧) ಹೆಸರನ್ನು ಕೇಳಿಲ್ಲದಿರುವವರೇ ವಿರಳ. ಅವನ ಪೂರ್ಣ ಹೆಸರನ್ನು ಹೇಳುವ ಪ್ರಯಾಸವನ್ನು ಯಾರೂ ಮಾಡುವುದಿಲ್ಲ. ಯೊಹಾನಸ್ ಕ್ರಿಸೋಸ್ಟೋಮಸ್ ವೂಲ್ಫ್ ಗ್ಯಾಂಗಸ್ ಥಿಯೋಫಿಲಸ್ ಮೊಸ್ಹಾರ್ಟ್. ಬಹು ದೀರ್ಘ ಹೆಸರಾಯಿತಲ್ಲವೆ ? ಆತನ ಜೀವಿತಾವಧಿಯಲ್ಲಿ ೬೦೦ಕ್ಕೂ ಮಿಕ್ಕಿ ಸಂಗೀತ ರಚನೆಗಳನ್ನು ಮಾಡಿದ ಎಂಬುದಷ್ಟೇ ಅವನ ಖ್ಯಾತಿಗೆ ಕಾರಣವಲ್ಲ. ತನ್ನ ಐದನೆಯ ವಯಸ್ಸಿನಿಂದಲೇ ಸಂಗೀತ ರಚನೆಯತ್ತ ಅವನು ಒಲವು ತೋರಿದ. ಎಳವೆಯಲ್ಲೇ ಕೀ ಬೋರ್ಡ್ ಮತ್ತು ವಯಲಿನ್ ಅವನನ್ನು ಆಕರ್ಷಿಸಿತು. ಅವನ ಅಪ್ಪ ಲಿಯೋಪಾಲ್ಡ್ ಚಾಪಲ್ ಒಂದರಲ್ಲಿ ಸಂಗೀತ ರಚನೆಕಾರನಾಗಿದ್ದ. ಈಗ ಆಸ್ಟ್ರಿಯಾಕ್ಕೆ ಸೇರಿರುವ ಸ್ಯಾಲ್ಸ್‌ಬರ್ಗ್ ಅವನ ಹುಟ್ಟೂರು. ಮೊಸಾರ್ಟ್ ಹುಟ್ಟಿದ ಅದೇ ವರ್ಷ ಅಪ್ಪ ವಯಲಿನ್ ಬಗ್ಗೆ ಪುಸ್ತಕ ರಚಿಸಿದ್ದ. ಹದಿನೇಳನೇ ವಯಸ್ಸಿನಲ್ಲೇ ಮೊಸಾರ್ಟ್ ಸ್ಯಾಲ್ಸ್‌ಬರ್ಗ್ ಅರಮನೆಯಲ್ಲಿ ಆಸ್ಥಾನ ವಿದ್ವಾನ್ ಆಗಿದ್ದ. ಬೆಥೋವನ್‌ನಂತಹ ಸಂಗೀತ ಸಾಮ್ರಾಟ್ ಇವನ ನೆರಳಿನಲ್ಲೇ ಸಂಗೀತ ರಚಿಸಬೇಕಾಯಿತೆಂದರೆ ಮೊಸಾರ್ಟ್‌ನ ವಿದ್ವತ್ತಿನ ಪರಿಚಯವಾದೀತು. ಇಲ್ಲೊಂದು ವಿಶೇಷ ಅಂಶವಿದೆ. ಲಿಯೋಪಾಲ್ಡ್ ತನ್ನ ಮಕ್ಕಳಿಗೆ ತಾನೇ ಮೊದಲ ಗುರುವಾಗಿದ್ದ. ಆದರೆ ಮೊಸಾರ್ಟ್ ಕೂಡ ಬಾಲಪ್ರತಿಭೆಯೇ. ಅಪ್ಪ ಹೇಳಿದ್ದಷ್ಟನ್ನೇ ಪಾಲಿಸದೆ ತನ್ನ ಲೋಕದಲ್ಲಿ ಸ್ವೈರ ವಿಹರಿಸುತ್ತಿದ್ದ. ಅವನು ವಯಲಿನ್ ಎತ್ತಿಕೊಂಡರೆ ಅಪ್ಪನೇ ಆ ರಾಗಗಳಿಗೆ ಮನ ಸೋಲುತ್ತಿದ್ದ. ಲಿಯೋಪಾಲ್ಡ್ ಅದೆಷ್ಟು ಉತ್ಸಾಹಭರಿತನಾಗಿದ್ದನೆಂದರೆ ಸಂಗೀತ ರಚನೆಯ ಕಾಯಕವನ್ನೇ ಕೈಬಿಟ್ಟು ಮಗನನ್ನು ಉತ್ತುಂಗಕ್ಕೆ ಏರಿಸಬೇಕೆಂದು ಸಂಕಲ್ಪಿಸಿದ. ಮೊಸಾರ್ಟ್ ಪ್ರೌಢಾವಸ್ಥೆ ತಲುಪಿದಾಗ ಇನ್ನೊಂದು ಲಾಭ ಅವನಿಗಾಯಿತು. ಮನೆ ಮಂದಿಯೆಲ್ಲ ಯೂರೋಪಿನ ಹಲವು ಭಾಗಗಳಿಗೆ ಪದೇ ಪದೇ ಭೇಟಿಕೊಡುತ್ತಿದ್ದರು. ಎಲ್ಲ ಪ್ರಮುಖ ಸಂಗೀತ ಕಚೇರಿಗಳಿಗೂ ಮೊಸಾರ್ಟ್ ಹೋಗುವ ಅವಕಾಶವಾಯಿತು. ಅಷ್ಟೇ ಅಲ್ಲ, ಅಲ್ಲಿ ಕಾರ್ಯಕ್ರಮ ಕೊಡುವುದಕ್ಕೆ ಪ್ರಾರಂಭಿಸಿದ. ವಿಶೇಷವಾಗಿ ಪ್ಯಾರಿಸ್, ಲಂಡನ್, ಮ್ಯೂನಿಕ್‌ನಲ್ಲಿ ಪ್ರತಿಭಾವಂತ ಸಂಗೀತ ರಚನೆಕಾರರನ್ನು ಭೇಟಿಯಾಗುವ ಮಹದವಕಾಶ ಅವನಿಗೆ ಲಭ್ಯವಾಯಿತು. ೧೭೬೯-೧೭೭೧ರವರೆಗೆ ಕೈಗೊಂಡ ಇಟಲಿ ಯಾತ್ರೆಯಲ್ಲಿ ಮೊಸಾರ್ಟ್ ತಾನು ಪ್ರತಿಭಾವಂತನೆಂದು ಆಗಲೇ ತೋರಿಸಿಕೊಂಡಿದ್ದ. ಮುಂದೆ ಅವನು ರಚಿಸಿದ್ದೆಲ್ಲ ಚರಿತ್ರೆಯಾಗುತ್ತಲೇ ಬಂತು. ಇಲ್ಲೊಂದು ಪ್ರಶ್ನೆ. ಮೊಸಾರ್ಟ್ ಜೀನಿಯಸ್ ಆದದ್ದು ಅವರಪ್ಪನ ವಂಶವಾಹಿಯಿಂದಲೆ ? ಇಲ್ಲವೆ ತನ್ನ ಸತತ ಪರಿಶ್ರಮದಿಂದಲೆ ? ಬಹುತೇಕ ಮನೋವಿಜ್ಞಾನಿಗಳು ಹೇಳುವಂತೆ ಅವನಿಗೆ ಆ ಪ್ರತಿಭೆ ಬಂದದ್ದು ಸತತ ಪರಿಶ್ರಮದಿಂದ, ಗುರಿಯಿಂದ ಅಲುಗದ ಏಕಲವ್ಯ ಪ್ರಜ್ಞೆಯಿಂದ. ಅವನಿಗೆ ದೊರೆತ ಅವಕಾಶವೇ ಹಾಗಿತ್ತು. ಅಪ್ಪ ಅವನ ಆಸೆಗೆ ನೀರೆರೆದು ಪೋಷಿಸಿದ್ದರು, ಪ್ರತಿಭೆ ಇದೆಯೆಂದು ಅವನು ಅಭ್ಯಾಸ ನಿರತನಾಗಿರದಿದ್ದರೆ ಆ ಎತ್ತರಕ್ಕೆ ಏರುತ್ತಿದ್ದನೆ ?

ಹಾಗೆ ನೋಡಿದರೆ ಬಾಲ್ಯದಲ್ಲಿ ಅವನು ರಚಿಸಿದ ಸಂಗೀತವೆಲ್ಲವೂ ಉತ್ಕೃಷ್ಟವಾದವುಗಳೇನಲ್ಲ. ಅದರಲ್ಲಿ ಸ್ವಲ್ಪ ಉತ್ಪ್ರೇಕ್ಷೆ ಇದೆಯೆಂದು ಮನೋವಿಜ್ಞಾನಿಗಳು ಹೇಳುತ್ತಾರೆ. ಮೊಸಾರ್ಟ್ ನಿಧಾನವಾಗಿ ಮೇಲೇರಿದ್ದಂತೂ ನಿಜ. ಇಂದಿಗೂ ಅಭಿಜಾತ ಸಂಗೀತ ಕಾರ್ಯಕ್ರಮದಲ್ಲಿ ಅವನ ರಚನೆಗಳು ಯೂರೋಪಿನ ಅನೇಕ ಭಾಗಗಳಲ್ಲಿ ಸಂಗೀತ ಪ್ರಿಯರ ಹೃದಯವನ್ನು ಸೆರೆಹಿಡಿದಿವೆ. ಮೊಸ್ಹಾರ್ಟ್ ಅಭಿಜಾತ ಕಲಾವಿದ. ಪ್ರಯತ್ನವಿಲ್ಲದೆ ಜೀನಿಯಸ್ ಆದವನಲ್ಲ.

'ವಾಟ್ ಮೇಕ್ಸ್ ಎ ಜೀನಿಯಸ್' ಎಂಬ ಕೃತಿಯಲ್ಲಿ ಇಂಗ್ಲೆಂಡಿನ ಎಕ್ಸೀಟರ್ ವಿಶ್ವವಿದ್ಯಾಲಯದ ಮೈಕೇಲ್ ಹಾವ್, ಜೀನಿಯಸ್ ಎಂಬ ಪದದ ಹಿಂದಿರುವ ಶ್ರಮವನ್ನು

ಗುರುತಿಸಲು ಯಾವ ಯಾವ ದೈತ್ಯ ಪ್ರತಿಭೆಗಳ ಬದುಕು ದಾಖಲೆಯಾಗಿದೆಯೋ ಅವರ ಜೀವನದ ಒಳಹೊಕ್ಕು ನೋಡಲು ಯತ್ನಿಸಿದ್ದಾನೆ. ಸತತ ಸಾಧನೆ ಇಲ್ಲದೆ ಯಾವುದೂ ಕೈಗೆಟುಕಲಾರದು ಎಂಬ ಅಭಿಪ್ರಾಯಕ್ಕೆ ಬಂದಿದ್ದಾನೆ. ಆದರೆ ಆತ ಷೇಕ್ಸ್‌ಪಿಯರ್‌ನ ತಂಟೆಗೆ ಬಂದಿಲ್ಲ. ಅದಕ್ಕೂ ಆತ ಕಾರಣ ಕೊಡುತ್ತಾನೆ. ಷೇಕ್ಸ್‌ಪಿಯರ್ ವಿಶ್ವಮಾನ್ಯ ಕವಿ, ನಾಟಕಕಾರ. ಆತ ಒಟ್ಟು ೩೭ ನಾಟಕಗಳನ್ನೂ, ೧೫೪ ಸಾನೆಟ್‌ಗಳನ್ನೂ ಬರೆದಿದ್ದಾನೆಂದು ಜಗತ್ತಿಗೇ ತಿಳಿದಿದೆ. ಆದರೆ ಅವನ ಬಾಲ್ಯದ ವಿದ್ಯಾಭ್ಯಾಸದ ಬಗ್ಗೆ ಖಚಿತವಾದ ಮಾಹಿತಿಗಳೇ ಇಲ್ಲ. ಬಹುಶಃ ಸ್ಟ್ರಾಟ್‌ಫರ್ಡ್‌ನ ದಿನಗಳನ್ನು ಕಿಂಗ್ಸ್ ನ್ಯೂ ಸ್ಕೂಲಿನಲ್ಲಿ ಓದಿರಬಹುದೆಂಬುದು ಊಹೆಯಷ್ಟೇ. ಮುಂದೆ ೧೫೮೫ರಿಂದ ೧೫೯೨ರವರೆಗೆ ಈತ ಹೇಗೆ ಕಳೆದ ? ಎಲ್ಲಿದ್ದ ? ಅದೆಲ್ಲಾ ಇಂದಿಗೂ ನಿಗೂಢ. ಅವನ ಜೀವನ ಚರಿತ್ರೆಯನ್ನು ಅನೇಕರು ಬರೆದಿದ್ದಾರೆ. ಜಿಂಕೆಯ ಕಳ್ಳ ಬೇಟೆಯಾಡಿ ಸಿಕ್ಕಿಹಾಕಿಕೊಳ್ಳುವ ಸಂದರ್ಭದಲ್ಲಿ ತಲೆಮರೆಸಿ ಕೊಂಡಿದ್ದನಂತೆ. ಅದೇ ಆ ಅವಧಿ ಎಂದು ಹೇಳುವವರೂ ಉಂಟು. ಅವನ ಲೋಕ ಪ್ರಸಿದ್ಧ ಸಾಹಿತ್ಯ ಸೃಷ್ಟಿ ಮೊದಲಾದುದು ಯಾವಾಗ ? ಅದಕ್ಕೂ ದಾಖಲೆ ಇಲ್ಲ. ಬಹುಶಃ ೧೫೯೨ರ ನಂತರ. ಅವನು ಗತಿಸಿದ ೧೫೦ ವರ್ಷಗಳ ನಂತರ ಪುಕಾರೆದ್ದಿತು. ಷೇಕ್ಸ್‌ಪಿಯರ್ ಎಂಬ ಹೆಸರಿನ ಲೇಖಕನೇ ಇರಲಿಲ್ಲ. ಬಹುಶಃ ಫ್ರಾನ್ಸಿಸ್ ಬೇಕನ್, ಕ್ರಿಸ್ಟೋಫರ್ ಮಾರ್ಲೋ, ಎಡ್ವರ್ಡ್ ಡಿ. ವೆರ್ ಆಕ್ಸ್‌ಫರ್ಡಿನ ೧೭ನೇ ಅರ್ಲ್ ಇವರಲ್ಲಿ ಯಾರೋ ಒಬ್ಬರು ಷೇಕ್ಸ್‌ಪಿಯರ್‌ನ ಹೆಸರನ್ನಿಟ್ಟುಕೊಂಡು ಬರೆದಿರಬಾರದೇಕೆ ಎಂಬ ಗುಮಾನಿ ಹುಟ್ಟಿ ಕೊನೆಗೆ ಎಲ್ಲ ಮಗ್ಗುಲಲ್ಲೂ ಅಳೆದು ಕೇರಿ, ತೂರಿ ಷೇಕ್ಸ್‌ಪಿಯರ್ ಎಂಬ ಹೆಸರಿನ ಲೇಖಕನೇ ಆ ಕಲಾಕಾರ ಎಂದು ಒಮ್ಮತಕ್ಕೆ ಬರಬೇಕಾಯಿತು. ಇಂಥ ಜೀನಿಯಸ್‌ಗೆ ಎಂಥ ಪಾಡು ನೋಡಿ. ಅವನು ಭೌತಿಕವಾಗಿ ಹೀಗಿದ್ದನೆಂದು ಹೇಳಲೂ ದಾಖಲೆಗಳಿಲ್ಲ. ಚಿತ್ರಗಳಲ್ಲಿ ಮಾರ್ಟಿನ್ ಡ್ರೊಷಟ್ ಎಂಬ ಕಲಾವಿದ ರಚಿಸಿದ ಅವನ ಚಿತ್ರವನ್ನೇ ಎಲ್ಲರೂ 'ಹೌದು' ಎಂದರು. ನಮ್ಮಲ್ಲಿ, ಚಾಣಕ್ಯನನ್ನೂ, ವರಾಹಮಿಹಿರನನ್ನೂ ಒಂದೇ ಎರಕದಲ್ಲಿ ತೆಗೆದಂತೆ. ಮಹಾನ್ ನಾಟಕಕಾರ ಷೇಕ್ಸ್‌ಪಿಯರ್‌ನ ಬದುಕಿನಲ್ಲಿ ಎಷ್ಟೊಂದು ಗ್ಯಾಪ್‌ಗಳಿವೆ. ಅವನು ಜೀನಿಯಸ್ ಆದದ್ದು ಹೇಗೆ ಎಂದು ವಿವರ ಕೊಡುವ ಭೂಪ ಯಾರು ? ಅಂಥ ಪ್ರಯತ್ನ ಸಾಧುವೆ ? ಸಾಧ್ಯವೆ ? ಹೀಗಾಗಿ ಜೀನಿಯಸ್ ಪ್ರಶ್ನೆ ಬಂದಾಗ ಷೇಕ್ಸ್‌ಪಿಯರ್‌ನನ್ನು ರೂಪಿಸಿದ್ದು ಯಾವುದು ಎಂದು ಯಾರೂ ಹೇಳಲು ಆಗದು.

ಎಲ್ಲ ಜೀನಿಯಸ್‌ಗಳ ವಿಚಾರದಲ್ಲೂ ಇಂಥ ಎಡವಟ್ಟುಗಳಾಗಿಲ್ಲ. ಅದರಲ್ಲೂ ಅಭಿಜಾತ ವಿಜ್ಞಾನಿಗಳ ಬಗ್ಗೆ ದಂಡಿಯಾಗಿ ಮಾಹಿತಿಗಳಿವೆ. ಅವರ ಬದುಕಿನ ಎಲ್ಲ ಆಯಾಮಗಳನ್ನೂ ಪಕಳೆ ಪಕಳೆಯಾಗಿ ಬಿಡಿಸಲಾಗಿದೆ. ಐಸಾಕ್ ನ್ಯೂಟನ್ ಹುಟ್ಟಿದ್ದು ಯಾವಾಗ ? ಎಲ್ಲರಿಗೂ ಗೊತ್ತು. ಷೇಕ್ಸ್‌ಪಿಯರ್ ಗತಿಸಿದ ೨೬ ವರ್ಷಗಳ ನಂತರ ನ್ಯೂಟನ್ ಹುಟ್ಟಿದ (೧೬೪೨-೧೭೨೭). ನ್ಯೂಟನ್ ಬದುಕಿನಲ್ಲಿ ಸಾಧಿಸಿದ್ದೆಲ್ಲವೂ ದಾಖಲೆಯಾಗಿದೆ. ಅವನ ಬಾಲ್ಯವೂ ಸವಿವರವಾಗಿ ಗೊತ್ತಿದೆ. ನ್ಯೂಟನ್‌ನನ್ನು ಜೀನಿಯಸ್ ಅನ್ನದಿದ್ದರೆ ಇನ್ನಾರನ್ನು ಅನ್ನಬೇಕು ? ಅವನ ಆವಿಷ್ಕಾರ ವಿಶ್ವವನ್ನು ಕುರಿತ ನಮ್ಮ ಗ್ರಹಿಕೆಯನ್ನೇ ಬದಲಿಸಿತು. ಆತ ಮಾಡಿದ್ದೂ ಅಷ್ಟೇ. ಹಿಡಿದ ಪಟ್ಟನ್ನು ಬಿಡಲಿಲ್ಲ. ಯೋಚಿಸಿದ್ದೆಲ್ಲವೂ ಹೊಸ ಮಾರ್ಗವೇ. ಆತ ಗುರುತ್ವಕ್ಕೆ ಗುರುತ್ವ ಕೊಟ್ಟ ಎಂಬ ಮಾತುಂಟು. ಆದರೆ ಆತ ಡೇಕಾರ್ಟ್‌ನ ಗಣಿತವನ್ನು ಅರ್ಥಮಾಡಿಕೊಳ್ಳಲು ಅದೆಷ್ಟು ತಿಣುಕಿದ. ಕೊನೆಗೂ ಜೀರ್ಣಿಸಿಕೊಂಡ. ಜಿಯೋಮಿಟ್ರಿಯ ಪ್ರಪಂಚವನ್ನು ಆತ ಪ್ರವೇಶಿಸಬೇಕಾಯಿತು. ಜೀನಿಯಸ್‌ಗೆ ಈ ಬಗೆಯ ಅಗ್ನಿಪರೀಕ್ಷೆಗಳು ಎದುರಾಗುತ್ತವೆ.

ವಿಕಾಸವಾದದ ಪ್ರವರ್ತಕ ಎಂದೇ ಖ್ಯಾತನಾದ ಚಾರ್ಲ್ಸ್ ಡಾರ್ವಿನ್ ಶಾಲಾ ದಿನಗಳಲ್ಲಿ ಅತಿ ಸಾಧಾರಣ ವಿದ್ಯಾರ್ಥಿ. ಪಠ್ಯದ ಬಗ್ಗೆ ಮೂರುಕಾಸಿನ ಆಸಕ್ತಿಯಿರಲಿಲ್ಲ, ಹೊರಜಗತ್ತಿನ ಆಕರ್ಷಣೆ ಬಲು ಜೋರು. ಮೀನು ಹಿಡಿಯುವುದು, ನಾಯಿಗಳನ್ನು ಬಡಿಯುವುದು, ಕಂಡಕಂಡದ್ದನ್ನೆಲ್ಲ ಮನೆಗೆ ತಂದು ಗುಡ್ಡೆ ಹಾಕಿಕೊಳ್ಳುವುದು. ಅಪ್ಪನಿಗೆ ರೇಗಿಹೋಗಿತ್ತು. ''ನಿನಗೆ ಗೊತ್ತಿರುವುದು ಎರಡೇ ಬಾಬತ್ತು. ಬಂದೂಕು ಹಿಡಿದು ಹಕ್ಕಿಗಳನ್ನು ಉರುಳಿಸುವುದು ಇಲ್ಲ ಇಲಿಗಳ ಹಿಂದೆ ಬೀಳುವುದು. ನಿನ್ನಿಂದ ನಮ್ಮ ಮನೆತನಕ್ಕೆ ಅಪಕೀರ್ತಿ'' ಎಂದಿದ್ದ ರಾಬರ್ಟ್ ಡಾರ್ವಿನ್. ಮಗ ವೈದ್ಯನಾಗಬೇಕೆಂಬ ಬಯಕೆ ಅವನಿಗೆ. ಇವನನ್ನು ಎಡಿನ್‌ಬರೋಗೆ ಕಳಿಸಿದ. ಅಂಗರಚನಾ ಶಾಸ್ತ್ರದ ತರಗತಿಗೆ ಡಾರ್ವಿನ್ ಬಲು ಬೇಸರಪಟ್ಟುಕೊಂಡು ಹೋಗುತ್ತಿದ್ದ. ಆದರೆ ರೋಗಿಗಳ ಶುಶ್ರೂಷೆ ಎಂದರೆ ಅದೇನೋ ಲವಲವಿಕೆ. ಆಪರೇಷನ್ ಥಿಯೇಟರಿನಲ್ಲಿ ಮಗುವೊಂದರ ಶಸ್ತ್ರಚಿಕಿತ್ಸೆ ನೋಡಲಾಗದೆ ಪರಾರಿಯಾಗಿದ್ದ. ಇನ್ನು ಡಾಕ್ಟರಾಗಲು ಸಾಧ್ಯವೆ ? ತಾತ ಕೂಡ ಪ್ರತಿಭಾವಂತ. ಝುನೋಮಿಯ ಎಂಬ ಕೃತಿ ಬರೆದು ಹೆಸರು ಮಾಡಿದ್ದ. ಆದರೆ ಡಾರ್ವಿನ್‌ಗೆ ಒಂದು ಗೀಳಿತ್ತು. ಉಪನ್ಯಾಸಗಳನ್ನು ಆಸಕ್ತಿಯಿಂದ ಕೇಳುವುದು, ಮನನ ಮಾಡಿಕೊಳ್ಳುವುದು. ಅಪ್ಪನಿಗೆ ಡಾರ್ವಿನ್ನನ ಚರ್ಯೆ ಸರಿಬೀಳಲಿಲ್ಲ. ಇವನನ್ನು ಮಠಾಧೀಶನನ್ನಾಗಿ ನೋಡಬೇಕೆಂದು ವಾಪಸ್ಸು ಕರೆಸಿಕೊಂಡು ಬೈಬಲ್ ಪಾಠಕ್ಕೆ ವ್ಯವಸ್ಥೆ ಮಾಡಿದ. ಇವನ ಕಪಾಲ ಸಾಮುದ್ರಿಕೆ ನೋಡಿ ಇವನು ಪಾದ್ರಿಯಾಗಲು ತಕ್ಕವನು ಎಂದಿದ್ದರಂತೆ ಕೆಲವು ಧರ್ಮಾಧಿಕಾರಿಗಳು. ಆದರೆ ಡಾರ್ವಿನ್ ಶ್ರದ್ಧೆಯಿಂದ ದೈವಶಾಸ್ತ್ರವನ್ನು ಓದಿದ. ಕೇಂಬ್ರಿಡ್ಜ್‌ನಲ್ಲಿ ಒಂದಷ್ಟು ಬೋಧನೆಯೂ ಆಯಿತು. ಆದರೆ ಅವನು ಬ್ರಿಟಿಷ್ ಕೀಟಶಾಸ್ತ್ರಜ್ಞನೊಬ್ಬನನ್ನು ಪರಿಚಯಮಾಡಿಕೊಂಡ. ಇವನು ಸಂಗ್ರಹಿಸಿದ ಜೀರುಂಡೆಯ ಚಿತ್ರಗಳನ್ನು ಬಗೆದು ಸ್ಟೀಫನ್ ಎಂಬಾತ 'ಬ್ರಿಟಿಷ್ ಕೀಟಗಳು' ಎಂಬ ಕೃತಿಯಲ್ಲಿ ಪ್ರಕಟಿಸಿದ. ಶುರುವಾಯಿತು ಡಾರ್ವಿನ್‌ನ ಪ್ರಕೃತಿಯ ಒಡನಾಟ. ಹಂಬೋಲ್ಟ್ ಎಂಬ ಭೂವಿಜ್ಞಾನಿಯ ಆತ್ಮಚರಿತ್ರೆ ಓದಿದ. ಬದುಕಿನ ದರ್ಶನ ಬದಂತಾಯಿತು. ಪ್ರಕೃತಿಯೇ ತನ್ನ ಆರಾಧ್ಯದೈವ ಎಂದು ಬಗೆದ. ಬೀಗಲ್ ಯಾತ್ರೆಯಲ್ಲಿ ಪಾಲ್ಗೊಳ್ಳುವ ಅವಕಾಶ ಸೆಡ್ಜ್‌ವಿಕ್ ಎಂಬ ಭೂವಿಜ್ಞಾನಿಯ ಶಿಫಾರಸಿನಿಂದ ದೊರೆಯಿತು. ಒಂದು ಕೈಯಲ್ಲಿ ಬೈಬಲ್ ಕೃತಿ, ಇನ್ನೊಂದರಲ್ಲಿ ಚಾರ್ಲ್ಸ್ ಲಯಲ್‌ನ 'ಪ್ರಿನ್ಸಿಪಲ್ಸ್ ಆಫ್ ಜಿಯಾಲಜಿ' ಎಂಬ ಪುಸ್ತಕ. ಬೀಗಲ್ ಯಾತ್ರೆಯಲ್ಲಿ ಕ್ಯಾಪ್ಟನ್ ಫ್ರಿಡ್ಜ್ ರಾಯ್ ಎಂಬುವನೊಡನೆ ಗುಲಾಮರ ಪರ ವಾದಕ್ಕಿಳಿದು ಇವನು ಯಾತ್ರೆಯಿಂದ ವಂಚಿತನಾಗುವ ಪ್ರಸಂಗ ಬಂದರೂ ಹೇಗೋ ಬಚಾವಾದ. ಅದು ಮನುಕುಲದ ಭಾಗ್ಯವೆನ್ನಬೇಕು, ಜೀವವಿಕಾಸವಾದಕ್ಕೆ ಬೇಕಾದ



## ಜ್ಞಾನೋದಯ

ಊರಿಗೆ ಹೊರಟಿದ್ದೆ ಬಸ್ಸಿನಲ್ಲಿ
ಒಬ್ಬಳು ಬುರ್ಖಾಧಾರಿ ಬಂದು ಕುಳಿತಳು ನನ್ನ ಪಕ್ಕದಲ್ಲಿ
ಗೊತ್ತಿಲ್ಲದಂತೆಯೇ ಸರಿದು ಕುಳಿತೆ ಅರೆಮನಸ್ಸಿನಲ್ಲಿ.
ಬೇರೊಂದು ಕಡೆ ಅವಳ
ಅಮ್ಮನೋ ಅತ್ತೆಯೋ – ಅವಳ ಕೈಯಲ್ಲಿ
ಬಿಳಿ ಬಿಳೀ ದಂತದ ಬೊಂಬೆ ಮಗು
ಅರ್ಧ ದಾರಿ ಸಾಗಿದಾಗ ಶುರು
ಪುಟ್ಟ ಮಗುವಿನ ಕಿರಿಕಿರಿ
ಪಕ್ಕದ ಬುರ್ಖಾಧಾರಿ
ತೆರೆದಳು ವ್ಯಾನಿಟಿ ಬ್ಯಾಗಿನ ಪಾಂಡೋರಾ ಪೆಟ್ಟಿಗೆ ;
ಕೆಟ್ಟ ಕುತೂಹಲ ನನಗೆ
ಕಣ್ಣ ಕೊನೆಯಲ್ಲಿ ಇಣುಕಿ ನೋಡಿದರೆ
ಅರೆ ! ಅವಳ ಬ್ಯಾಗಿನೊಳಗೂ
ನನ್ನ ವ್ಯಾನಿಟಿ ಬ್ಯಾಗಿನೊಳಗೆ
ಇದ್ದಂತೆಯೇ ಅಂಡಪಿಂಡ ಬ್ರಹ್ಮಾಂಡ !
ಅದೇ ಲಿಪ್‌ಸ್ಟಿಕ್, ಅದೇ ಪೌಡರ್ ಡಬ್ಬಿ
ಅದೇ ಕರ್ಚೀಫು, ಅದೇ ಮನಿಪರ್ಸು
ನನ್ನ ಬ್ಯಾಗಿನಲ್ಲಿ ಹಿಂದೆ ಇರುತಿದ್ದ ಮಗುವಿನ
ನ್ಯಾಪ್‌ಕಿನ್‌ಗಳು,
ಮತ್ತೆ –
ಅರ್ಧ ಆತಂಕ ಅರ್ಧ ಕುತೂಹಲದಲ್ಲಿ
ನಿರೀಕ್ಷಿಸಿದೆ ''ಈಗ ಕಂಡೀತು ಈಗ ಕಂಡೀತು
ಕಡೇ ಪಕ್ಷ ಒಂದಾದರೂ ಪಿಸ್ತೂಲು''
ಠುಸ್ ! ಅವಳ ಕೈಯಲ್ಲಿ ಕೇವಲ ಫೀಡಿಂಗ್ ಬಾಟಲು !
ಹೌದು ! ಎಲ್ಲಾ ತಾಯಂದಿರೂ ತಮ್ಮ ಮಕ್ಕಳಿಗೆ
ಕುಡಿಸುವುದಿಲ್ಲ ರಕ್ತ – ಕುಡಿಸುತ್ತಾರೆ ಕೇವಲ ಹಾಲು !

ಸುಕನ್ಯಾ ಕಳಸ
W/o ಡಾ|| ಮಹಾಬಲೇಶ್ವರ ರಾವ್
ಪ್ರಾಂಶುಪಾಲರು, ಡಾ|| ಟಿ.ಎಂ.ಎ.ಪೈ ಶಿಕ್ಷಣ ಕಾಲೇಜು
ಕುಂಜಿಬೆಟ್ಟು ಅಂಚೆ, ಉಡುಪಿ - ೫೭೬ ೧೦೨

ಪುರಾವೆಗಳು ಡಾರ್ವಿನ್‌ಗೆ ಸಿಕ್ಕಿದ್ದು ಈ ಯಾತ್ರೆಯಲ್ಲಿ. ಎಷ್ಟೊಂದು ತಿರುವುಗಳು ಒಬ್ಬ ಜೀನಿಯಸ್‌ನ ಬದುಕಿನಲ್ಲಿ!

ಮನೋವಿಜ್ಞಾನಿ ಹಾವ್ ಈ ದೃಷ್ಟಾಂತವನ್ನು ನಮಗೆ ತೋರಿಸುವ ಉದ್ದೇಶ ಡಾರ್ವಿನ್‌ಗಿದ್ದ ಮನೋದಾರ್ಢ್ಯ. ಅಪ್ಪನ ಮಾತು ಕೇಳಿ ಅವನು ವೈದ್ಯನಾಗಿದ್ದರೆ ಏನಾಗುತ್ತಿದ್ದನೋ ತಿಳಿಯದು. ತನ್ನ ಸ್ವಂತ ಇಚ್ಛೆಯಂತೆ ಪ್ರಕೃತಿಯ ಅಧ್ಯಯನ ಮಾಡಿದ್ದು ವಿಕಾಸವಾದಕ್ಕೆ ಸಿಕ್ಕ ಸುವರ್ಣ ಘಳಿಗೆ. ತನ್ನ ತಾತನಿಗೆ ಇಷ್ಟವಾದ, ಆದರೆ ಪುರಾವೆಗಳಿಲ್ಲದೆ ಚಡಪಡಿಸುತ್ತಿದ್ದ ವಿಕಾಸವಾದಕ್ಕೆ ಮೊಮ್ಮಗ ಜೀವ ನೀಡಿದ. ಕೇಂಬ್ರಿಡ್ಜ್‌ನಲ್ಲಿ ಧರ್ಮಶಾಸ್ತ್ರ ಓದುತ್ತಿದ್ದಾಗ ಅವನಿಗೆ ಚಿಂತನ ಮಂಥನವನ್ನು ಕಲಿಸಿತು. ಮನೆಯವರಿಗೋ ಇವನನ್ನು ಕಂಡರೆ ಅಸಡ್ಡೆ. ಬೀಗಲ್ ಯಾತ್ರೆಯಿಂದ ತಂದ ಪುರಾವೆಗಳೆಲ್ಲವನ್ನೂ ಕ್ರಮಬದ್ಧವಾಗಿ ಜೋಡಿಸಿ ಇನ್ನೇನು ಪ್ರಕಟಿಸಬೇಕು ಎನ್ನುವಲ್ಲಿ ಇನ್ನೊಂದು ದೊಡ್ಡ ಸವಾಲು. ರಜಲ್ ವಾಲೆಸ್ ಕೂಡ ಇಂಥದೇ ಪುರಾವೆಗಳನ್ನು ಮುಂದಿಟ್ಟಿದ್ದ. ಆದರೆ ತಜ್ಞರು ಈ ಇಬ್ಬರು ಮೇಧಾವಿಗಳ ಅಭಿಪ್ರಾಯಗಳು ಏಕಕಾಲಕ್ಕೆ ಪ್ರಕಟವಾಗುವಂತೆ ನೋಡಿಕೊಂಡು ವೈಜ್ಞಾನಿಕ ಅಂಶಗಳಿಗೆ ಹೆಚ್ಚು ಒತ್ತುಕೊಟ್ಟಿದ್ದ ಡಾರ್ವಿನ್ ಪರ ತೀರ್ಪುಕೊಟ್ಟರು. ಮುಂದೆ ಡಾರ್ವಿನ್ನನನ್ನು 'ವಿಕಾಸವಾದದ ಪಿತಾಮಹ' ಎಂದದ್ದು ಲೋಕಕ್ಕೇ ತಿಳಿದಿದೆ. ವ್ಯತ್ಯಾಸವಿಷ್ಟೇ, ಅಸಾಧಾರಣ ಕ್ರಿಕೆಟ್ ಪಟುವಿನ ಸಾಧನೆ ಸ್ಕೋರ್ ಬೋರ್ಡ್ ಮೇಲೆ ಕಾಣುತ್ತದೆ, ಅಸಾಧಾರಣ ವಿಜ್ಞಾನಿಗಳ ಸಾಧನೆ ಸಮಕಾಲೀನ ವಿಜ್ಞಾನದ ಮೇಲೆ ಅಚ್ಚಳಿಯದೆ ಮೂಡುತ್ತದೆ. ಡಾರ್ವಿನ್‌ನ ಸಾಧನೆಗೆ ಜೀನಿಯಸ್ ಅನ್ನದೆ ಬೇರೆ ಪದವುಂಟೆ?

ಈ ಸಂದರ್ಭದಲ್ಲಿ ರಾಲ್ಫ್ ಡಬ್ಲ್ಯೂ. ಎಮರ್‌ಸನ್‌ನ ಮಾತುಗಳು ನೆನಪಾಗುತ್ತವೆ: ''ನಾವು ಯಾವ ವಿಚಾರಗಳನ್ನು ಕಡೆಗಣಿಸಿರುತ್ತೇವೆಯೋ ಅದೇ ವಿಚಾರಗಳು ಜೀನಿಯಸ್‌ನ ಕೆಲಸಗಳಲ್ಲಿ ಹೊಸ ರೂಪ ಪಡೆದು ಘನಗಾಂಭೀರ್ಯದಿಂದ ನಮ್ಮ ಮುಂದೆ ನಿಲ್ಲುತ್ತವೆ.''

ಜಾರ್ಜ್ ಸ್ಟೀಫನ್‌ಸನ್‌ನ ಹೆಸರನ್ನು ಯಾರು ಸ್ಮರಿಸಿಕೊಳ್ಳಬೇಕು? ಎಲ್ಲರೂ. ರೈಲು ಹಳಿಗಳ ಕಲ್ಪನೆಗಳಿಗೆ ಜೀವಕೊಟ್ಟ ಮಹಾನ್ ಮೇಧಾವಿ. ಸ್ಟೀಫನ್‌ಸನ್ (೧೭೮೧-೧೮೪೮) ಬ್ರಿಟಿಷ್ ಸಿವಿಲ್ ಇಂಜಿನಿಯರ್. ಬಹುಶಃ ಇವನಷ್ಟು ಕೆಳಮಟ್ಟದಿಂದ ಬಂದ ಮತ್ತೊಬ್ಬ ತಂತ್ರಜ್ಞ ಇತಿಹಾಸದಲ್ಲಿ ಇಲ್ಲವೇನೋ. ಅಪ್ಪ, ಅಮ್ಮ ಇಬ್ಬರೂ ಕಲ್ಲಿದ್ದಲ ಗಣಿಯ ಕೂಲಿಕಾರರು; ನಿರಕ್ಷರ ಕುಕ್ಷಿಗಳು. ದುಡಿಮೆ ಊಟಕ್ಕೇ ಸಾಕಾಗುತ್ತಿರಲಿಲ್ಲ, ಇನ್ನು ಮಗನನ್ನು ಓದಿಸುವುದೆಲ್ಲಿಂದ? ಕಲ್ಲಿದ್ದಲನ್ನು ಸುರಿದ ಕಡೆ ಅದರಲ್ಲಿರುವ ಕಸಕಡ್ಡಿಗಳನ್ನು, ಕಲ್ಮಷಗಳನ್ನು ಹೆಕ್ಕಿ ತೆಗೆಯುವ ಕೆಲಸ ಹುಡುಗನದು. ದಾಸ್ತಾನು ಮಾಡುತ್ತಿದ್ದ ಜಾಗದಲ್ಲಿ ದನಕರುಗಳು ನುಗ್ಗದಂತೆ ಕಾವಲು ಕಾಯುವ ಕೆಲಸ ಬೇರೆ. ದಿನದ ಕೆಲಸ ಮುಗಿದ ಮೇಲೆ ಗೇಟ್ ಹಾಕಿ ಭದ್ರಪಡಿಸುವ ಕೆಲಸವನ್ನೂ ಉತ್ಸಾಹದಿಂದಲೇ ಮಾಡುತ್ತಿದ್ದ. ತನ್ನ ಹದಿನಾಲ್ಕನೆಯ ವಯಸ್ಸಿನವರೆಗೆ ಇವನಿಗೆ ಇಂಗ್ಲಿಷ್‌ನ ವರ್ಣಮಾಲೆಯ ಪರಿಚಯವಿರಲಿಲ್ಲ. ರಾತ್ರಿ ಶಾಲೆಯಲ್ಲಿ ಓದಬೇಕೆಂದು ನಿರ್ಧರಿಸಿದ. ಮನೆಗೆ ಬಂದರೆ ನಾಲ್ಕು ಕುಟುಂಬಗಳು ಒಂದೇ ಕಿರುಕೋಣೆಯಲ್ಲಿ ವಾಸಿಸಬೇಕಾದ ಪ್ರಸಂಗ. ಹಾಗೂ ಹೀಗೂ ಸ್ಟೀಫನ್‌ಸನ್ ಗಣಿಪಂಪನ್ನು ರಿಪೇರಿ ಮಾಡುವುದನ್ನು ಕಲಿತ. ಹಾಗೆಯೇ ಉಳಿದ ಗಣಿ ಸಲಕರಣೆಗಳ ಬಗ್ಗೆ ಆಸಕ್ತಿ ತಳೆದ. ಗಣಿತ ಅತ್ಯಂತ ಅವಶ್ಯಕವಾದ ಭಾಗ ಎಂಬುದನ್ನು ಕಲಿತು ಅತ್ತ ಗಮನಕೊಟ್ಟ. ಶಾಲೆಯ ಫೀ ಕಟ್ಟಲು ಷೂಗಳನ್ನು ತಯಾರಿಸಿ, ಗಡಿಯಾರ ರಿಪೇರಿ ಮಾಡಿ ಒಂದಷ್ಟು ಕಾಸು ಸಂಪಾದಿಸಿದ. ವಯಸ್ಸು ೨೧ ದಾಟಿತು, ಮದುವೆಯಾದ. ಆದರೆ ಮಗುವೊಂದನ್ನು ಕೈಗಿತ್ತು ಮಡದಿ ಕಣ್ಮುಚ್ಚಿದಳು. ಈ ಭೂಪ ಅಳುಕಲಿಲ್ಲ, ಮಗುವನ್ನೂ ಬೆಳೆಸಿದ. ಯಾವ ಎಂಜಿನಿಯರೂ ದುರಸ್ತಿ ಮಾಡಲಾಗದ ಗಣಿಪಂಪನ್ನು ದುರಸ್ತಿ ಮಾಡಿ ಗಣಿಯೊಳಗಿದ್ದ ನೀರನ್ನೆಲ್ಲ ಹೊರಕ್ಕೆ ಪಂಪು ಮಾಡಿದ. ಅವನ ಕಣ್ಮುಂದೆ ದಿನಾ ಕಾಣಿಸುತ್ತಿದ್ದುದು ಕುದುರೆ ಗಾಡಿಗಳು ಎಳೆಯುತ್ತಿದ್ದ ಹೊರೆ. ಅವನಿಗೆ ಥಟ್ಟನೆ ಹೊಳೆಯಿತು ಹಳಿಗಳ ನಿರ್ಮಾಣ ಮಾಡಿದರೆ ಹೇಗೆ? ಹೀಗೆಂದು ಯೋಚನೆ ಬಂದದ್ದೇ ತಡ, ರೈಲ್ವೆ ಹಳಿಗಳನ್ನೇ ನಿರ್ಮಿಸಿದ. ಅಧಿಕಾರಿಗಳು ಇವನನ್ನು ಬೆಂಬಲಿಸಿದರು. ತಾನೇ ಸ್ಪರ್ಧೆಗಿಳಿದು ರಾಕೆಟ್ ಎಂಬ ಲೋಕೋಮೋಟಿವ್ ಎಂಜಿನ್ನನ್ನು ಸೃಷ್ಟಿಸಿ ರೈಲ್ವೆ ಹಳಿಗಳ ಮೇಲೆ ಓಡಿಸಿದ. ಇದು ಮುಂದೆ ಬ್ರಿಟನ್ನಿನ ಕೈಗಾರಿಕಾ ಕ್ರಾಂತಿಯನ್ನೇ ಬೇರೆ ದಿಕ್ಕಿಗೆ ಕೊಂಡೊಯ್ಯಿತು. ಮುಂದೆ ಅಮೆರಿಕದಲ್ಲಿ ರೈಲು ಹಾದಿ ನಿರ್ಮಿಸಬೇಕಾದಾಗ ಸ್ಟೀಫನ್‌ಸನ್ ನೆರವಾಗಬೇಕಾಯಿತು.

ಅವಕಾಶಗಳೆದುರಾದರೆ ಅಷ್ಟೇ ಸಾಕೆ? ವ್ಯಕ್ತಿಗೆ ಒಂದಷ್ಟಾದರೂ ಪ್ರತಿಭೆ ಇರದಿದ್ದಲ್ಲಿ ಆತ ಅರಳುವುದಾದರೂ ಹೇಗೆ? ಹೀಗೆಂದು ಕೇಳುವವರಿಗೆ ಬಹುಶಃ ಮೈಕೇಲ್ ಫ್ಯಾರಡೇ ಉದಾಹರಣೆಯಾಗಬಲ್ಲ. ತನ್ನ ಹದಿಮೂರನೇ ವಯಸ್ಸಿನವರೆಗೆ ಸ್ಕೂಲಿನ ಮುಖ ನೋಡದ, ಕಡುಬಡತನದಲ್ಲಿ ಬೇಯುತ್ತಿದ್ದ ಕಮ್ಮಾರನೊಬ್ಬನ ಮಗನಾಗಿ ಹುಟ್ಟಿದ ಫ್ಯಾರಡೇ (೧೭೯೧-೧೮೬೭) ವಿಜ್ಞಾನಲೋಕದ ತಾರೆಯಾಗಿ ಅರಳಿದ್ದು ವಿಸ್ಮಯ ಎನ್ನುವವರೂ ಉಂಟು. ಆದರೆ ಇಲ್ಲೂ ಅವನು ತನ್ನ ಆಸಕ್ತಿಯನ್ನು ಸತತ ಪೋಷಿಸಿದ. ಫ್ಯಾರಡೇಯನ್ನು ನೀವು 'ಟಾಪ್ ಮೋಸ್ಟ್ ಫಿಸಿಸಿಸ್ಟ್ ಎನ್ನಿ, ವಿಶ್ವವಿಖ್ಯಾತ ಕೆಮಿಸ್ಟ್' ಎನ್ನಿ – ಎರಡೂ ಕಡೆ ಅವನು ಸಲ್ಲುತ್ತಾನೆ. ನಾವು ಆ್ಯನೋಡ್, ಕ್ಯಾಥೋಡ್, ಎಲೆಕ್ಟ್ರೋಡ್, ಅಯಾನ್ ಎಂಬ ಪದಗಳನ್ನು ಕೇಳಿದ್ದರೆ ಅವನು ಟಂಕಿಸಿದವನು ಫ್ಯಾರಡೇ. ಕ್ಲೋರಿನ್ ಆವಿಷ್ಕಾರ ಮಾಡಿದ್ದು ಈ ಮೇಧಾವಿಯೇ. ಆಲ್ಬರ್ಟ್ ಐನ್‌ಸ್ಟೈನ್ ತನ್ನ ಮಲಗುವ ಕೋಣೆಯಲ್ಲಿ ನ್ಯೂಟನ್, ಜೇಮ್ಸ್ ಕ್ಲಾರ್ಕ್, ಮ್ಯಾಕ್ಸ್‌ವೆಲ್ ಭಾವಚಿತ್ರದ ಜೊತೆಗೆ ಫ್ಯಾರಡೇಯ ಚಿತ್ರವನ್ನೂ ಹಾಕಿಕೊಂಡಿದ್ದನಂತೆ. ಫ್ಯಾರಡೇ ನಮಗೆ ವಿಸ್ಮಯವಾಗಿ ಕಾಣಿಸುವುದೇ ಅವನು ಬುಕ್ ಬೈಂಡರ್ ಕೆಲಸ ಮಾಡಲು ತೊಡಗಿದಾಗಿನಿಂದ. ಏಳು ವರ್ಷಗಳ ಕಾಲ ಜಾರ್ಜ್ ರಿಬೋ ಎಂಬುವನಲ್ಲಿ ಬುಕ್ ಬೈಂಡಿಂಗ್ ಮಾಡಿ ಅವನು ಅದೆಷ್ಟು ಪುಸ್ತಕಗಳನ್ನು ಓದಿದನೋ ತಿಳಿಯದು. ಏನೇನನ್ನೋ ಓದಿರಬಹುದು, ಆದರೆ ನಿಶ್ಚಯವಾಗಿ ಅವನು ಐಸಾಕ್ ವ್ಯಾಟ್ ಬರೆದ 'ಇಂಪ್ರೂವ್‌ಮೆಂಟ್ ಆಫ್ ದಿ ಮೈಂಡ್' ಪುಸ್ತಕ ಓದಿ ತಲೆ ಚುರುಕು ಮಾಡಿಕೊಂಡಿದ್ದ. ಜೇನ್ ಮಾರ್ಸೆಟ್ ಬರೆದ 'ಕಾನ್‌ವರ್‌ಸೇಷನ್ ಆನ್ ಕೆಮಿಸ್ಟ್ರಿ' ಕೃತಿ ಓದಿದ್ದ. ಹಂಫ್ರಿ ಡೇವಿ, ರಾಯಲ್ ಇನ್‌ಸ್ಟಿಟ್ಯೂಟ್‌ನಲ್ಲಿ ನೀಡುತ್ತಿದ್ದ ಉಪನ್ಯಾಸ ಕೇಳಲು ತನ್ನ ೧೨ನೇ ವಯಸ್ಸಿನಲ್ಲೇ ಹೋಗುತ್ತಿದ್ದ. ಡೇವಿಗೆ ಮುನ್ನೂರು ಪುಟಗಳಷ್ಟು ಅವನ ಭಾಷಣದ ಸಾರಾಂಶವನ್ನೇ ಸಂಗ್ರಹಿಸಿ ಕಳುಹಿಸಿಕೊಟ್ಟು ಮೆಚ್ಚುಗೆಗಳಿಸಿದ್ದ. ಡೇವಿ ಒಮ್ಮೆ ನೈಟ್ರೋಜನ್ ಟ್ರೈಕ್ಲೋರೈಡ್‌ನೊಂದಿಗೆ ಕೆಲಸ ಮಾಡುತ್ತಿದ್ದಾಗ ಒಂದು ಕಣ್ಣು ಹಾನಿಯಾಯಿತು. ಆಗ ಫ್ಯಾರಡೇ ಅವನ ಸಹಾಯಕನಾಗಿ ನೇಮಕವಾದ. ರಾಯಲ್ ಇನ್‌ಸ್ಟಿಟ್ಯೂಟ್‌ನಲ್ಲಿ ಅದೇ ಡೇವಿಗೆ ರಸಾಯನ ವಿಜ್ಞಾನದ ಸಹಾಯಕನಾಗಿ ಕೆಲಸ ಮಾಡಿದ. ಡೇವಿ ಪ್ಯಾರಿಸ್‌ಗೆ ಶೈಕ್ಷಣಿಕ ಯಾತ್ರೆ ಹೊರಟಾಗ ಅವನ ಸೇವಕ ಜೊತೆಗೆ ಹೋಗಲು ಒಪ್ಪಲಿಲ್ಲ. ಆಗ ಡೇವಿ ಸೇವಕನನ್ನಾಗಿ ಫ್ಯಾರಡೇಯನ್ನೇ ನೇಮಿಸಿಕೊಂಡ. ಸ್ವತಃ ನೆಪೋಲಿಯನ್ ಅವನಿಗೆ ಬರಲು ಅನುಮತಿ ನೀಡಿದ್ದ. ಆದರೆ ಡೇವಿಯ ಹೆಂಡತಿ ಫ್ಯಾರಡೇಯನ್ನು ಸೇವಕನಾಗಿಯೇ ಕಂಡಳು. ಒಂದೇ ಕ್ಯಾರೇಜಿನಲ್ಲಿ ಊಟಮಾಡಲು ಆಕೆ ಸಮ್ಮತಿಸಲಿಲ್ಲ. ಫ್ಯಾರಡೇಗೆ ಇದು ಕಿರಿಕಿರಿಯಾದರೂ ಸಹಿಸಿಕೊಂಡ. ಪ್ಯಾರಿಸ್‌ನಲ್ಲಿ ಅನೇಕ ವಿಜ್ಞಾನಿಗಳನ್ನು ನಿಕಟವಾಗಿ ನೋಡಲು, ಅವರ ಉಪನ್ಯಾಸಗಳನ್ನು ಕೇಳಲು ಇದೊಂದು ಸದವಕಾಶವಾಗಿತ್ತು. ಹಿಂತಿರುಗಿ ಬಂದಾಗ ಫ್ಯಾರಡೇ ರಾಯಲ್ ಇನ್‌ಸ್ಟಿಟ್ಯೂಟಿನಲ್ಲೇ ತನ್ನ ಆಸಕ್ತಿ ಮುಂದುವರಿಸಿದ. ಡೇವಿಯೊಡನೆ ಮನಸೋಇಚ್ಛೆ ಕಲಹಕ್ಕೂ ಇಳಿದ. ಆದರೆ ವಿಜ್ಞಾನಾಸಕ್ತಿ ಕಿಂಚಿತ್ತೂ ಕುಂದಲಿಲ್ಲ. ಅಲ್ಲಿಂದ ಮುಂದೆ ಅವನು ಮಾಡಿದ್ದೆಲ್ಲವೂ ಸಂಶೋಧನೆಯೇ. ಎಲೆಕ್ಟ್ರೊಲಿಸಿಸ್ ನಿಯಮ, ಇದೆಲ್ಲಕ್ಕೂ ಮಿಗಿಲಾಗಿ ಡೈನಮೋ ತಯಾರಿಸಿ ವಿದ್ಯುತ್ ಉತ್ಪಾದಿಸುವುದನ್ನು ತೋರಿಸಿಕೊಟ್ಟ. ಇದೊಂದೇ ಸಾಲದೇ ಅವನನ್ನು ಅಮರನನ್ನಾಗಿ ಮಾಡಲು! ಬುಕ್ ಬೈಂಡ್ ಮಾಡುತ್ತಿದ್ದ ಹುಡುಗ ಜಗತ್ತಿಗೆ ಪರಿಚಯವಾದದ್ದು ಹೀಗೆ.




''ಸಾವಿರಾರು ಜೀನಿಯಸ್‌ಗಳು ಹುಟ್ಟುತ್ತಾರೆ, ಸಾಯುತ್ತಾರೆ, ಅವರ ಬಗ್ಗೆ ಜಗತ್ತಿಗೆ ಎಂದೂ ಅವಜ್ಞೆ ಅಥವಾ ಅವರ ಬಗ್ಗೆ ಅವರಿಗೇ ಸರಿಯಾಗಿ ತಿಳಿದಿರುವುದಿಲ್ಲವೇನೋ'' ಎಂದಿದ್ದಾನೆ ಮಾರ್ಕ್ ಟ್ವೈನ್. ಆದರೆ ನಮ್ಮ ಹೀರೋ ಫ್ಯಾರಡೇಗೆ ಈ ಅವಸ್ಥೆ ಬರಲಿಲ್ಲ. ಅವನ ಸಾಮರ್ಥ್ಯ ಅವನಿಗೆ ತಿಳಿದಿತ್ತು. ಜಗತ್ತು ಅವನ ಸಾಧನೆಗಾಗಿ ಕೃತಜ್ಞತೆಯಿಂದಲೇ ಅವನನ್ನು ಕಂಡಿತ್ತು. ನಮ್ಮ ವರಕವಿ ದ. ರಾ. ಬೇಂದ್ರೆ ಆಗಾಗ ಹೇಳಿಕೊಳ್ಳುತ್ತಿದ್ದರಂತೆ ''ಬೆಂದರೆ ಬೇಂದ್ರೆ'' ಎಂದು. ಅವರು ಕಾವ್ಯ ಕ್ಷೇತ್ರದಲ್ಲಿ ಸಾಧನೆ ಮಾಡಿದ ಮೇಲೆ ತಾನೇ ಧಾರವಾಡದ ಸಾಧನಕೇರಿಯಲ್ಲಿ ನೆಲೆಸಿದ್ದು.

ಟಿ. ಆರ್. ಅನಂತರಾಮು
# ೫೩೪, ೭೦ನೇ ಅಡ್ಡರಸ್ತೆ, ೧೪ನೇ ಮುಖ್ಯರಸ್ತೆ, ಕುಮಾರಸ್ವಾಮಿ ಬಡಾವಣೆ, ಬೆಂಗಳೂರು - ೫೬೦ ೦೭೮



ಎಲೆಕ್ಟ್ರಾನ್ ಸೂಕ್ಷ್ಮದರ್ಶಕಗಳ ವ್ಯಾಪಕ ಬಳಕೆ ಜೀವವಿಜ್ಞಾನಕ್ಕೆ ಮಾತ್ರ ಸೀಮಿತವಾಗಿಲ್ಲ, ಭೌತ, ರಸಾಯನ ಹಾಗೂ ಭೂವಿಜ್ಞಾನದ ಅನೇಕ ಶಾಖೆಗಳಲ್ಲಿ ಇದರ ಬಳಕೆ ವ್ಯಾಪಕವಾಗಿದೆ. ಎಲೆಕ್ಟ್ರಾನ್ ಸೂಕ್ಷ್ಮದರ್ಶಕಗಳ ತಯಾರಿಕೆಯಲ್ಲಿ ಜರ್ಮನಿ ಮತ್ತು ಜಪಾನ್ ದೇಶಗಳು ಬಹಳ ಹೆಸರು ಗಳಿಸಿವೆ. ಹಿಟಾಚಿ, ಜೈಓಲ್, ಟೋಪ್ಕನ್ ಮುಂತಾದವು ಜಪಾನಿ ಸಂಸ್ಥೆಗಳಾದರೆ, ಕಾರ್ಲ್ ಜೀಸ್, ಲೈಕ ಜರ್ಮನಿಯ ಸಂಸ್ಥೆಗಳು. ಆಧುನಿಕ ಸೌಲಭ್ಯಗಳೆಲ್ಲವನ್ನೂ ಹೊಂದಿರುವ ಸೂಕ್ಷ್ಮದರ್ಶಕಕ್ಕೆ ಐದರಿಂದ ಹತ್ತು ಕೋಟಿ ರೂಪಾಯಿಗಳ ಬೆಲೆಯಿದೆ. ಎಲೆಕ್ಟ್ರಾನ್ ಸೂಕ್ಷ್ಮದರ್ಶಕಗಳ ಬಳಕೆ ಅನೇಕ ವೈಜ್ಞಾನಿಕ ಸಂಶೋಧನೆಗಳಿಗೆ ಹಾಗೂ ವೈದ್ಯಕೀಯ ಪರೀಕ್ಷೆಗಳಿಗೆ ಬೇಕಾಗುತ್ತಿರುವ ಈ ಯಂತ್ರಗಳ ತಯಾರಿಕೆ ಮತ್ತು ಮಾರಾಟ ಬಹುದೊಡ್ಡ ವ್ಯಾಪಾರ ಎನ್ನಿಸಿದೆ.

ಡಾ|| ಎಂ. ಆರ್. ಎನ್. ಮೂರ್ತಿ

# ಅಣುಪ್ರಪಂಚಕ್ಕೆ ಭೂತಗನ್ನಡಿ: ಎಲೆಕ್ಟ್ರಾನ್ ಸೂಕ್ಷ್ಮದರ್ಶಕ

ವಿಶ್ವದಲ್ಲಿರುವ ದ್ರವ್ಯ ಅಥವಾ ಧಾತುಗಳನ್ನು ಚಿಕ್ಕ ತುಂಡುಗಳನ್ನಾಗಿ ಅನಂತ ಕಾಲ ಭಾಗ ಮಾಡುತ್ತ ಹೋಗಲು ಸಾಧ್ಯವೇ, ಅಥವಾ ಮುಂದಕ್ಕೆ ವಿಭಜಿಸಲಾಗದ ಅತಿ ಚಿಕ್ಕ ಕಣಕ್ಕೆ ಬಂದು ತಲುಪುತ್ತೇವೆಯೇ? ಈ ಬಗ್ಗೆ ಸಹಸ್ರಾರು ವರ್ಷಗಳ ಹಿಂದೆಯೇ ಗ್ರೀಕ್ ಹಾಗೂ ಭಾರತದ ತತ್ವಶಾಸ್ತ್ರಜ್ಞರು ಚಿಂತನೆ ನಡೆಸಿದ್ದರೂ, ಅವರು ಮಂಡಿಸಿದ ಸಿದ್ಧಾಂತಗಳು ಬೌದ್ಧಿಕ ಕಸರತ್ತುಗಳೇ ಹೊರತು ವಿಜ್ಞಾನ ಎನ್ನಿಸಿಕೊಳ್ಳುವುದಿಲ್ಲ. ಏಕೆಂದರೆ ಅವರು ಮಂಡಿಸಿದ ಸಿದ್ಧಾಂತಗಳಿಗೆ ಪ್ರಾಯೋಗಿಕ ಹಿನ್ನೆಲೆ ಇರಲಿಲ್ಲ. ಬರಿಯ ಚಿಂತನೆ, ಎಷ್ಟೇ ಜಾಣತನದಿಂದ ಮಂಡಿಸಿದ್ದರೂ, ವಿಜ್ಞಾನ ಎನ್ನಿಸಿಕೊಳ್ಳುವುದಿಲ್ಲ. ಧಾತುಗಳನ್ನು ಅನಿರ್ದಿಷ್ಟವಾಗಿ ತುಂಡು ಮಾಡಲು ಬಾರದಿರಬಹುದು ಎಂದು ಪ್ರಾಯೋಗಿಕ ಆಧಾರಗಳ ಮೇಲೆ ಊಹಿಸಿದವರಲ್ಲಿ ಮೊದಲಿಗರು ಡಾಲ್ಟನ್ ಎಂಬ ವಿಜ್ಞಾನಿ. ವಿಶ್ವದ ಧಾತುಗಳೆಲ್ಲಾ ಇನ್ನೂ ಸಣ್ಣದಾಗಿ ಸೀಳಲು ಸಾಧ್ಯವಿಲ್ಲದ ಪರಮಾಣುಗಳ ಸಮೂಹಗಳು ಎಂಬ ವೈಜ್ಞಾನಿಕ ನಿಲುವು ಡಾಲ್ಟನ್ನರ ಸಂಶೋಧನೆಗಳಿಂದ ಮಾನ್ಯತೆ ಪಡೆಯಿತು. ವಿಶ್ವದಲ್ಲಿ ಸುಮಾರು ನೂರು ಮೂಲದ್ರವ್ಯ ಅಥವಾ ಮೂಲಧಾತುಗಳಿವೆ (elements). ಎಲ್ಲ ಮೂಲಧಾತುಗಳು ಅವುಗಳದೇ ಆದ ಪರಮಾಣುಗಳ (atoms) ಸಮೂಹಗಳು. ಇತರ ರಾಸಾಯನಿಕ ವಸ್ತುಗಳು (chemical substances), ಈ ನೂರು ಬಗೆಯ ಮೂಲ ಪರಮಾಣುಗಳ ನಿರ್ದಿಷ್ಟ ಸಂಯೋಜನೆಯಿಂದ ರೂಪಗೊಂಡಿವೆ ಎಂದು ಡಾಲ್ಟನ್ನರು ಪ್ರತಿಪಾದಿಸಿದರು.

ಹತ್ತೊಂಬತ್ತನೆಯ ಶತಮಾನದ ಅಂತ್ಯದಲ್ಲಿ ಜಾನ್ ಜೋಸೆಫ್ ಥಾಂಸನ್ ಎಂಬ ವಿಜ್ಞಾನಿ ಅರೆ ನಿರ್ವಾತ ಕೊಳವೆಗಳಲ್ಲಿ ವಿದ್ಯುತ್ ಪ್ರವಾಹ ಹರಿಸುವ ಪ್ರಯೋಗಗಳನ್ನು ನಡೆಸುತ್ತಿದ್ದರು. ಪರಮಾಣುಗಳನ್ನು ಇನ್ನೂ ಸಣ್ಣ ಕಣಗಳನ್ನಾಗಿ ಒಡೆಯಲು ಬರುವುದಿಲ್ಲ ಎನ್ನುವ ಸಿದ್ಧಾಂತ ಸರಿಯಿಲ್ಲದಿರಬಹುದು ಎಂಬ ಅನುಮಾನಕ್ಕೆ ಥಾಂಸನ್ನರ ಪ್ರಯೋಗಗಳು ಎಡೆಮಾಡಿಕೊಟ್ಟವು. ಥಾಂಸನ್ನರು ಹೀರು ಪಂಪು (vacuum pump) ಬಳಸಿ ಒಂದು ಗಾಜಿನ ಕೊಳವೆಯಿಂದ ಆದಷ್ಟು ಗಾಳಿಯನ್ನು ಹೊರತೆಗೆದರು. ಕೊಳವೆಯ ಒಂದು ತುದಿಯಲ್ಲಿ ಕೆಂಪಗೆ ಕಾದ ಲೋಹದ ತಂತಿಯನ್ನು ಇರಿಸಿದರು. ಇನ್ನೊಂದು ತುದಿಯಲ್ಲಿ ಮತ್ತೊಂದು ಲೋಹದ ತಟ್ಟೆಯಿಟ್ಟು, ಕಾದ ಲೋಹದ ತಂತಿ ಮತ್ತು ತಟ್ಟೆಗಳ ನಡುವೆ ಸಹಸ್ರಾರು ವೋಲ್ಟ್ ವಿದ್ಯುತ್ ಒತ್ತಡ (electric potential, voltage) ಹೇರುವ ವ್ಯವಸ್ಥೆ ಮಾಡಿದರು. ಇಂತಹ ಪ್ರಯೋಗಗಳಲ್ಲಿ, ಕೊಳವೆಯಲ್ಲಿ ಒಂದು ಬಗೆಯ ಕಿರಣಗಳು ಹರಿಯುತ್ತಿರುವುದನ್ನು ಕಂಡರು. ಈ ಕಿರಣಗಳು ಋಣ ವಿದ್ಯುತ್ ಅಂಶ ಹೊಂದಿರುವ ಕಣಗಳ ಸಮೂಹ ಎಂದು ಅನೇಕ ಪ್ರಯೋಗಗಳಿಂದ ಥಾಂಸನ್ನರು ತೋರಿಸಿದರು. ಕೊಳವೆಯಲ್ಲಿ ಯಾವ ಅನಿಲವಿದ್ದರೂ ಹೊರಸೂಸುವ ಕಣಗಳು ಒಂದೇ ಬಗೆಯ ಗುಣಗಳನ್ನು ಪ್ರದರ್ಶಿಸುತ್ತಿದ್ದುದರಿಂದ, ಎಲ್ಲ ಅನಿಲಗಳಲ್ಲಿಯೂ ಈ ಕಣಗಳಿರಬೇಕೆಂದೂ, ಈ ಕಣಗಳು ಅನಿಲಗಳಲ್ಲಿರುವ ಪರಮಾಣುಗಳಿಗಿಂತ ಸಣ್ಣ ಕಣಗಳಿರಬಹುದೆಂದೂ ಊಹಿಸಿದರು. ಈ ಕಣಗಳು ವಿದ್ಯುತ್ ಮತ್ತು ಅಯಸ್ಕಾಂತ ಕ್ಷೇತ್ರಗಳಲ್ಲಿ ತಮ್ಮ ಪಥವನ್ನು ಬದಲಿಸುತ್ತಿದ್ದ ರೀತಿಯಿಂದ ಅವುಗಳು ಋಣ ವಿದ್ಯುತ್ ಅಂಶ ಹೊಂದಿರುವ ಕಣಗಳು ಎಂದು ತೀರ್ಮಾನಿಸಿದರು. ಥಾಂಸನ್ನರು ಈ ಕಿರಣಗಳನ್ನು 'ಕಣಗಳು' ಎಂದೇ ಕರೆದರು. ಅವರಿಗೂ ಮೊದಲು ಜಾನ್‌ಸ್ಟನ್ ಎಂಬ ವಿಜ್ಞಾನಿ ವಿದ್ಯುತ್ ಪ್ರವಾಹಕ್ಕೆ ಕಾರಣವಾಗುವ ಅಂಶಕ್ಕೆ ಎಲೆಕ್ಟ್ರಾನ್ ಎಂದು ನಾಮಕರಣ ಮಾಡಿದ್ದರು. ಥಾಂಸನ್ನರ ಕಣ ಈ ಹೆಸರನ್ನೇ ಪಡೆದುಕೊಂಡಿತು. ನಂತರ ಮಿಲಿಕನ್ ಎಂಬ ವಿಜ್ಞಾನಿ ಈ ಅತಿ ಸಣ್ಣ ಕಣಗಳ ವಿದ್ಯುತ್ ಅಂಶವನ್ನೂ, ಅವುಗಳ ದ್ರವ್ಯರಾಶಿಯನ್ನೂ ಅಳೆಯುವ ಸಾಹಸಕ್ಕೆ ಕೈಹಾಕಿದರು. ಕೋಟಿ ಕೋಟಿ, ಕೋಟಿ ಕೋಟಿ (೧ರ ಮುಂದೆ ೨೮ ಸೊನ್ನೆಗಳು) ಎಲೆಕ್ಟ್ರಾನುಗಳ ದ್ರವ್ಯರಾಶಿ ಸುಮಾರು ೧೦ ಗ್ರಾಮ್‌ಗಳಾಗುತ್ತವೆ (೨ ಸಣ್ಣ ಚಮಚ ನೀರಿನಲ್ಲಿರುವ ದ್ರವ್ಯರಾಶಿ). ಇವುಗಳ ವಿದ್ಯುತ್ ಅಂಶ ಹಾಗೂ ದ್ರವ್ಯರಾಶಿಯನ್ನು

ನಿಖರವಾಗಿ ಅಳತೆ ಮಾಡಲು ಸಾಧ್ಯವಾಗಿರುವುದು ವೈಜ್ಞಾನಿಕ ಪ್ರಯೋಗಗಳ ಸಂವೇದನಶೀಲತೆಗೆ, ಹೆಚ್ಚಳಿಕೆಗೆ ದ್ಯೋತಕವಾಗಿದೆ. ಈ ಎಲ್ಲ ಸಂಶೋಧನೆಗಳಿಂದ ಪರಮಾಣುಗಳೇ ಅಂತ್ಯ ಕಣಗಳಲ್ಲ, ಅವುಗಳನ್ನು ಇನ್ನೂ ಸಣ್ಣ ಕಣಗಳನ್ನಾಗಿ ಒಡೆಯಬಹುದು ಎಂದು ತಿಳಿದುಬಂದಿತು.

ಥಾಂಸನ್ನರ ಪ್ರಯೋಗಗಳು ಪರಮಾಣುಗಳಿಗೂ, ಎಲೆಕ್ಟ್ರಾನುಗಳಿಗೂ ಇರುವ ಸಂಬಂಧವನ್ನು ಸ್ಪಷ್ಟಪಡಿಸಲಿಲ್ಲ. ಅವುಗಳ ಸಂಬಂಧವನ್ನು ಪ್ರಾಯೋಗಿಕವಾಗಿ ತೋರಿಸಿ ಕೊಟ್ಟವರು ರುದರ್‌ಫೋರ್ಡ್ ಎನ್ನುವ ವಿಜ್ಞಾನಿ. ಅವರು ನಡೆಸಿದ ಪ್ರಯೋಗಗಳು ಋಣ ಹಾಗೂ ಧನ ವಿದ್ಯುತ್ ಅಂಶ ಹೊಂದಿರುವ ಇನ್ನೂ ಸಣ್ಣ ಕಣಗಳಿಂದ ಪರಮಾಣುಗಳು ರಚಿತವಾಗಿವೆ ಎಂದು ತೋರಿಸಿದವು. ಪರಮಾಣುಗಳ ಕೇಂದ್ರದಲ್ಲಿ ಪ್ರೋಟಾನ್ ಹಾಗೂ ನ್ಯೂಟ್ರಾನ್ ಎನ್ನುವ ಕಣಗಳಿರುತ್ತವೆ. ಪ್ರೋಟಾನ್ ಧನ ವಿದ್ಯುತ್ ಅಂಶವುಳ್ಳ ಕಣ. ಒಂದು ಪ್ರೋಟಾನಿನ ವಿದ್ಯುತ್ ಅಂಶ ಒಂದು ಎಲೆಕ್ಟ್ರಾನಿನಲ್ಲಿರುವ ಅಂಶದಷ್ಟೇ. ಒಂದು ಧನ ವಿದ್ಯುತ್ ಆದರೆ ಇನ್ನೊಂದು ಋಣ ವಿದ್ಯುತ್ ಅಂಶವುಳ್ಳ ಕಣ. ನ್ಯೂಟ್ರಾನ್ ಕಣಗಳಲ್ಲಿ ವಿದ್ಯುತ್ ಅಂಶ ಇರುವುದಿಲ್ಲ. ಪ್ರೋಟಾನ್ ಮತ್ತು ನ್ಯೂಟ್ರಾನ್ ಕಣಗಳು ಎಲೆಕ್ಟ್ರಾನ್‌ಗೆ ಹೋಲಿಸಿದರೆ ಸುಮಾರು ೨೦೦೦ ಪಟ್ಟು ಹೆಚ್ಚಿನ ದ್ರವ್ಯರಾಶಿ ಹೊಂದಿವೆ. ಪ್ರೋಟಾನ್ ಮತ್ತು ನ್ಯೂಟ್ರಾನ್ ಕಣಗಳಿರುವ ಪರಮಾಣು ಕೇಂದ್ರದ ಸುತ್ತ ಎಲೆಕ್ಟ್ರಾನ್ ಕಣಗಳು ಸುತ್ತುತ್ತವೆ ಎನ್ನುವ ಪರಿಕಲ್ಪನೆ ರುದರ್‌ಫೋರ್ಡ್‌ರವರ ಪ್ರಯೋಗಗಳಿಂದ ಮೂಡಿಬಂದಿತು. ಪರಮಾಣುಗಳ ಗುಣಗಳನ್ನು ಹಾಗೂ ಅವು ಭಾಗವಹಿಸುವ ರಾಸಾಯನಿಕ ಕ್ರಿಯೆಗಳನ್ನು ಅರ್ಥಮಾಡಿಕೊಳ್ಳಲು ಈ ಅಣುರಚನೆಯ ಕಲ್ಪನೆ ಬಹು ಸಹಕಾರಿ ಮತ್ತು ಅವಶ್ಯಕ.

ಎಲೆಕ್ಟ್ರಾನುಗಳ ಸ್ವರೂಪ ಹಾಗೂ ಗುಣಗಳನ್ನು ನಂತರದ ಎರಡು ದಶಕಗಳಲ್ಲಿ ನಡೆಸಿದ ಸಂಶೋಧನೆಗಳು ಇನ್ನೂ ಹೆಚ್ಚು ವಿಶದಪಡಿಸಿದವು. ಮೊದಲಲ್ಲಿ ಎಲೆಕ್ಟ್ರಾನುಗಳು ಪರಮಾಣುಗಳಂತೆ ಕಣಗಳು, ಆದರೆ ಪರಮಾಣುಗಳಿಗಿಂತ ಇನ್ನೂ ಚಿಕ್ಕವು ಎಂಬ ಭಾವನೆಯಿತ್ತು. ೨೦ರ ದಶಕದಲ್ಲಿ ದೀ ಬ್ರಾಲಿ ಎಂಬ ವಿಜ್ಞಾನಿ ಎಲೆಕ್ಟ್ರಾನುಗಳು ಅಲೆಗಳ ಸ್ವರೂಪವನ್ನೂ ಪಡೆದಿರಬಹುದೆಂಬ ಸಿದ್ಧಾಂತವನ್ನು ಮುಂದಿಟ್ಟರು. ನಮ್ಮ ದೈನಂದಿನ ಜೀವನದಲ್ಲಿ ನಾವು ಕಣಗಳನ್ನು, ಅಲೆಗಳನ್ನು ಬಹಳ ಬೇರೆಯೆಂದು ತಿಳಿಯುತ್ತೇವೆ. ಮಕ್ಕಳು ಆಡುವ ಗೋಲಿಗಳನ್ನು ಕಣಗಳೆಂದು ಕರೆಯಬಹುದು. ಸಮುದ್ರದಲ್ಲಿ ಏಳುವ ಸುನಾಮಿ ದೊಡ್ಡ ಅಲೆ. ಶಬ್ದ ಗಾಳಿಯಲ್ಲಿ ಹಾಯುವ ಅಲೆ. ಕಣ ಹಾಗೂ ಅಲೆಗಳ ಸ್ವರೂಪ, ಗುಣಗಳು ತೀರ ಭಿನ್ನ. ಕಣಗಳನ್ನು ಮಣಿಕಟ್ಟಿನಲ್ಲಿ ಎಣಿಸುವಂತೆ ಸರಳ ಅಂಕಗಣಿತ ಬಳಸಿ ಕೂಡಬಹುದು. ಎರಡು ಅಲೆಗಳು ಪರಸ್ಪರ ಸಂಧಿಸಿದಾಗ, ಒಂದೇ ಅಲೆಯಾಗಿ ಮಾರ್ಪಡುತ್ತವೆ. ಅವು ಕೂಡಿದಾಗ ಇನ್ನೂ ದೊಡ್ಡ ಅಲೆಯಾಗಿ ಹೊಮ್ಮಬಹುದು ಇಲ್ಲವೇ ಕ್ಷೀಣಿಸಿ ಸಣ್ಣ ಅಲೆಯಾಗಬಹುದು. ಅಲೆಗಳು ಸಂಧಿಸಿದಾಗ ಉಂಟಾಗುವ ಹೊಸ ಅಲೆಯ ಗುಣಗಳನ್ನು ಪತ್ತೆಮಾಡಲು ಅಂಕಗಣಿತ ಸಾಕಾಗುವುದಿಲ್ಲ. ಅದಕ್ಕೆ ತ್ರಿಕೋಣ ಮಿತಿಯನ್ನು (trigonometry) ಬಳಸಬೇಕಾಗುತ್ತದೆ. ಅಲೆಗಳಲ್ಲಿ ಉನ್ನತ ಹಾಗೂ ನಿಮ್ನ ಬಿಂದುಗಳಿರುತ್ತವೆ. ಅಲೆಯ ಪಥದಲ್ಲಿ ಕಂಡುಬರುವ ಎರಡು ಅಕ್ಕಪಕ್ಕದ ಉನ್ನತ ಬಿಂದುಗಳ ನಡುವಿನ ದೂರವನ್ನು ತರಂಗದೂರ ಅಥವಾ ತರಂಗಾಂತರ (wavelength) ಎಂದು ಕರೆಯಬಹುದು. ಅಲೆಗಳ ಉನ್ನತ ಬಿಂದುಗಳು ಒಂದೇ ಸಮಯದಲ್ಲಿ, ಒಂದೇ ಬಿಂದುವಿಗೆ ಬಂದು ತಲುಪಿದರೆ ದೊಡ್ಡ ಅಲೆಯಾಗಿ ಮಾರ್ಪಡುತ್ತವೆ. ಒಂದು ಅಲೆಯ ಉನ್ನತ ಬಿಂದು, ಇನ್ನೊಂದು ಅಲೆಯ ನಿಮ್ನ ಬಿಂದುವನ್ನು ಸಂಧಿಸಿದರೆ ಸಣ್ಣ ಅಲೆಯಾಗುತ್ತದೆ.

ಅಣು ಪ್ರಪಂಚದಲ್ಲಿ ಎಲ್ಲವೂ ಕಣಗಳ ಹಾಗೂ ಅಲೆಗಳ ದ್ವಂದ್ವ ಗುಣಗಳನ್ನು ಪ್ರದರ್ಶಿಸಬಲ್ಲವು. ಕೆಲವು ಪ್ರಯೋಗಗಳ ಫಲಿತಾಂಶಗಳನ್ನು ಅರ್ಥಮಾಡಿಕೊಳ್ಳಲು ಅಲೆ ಸ್ವರೂಪವನ್ನು ಗಣನೆಗೆ ತೆಗೆದುಕೊಳ್ಳಬೇಕಾಗುತ್ತದೆ. ಇನ್ನು ಕೆಲ ಪ್ರಯೋಗಗಳ ಫಲಿತಾಂಶ ಅವುಗಳ ಕಣ ಸ್ವರೂಪದ ಪರಿಣಾಮ ಎನ್ನಬಹುದು. ನಮ್ಮ ಜ್ಞಾನೇಂದ್ರಿಯಾಧಾರಿತ ಅನುಭವಕ್ಕೆ ಇದು ವಿರೋಧಾಭಾಸ ಎನ್ನಿಸಿದರೂ ಅಣುಪ್ರಪಂಚದಲ್ಲಿ ಇಂತಹ ಗುಣಗಳನ್ನು ಎಲ್ಲ ಕಣಗಳೂ ಪ್ರದರ್ಶಿಸುತ್ತವೆ. ಅಣು ಪ್ರಪಂಚವನ್ನು ಅರ್ಥಮಾಡಿಕೊಳ್ಳಲು ಈ ಎರಡೂ ಗುಣಗಳನ್ನು ಗಣನೆಗೆ ತೆಗೆದುಕೊಳ್ಳುವುದು ಅತ್ಯಗತ್ಯ ಎನಿಸಿದೆ.

ಮಸೂರಗಳು ಹಾಗೂ ಅವುಗಳನ್ನು ಬಳಸಿ ಮಾಡಿರುವ ಸೂಕ್ಷ್ಮದರ್ಶಕಗಳು

ಬೆಳಕನ್ನು ಬಳಸಿ ಚಿಕ್ಕದ್ದನ್ನು ದೊಡ್ಡದಾಗಿ ಕಾಣುವಂತೆ ಮಾಡುತ್ತವೆ. ಆಕಾರವನ್ನು ಹಿಗ್ಗಿಸಿ ತೋರಿಸುವ ಸೂಕ್ಷ್ಮದರ್ಶಕದ ಕೆಲಸಕ್ಕೆ ಆಧಾರವಾಗಿರುವುದು ಬೆಳಕಿನ ಅಲೆ ಅಥವಾ ತರಂಗ ಸ್ವರೂಪ. ಸೂಕ್ಷ್ಮದರ್ಶಕ ಬಳಸಿ ನಮ್ಮ ಬರಿಗಣ್ಣಿಗೆ ಕಾಣಸದ ಕಣಗಳನ್ನು ನೋಡಬಹುದು. ಆದರೆ ಬೆಳಕಿನ ಸೂಕ್ಷ್ಮದರ್ಶಕಕ್ಕೆ ಅದರದೇ ಆದ ಮಿತಿಯಿದೆ. ಬೆಳಕಿನ ತರಂಗಾಂತರ ಅಥವಾ ತರಂಗದೂರಕ್ಕಿಂತ ಚಿಕ್ಕದಾದ ವಸ್ತುವನ್ನು ಎಷ್ಟೇ ಒಳ್ಳೆಯ ಸೂಕ್ಷ್ಮದರ್ಶಕವನ್ನು ಬಳಸಿದರೂ ನೋಡಲು ಸಾಧ್ಯವಾಗುವುದಿಲ್ಲ. ಸೂಕ್ಷ್ಮದರ್ಶಕಗಳ ಈ ಮಿತಿ ಕೂಡ ಬೆಳಕಿನ ತರಂಗ ಸ್ವರೂಪದ ಪರಿಣಾಮವೇ. ನಮ್ಮ ಕಣ್ಣಿಗೆ ಕಾಣಿಸುವ ಬೆಳಕಿನ ತರಂಗಾಂತರ ಸುಮಾರು ೫೦೦ ನಾನೋಮೀಟರ್ (ಒಂದು ಮಿಲಿ ಮೀಟರಿಗಿಂತ ೨೦೦೦ ಪಟ್ಟು ಸಣ್ಣದು). ಇದಕ್ಕಿಂತ ಚಿಕ್ಕ ಆಕಾರ ಹೊಂದಿರುವ ಯಾವ ಕಣವನ್ನೂ ಬೆಳಕನ್ನು ಬಳಸುವ ಸೂಕ್ಷ್ಮದರ್ಶಕದ ಸಹಾಯದಿಂದ ನೋಡಲು ಸಾಧ್ಯವಾಗುವುದಿಲ್ಲ. ಉದಾಹರಣೆಗೆ ವೈರಾಣುಗಳು ಬೆಳಕಿನ ತರಂಗ ದೂರಕ್ಕಿಂತ ೨೦ ಪಟ್ಟು ಚಿಕ್ಕವು. ಆದ್ದರಿಂದ ಬ್ಯಾಕ್ಟೀರಿಯ ಕೋಶಗಳನ್ನು ನೋಡುವಂತೆ ವೈರಾಣುಗಳನ್ನು ಬೆಳಕಿನ ಸೂಕ್ಷ್ಮದರ್ಶಕದಲ್ಲಿ ನೋಡುವುದು ಸಾಧ್ಯವಿಲ್ಲ.

ಕೆಲವು ಪ್ರಯೋಗಗಳಲ್ಲಿ ಎಲೆಕ್ಟ್ರಾನ್ ಕಣಗಳಂತೆ ವರ್ತಿಸಿದರೆ, ಇನ್ನು ಕೆಲವು ಪ್ರಯೋಗಗಳಲ್ಲಿ ಅವುಗಳ ತರಂಗ ಸ್ವರೂಪವೇ ಎದ್ದು ಕಾಣುತ್ತದೆ. ಎಲೆಕ್ಟ್ರಾನುಗಳ ತರಂಗ ಸ್ವರೂಪ ಅವುಗಳು ವೇಗವಾಗಿ ಚಲಿಸುತ್ತಿದ್ದಾಗ ಪ್ರಕಟಗೊಳ್ಳುತ್ತದೆ. ವೇಗ ಹೆಚ್ಚಿದಷ್ಟೂ ಅವುಗಳ ತರಂಗದೂರ ಕಡಿಮೆಯಾಗುತ್ತದೆ. ಎಲೆಕ್ಟ್ರಾನುಗಳ ವೇಗವನ್ನು ವಿದ್ಯುತ್ ಒತ್ತಡ ಹೇರಿ ಹೆಚ್ಚಿಸಬಹುದು. ಸುಮಾರು ೧೦೦ ವೋಲ್ಟ್ ವಿದ್ಯುತ್ ಒತ್ತಡಕ್ಕೆ ಒಳಪಡಿಸಲ್ಪಟ್ಟ ಎಲೆಕ್ಟ್ರಾನುಗಳ ತರಂಗದೂರ ಬೆಳಕಿನ ತರಂಗದೂರಕ್ಕಿಂತ ಸುಮಾರು ೫೦೦೦ ಪಟ್ಟು ಕಡಿಮೆ ಇರುತ್ತದೆ. ಎಲೆಕ್ಟ್ರಾನುಗಳ ವೇಗ ಹೆಚ್ಚಿದಷ್ಟೂ ಅವುಗಳ ತರಂಗದೂರ ಕಡಿಮೆಯಾಗುತ್ತದೆ. ಆದ್ದರಿಂದ ಅಂತಹ ಎಲೆಕ್ಟ್ರಾನ್ ಅಲೆಗಳನ್ನು ಬಳಸಿ ದೂರದರ್ಶಕ ನಿರ್ಮಿಸಿದರೆ, ಬೆಳಕಿನ ದೂರದರ್ಶಕದಲ್ಲಿ ನೋಡಲಾರದ ಇನ್ನೂ ಸಣ್ಣ ಕಣಗಳನ್ನು ನೋಡುವುದು ಸಾಧ್ಯವಾಗುತ್ತದೆ. ಇಂತಹ



ಎಲೆಕ್ಟ್ರಾನ್ ಸೂಕ್ಷ್ಮದರ್ಶಕ ಯಂತ್ರ



ಸೂಕ್ಷ್ಮಾಣುಗಳು ವಹನ ಸೂಕ್ಷ್ಮದರ್ಶಕದಲ್ಲಿ ನೋಡಿದಾಗ

ಸೂಕ್ಷ್ಮದರ್ಶಕಗಳನ್ನು ನಿರ್ಮಿಸುವ ಸಾಧ್ಯತೆಯ ಅರಿವು ೧೯೩೦ರಲ್ಲಿ ತೋರಿಬಂದಿತು. ಬೆಳಕಿನ ಸೂಕ್ಷ್ಮದರ್ಶಕದಲ್ಲಿ ಇರುವಂತೆ ಎಲೆಕ್ಟ್ರಾನ್ ಸೂಕ್ಷ್ಮದರ್ಶಕದಲ್ಲಿಯೂ ತರಂಗಗಳನ್ನು ಬಗ್ಗಿಸಿ ಬಿಂಬ ಪರದೆಯ ಮೇಲೆ ಸಂಗ್ರಹಿಸುವ ವ್ಯವಸ್ಥೆಯಿರಬೇಕು. ಬೆಳಕಿನ ಸೂಕ್ಷ್ಮದರ್ಶಕಗಳಲ್ಲಿ ಇದಕ್ಕಾಗಿ ಗಾಜಿನ ಮಸೂರಗಳನ್ನು ಬಳಸುತ್ತಾರೆ. ಆದರೆ ಗಾಜಿನ ಮಸೂರಗಳು ಎಲೆಕ್ಟ್ರಾನ್ ಅಲೆಗಳನ್ನು ಬಗ್ಗಿಸಿ ಬಿಂಬ ಪರದೆಯ ಮೇಲೆ ಬೀಳುವಂತೆ ಮಾಡುವ ಬದಲು ಎಲೆಕ್ಟ್ರಾನ್ ಕಣಗಳನ್ನು ಹೀರಿಕೊಂಡುಬಿಡುತ್ತವೆ. ಜೊತೆಗೇ ಗಾಳಿಯೂ ಕೂಡ ಎಲೆಕ್ಟ್ರಾನ್ ಕಣಗಳನ್ನು ಹೀರಿಕೊಳ್ಳುವ ಸ್ವಭಾವ ಹೊಂದಿದ್ದು ಎಲೆಕ್ಟ್ರಾನ್ ಕಿರಣಗಳಿಗೆ ಪಾರದರ್ಶಕವಾಗಿರುವುದಿಲ್ಲ. ಆದ್ದರಿಂದ ಎಲೆಕ್ಟ್ರಾನ್ ಸೂಕ್ಷ್ಮದರ್ಶಕದಲ್ಲಿ ಅರೆ ನಿರ್ವಾತ ಸ್ಥಿತಿ ಇರಬೇಕು. ಎಲೆಕ್ಟ್ರಾನ್ ಕಿರಣಗಳನ್ನು ಬಗ್ಗಿಸಿ ಬಿಂಬ ಪರದೆಯ ಮೇಲೆ ಕ್ರೋಡೀಕರಿಸಲು ಸಹಕಾರಿಯಾಗುವಂತಹ ಮಸೂರಗಳನ್ನು ತಯಾರಿಸುವ ತಂತ್ರವನ್ನು ನೋಲ್ ಮತ್ತು ರುಸ್ಕ ಎಂಬ ಜರ್ಮನ್ ವಿಜ್ಞಾನಿಗಳು ೧೯೩೦ರ ದಶಕದಲ್ಲಿ ಆವಿಷ್ಕರಿಸಿದರು. ಅಯಸ್ಕಾಂತ ಕ್ಷೇತ್ರದಲ್ಲಿ ಎಲೆಕ್ಟ್ರಾನುಗಳು ಬಗ್ಗುವುದರಿಂದ ಅಯಸ್ಕಾಂತೀಯ ಮಸೂರಗಳ ನಿರ್ಮಾಣ ಸಾಧ್ಯವಾಯಿತು. ಬೆಳಕಿನ ಸೂಕ್ಷ್ಮದರ್ಶಕದಲ್ಲಿರುವಂತೆ ಎಲೆಕ್ಟ್ರಾನ್ ಸೂಕ್ಷ್ಮದರ್ಶಕಗಳಲ್ಲೂ ವೀಕ್ಷಿಸಬೇಕಾದ ಕಣಗಳ ಮೇಲೆ ಎಲೆಕ್ಟ್ರಾನ್ ಕಿರಣಗಳನ್ನು ಸೂಸಿ, ಕಣಗಳು ಚೆದುರಿಸಿದ ಎಲೆಕ್ಟ್ರಾನ್ ಕಿರಣಗಳನ್ನು ಅಯಸ್ಕಾಂತೀಯ ಮಸೂರಗಳ ಸಹಾಯದಿಂದ ಬಿಂಬ ಪರದೆಯ ಮೇಲೆ ಕ್ರೋಡೀಕರಿಸುತ್ತಾರೆ. ನೋಲ್ ಮತ್ತು ರುಸ್ಕ ನಿರ್ಮಿಸಿದ



ಎಲೆಕ್ಟ್ರಾನ್ ಸೂಕ್ಷ್ಮದರ್ಶಕ ಬಳಸಿ ಹೆಸರುವಾಸಿಯಾಗಿರುವ ಶ್ರೀ ವೆಂಕಟ್ರಾಮ್ ಪ್ರಸಾದ್




*ವಹನ ಎಲೆಕ್ಟ್ರಾನ್ ಸೂಕ್ಷ್ಮದರ್ಶನ*




*ಕ್ರಮಲೋಕನ ಸೂಕ್ಷ್ಮದರ್ಶಕ ಬಳಸಿ ತೆಗೆಯಲಾದ ದುಂಬಿಯ ಹಿಂಬದಿಯ ಕಾಲು*

ಎಲೆಕ್ಟ್ರಾನ್ ಸೂಕ್ಷ್ಮದರ್ಶಕ ನಮ್ಮ ವೀಕ್ಷಣೆಗೆ ನಿಲುಕುವ ವಿಶ್ವವನ್ನು ಹಿಗ್ಗಿಸಿತು. ಅಲ್ಲಿಯವರೆಗೆ ಬೆಳಕಿನ ಸೂಕ್ಷ್ಮದರ್ಶಕ ಬಳಸಿ ಏಕಕೋಶ ಜೀವಿಗಳಿಗಿಂತಲೂ ಚಿಕ್ಕ ಕಣಗಳನ್ನು ನೋಡಲು ಸಾಧ್ಯವಾಗಿರಲಿಲ್ಲ. ೧೯೩೦ರ ದಶಕದ ಅಂತ್ಯದ ವೇಳೆಗೆ ನಿರ್ಮಿಸಲಾಗಿದ್ದ ಎಲೆಕ್ಟ್ರಾನ್ ಸೂಕ್ಷ್ಮದರ್ಶಕ ಬಳಸಿ ಏಕಕೋಶ ಜೀವಿಗಳಿಗಿಂತಲೂ ಸ್ವಲ್ಪ ಸಣ್ಣ ಕಣಗಳ ಸ್ವರೂಪವನ್ನು ನೋಡಲು ಸಾಧ್ಯವಾಯಿತು. ೧೯೪೦ರ ದಶಕದ ಅಂತ್ಯದ ವೇಳೆಗೆ ಇದಕ್ಕೂ ಹತ್ತು ಪಟ್ಟು ಚಿಕ್ಕ ಕಣಗಳನ್ನು ನೋಡಲು ಸಾಧ್ಯವಾಯಿತು. ಜೀವಕೋಶಗಳ ಒಳರಚನೆಯನ್ನು ವೀಕ್ಷಿಸಲು ಸಾಧ್ಯವಾಯಿತು. ೧೯೫೦ರಲ್ಲಿ ಬಳಕೆಗೆ ಬಂದ ಎಲೆಕ್ಟ್ರಾನ್ ಸೂಕ್ಷ್ಮದರ್ಶಕಗಳ ಸಹಾಯದಿಂದ ವೈರಾಣುಗಳ ವೀಕ್ಷಣೆ ಸಾಧ್ಯ ಆಯಿತು. ಅಂದಿನಿಂದ ಇಂದಿನವರೆಗೆ ಎಲೆಕ್ಟ್ರಾನ್ ಸೂಕ್ಷ್ಮದರ್ಶಕಗಳು ಸತತ ಹೆಚ್ಚು ಹೆಚ್ಚು ಪ್ರಬಲವಾಗುತ್ತಾ ಬಂದಿವೆ. ಅವುಗಳನ್ನು ಬಳಸಿ ವೀಕ್ಷಿಸಬಹುದಾದ ವಸ್ತುಗಳ ಗಾತ್ರ ಕ್ಷೀಣಿಸುತ್ತಾ ಬಂದಿವೆ. ಅವುಗಳ ಬಳಕೆಯೂ ಸರಳವಾಗುತ್ತ ಬಂದಿದೆ. ಎಲೆಕ್ಟ್ರಾನ್ ಸೂಕ್ಷ್ಮದರ್ಶಕದ ಆವಿಷ್ಕಾರಕ್ಕಾಗಿ ರುಸ್ಕರವರಿಗೆ ೧೯೮೬ರ ನೊಬೆಲ್ ಪಾರಿತೋಷಕ ದೊರೆಯಿತು. ತಾತಾ ವಿಜ್ಞಾನ ಮಂದಿರದಲ್ಲಿರುವ ಫಿಲಿಪ್ಸ್ ಕಂಪನಿಯ ಎಲೆಕ್ಟ್ರಾನ್ ಸೂಕ್ಷ್ಮದರ್ಶಕವನ್ನು ಮತ್ತು ಅದನ್ನು ಬಳಸಿ ತೆಗೆದ ಒಂದು ವೈರಾಣುವಿನ ಚಿತ್ರವನ್ನು ನೀವಿಲ್ಲಿ ನೋಡಬಹುದು. ವೈರಾಣು ಕಣಗಳ ಅಳತೆ ಬೆಳಕಿನ ತರಂಗ ದೂರಕ್ಕಿಂತ ೨೫ ಪಟ್ಟು ಕಡಿಮೆ. ದುಂಡನೆಯ ಆಕಾರವುಳ್ಳ ವೈರಾಣುವಿನ ವ್ಯಾಸ ಸುಮಾರು ೩೦ ನಾನೋಮೀಟರುಗಳು (ಒಂದು ಮೀಟರಿನ ದಶಕೋಟಿಯ ಮೂರು ಭಾಗ).

ಎಲೆಕ್ಟ್ರಾನ್ ಸೂಕ್ಷ್ಮದರ್ಶಕಗಳಲ್ಲಿ ಮುಖ್ಯವಾಗಿ ಎರಡು ಮಾದರಿಗಳಿವೆ. ಮೊದಲನೆಯ ಮಾದರಿ ಬೆಳಕಿನ ಸೂಕ್ಷ್ಮದರ್ಶಕದಂತೆಯೇ ಕೆಲಸ ಮಾಡುತ್ತದೆ. ಮುಖ್ಯ ವ್ಯತ್ಯಾಸಗಳೆಂದರೆ ಬೆಳಕಿನ ಬದಲಿಗೆ ಎಲೆಕ್ಟ್ರಾನ್ ಕಿರಣಗಳನ್ನು ಬಳಸುವುದು, ಗಾಜಿನ ಮಸೂರಗಳ ಸ್ಥಾನದಲ್ಲಿ ಅಯಸ್ಕಾಂತೀಯ ಮಸೂರಗಳ ಬಳಕೆ ಮತ್ತು ಸೂಕ್ಷ್ಮದರ್ಶಕವನ್ನು ಅರೆ ನಿರ್ವಾತ ಸ್ಥಿತಿಯಲ್ಲಿ ಇಟ್ಟಿರುವುದು. ಇಂತಹ ಸೂಕ್ಷ್ಮದರ್ಶಕಗಳಿಗೆ ವಹನ ಎಲೆಕ್ಟ್ರಾನ್ ಸೂಕ್ಷ್ಮದರ್ಶಕ (transmission electron microscope) ಎನ್ನಬಹುದು. ಚಿತ್ರದಲ್ಲಿರುವ ಸೂಕ್ಷ್ಮದರ್ಶಕ ಇಂತಹದು. ಇನ್ನೊಂದು ಮಾದರಿಯ ಎಲೆಕ್ಟ್ರಾನ್ ಸೂಕ್ಷ್ಮದರ್ಶಕದಲ್ಲಿ ಅತಿ ಸೂಕ್ಷ್ಮ ಎಲೆಕ್ಟ್ರಾನ್ ಕಿರಣವನ್ನು ಕಣಗಳ ಒಂದು ಬದಿಯಿಂದ ಇನ್ನೊಂದು ಬದಿಗೆ ಹಾಯಿಸುತ್ತಾರೆ. ಕಣದ ಮೇಲಿನ ಪ್ರತಿ ಬಿಂದುವಿನಿಂದಲೂ ಚದುರುವ ಎಲೆಕ್ಟ್ರಾನ್ ಕಣಗಳನ್ನು ಬಳಸಿ ಕಣಗಳ ಮೇಲ್ಮೈ ಆಕಾರದ ಬಗ್ಗೆ ಮಾಹಿತಿ ಪಡೆಯುತ್ತಾರೆ. ಇಂತಹ ಸೂಕ್ಷ್ಮದರ್ಶಕಗಳಿಗೆ ಕ್ರಮಲೋಕನ ಎಲೆಕ್ಟ್ರಾನ್ ಸೂಕ್ಷ್ಮದರ್ಶಕ ಎನ್ನಬಹುದು (scanning electron microscope). ಇಂತಹ ಸೂಕ್ಷ್ಮದರ್ಶಕದ ಮಾದರಿಯನ್ನು ಪುಟ ೬೩ರಲ್ಲಿ ನೋಡಬಹುದು.

ವಹನ ಎಲೆಕ್ಟ್ರಾನ್ ಸೂಕ್ಷ್ಮದರ್ಶಕದಲ್ಲಿ ವೀಕ್ಷಿಸುವ ಮಾದರಿ ಅಥವಾ ಕಣ ಅತ್ಯಂತ ತೆಳುವಾಗಿರಬೇಕಾಗುತ್ತದೆ. ಇಲ್ಲದಿದ್ದರೆ ಮಾದರಿ ಎಲ್ಲ ಎಲೆಕ್ಟ್ರಾನ್ ಕಣಗಳನ್ನೂ ಹೀರಿಕೊಂಡು ಬಿಂಬ ಪರದೆ ಕಪ್ಪಾಗಿ ಗೋಚರಿಸುತ್ತದೆ. ಕ್ರಮಲೋಕನ ಸೂಕ್ಷ್ಮದರ್ಶಕದಲ್ಲಿ ವೀಕ್ಷಿಸುವ ಮಾದರಿಗಳು ತೆಳುವಾಗಿರಬೇಕಿಲ್ಲ. ಆದರೆ ದೂರದರ್ಶಕವು ಮಾದರಿಯ ಮೇಲ್ಮೈ ಲಕ್ಷಣಗಳನ್ನು ಮಾತ್ರ ತೋರಿಸುತ್ತದೆ. ಅಂದರೆ ಕ್ರಮಲೋಕನ ಸೂಕ್ಷ್ಮದರ್ಶಕದಲ್ಲಿ ಮೂಡಿಬರುವ ಬಿಂಬ ಮಾದರಿಯ ಮೇಲ್ಮೈ ಲಕ್ಷಣದ ವಿಸ್ತರಿಸಿದ ಚಿತ್ರವಾಗಿರುತ್ತದೆ. ಮಾದರಿಯ ಒಳ ರಚನೆಯ ಬಗ್ಗೆ ಮಾಹಿತಿ ಸಿಗುವುದಿಲ್ಲ. ಹೀಗಾಗಿ ಎರಡು ಬಗೆಯ ಸೂಕ್ಷ್ಮದರ್ಶಕಗಳು ಪೂರಕ ಮಾಹಿತಿ ಒದಗಿಸಿ, ಬೇರೆಬೇರೆ ಸಂದರ್ಭಗಳಲ್ಲಿ ಅಗತ್ಯವಾಗಿ ಬೇಕಾಗುತ್ತವೆ. ಮೇಲಿನ ಚಿತ್ರ ಕ್ರಮಲೋಕನ ಸೂಕ್ಷ್ಮದರ್ಶಕ ಬಳಸಿ ತಾತಾ ವಿಜ್ಞಾನ ಮಂದಿರದಲ್ಲಿ ತೆಗೆಯಲಾದ ದುಂಬಿಯ ಹಿಂಬದಿಯ ಕಾಲನ್ನು ತೋರಿಸುತ್ತದೆ (ತಾತಾ ವಿಜ್ಞಾನ ಮಂದಿರದ ಸೆಂಟರ್ ಫಾರ್ ಈಕೊಲಾಜಿಕಲ್ ಸ್ಟಡೀಸ್ ವಿಭಾಗದ ಪರೊಮಿತರವರ ಕೊಡುಗೆ).

ಒದ್ದೆಯಾಗಿರುವ ಮಾದರಿಗಳನ್ನು ಎರಡು ದಶಕಗಳ ಹಿಂದೆ ಎಲೆಕ್ಟ್ರಾನ್ ಸೂಕ್ಷ್ಮದರ್ಶಕಗಳಲ್ಲಿ ಬಳಸುವುದು ಸಾಧ್ಯವಿರಲಿಲ್ಲ. ಒದ್ದೆ ಮಾದರಿಯಲ್ಲಿರುವ ನೀರಿನ ಅಂಶ ಆವಿಯಾಗುತ್ತಿದ್ದುದರಿಂದ ನಿರ್ವಾತ ವಾತಾವರಣಕ್ಕೆ ಅಡ್ಡಿಯಾಗಿ, ಎಲೆಕ್ಟ್ರಾನ್ ಕಿರಣಗಳ ಪ್ರವಾಹಕ್ಕೆ ತಡೆ ಉಂಟಾಗುತ್ತಿತ್ತು. ಆದ್ದರಿಂದ ಜೈವಿಕ ಮಾದರಿಗಳನ್ನು ವೀಕ್ಷಿಸಲು ಅವುಗಳನ್ನು ಪೂರ್ಣ ತೇವರಹಿತಗೊಳಿಸಬೇಕಾಗುತ್ತಿತ್ತು. ತೇವ ಕಳೆದುಕೊಂಡಾಗ ಅವುಗಳ ಆಕಾರ ಸ್ವಲ್ಪ ಬದಲಾಗುತ್ತಿತ್ತು. ಆದ್ದರಿಂದ ಮಾದರಿಗಳ ನೈಜ ಚಿತ್ರಣ ಪಡೆಯಲು ಕಷ್ಟಸಾಧ್ಯವಾಗಿತ್ತು. ಈ ಎರಡು ದಶಕಗಳಲ್ಲಿ ಮಾದರಿಯನ್ನು ಶೂನ್ಯಕ್ಕಿಂತ ೧೫೦ ಡಿಗ್ರಿ ಸೆಲ್ಸಿಯಸ್ ಕಡಿಮೆ ಉಷ್ಣತೆಯಲ್ಲಿ ಪರೀಕ್ಷಿಸಲು ಸಾಧ್ಯವಾಗುವಂತಹ ವ್ಯವಸ್ಥೆ ಎಲೆಕ್ಟ್ರಾನ್ ಸೂಕ್ಷ್ಮದರ್ಶಕಗಳಲ್ಲಿ ಲಭ್ಯವಾಗಿದೆ. ಈ ಉಷ್ಣತೆಯಲ್ಲಿ ಮಾದರಿಯು ತೇವವಾಗಿದ್ದರೂ ತೇವ ಆವಿಯಾಗದಿರುವುದರಿಂದ ನಿರ್ವಾತ ವಾತಾವರಣ ಕ್ಷೀಣವಾಗುವುದಿಲ್ಲ. ಆದ್ದರಿಂದ ತೇವ ಉಳಿಸಿಕೊಂಡಿರುವ ಮಾದರಿಗಳನ್ನು ವೀಕ್ಷಿಸುವುದು ಸಾಧ್ಯವಾಗುತ್ತದೆ. ಜೀವಕೋಶಗಳಲ್ಲಿರುವ ಅನೇಕ ಅಣು ಸಮೂಹಗಳ ಆಕಾರ ಇಂತಹ ಸೂಕ್ಷ್ಮದರ್ಶಕಗಳಿಂದ ನಮಗೆ ತಿಳಿದುಬಂದಿದೆ. ಜೀವಕೋಶದ ಕ್ರಿಯೆಯಲ್ಲಿ ಪ್ರಮುಖ ಪಾತ್ರ ವಹಿಸುವ ಈ ಅಣು ಸಮೂಹಗಳ ಕಾರ್ಯವಿಧಾನವನ್ನು ಅರಿಯಲು ಅವುಗಳ ಆಕೃತಿಯ ಮಾಹಿತಿ ಅತ್ಯಗತ್ಯ. ಹಿಂದಿನ ಪುಟದಲ್ಲಿರುವ ಚಿತ್ರ ಇಂತಹ ಒಂದು ಸೂಕ್ಷ್ಮದರ್ಶಕವನ್ನು ತೋರಿಸುತ್ತದೆ (ಜೋಲ್ ಕಂಪನಿ, ಜಪಾನ್)




*ವಿವಿಧ ವೈರಾಣುಗಳು ಸೂಕ್ಷ್ಮದರ್ಶಕದಲ್ಲಿ ನೋಡಿದಾಗ*

ಬೆಂಗಳೂರಿನ ವೆಂಕಟ್ರಾಂ ಪ್ರಸಾದ್ ಇಂತಹ ಎಲೆಕ್ಟ್ರಾನ್ ಸೂಕ್ಷ್ಮದರ್ಶಕ ಬಳಸಿಕೊಂಡು ಸಂಶೋಧನೆ ನಡೆಸಿ ಹೆಸರುವಾಸಿಯಾಗಿರುವ ವಿಜ್ಞಾನಿಗಳಲ್ಲಿ ಒಬ್ಬರು. ಅವರು ಅಮೆರಿಕಾದ ಬೈಲರ್ ಕಾಲೇಜ್ ಆಫ್ ಮೆಡಿಸಿನ್ ಸಂಸ್ಥೆಯಲ್ಲಿ ಕೆಲಸ ಮಾಡುತ್ತಿದ್ದಾರೆ. ರೋಟಾವೈರಾಣು ನವಜಾತ ಶಿಶುಗಳಿಗೆ ಭೇದಿ ಉಂಟುಮಾಡುತ್ತದೆ. ಪ್ರಸಾದ್ ಈ ವೈರಾಣುವಿನ ರಚನೆಯ ಬಗ್ಗೆ ಹೆಚ್ಚಿನ ಸಂಶೋಧನೆ ಮಾಡಿದ್ದಾರೆ. ಅವರು ಚಿತ್ರೀಕರಿಸಿದ ರೋಟಾವೈರಾಣುವನ್ನು ಮೇಲಿನ ಚಿತ್ರದಲ್ಲಿ ನೋಡಬಹುದು. ಎಡಬದಿಯ ಚಿತ್ರದಲ್ಲಿ ಅನೇಕ ರೋಟಾವೈರಾಣುಗಳನ್ನು ನೋಡಬಹುದು. ಇಂತಹ ಅನೇಕ ಕಣಗಳ ಚಿತ್ರ ಬಳಸಿ ರೋಟಾವೈರಾಣುವಿನ ಮೂರು ಆಯಾಮಗಳ ರಚನೆಯನ್ನು (three-dimensional structure) ಸೂಕ್ಷ್ಮ ಕಂಡುಕೊಳ್ಳಲು ಸಾಧ್ಯ. ಇದನ್ನೇ ಮಿಕ್ಕ ಎರಡು ಚಿತ್ರಗಳು ತೋರಿಸುತ್ತವೆ. ಮಧ್ಯದ ಚಿತ್ರ ವೈರಾಣುವಿನ ಮೇಲ್ಮೈ ರಚನೆಯನ್ನು ತೋರಿಸಿದರೆ, ಬಲ ಚಿತ್ರ ವೈರಾಣುವಿನ ಒಳಗನ್ನೂ ತೋರಿಸುತ್ತದೆ.

ಎಲೆಕ್ಟ್ರಾನ್ ಸೂಕ್ಷ್ಮದರ್ಶಕಗಳ ವ್ಯಾಪಕ ಬಳಕೆ ಜೀವವಿಜ್ಞಾನಕ್ಕೆ ಮಾತ್ರ ಸೀಮಿತವಾಗಿಲ್ಲ, ಭೌತ, ರಸಾಯನ ಹಾಗೂ ಭೂವಿಜ್ಞಾನದ ಅನೇಕ ಶಾಖೆಗಳಲ್ಲಿ ಇದರ ಬಳಕೆ ವ್ಯಾಪಕವಾಗಿದೆ. ಎಲೆಕ್ಟ್ರಾನ್ ಸೂಕ್ಷ್ಮದರ್ಶಕಗಳ ತಯಾರಿಕೆಯಲ್ಲಿ ಜರ್ಮನಿ ಮತ್ತು ಜಪಾನ್ ದೇಶಗಳು ಬಹಳ ಹೆಸರು ಗಳಿಸಿವೆ. ಹಿಟಾಚಿ, ನೈಕೋನ್, ಜೋಲ್ ಮುಂತಾದವು ಜಪಾನಿ ಸಂಸ್ಥೆಗಳಾದರೆ, ಕಾರ್ಲ್ ಜೀಸ್, ಲೈಕ ಜರ್ಮನಿಯ ಸಂಸ್ಥೆಗಳು. ಆಧುನಿಕ ಸೌಲಭ್ಯಗಳೆಲ್ಲವನ್ನೂ ಹೊಂದಿರುವ ಸೂಕ್ಷ್ಮದರ್ಶಕಕ್ಕೆ ಐದರಿಂದ ಹತ್ತು ಕೋಟಿ ರೂಪಾಯಿಗಳ ಬೆಲೆಯಿದೆ. ಎಲೆಕ್ಟ್ರಾನ್ ಸೂಕ್ಷ್ಮದರ್ಶಕಗಳ ಬಳಕೆ ಅನೇಕ ವೈಜ್ಞಾನಿಕ ಸಂಶೋಧನೆಗಳಿಗೆ ಹಾಗೂ ವೈದ್ಯಕೀಯ ಪರೀಕ್ಷೆಗಳಿಗೆ ಬೇಕಾಗುವುದರಿಂದ ಈ ಯಂತ್ರಗಳ ತಯಾರಿಕೆ ಮತ್ತು ಮಾರಾಟ ಬಹುದೊಡ್ಡ ವ್ಯಾಪಾರ ಎನ್ನಿಸಿದೆ.

**ಡಾ|| ಎಂ. ಆರ್. ಎನ್. ಮೂರ್ತಿ**
ಡಿಪಾರ್ಟ್‌ಮೆಂಟ್ ಆಫ್ ಮಾಲಿಕ್ಯುಲರ್ ಬಯೊ-ಫಿಸಿಕ್ಸ್, ಯುಜಿಸಿ ಸೆಂಟರ್ ಫಾರ್ ಅಡ್ವಾನ್ಸ್‌ಡ್ ಸ್ಟಡೀಸ್
ಇಂಡಿಯನ್ ಇನ್‌ಸ್ಟಿಟ್ಯೂಟ್ ಆಫ್ ಸೈಯನ್ಸ್, ಬೆಂಗಳೂರು - ೫೬೦ ೦೧೨



■ ಡಾ॥ ಪ್ರಕಾಶ್ ಸಿ.ರಾವ್

# ವೈದ್ಯಕೀಯ ರಂಗದಲ್ಲಿ ಜನಸಾಮಾನ್ಯರು ಗೌಣವಾಗುತ್ತಿದ್ದಾರೆಯೇ ?

ಅನಾದಿಕಾಲದಿಂದಲೂ ಎಲ್ಲ ಸಮಾಜಗಳಲ್ಲೂ ಆರೋಗ್ಯಕ್ಕೆ ವಿಶೇಷ ಸ್ಥಾನ ಇದ್ದೇ ಇದೆ. ಜಗತ್ತಿನಾದ್ಯಂತ ಸರ್ಕಾರಗಳು ಜನಾರೋಗ್ಯ ಸುಧಾರಿಸಲು ಎಲ್ಲ ಪ್ರಯತ್ನಗಳನ್ನು ಮಾಡುತ್ತ ಬಂದಿವೆ. ವಿಜ್ಞಾನ ಹಾಗೂ ತಂತ್ರಜ್ಞಾನ ಬೆಳೆದಂತೆಲ್ಲ, ಜನಾರೋಗ್ಯ ಸಾಧನೆಗೆ ಹೆಚ್ಚು ಹೆಚ್ಚು ಅವಕಾಶಗಳು ಒದಗಿವೆ. ಇತ್ತೀಚೆಗಂತೂ (೧೯೭೭) ಜನಾರೋಗ್ಯವನ್ನು ಹೇಗೆ ಸಾಧಿಸಬಹುದು ಎಂಬುದನ್ನು ವಿಶ್ವ ಆರೋಗ್ಯ ಸಂಸ್ಥೆ ಸ್ಪಷ್ಟೀಕರಿಸಿದೆ. ಸರಕಾರಗಳು ಆರೋಗ್ಯ ಸುಧಾರಣೆಯ ಜವಾಬ್ದಾರಿಯನ್ನು ಹೊತ್ತು ತಮ್ಮ ಗುರಿಯನ್ನು ಗೊತ್ತುಪಡಿಸಿವೆ. ಆದರೂ ವೈದ್ಯಕೀಯ ರಂಗದಲ್ಲಿ ಜನಸಾಮಾನ್ಯರು ಗೌಣವಾಗುತ್ತಿದ್ದಾರೆಂದು ಹೇಳಲಾಗುತ್ತಿದೆ. ಇದರ ಸತ್ಯಾಸತ್ಯತೆಗಳನ್ನು ತಿಳಿಯೋಣವೆ ?

## ವೈದ್ಯಕೀಯ ರಂಗ

ಭಾರತದಲ್ಲಿ ವೈದ್ಯಕೀಯ ರಂಗವು ವ್ಯಾಪಕವಾಗಿ ಬೆಳೆದಿದೆ. ಪ್ರಾಥಮಿಕ, ದ್ವಿತೀಯ ಹಾಗೂ ತೃತೀಯ ಚಿಕಿತ್ಸಾ ಪದ್ಧತಿಗಳು ಲಭ್ಯವಿವೆ. ಈ ಕೇಂದ್ರಗಳಲ್ಲಿ ರೋಗ ಪ್ರತಿಬಂಧನೆ, ಪುನರ್ವಸತಿ ಹಾಗೂ ರೋಗ ಚಿಕಿತ್ಸೆಯನ್ನು ಮಾಡಲಾಗುವುದು. ಚಿಕಿತ್ಸೆಯು ಸರ್ಕಾರಿ ಕ್ಷೇತ್ರದಲ್ಲಲ್ಲದೆ, ಖಾಸಗಿಯಾಗಿಯೂ ದೊರಕುತ್ತದೆ. ಪಟ್ಟಣಗಳಲ್ಲಿ ಖಾಸಗಿ ಚಿಕಿತ್ಸಾ ಕೇಂದ್ರಗಳು ವ್ಯಾಪಕವಾಗಿದ್ದು, ಸರಕಾರಿ ಕೇಂದ್ರಗಳು ಗ್ರಾಮೀಣ ಪ್ರದೇಶದಲ್ಲಿವೆ. ಖಾಸಗಿ ಕೇಂದ್ರಗಳ ಚಿಕಿತ್ಸೆ ದುಬಾರಿ, ಸರ್ಕಾರಿ ಕೇಂದ್ರಗಳ ಚಿಕಿತ್ಸೆ ಗುಣಮಟ್ಟ ತೃಪ್ತಿಕರವಾಗಿಲ್ಲ ಎಂಬುದು ಜನರ ಅಭಿಪ್ರಾಯವಾಗಿದೆ. ರೋಗ ಪ್ರತಿಬಂಧನೆ, ಪುನರ್ವಸತಿ, ಆರೋಗ್ಯ ಶಿಕ್ಷಣದ ಕೊರತೆ ಮೊದಲಾದ ನೇತ್ಯಾತ್ಮಕ ಅಂಶಗಳು ಎಲ್ಲೆಲ್ಲೂ ಕಂಡುಬರುತ್ತಿವೆ.

## ಜನಸಾಮಾನ್ಯರು ಎಂದರೆ ಯಾರು ?

ಇದು ಸಾಮಾನ್ಯವಾಗಿ ಎಲ್ಲಾ ಸೇವಾಕ್ಷೇತ್ರಗಳೂ ಉಪಯೋಗಿಸುವ ಪದ. ಪ್ರಜಾಪ್ರಭುತ್ವದಲ್ಲಿ ಸರಕಾರ ಎಲ್ಲವನ್ನೂ ಜನಸಾಮಾನ್ಯರ ಹಿತದೃಷ್ಟಿಯಿಂದಲೇ ರೂಪಿಸಬೇಕಾಗುತ್ತದೆ. ಆದರೆ ಆರೋಗ್ಯ ಕ್ಷೇತ್ರದಲ್ಲಿನ ಬೆಳವಣಿಗೆಗಳು ಜನಸಾಮಾನ್ಯರಿಗೆ ತಲುಪುತ್ತಿವೆಯೇ ಎಂಬುದು ಮೂಲ ಪ್ರಶ್ನೆಯಾಗಿದೆ.

ಭಾರತದಲ್ಲಿ ಗ್ರಾಮೀಣ ಪ್ರದೇಶದಲ್ಲೇ ಹೆಚ್ಚಿನ ಜನರು (ಶೇಕಡ ೭೦) ವಾಸವಾಗಿದ್ದಾರೆ. ಅವರ ಸಮಸ್ಯೆಗಳು ಅನೈರ್ಮಲ್ಯ, ಅಪೌಷ್ಟಿಕತೆ. ಸಾಮಾಜಿಕ ಸಮಸ್ಯೆಗಳು – ಬಡತನ, ಅನಕ್ಷರತೆ, ಜಾತಿ ಪಂಗಡಗಳು ಇತ್ಯಾದಿ. ಮಹಿಳೆಯರ ಸಾಮಾಜಿಕ ಸ್ಥಾನಮಾನವಂತೂ ಚಿಂತಾಜನಕವಾಗಿದೆ. ವೃದ್ಧರು, ಅಂಗವಿಕಲರು, ಪರಿಶಿಷ್ಟ ಜಾತಿ ಪಂಗಡಗಳು, ಬಡಜನರು ಚಿಕಿತ್ಸೆಯಿಂದ ವಂಚಿತರಾಗಿದ್ದಾರೆ.

## ವೈದ್ಯಕೀಯ ರಂಗದಲ್ಲಿ ಜನಸಾಮಾನ್ಯರು ಗೌಣವಾಗುವುದಕ್ಕೆ ಕೆಲವು ಕಾರಣಗಳು :

### ಜನಪರ ಆರೋಗ್ಯ ನೀತಿ ಇಲ್ಲದಿರುವುದು

ವಿಶ್ವ ಆರೋಗ್ಯ ಸಂಸ್ಥೆಯ '೨೦೦೦ದ ಹೊತ್ತಿಗೆ ಎಲ್ಲರಿಗೂ ಆರೋಗ್ಯ' ಎಂಬ ಕರೆ ೧೯೭೭ರಲ್ಲಿ ಆಲ್ಮಾ ಆಟಾದಲ್ಲಿ ಘೋಷಣೆಯಾದ ನಂತರ ಭಾರತವೂ ಜನಾರೋಗ್ಯ ಸುಧಾರಿಸುವ ದಿಶೆಯಲ್ಲಿ ಪ್ರಯತ್ನ ಮಾಡಿತು. ೧೯೮೩ರ ಹೊತ್ತಿಗೆ ಭಾರತದ ಮೊಟ್ಟಮೊದಲನೆ ಆರೋಗ್ಯ ನೀತಿ ರೂಪುಗೊಂಡಿತು. ಹಾಗೂ ಅದರಲ್ಲಿ ಪ್ರಾಥಮಿಕ ಆರೋಗ್ಯ ಪಾಲನೆಗೆ ಒತ್ತು ನೀಡಲಾಯಿತು. ಇದರಿಂದಾಗಿ ದೇಶಾದ್ಯಂತ ಪ್ರಾಥಮಿಕ ಆರೋಗ್ಯ ಕೇಂದ್ರಗಳನ್ನು ತೆರೆಯಲಾಯಿತು. ಈ ಕೇಂದ್ರಗಳು ವಿಶ್ವ ಆರೋಗ್ಯ ಸಂಸ್ಥೆಯ ಎಂಟು ಅಂಶಗಳ ಪ್ರಾಥಮಿಕ ಆರೋಗ್ಯ ಪಾಲನೆಯ ಸೂತ್ರವನ್ನು ಅನುಸರಿಸಬೇಕಿತ್ತು. ಆದರೆ ಆ ಕಾರ್ಯಕ್ರಮ ಮಧ್ಯದಲ್ಲಿಯೇ ನಿಂತುಹೋಯಿತು! ಆ ಕಾರ್ಯಕ್ರಮ ಅನುಷ್ಠಾನಗೊಂಡಿದ್ದರೆ ಜನಾರೋಗ್ಯವನ್ನು ಸಾಕಷ್ಟು ಸುಧಾರಿಸಬಹುದಾಗಿತ್ತು.

### ಸರ್ಕಾರ ಆರೋಗ್ಯಕ್ಕಾಗಿ ವ್ಯಯಿಸುವ ಮೊತ್ತ ಕಡಿಮೆ

ವಿಶ್ವದ ಇತರೆ ದೇಶಗಳಿಗೆ ಹೋಲಿಸಿದರೆ ಭಾರತದಲ್ಲಿ ಆರೋಗ್ಯ ವೆಚ್ಚ ಅತಿ ಕಡಿಮೆ. ಆರೋಗ್ಯ ಕ್ಷೇತ್ರಕ್ಕೆ ಅಗತ್ಯವಿರುವ ಹಣಕಾಸಿನ ಸಹಾಯ ನೀಡದಿದ್ದರೆ ಜನಾರೋಗ್ಯ ಹೇಗೆ ತಾನೆ ಸಾಧಿಸಲು ಸಾಧ್ಯ? ಬಡತನ ವ್ಯಾಪಕವಾಗಿ ಕಂಡುಬರುವ ದೇಶದಲ್ಲಿ ಜನರು ತಮ್ಮ ಆರೋಗ್ಯವನ್ನು ತಾವೇ ಸುಧಾರಿಸಿಕೊಳ್ಳಲಿ ಎಂಬ ನೀತಿ ಇದ್ದಲ್ಲಿ ಜನಾರೋಗ್ಯ ಸುಧಾರಣೆ ಅಸಾಧ್ಯ. ಜನಾರೋಗ್ಯಕ್ಕೆ ಭಾರತ ಹಾಗೂ ಇತರೆ ದೇಶಗಳು ಮಾಡುತ್ತಿರುವ ಖರ್ಚನ್ನು ಕೆಳಗಿನ ಕೋಷ್ಟಕದಲ್ಲಿ ನೋಡಬಹುದು :

(ಶೇಕಡಾವಾರು)

| ದೇಶ | ಸರ್ಕಾರಿ ವೆಚ್ಚ | ಖಾಸಗಿ ವೆಚ್ಚ |
|---|---|---|
| ಇಂಗ್ಲೆಂಡ್ | ೯೬ | ೪ |
| ಕೆನಡಾ | ೭೨ | ೨೮ |
| ಇಥಿಯೋಪಿಯಾ | ೩೬ | ೬೪ |
| ಬರ್ಕಿನೋ ಫ್ಯಾಸೋ | ೩೧ | ೬೯ |
| ಕೆಮರೂನ್ | ೨೦ | ೮೦ |
| ಮ್ಯಾನ್‌ಮಾರ್ | ೧೬ | ೮೪ |
| ಭಾರತ | ೧೬ | ೮೪ |

ನಮ್ಮ ಸರ್ಕಾರ ಕೇವಲ ಶೇಕಡ ೧೬ರಷ್ಟು ಹಣವನ್ನು ಒಟ್ಟು ಆಂತರಿಕ ಉತ್ಪನ್ನದ ಆರೋಗ್ಯದ ಮೇಲೆ ಖರ್ಚುಮಾಡುತ್ತಿದ್ದು, ಸಾರ್ವಜನಿಕರು ಶೇಕಡ ೮೪ರಷ್ಟು ಹಣವನ್ನು ಖರ್ಚು ಮಾಡುತ್ತಾರೆ. ಅಂದರೆ ಜನಸಾಮಾನ್ಯರೇ ತಮ್ಮ ತಮ್ಮ ಆರೋಗ್ಯದ ಜವಾಬ್ದಾರಿ ತೆಗೆದುಕೊಳ್ಳಬೇಕಿದೆ. ಬಡ ದೇಶವಾದ ಬರ್ಕಿನೋ ಫ್ಯಾಸೋದ ಸರಕಾರ ಭಾರತಕ್ಕಿಂತಲೂ ಹೆಚ್ಚಿನ ಹಣವನ್ನು ಆರೋಗ್ಯಕ್ಕಾಗಿ ಖರ್ಚು ಮಾಡುತ್ತಿದೆ.

### ಜಾಗತೀಕರಣ, ಉದಾರೀಕರಣ, ಖಾಸಗೀಕರಣ ನೀತಿಗಳಿಂದಾಗಿ ಪ್ರಾಥಮಿಕ ಆರೋಗ್ಯ ಪಾಲನೆಯ ನಿರಾಕರಣೆ

೧೯೯೧ರ ವೇಳೆಗೆ ಜಗತ್ತಿನಾದ್ಯಂತ ಹೊಸ ಆರ್ಥಿಕ ನೀತಿಯನ್ನು ಜಾರಿಗೊಳಿಸಲಾಯಿತು ಹಾಗೂ ಆ ನೀತಿ ನಮಗೆ ಬೇಕಿಲ್ಲದಿದ್ದರೂ, ಅದನ್ನು ಒತ್ತಡ ತಂದು ಜಾರಿಗೊಳಿಸಲಾಯಿತು. ಅದುವೇ ಜಾಗತೀಕರಣ ನೀತಿ. ಈ ಸಮಯದಲ್ಲೇ ವಿಶ್ವ ಬ್ಯಾಂಕ್ ಆರೋಗ್ಯ ನೀತಿಯೊಂದನ್ನು ನಿರೂಪಿಸಿ ಸರಕಾರದ ಮೇಲೆ ಒತ್ತಡ ತಂದಿತು. ಈ ನೀತಿಯ ಮುಖ್ಯ ಉದ್ದೇಶ ಲಾಭ ಗಳಿಕೆ. ಆರೋಗ್ಯ ನೀತಿ ಲಾಭದಾಯಕವಾಗಿರ ಬೇಕೆಂಬುದು ಅರ್ಥಹೀನ. ಈ ನೀತಿಯಿಂದಾಗಿ ಆಯ್ದ ಪ್ರಾಥಮಿಕ ಆರೋಗ್ಯ ಪಾಲನೆಯನ್ನು ಜಾರಿಗೆ ತರಲು ಸಮಗ್ರ ಪ್ರಾಥಮಿಕ ಆರೋಗ್ಯ ಪಾಲನೆಯನ್ನು ಕೈಬಿಡಲಾಯಿತು. ಹೀಗೆ ಆರೋಗ್ಯ ನೀತಿಯ ಹಲವಾರು ವಿಷಯಗಳನ್ನು ಬದಲಾಯಿಸಲಾಯಿತು.

* ಮುಂಗಡ ಪತ್ರದಲ್ಲಿನ ಆರೋಗ್ಯ ವೆಚ್ಚವನ್ನು ಒಟ್ಟು ಆಂತರಿಕ ಉತ್ಪನ್ನದ ಶೇಕಡ ೧.೩ರಿಂದ ಶೇಕಡ ೦.೯ಕ್ಕೆ ಇಳಿಸಲಾಯಿತು.
* ನೈರ್ಮಲ್ಯಕ್ಕೆ ಮಾಡುತ್ತಿದ್ದ ವೆಚ್ಚವನ್ನು ಕಡಿಮೆ ಮಾಡಲಾಯಿತು.
* ಖಾಸಗೀಕರಣಕ್ಕೆ ಪ್ರೋತ್ಸಾಹ : ೨೦೦೨ರ ಆರೋಗ್ಯ ನೀತಿಯೂ ಹಿಂದಿನ ನೀತಿಯ ಲೋಪದೋಷಗಳನ್ನು ಒಪ್ಪುತ್ತಾ ಖಾಸಗೀಕರಣವನ್ನು ಪ್ರೋತ್ಸಾಹಿಸುತ್ತದೆ. ಇದು ಆರೋಗ್ಯ ನೀತಿಯ ವಿರೋಧಾಭಾಸವಾಗಿ ಕಾಣುತ್ತದೆ.
* ಪ್ರಾಥಮಿಕ ಆರೋಗ್ಯ ಕೇಂದ್ರಗಳು ಎಂಟು ಅಂಶದ ಆರೋಗ್ಯ ನೀತಿ ಅನುಸರಿಸುವುದರ ಬದಲು ಕೇವಲ ಚಿಕಿತ್ಸಾ ಕೇಂದ್ರಗಳಾಗಿವೆ. ಈ ಕೇಂದ್ರಗಳಲ್ಲಿ ಸಿಬ್ಬಂದಿ, ಔಷಧಿಗಳು, ಮೂಲಭೂತ ಸೌಕರ್ಯಗಳಾದ ಕಟ್ಟಡ, ಕುಡಿಯುವ ನೀರು, ಶೌಚಾಲಯ ಮುಂತಾದವುಗಳ ತೀವ್ರ ಕೊರತೆ ಕಂಡುಬಂದಿದೆ. ಈ ಕೇಂದ್ರಗಳಲ್ಲಿ ಇರುವ ಭ್ರಷ್ಟಾಚಾರ, ಇತ್ತೀಚೆಗೆ ವಿಧಿಸಿರುವ ಉಪಯೋಗ ಶುಲ್ಕ ಮುಂತಾದವುಗಳಿಂದಾಗಿ ಜನಸಾಮಾನ್ಯರು ಈ ಸೇವೆಗಳಿಂದ ವಂಚಿತರಾಗಿದ್ದಾರೆ. ಈ ಎಲ್ಲ ಕಾರಣಗಳಿಂದಾಗಿ ಭಾರತ '೨೦೦೦ದ ಹೊತ್ತಿಗೆ ಎಲ್ಲರಿಗೂ ಆರೋಗ್ಯ' ಎಂಬ ಗುರಿಯನ್ನು ಸಾಧಿಸಲೇ ಇಲ್ಲ.

### ನೈರ್ಮಲ್ಯ, ಪೌಷ್ಟಿಕ ಆಹಾರ ನೀತಿ ಕಡೆಗಣಿಸಲಾಗಿದೆ

ಆರೋಗ್ಯ ಸಾಧನೆಯಲ್ಲಿ ನೈರ್ಮಲ್ಯಕ್ಕೆ ಪ್ರಮುಖ ಪಾತ್ರವಿದೆ. ಇಲ್ಲಿಯವರೆಗೆ ನೈರ್ಮಲ್ಯ ಸಾಧನೆ ಸಮರ್ಪಕವಾಗಿಲ್ಲ, ಆದರೆ ಹೊಸ ಆರೋಗ್ಯ ನೀತಿಯಲ್ಲಿಯೂ ನೈರ್ಮಲ್ಯಕ್ಕೆ ಹೆಚ್ಚಿನ ಒತ್ತು ಕೊಡಲಾಗಿಲ್ಲ. ಇದರಿಂದಾಗಿ ೨೦೦೦ದಿಂದೀಚೆಗೆ ಭಾರತದಲ್ಲಿ ಸಾಂಕ್ರಾಮಿಕ ರೋಗಗಳು ಹೆಚ್ಚುತ್ತಿವೆ. ಉದಾಹರಣೆಗೆ : ಚಿಕೂನ್ ಗುನ್ಯಾ, ಡೆಂಘೀ, ಮೆದುಳು ಜ್ವರ, ಹೆಚ್೧ ಎನ್೧, ಮಲೇರಿಯಾ ಇತ್ಯಾದಿ.

ಆರೋಗ್ಯ ನೀತಿಯಲ್ಲಿ ಇನ್ನೊಂದು ಮುಖ್ಯ ಘಟಕ ಆರೋಗ್ಯ ನಿರ್ಧಾರಕಗಳು – ಪೌಷ್ಟಿಕ ಆಹಾರ, ನಮ್ಮ ದೇಶದಲ್ಲಿ ಆಹಾರ ಪದಾರ್ಥಗಳು ದುಬಾರಿ ಯಾಗುತ್ತಿವೆ. ಇದಕ್ಕೆ ಕಾರಣ ಕೃಷಿ ನೀತಿ ಜನಪರವಾಗಿಲ್ಲ ದಿರುವುದು. ಪೌಷ್ಟಿಕ ಆಹಾರದ ಕೊರತೆಯಿಂದ ಜನರು ರೋಗರುಜಿನ ಹಾಗೂ ಸಾವಿಗೆ ತುತ್ತಾಗುತ್ತಿದ್ದಾರೆ. ಈಗಿನ ದಿನಗಳಲ್ಲಿ ಒಂದೆಡೆ ರೈತರು ಆತ್ಮಹತ್ಯೆಗೆ ಮೊರೆ ಹೋಗುತ್ತಿದ್ದಾರೆ. ಇನ್ನೊಂದೆಡೆ ಗೋಡೌನ್‌ಗಳಲ್ಲಿ ಆಹಾರ ಧಾನ್ಯಗಳು ಕೊಳೆತುಹೋಗುತ್ತಿವೆ. ಈ ಕುರಿತು ಸರ್ಕಾರದ ನಿರ್ಲಕ್ಷ್ಯ ಎಷ್ಟು ಎಂಬುದನ್ನು ಊಹಿಸಲೂ ಸಾಧ್ಯವಾಗುತ್ತಿಲ್ಲ. ಸಾರ್ವಜನಿಕ ವಿತರಣಾ ವ್ಯವಸ್ಥೆಯು ಅಕ್ರಮಗಳಿಂದ ತುಂಬಿಹೋಗಿರುವುದರಿಂದ ನಿರೀಕ್ಷಿತ ಸೌಲಭ್ಯಗಳು ಜನರಿಗೆ ದೊರಕುತ್ತಿಲ್ಲ.

ಜನಸಾಮಾನ್ಯರ ಆರೋಗ್ಯದ ಚಿಂತಾಜನಕ ಸ್ಥಿತಿಯನ್ನು ಅಂಕಿ ಅಂಶಗಳಲ್ಲಿ ಇಲ್ಲಿ ಕಾಣಬಹುದು :

**ರಾಷ್ಟ್ರೀಯ ಕುಟುಂಬ ಆರೋಗ್ಯ ಸಮೀಕ್ಷೆ ೩**

(ಶೇಕಡಾವಾರು)

| | | |
|---|---|---|
| ಲಸಿಕೆ | ಗ್ರಾಮೀಣ ಪ್ರದೇಶದಲ್ಲಿ | ೫೨ |
| | ಪಟ್ಟಣ ಪ್ರದೇಶದಲ್ಲಿ | ೬೦ |
| ಶಿಶುಮರಣ ಸಂಖ್ಯೆ | ಗ್ರಾಮೀಣ ಪ್ರದೇಶದಲ್ಲಿ | ೪೦ |
| | ಪಟ್ಟಣ ಪ್ರದೇಶದಲ್ಲಿ | ೫೭ |
| ರಕ್ತಹೀನತೆ | ಗ್ರಾಮೀಣ ಪ್ರದೇಶದಲ್ಲಿ | ೬೫.೬ |
| | ಪಟ್ಟಣ ಪ್ರದೇಶದಲ್ಲಿ | ೪೮.೦ |

ಈಗಲೂ ಭಾರತದಲ್ಲಿ ಶ್ರೀಮಂತ/ಬಡವ, ಗ್ರಾಮೀಣ / ಪಟ್ಟಣ / ಮೇಲ್ಜಾತಿ / ಕೆಳ ಜಾತಿಯವರ ಆರೋಗ್ಯ ಸ್ಥಿತಿಗತಿಗಳು ವಿವಿಧ ಬಗೆಯವು. ಸ್ವಾತಂತ್ರ್ಯ ಬಂದ ೬೩ ವರ್ಷಗಳ ನಂತರವೂ ಆರೋಗ್ಯ ನೀತಿಯಲ್ಲಿ ಸಮಾನತೆ ಇಲ್ಲದಿರುವುದು ಶೋಚನೀಯ.

## ಖಾಸಗೀ ಕ್ಷೇತ್ರದ ಅಪಾರ ಬೆಳವಣಿಗೆ

೧೯೯೧ರಿಂದೀಚೆಗೆ ಆರೋಗ್ಯ ಕ್ಷೇತ್ರದ ಖಾಸಗಿ ನರ್ಸಿಂಗ್ ಹೋಮ್‌ಗಳು, ಆಸ್ಪತ್ರೆಗಳು, ರೋಗ ನಿದಾನ ಕೇಂದ್ರಗಳು, ಕಾರ್ಪೊರೇಟ್ ಆಸ್ಪತ್ರೆಗಳು ವೇಗವಾಗಿ ಬೆಳೆಯುತ್ತಿವೆ. ಈ ಕೇಂದ್ರಗಳು ವಿದೇಶೀ ಉಪಕರಣಗಳನ್ನು ಆಮದು ಮಾಡಿಕೊಳ್ಳಲು ಸರಕಾರ ಕರ ರಿಯಾಯಿತಿ ನೀಡುತ್ತಿದೆ. ಖಾಸಗಿ ಆಸ್ಪತ್ರೆಗಳು ಬೇರೆ ದೇಶದ ಜನರಿಗೆ ಕಡಿಮೆ ದರದಲ್ಲಿ ಚಿಕಿತ್ಸೆ ನೀಡುತ್ತಿರುವುದರಿಂದ ವೈದ್ಯಕೀಯ ಪ್ರವಾಸೋದ್ಯಮ ಬೆಳೆಯುತ್ತಲಿದೆ. ಈ ಕೇಂದ್ರಗಳು ಉಚಿತ/ಕಡಿಮೆ ದರದಲ್ಲಿ ಭೂಮಿ, ವಿದ್ಯುತ್, ನೀರು ಪಡೆಯಲು ಬಡಜನರಿಗೆ ಉಚಿತ ಚಿಕಿತ್ಸೆ ನೀಡುತ್ತೇವೆಂದು ಹೇಳುತ್ತ ಸರ್ಕಾರದಿಂದ ಎಲ್ಲ ಸವಲತ್ತುಗಳನ್ನು ಪಡೆಯುತ್ತಿವೆ, ಆದರೆ ಯಾವ ಉಚಿತ ಚಿಕಿತ್ಸೆಯನ್ನೂ ನೀಡುತ್ತಿಲ್ಲ. ಈ ಕೇಂದ್ರಗಳು ಯಾವ ಹತೋಟಿಗೂ ಒಳಪಡದೆ ಇರುವುದರಿಂದ ಇಲ್ಲಿಯ ಕಾರ್ಯವೈಖರಿ ಅಸಮರ್ಪಕ.

ಈ ಕೇಂದ್ರಗಳಲ್ಲಿ ಚಿಕಿತ್ಸೆ ದುಬಾರಿ, ಅನಗತ್ಯ ಪರೀಕ್ಷೆ ಹಾಗೂ ಚಿಕಿತ್ಸೆಗಳು ಸಾಮಾನ್ಯ. ಈ ಕೇಂದ್ರಗಳಲ್ಲಿ ಕೇವಲ ಶ್ರೀಮಂತರು ಚಿಕಿತ್ಸೆ ಪಡೆಯಲು ಸಾಧ್ಯ ಅಷ್ಟೆ. ಇಲ್ಲಿ ಕೇವಲ ಗುಣಪಡಿಸಬಹುದಾದ ಚಿಕಿತ್ಸೆಗಳಿಗೆ ಮಹತ್ವ ಕೊಡಲಾಗುವುದು, ನಿವಾರಕ ಪ್ರಕ್ರಿಯೆಗಲ್ಲ. ಈ ಎಲ್ಲ ಕಾರಣಗಳಿಂದಾಗಿ ಜನಸಾಮಾನ್ಯರನ್ನು ಕಡೆಗಣಿಸುವ ಈ ಚಿಕಿತ್ಸಾ ಕೇಂದ್ರಗಳು ಸರಕಾರಿ ಕೇಂದ್ರಗಳಿಗೆ ಪರ್ಯಾಯವಲ್ಲ ಎಂಬುದು ಸ್ಪಷ್ಟ.

## ಔಷಧಿ ನೀತಿ ಉದ್ಯೋಗಪರ - ಜನಪರ ಅಲ್ಲ

ಚಿಕಿತ್ಸೆಯಲ್ಲಿ ಅಗತ್ಯ ಔಷಧಿಗಳು ಪ್ರಮುಖ ಪಾತ್ರ ವಹಿಸುತ್ತಿವೆ. ಜನಾರೋಗ್ಯ ಸಾಧನೆಗೆ ೧೯೭೭ರಲ್ಲಿ ವಿಶ್ವ ಆರೋಗ್ಯ ಸಂಸ್ಥೆಯು ಅಗತ್ಯ ಔಷಧಿಗಳ ಪಟ್ಟಿಯೊಂದನ್ನು ಬಿಡುಗಡೆ ಮಾಡಿ, ಆ ಪಟ್ಟಿಯ ಆಧಾರದ ಮೇಲೆ ಆಯಾ ದೇಶಗಳ ಅಗತ್ಯ ಔಷಧಿ ಪಟ್ಟಿಯನ್ನು ತಯಾರಿಸಿ ಅವುಗಳನ್ನು ಬಳಸಲು ಎಲ್ಲ ದೇಶಗಳಿಗೆ ಕರೆ ನೀಡಿತು.

೧೯೯೬ರವರೆಗೆ ಭಾರತ ಸರ್ಕಾರ ಅಗತ್ಯ ಔಷಧಿ ಪಟ್ಟಿಯನ್ನು ತಯಾರಿಸಲೇ ಇಲ್ಲ. ಆ ನಂತರ ಅಗತ್ಯ ಔಷಧಿ ಪಟ್ಟಿಯನ್ನು ತಯಾರಿಸಿದರೂ, ಅಗತ್ಯ ಔಷಧಿಗಳು ಮಾರುಕಟ್ಟೆಯಲ್ಲಿ ದೊರಕುತ್ತಿಲ್ಲ. ಮಾರುಕಟ್ಟೆಯಲ್ಲಿ ದೊರಕುವ ಹೆಚ್ಚಿನ ಔಷಧಿಗಳು ಅನಗತ್ಯ ಔಷಧಿಗಳಷ್ಟೆ.

**ಮಾರುಕಟ್ಟೆಯಲ್ಲಿ ದೊರಕುವ ಅನಗತ್ಯ ಔಷಧಿಗಳು :**

| | |
|---|---|
| ಟಾನಿಕ್‌ಗಳು | ಹಸಿವು ಹೆಚ್ಚಿಸುವ |
| ಕೆಮ್ಮಿನ ದ್ರಾವಣಗಳು | ಔಷಧಿಗಳು |
| ಸಂಮಿಶ್ರ ಔಷಧಿಗಳು | ಜೀರ್ಣಶಕ್ತಿ ಹೆಚ್ಚಿಸುವ |
| ವಿಟಮಿನ್‌ಗಳು | ಔಷಧಿಗಳು |
| ನೆಗಡಿ ನಿವಾರಣೆಗಳು | ನೆನಪಿನ ಶಕ್ತಿ ಹೆಚ್ಚಿಸುವ |
| | ಔಷಧಿಗಳು |
| | ಮಿದುಳಿನ ಟಾನಿಕ್‌ಗಳು |

ಅನಗತ್ಯ ಔಷಧಿಯಿಂದ ಚಿಕಿತ್ಸೆ ದುಬಾರಿ ಹಾಗೂ ಹೆಚ್ಚು ಅಡ್ಡಪರಿಣಾಮಗಳು ಸಂಭವಿಸುತ್ತವೆ. ಅಗತ್ಯ ಔಷಧಿಗಳು ಜನರ ಅಗತ್ಯತೆಗಳನ್ನು ಪೂರೈಸುತ್ತವೆ. ಆದರೆ ಅನಗತ್ಯ ಔಷಧಿಗಳು ಔಷಧಿ ಕಂಪನಿಗಳ ಲಾಭ ಹೆಚ್ಚಿಸುತ್ತವೆ! ಇಂದು ಔಷಧಿ ಉದ್ಯಮಗಳು ಅತಿ ಹೆಚ್ಚು ಲಾಭ ಮಾಡುತ್ತಿವೆ. ಇತರ ಉದ್ಯಮಗಳಿಗೆ ಹೋಲಿಸಿದರೆ ಈ ಉದ್ಯಮದಲ್ಲಿ ಲಾಭ ಹೆಚ್ಚು:

| | (ಶೇಕಡಾವಾರು) |
|---|---|
| ಔಷಧಿ ಉದ್ಯಮ | ೧೪.೭ - ೧೮.೩ |
| ಕಂಪ್ಯೂಟರ್ ಕ್ಷೇತ್ರ | ೪.೯ - ೬ |
| ಪೆಟ್ರೋಲಿಯಂ | ೪ |
| ತಂಬಾಕು | ೮ |
| ಆರೋಗ್ಯ ಉದ್ಯಮ | ೧.೯ - ೨.೮ |
| ಬ್ಯಾಂಕ್ | ೦.೬ - ೫.೪ |

ಅಗತ್ಯ ಔಷಧಿಗಳೆಂದರೆ ವೈಜ್ಞಾನಿಕವಾಗಿ ರುಜುವಾತಾಗಿರುವ ಕಡಿಮೆ ಅಡ್ಡಪರಿಣಾಮಗಳುಳ್ಳ, ಕಡಿಮೆ ಬೆಲೆಯ ಸುಲಭವಾಗಿ ದೊರಕುವ ಔಷಧಿಗಳು. ಈ ಔಷಧಿಗಳು ಸುಮಾರು ಶೇಕಡ ೯೦ರಷ್ಟು ದಿನನಿತ್ಯದ ಆರೋಗ್ಯ ಸಮಸ್ಯೆಗಳನ್ನು ಸರಿಪಡಿಸುವ ಸಾಮರ್ಥ್ಯ ಹೊಂದಿವೆ. ವಿಶ್ವ ಆರೋಗ್ಯ ಸಂಸ್ಥೆಯ ಪ್ರಕಾರ ಈ ಅಗತ್ಯ ಔಷಧಿಗಳ ಸಂಖ್ಯೆ ಸುಮಾರು ೩೫೦ ಮಾತ್ರ. ಆದರೆ ಭಾರತದಲ್ಲಿ ದೊರಕುವ ಒಟ್ಟು ಔಷಧಿಗಳ ಸಂಖ್ಯೆ ಸುಮಾರು ೭೦,೦೦೦ !

ಭಾರತೀಯ ಸಾರ್ವಜನಿಕ ಔಷಧಿ ಉದ್ಯಮ ಅಗತ್ಯ ಔಷಧಿಗಳನ್ನು ತಯಾರಿಸುತ್ತಿತ್ತು. ಇದೀಗ ಈ ಉದ್ಯಮ ಮುಚ್ಚಿಹೋಗುವ ಹಂತದಲ್ಲಿದೆ. ಆದರೆ ಅನಗತ್ಯ ಔಷಧಿಗಳನ್ನು ತಯಾರಿಸುವ ಬಹುರಾಷ್ಟ್ರೀಯ ಕಂಪನಿಗಳು ಭಾರತದ ಔಷಧಿ ಉದ್ಯಮದ ಮುಂದಾಳತ್ವ ವಹಿಸಿವೆ. ಇದರ ಪರಿಣಾಮವಾದ ಅಗತ್ಯ ಔಷಧಿಗಳ ಕೊರತೆಯಿಂದಾಗಿ ಶೇಕಡ ೯೦ರಷ್ಟು ಜನರ ದಿನನಿತ್ಯದ ಅಗತ್ಯತೆಗಳನ್ನು ಕಡೆಗಣಿಸಿದಂತಾಗಿದೆ. ೧೯೭೮ರಲ್ಲಿ ಭಾರತ ಸರಕಾರ ಜನರ ಅಗತ್ಯತೆಗೆ ಸ್ಪಂದಿಸುತ್ತ ಔಷಧಿ ಬೆಲೆಗಳನ್ನು ನಿಯಂತ್ರಣದಲ್ಲಿಟ್ಟಿತ್ತು. ಆದರೆ ಭಾರತದ ಔಷಧಿ ನೀತಿ ಕ್ರಮೇಣ ಉದ್ಯಮಪರವಾಗಿರುವುದರಿಂದ ನಿಯಂತ್ರಣದಲ್ಲಿರುವ ಔಷಧಿಗಳ ಸಂಖ್ಯೆ ಕಡಿಮೆಯಾಗಿರುವುದನ್ನು ಈ ಕೆಳಗಿನ ಕೋಷ್ಟಕದಿಂದ ನೋಡಬಹುದಾಗಿದೆ :

| | |
|---|---|
| ೧೯೭೮ | ೩೭೮ |
| ೧೯೮೬ | ೧೬೬ |
| ೧೯೯೪ | ೭೪ |
| ೨೦೦೨ | ೨೫೩ |

ಔಷಧಿ ಉದ್ಯಮ ಜನಸಾಮಾನ್ಯರ ಅಗತ್ಯತೆಯ ಬಗ್ಗೆ ತಲೆಕೆಡಿಸಿಕೊಳ್ಳುವುದೇ ಇಲ್ಲ. ಅಷ್ಟೇಕೆ, ಜನಾರೋಗ್ಯ ಅದರ ಮುಖ್ಯ ಉದ್ದೇಶವೇ ಅಲ್ಲ. ಅದರ ಮುಖ್ಯ ಉದ್ದೇಶ ವಿಜ್ಞಾನದ ಆವಿಷ್ಕಾರಗಳನ್ನು ತಮ್ಮ ಲಾಭಕ್ಕಾಗಿ ಬಳಸಿಕೊಳ್ಳುವುದೇ ಆಗಿದೆ. ಔಷಧಿ ನಿಯಂತ್ರಣ ಮಂಡಳಿಗೆ ಇದು ಗೊತ್ತಿದ್ದರೂ ಗೊತ್ತಿಲ್ಲದಂತೆ ಸುಮ್ಮನಿದೆ! ಇವೆಲ್ಲದಕ್ಕೂ ಕಾರಣ, ಸರಕಾರಕ್ಕೆ ಇಚ್ಛಾಶಕ್ತಿ ಇಲ್ಲದಿರುವುದು.

## ಔಷಧಿ ಪೇಟೆಂಟ್ ಜನಸಾಮಾನ್ಯರಿಗೆ ಶಾಪವಾಗಲಿದೆ !

೨೦೦೫ರಲ್ಲಿ ನಾವು ಭಾರತೀಯ ಪೇಟೆಂಟ್ ಕಾನೂನಿಗೆ ಮೂರನೇ ಪೇಟೆಂಟ್ ತಿದ್ದುಪಡಿಯನ್ನು ತಂದು ಔಷಧಿ ಉತ್ಪಾದನಾ ವಿಧಾನದ ಪೇಟೆಂಟನ್ನು ವಸ್ತು ಪೇಟೆಂಟಿಗೆ ಬದಲಿಸಿದ್ದೇವೆ – ಅಂತರರಾಷ್ಟ್ರೀಯ ಒತ್ತಡದಿಂದ. ಇಲ್ಲಿಯವರೆಗೆ ನಾವು ಉಪಯೋಗಿಸುತ್ತಿರುವ ಔಷಧಿಗಳು ದಿನೇ ದಿನೇ ದುಬಾರಿಯಾಗುತ್ತಿವೆ. ಆದರೆ ಇನ್ನು ಮುಂದೆ ಹೊಸದಾಗಿ ಬಂದ ಔಷಧಿಗಳು ಬಹಳ ದುಬಾರಿಯಾಗಲಿವೆ. ಭಾರತ ಇನ್ನೂ ಹೊಸ ಔಷಧಿಗಳನ್ನು ತಯಾರಿಸುವ ಪರಿಸ್ಥಿತಿಯಲ್ಲಿರದಿದ್ದುದರಿಂದ, ಮುಂಬರುವ ಎಲ್ಲ ಔಷಧಿಗಳನ್ನು ವಿಪರೀತ ಹಣ (ರಾಯಲ್ಟಿ) ಕೊಟ್ಟು ಕೊಂಡುಕೊಳ್ಳಬೇಕಾಗಿರುವುದರಿಂದ ಅವು ದುಬಾರಿಯಾಗಲಿವೆ. ಈ ಪರಿಸ್ಥಿತಿಗೆ ಮುಖ್ಯ ಕಾರಣ ಭಾರತ ಸರಕಾರವು - ಜನರ ಅಗತ್ಯತೆಗಳನ್ನು ಕಡೆಗಣಿಸುತ್ತಿರುವುದು ಹಾಗೂ ಅಂತರರಾಷ್ಟ್ರೀಯ ಒತ್ತಡಕ್ಕೆ ಮಣಿಯುತ್ತಿರುವುದು.

ಜನರಿಗೆ ಆರೋಗ್ಯದ ಬಗ್ಗೆ ಅಗತ್ಯ ಮಾಹಿತಿ ನೀಡುವ ಸಾಹಿತ್ಯ ರಚನೆಯಾಗಿಲ್ಲ. ದಿನಪತ್ರಿಕೆಗಳು ಜನಾರೋಗ್ಯ ಸಮಸ್ಯೆಗಳ ಬಗ್ಗೆ ಸಂಪೂರ್ಣ ನಿರ್ಲಕ್ಷ್ಯ ತೋರಿಸಿವೆ. ಈಗಾಗಲೇ ಆರೋಗ್ಯದ ಬಗ್ಗೆ ಜನರಲ್ಲಿ ಹಲವಾರು ಮೂಢನಂಬಿಕೆಗಳು ತಾಂಡವವಾಡುತ್ತಿವೆ. ಈ ಎಲ್ಲ ಕಾರಣಗಳಿಂದ ವೈದ್ಯಕೀಯ ರಂಗದಲ್ಲಿ ಜನಸಾಮಾನ್ಯರು ಗೌಣವಾಗುತ್ತಿರುವುದು ಸ್ಪಷ್ಟವಾಗುತ್ತದೆ. ಈ ಸಮಸ್ಯೆಯನ್ನು ಮೌನವಾಗಿ ನೋಡುತ್ತಿರುವುದರ ಬದಲು ಈ ವೈದ್ಯಕೀಯ ವ್ಯವಸ್ಥೆಯನ್ನೇ ಬದಲಿಸುವ ದಿಶೆಯಲ್ಲಿ ಜನಸಾಮಾನ್ಯರು, ಸರಕಾರ ಹಾಗೂ ವೈದ್ಯರು ಪ್ರಾಮಾಣಿಕ ಪ್ರಯತ್ನ ಮಾಡಬೇಕಿದೆ. ಈ ಎಲ್ಲ ಕಾರಣಗಳಿಂದಲೂ ಜನಸಾಮಾನ್ಯರು ಗೌಣವಾಗುತ್ತಿದ್ದಾರೆ.

**ಡಾ|| ಪ್ರಕಾಶ್ ಸಿ.ರಾವ್**
ಸಂಪಾದಕರು, 'ಜನಾರೋಗ್ಯ' ಆರೋಗ್ಯ ಮಾಸಪತ್ರಿಕೆ. ಅಪರ್ಣ ಕ್ಲಿನಿಕ್
# ೧೯೯೪, ೫ನೇ ಅಡ್ಡರಸ್ತೆ, ೫ನೇ ಮುಖ್ಯರಸ್ತೆ, ಯಶವಂತಪುರ
ಬೆಂಗಳೂರು - ೫೬೦ ೦೨೨



■ ಎಸ್. ಎಸ್. ರಘುನಾಥ್

# ವಿದೇಶಿ ವಿಶ್ವವಿದ್ಯಾನಿಲಯಗಳು ನಮಗೆ ಬೇಕೆ? ಅವನ್ನು ಆಹ್ವಾನಿಸಲು ಇದು ಸಮಯವೇ?

ಉದಾರನೀತಿ ಇರುವ ದೇಶ, ವಿದೇಶಗಳೊಡನೆ ವಾಣಿಜ್ಯ, ತಾಂತ್ರಿಕ ಮತ್ತು ವೈಜ್ಞಾನಿಕ ಸಂಶೋಧನೆಗಳಲ್ಲಿ ನಿಕಟ ಸಂಪರ್ಕ ಇಟ್ಟುಕೊಂಡಿರುವ ಯಾವುದೇ ಮೂರನೇ ಜಗತ್ತಿನ ದೇಶಕ್ಕೆ ಮುಂದುವರಿದ ದೇಶಗಳಿಂದ ವಿಶ್ವವಿದ್ಯಾನಿಲಯಗಳು ಬಂದು ಆ ದೇಶದ ವಿದ್ಯಾಭ್ಯಾಸದಲ್ಲಿ ಭಾಗವಹಿಸಿ ಅದರ ಮಟ್ಟವನ್ನು ಏರಿಸುವುದಾದರೆ ಅದನ್ನು ಬೇಡ ಎನ್ನುವುದು ಅಷ್ಟು ಸಾಧುವಲ್ಲ. ಅಧ್ಯಕ್ಷ ಒಬಾಮ ಏನೇ ಹೇಳಿದರೂ ಭಾರತ ಈಗಲೂ ಮೂರನೇ ಜಗತ್ತಿನಲ್ಲಿರುವ ದೇಶಗಳಲ್ಲಿ ಒಂದು. ಈಗಲೂ ಈ ದೇಶದಲ್ಲಿ ನಮ್ಮ ವಿಶ್ವವಿದ್ಯಾಲಯಗಳ ಪದವಿಗಳಿಗಿಂತ ಯೂರೋಪ್ ಮತ್ತು ಅಮೆರಿಕಾ ದೇಶಗಳ ಪದವಿಗಳಿಗೆ ಹೆಚ್ಚು ಗೌರವವಿರುವುದು ವಾಸ್ತವ. ನಾವೇ ಅವನ್ನು ಪೋಷಿಸುತ್ತಿದ್ದೇವೆ. ಆದುದರಿಂದ ನಮ್ಮ ವಿದ್ಯಾರ್ಥಿಗಳು ಅಪಾರ ಖರ್ಚಿನಲ್ಲಿ ವಿದೇಶಕ್ಕೆ ಹೋಗಿ ಪದವಿ ಗಳಿಸುವ ಸನ್ನಿವೇಶ ಬದಲಿಸಿ ವಿಶ್ವವಿದ್ಯಾಲಯಗಳೇ ಇಲ್ಲಿಗೆ ಬರುವುದಾದರೆ ಅವು ಪ್ರತಿಭಾವಂತ ವಿದ್ಯಾರ್ಥಿಗಳಿಗೆ ಉತ್ತಮ ಅವಕಾಶ ಸೃಷ್ಟಿಸಿ ಆರ್ಥಿಕವಾಗಿ ಅವರ ಮೇಲಿನ ಭಾರ ಕಡಿಮೆ ಮಾಡಲು ಅನುಕೂಲವಾಗುತ್ತದೆ ಎನ್ನುವ ವಾದವೂ ಇದೆ. ಇದಕ್ಕೆ ಇನ್ನೂ ಕೆಲವು ಅಂಶಗಳನ್ನು ಸೇರಿಸಬಹುದು. ಈ ವಿಶ್ವವಿದ್ಯಾಲಯಗಳಲ್ಲಿ ಹೆಚ್ಚು ಜನ ಯೂರೋಪ್ ಅಥವಾ ಅಮೆರಿಕಾದ ಪದವಿಗಳಿರುವವರು ಪ್ರಾಧ್ಯಾಪಕರುಗಳಾಗಿರಲು ಸಾಧ್ಯವಿದೆ. ಇದರಿಂದ ಪಾಠಕ್ರಮದ ಮಟ್ಟ ಹೆಚ್ಚಾಗಿ ನಮ್ಮ ವಿದ್ಯಾರ್ಥಿಗಳಿಗೆ ಒಳ್ಳೆಯ ವಿದ್ಯಾಭ್ಯಾಸ ಸಿಗಬಹುದಾದ ಅವಕಾಶ ನಿರ್ಮಿತವಾಗುತ್ತದೆ ಎನಿಸುತ್ತದೆ. ಇರಬಹುದು, ಆದರೆ ಈ ವಿಶ್ವವಿದ್ಯಾಲಯಗಳ ಫೀ ಎಷ್ಟಿರುತ್ತದೆ ಎನ್ನುವುದು ಇನ್ನೂ ಊಹೆಯ ವಿಷಯವಾಗಿದೆ.

ಮೇಲೆ ಹೇಳಿದಂತೆ ಆಗುವುದಾದರೆ, ನಮ್ಮ ವಿದ್ಯಾರ್ಥಿಗಳಿಗೆ ತುಂಬ ಒಳ್ಳೆಯದಾಗುತ್ತದೆ, ಆದರೆ ಹಾಗೆ ಆಗುವ ಸಾಮಾಜಿಕ ಮತ್ತು ವಿದ್ಯಾಭ್ಯಾಸದ ವಾತಾವರಣ ನಮ್ಮಲ್ಲಿ ಇದೆಯೆ ಎನ್ನುವ ಪ್ರಶ್ನೆಗೆ ನಾವು ಈಗ ಖಚಿತವಾಗಿ ಉತ್ತರ ಕೊಡಲು ಸಾಧ್ಯವಿಲ್ಲ. ಈಗಿರುವ ವಿಶ್ವವಿದ್ಯಾಲಯಗಳಲ್ಲಿ ಇದಕ್ಕೆ ಪೂರಕವಾದ ವಾತಾವರಣ ಖಂಡಿತವಾಗಿ ಇಲ್ಲ. ಇದು ಮುಖ್ಯ ವಿಷಯ. ನಮ್ಮಲ್ಲಿ ವಿಶ್ವವಿದ್ಯಾಲಯಕ್ಕೆ

ವಿಶ್ವಗ್ರಾಮವಾಗಿರುವ ಈ ಜಗತ್ತಿನಲ್ಲಿ ಒಂದು ದೇಶ ನಮ್ಮಲ್ಲಿ ವಿಶ್ವವಿದ್ಯಾಲಯ ಆರಂಭಿಸುತ್ತೇವೆ ಎಂದಾಗ ಬೇಡ ಎನ್ನುವುದು ಸರಿಯಾಗಲಾರದು. ಆದರೆ ಅದು ಸಾಧ್ಯವಾಗುವ ವಾತಾವರಣ ನಮ್ಮಲ್ಲಿ ಸೃಷ್ಟಿಯಾಗಬೇಕು. ಬೇರೆ ಕ್ಷೇತ್ರದಿಂದ, ಉದಾಹರಣೆ ಕೊಡುವುದಾದರೆ, ಉಕ್ಕಿನ ಕೈಗಾರಿಕಾ ಕ್ಷೇತ್ರವನ್ನು ನೋಡಬಹುದು. ಇಲ್ಲಿಗೆ ಬರುವ ಯಾವುದೇ ಉದ್ಯಮಿ ಟಾಟಾ ಅಥವಾ ಮಿತ್ತಲ್ ಇವರ ಜೊತೆ ಸ್ಪರ್ಧಿಸಬೇಕು. ನಮ್ಮ ವಿಶ್ವವಿದ್ಯಾಲಯಗಳೂ ಆ ಮಟ್ಟಕ್ಕೆ ಬರುವವರೆಗೂ ಕಾಯಬೇಕು. ಇಲ್ಲದಿದ್ದಲ್ಲಿ ನಮ್ಮ ವಿಶ್ವವಿದ್ಯಾಲಯಗಳಿಗೆ ಹಾನಿಯಾಗಬಹುದು. ಈಗ ವಿದೇಶಿ ವಿಶ್ವವಿದ್ಯಾಲಯಗಳು ನಮಗೆ ಬೇಡ. ಅವನ್ನು ಆಹ್ವಾನಿಸುವುದಕ್ಕೆ ಇದು ಸಮಯವೂ ಅಲ್ಲ.

ಕುಲಪತಿಗಳು ವೈಯಕ್ತಿಕ ಪ್ರತಿಭೆಯಿಂದ ನೇಮಕವಾಗುವುದು ಬಹಳ ವಿರಳ. ಶೇಕಡ ೮೦ರಷ್ಟು ಕುಲಪತಿಗಳು ಆ ಸ್ಥಾನಕ್ಕೆ ನೇಮಕವಾಗುವುದಕ್ಕೆ ಮೊದಲೇ ಭ್ರಷ್ಟರಾಗಿರುತ್ತಾರೆ. ನಮ್ಮ ರಾಜಕಾರಣಿಗಳು ಅಂಥ ಭ್ರಷ್ಟರನ್ನೇ ಹುಡುಕಿ ಆರಿಸುತ್ತಾರೆ. ಈಗ ಇರುವ ೨೧ ಕುಲಪತಿಗಳಲ್ಲಿ ಎಷ್ಟು ಜನ ಶುದ್ಧ ಚರಿತ್ರೆ ಇರುವವರು ಎನ್ನುವುದನ್ನು ಬೆರಳಿನಲ್ಲಿ ಎಣಿಸಬಹುದು. ರಾಜಕಾರಣಿಗಳಿಗೆ ಇವರು ಲಕ್ಷ / (ಕೋಟಿ ?)ಗಟ್ಟಲೆ ಹಣ ಕೊಟ್ಟು ಕುರ್ಚಿಯನ್ನು ಕೊಂಡುಕೊಂಡಿರುತ್ತಾರೆ. ಜಾತಿಯೂ ಅಷ್ಟೇ ಪ್ರಭಾವ ಬೀರಿರುತ್ತದೆ ಎನ್ನುವ ವಿಷಯ ನಮಗೆ ತಿಳಿಯದಿರುವುದೇನಲ್ಲ. ಈ ಹಣವನ್ನು ವಾಪಸ್ ಪಡೆಯಲು ಅವರು ಭ್ರಷ್ಟಮಾರ್ಗವನ್ನು ಮುಂದುವರಿಸುತ್ತಾರೆ. ಹೌದು, ಆದರೆ ಬಹಳ ಜನ ಭ್ರಷ್ಟತೆಯನ್ನು ತಮ್ಮ ಬದುಕಿನ ಭಾಗವಾಗಿ ಮಾಡಿಕೊಂಡಿರುವವರು, ಸಂವಿಧಾನ ಸೃಷ್ಟಿಸಿರುವ ವ್ಯವಸ್ಥೆಯನ್ನು, ಕಾನೂನನ್ನು ಸಿನಿಕತನದಿಂದ ಕಂಡು ಅದರ ಲಾಭವನ್ನು ಪಡೆಯಲೆಂದೇ ಬಂದಿರುವವರು ಇದ್ದಾರೆ. ಮೈಸೂರು ವಿಶ್ವವಿದ್ಯಾನಿಲಯದಲ್ಲಿ ೨೦೦೪-೦೭ರ ಅವಧಿಯಲ್ಲಿ ಡಾ॥ ಶಶಿಧರ ಪ್ರಸಾದ್ ಅವರು ಕುಲಪತಿಗಳಾಗಿದ್ದಾಗ ನಡೆದಿವೆಯೆನ್ನಲಾದ ಕಾನೂನು ಬಾಹಿರ ನೇಮಕಾತಿಗಳ ಬಗ್ಗೆ ನ್ಯಾಯಮೂರ್ತಿ ರಂಗವಿಠಲಾಚಾರ್ ಅವರ ೫೬೫ ಪುಟಗಳ ವಿಚಾರಣಾ ವರದಿ ಇದೆ. ಅವರ ಮೇಲಿದ್ದ ಎಲ್ಲ ಆಪಾದನೆಗಳಲ್ಲೂ ಡಾ॥ ಶಶಿಧರ ಪ್ರಸಾದ್ ಅವರನ್ನು ತಪ್ಪಿತಸ್ಥ ಎಂದು ಆರೋಪಿಯ ಸ್ಥಾನದಲ್ಲಿ ನಿಲ್ಲಿಸಲಾಗಿದೆ. ಇಂಥ ವಾತಾವರಣದಲ್ಲಿ ಬೆಳೆಯುವ ವಿದ್ಯಾರ್ಥಿಗಳು ಲಂಚ ಕೊಡುವುದು ಮತ್ತು ಜಾತಿಯನ್ನು ಮುಂದಿಟ್ಟುಕೊಂಡು ಅಂಕ ಪಡೆಯುವುದು ವಿಶ್ವವಿದ್ಯಾಲಯದ ನೀತಿ ಮತ್ತು ಸಮಾಜ ಒಪ್ಪಿಕೊಂಡಿರುವ ಮಾರ್ಗ ಎಂದು ತಿಳಿದರೆ ಅದು ಅವರ ತಪ್ಪಲ್ಲ. ಇಂತಹ ವಾತಾವರಣದಲ್ಲಿ ವಿದೇಶಿ ವಿಶ್ವವಿದ್ಯಾಲಯಗಳು ಬಂದರೆ ಅವು ಹೇಗೆ ರೂಪುಗೊಳ್ಳುತ್ತವೆ ಎನ್ನುವುದು ನಮ್ಮ ಕಲ್ಪನೆಗೆ ನಿಲುಕದ ಪ್ರಶ್ನೆಯಲ್ಲ. ಆದರ್ಶಗಳ ಮತ್ತು ಉನ್ನತ ಸಿದ್ಧಾಂತಗಳ ಬಗ್ಗೆ ಸಿನಿಕತನ ಇರುವ ಹಲವಾರು ವಿಶ್ವವಿದ್ಯಾಲಯಗಳ ಮಧ್ಯೆ ಒಂದೆರಡು ವಿಶ್ವವಿದ್ಯಾಲಯಗಳು ಆದರ್ಶ ಮತ್ತು ಉನ್ನತ ಸಿದ್ಧಾಂತಗಳನ್ನು ಉಳಿಸಿಕೊಳ್ಳುವುದೆಷ್ಟು ದುಸ್ಸಾಹಸ ಎನ್ನುವುದನ್ನು ವಿವರಿಸಬೇಕಾಗಿಲ್ಲ. ಸಂಸ್ಕೃತ ವಿಶ್ವವಿದ್ಯಾಲಯದ ಹಾಲಿ ಕುಲಪತಿಗಳನ್ನು ನೇಮಿಸಿರುವ ಪ್ರಕ್ರಿಯೆಯನ್ನು ಪ್ರಶ್ನಿಸಿ ಸಾರ್ವಜನಿಕ ಹಿತಾಸಕ್ತಿ ದಾವೆಯನ್ನು ಹೂಡಲಾಗಿದೆ. ಇಂಡಿಯಾದ ಮೆಡಿಕಲ್ ಕೌನ್ಸಿಲ್‌ನ ಛೇರ್ಮನ್ ಡಾ॥ ಕೇತನ್ ದೇಸಾಯ್ ಮನೆಯಲ್ಲಿ ೨೧೩ ಕೋಟಿ ಹಣ ಸಿಕ್ಕ ಮೇಲೆ ಸಾರ್ವಜನಿಕರಿಗೆ ಇಂಥ ಸ್ಥಾನದಲ್ಲಿರುವ ಅಧಿಕಾರಿಗಳ ಬಗ್ಗೆ ನಂಬಿಕೆ ಹೋರಟುಹೋದರೆ ಯಾವ ಆಶ್ಚರ್ಯವೂ ಇಲ್ಲ. ಇಡೀ ಭಾರತವೇ ತಲೆ ತಗ್ಗಿಸಬೇಕಾದ ಘಟನೆ ಇದು. ಪ್ರಧಾನ ಮಂತ್ರಿಗಳಿಗೆ ಹೃದಯಾಘಾತವಾಗಲಿಲ್ಲವೇ ಎನಿಸಿತು ನನಗೆ. ಅವರ ವೈದ್ಯಕೀಯ ಲೈಸೆನ್ಸನ್ನು ರದ್ದುಪಡಿಸಲಾಗಿದೆ. ಇಷ್ಟಾದರೂ ಇವರು ಈಗ ಗುಜರಾತ್ ವಿಶ್ವವಿದ್ಯಾಲಯದ ಸಿಂಡಿಕೇಟ್‌ಗೆ ಅವಿರೋಧವಾಗಿ ಆಯ್ಕೆಯಾಗಿರುವುದು ಆಘಾತಕಾರಿ ಸಂಗತಿ. ರಘುವೀರ್ ಗಡಿಯ ಇವರ ಮೇಲೆ ಸಾರ್ವಜನಿಕ ಹಿತಾಸಕ್ತಿ ದಾವೆಯನ್ನು ಹೂಡಿದ್ದಾರೆ. ಈಗ ಇಂಡಿಯಾದ ಮೆಡಿಕಲ್ ಕೌನ್ಸಿಲ್ ಅನ್ನೇ ರದ್ದುಪಡಿಸಲಾಗಿದೆ. ಇಂಥವರನ್ನು ಹುಡುಕಿ ಹುಡುಕಿ ಉಚ್ಚ ಶಿಕ್ಷಣ ನೀಡುವ ವಿದ್ಯಾಸಂಸ್ಥೆಗಳ ಉನ್ನತ ಸ್ಥಾನಕ್ಕೆ ರಾಜಕಾರಣಿಗಳು, ರಾಜ್ಯಪಾಲರು ಹೇಗೆ ಅಧಿಕಾರಕ್ಕೆ ತರುತ್ತಾರೆ ಎನ್ನುವುದು ದುರಂತದ ಸಂಗತಿ. ವೆಟರಿನರಿ ವಿಶ್ವವಿದ್ಯಾಲಯ ಸ್ಟ್ಯಾಚೂಟ್ ಅನ್ನು ನಿರೂಪಿಸಿಕೊಳ್ಳದೆ ೫ ವರ್ಷಗಳಿಂದ ಪದವಿಗಳನ್ನು ಕೊಡುತ್ತಿದೆ. ಇದು ಕಾನೂನುಬಾಹಿರ ಎನ್ನುವುದು ಕುಲಪತಿಗಳಿಗೆ, ಕುಲಸಚಿವರಿಗೆ ಗೊತ್ತಿಲ್ಲವೆ ? ಅದುದರಿಂದ ಇದನ್ನು ಏಕೆ ಮುಚ್ಚಬಾರದು ಎಂದು ಕರ್ನಾಟಕ ಉಚ್ಚ ನ್ಯಾಯಾಲಯ ಸರ್ಕಾರಕ್ಕೆ ಕೇಳಿದೆ. ಇದು ಗಂಭೀರವಾದ ವಿಷಯ. ಎಚ್. ಡಿ. ಕುಮಾರಸ್ವಾಮಿಯವರು ಮುಖ್ಯಮಂತ್ರಿಗಳಾಗಿದ್ದಾಗ ಮೈಸೂರಿನಲ್ಲಿರುವ ರಾಜ್ಯದ ಮುಕ್ತ ವಿಶ್ವವಿದ್ಯಾಲಯದಲ್ಲಿ ತಿಂಗಳುಗಟ್ಟಲೆ ಮುಷ್ಕರದಲ್ಲಿದ್ದ ದಿನಗೂಲಿ ನೌಕರರನ್ನು ಕಾಯಂಗೊಳಿಸಬೇಕೆಂದು ವಿಶ್ವವಿದ್ಯಾಲಯದ ಆವರಣಕ್ಕೆ ನುಗ್ಗಿ ಕುಲಪತಿಗಳನ್ನು ಬೆದರಿಸಿದ್ದು ಯಾರೂ ಮರೆಯಲು ಸಾಧ್ಯವಿಲ್ಲ. ಮುಷ್ಕರದಲ್ಲಿದ್ದ ದಿನಗೂಲಿ ನೌಕರರಲ್ಲಿ ಬಹುಮಂದಿ ಕುಮಾರಸ್ವಾಮಿಯವರ ಜಾತಿಯವರು ಎನ್ನುವುದನ್ನು ಮಾಧ್ಯಮದವರು ಪ್ರಕಟಿಸಿದರು.

ಈಗಿನ ಪರಿಸ್ಥಿತಿಯಲ್ಲಿ ಪಶ್ಚಿಮದ ವಿಶ್ವವಿದ್ಯಾಲಯಗಳಾದ ಆಕ್ಸ್‌ಫರ್ಡ್, ಕೇಂಬ್ರಿಡ್ಜ್, ಪ್ರಿನ್ಸ್‌ಟನ್, ಹಾರ್ವರ್ಡ್ ಇತ್ಯಾದಿಗಳು ಭಾರತಕ್ಕೆ ಬರುವ ಅವಕಾಶಗಳು ಬಹಳ ಕಡಿಮೆ. ಆಕ್ಸ್‌ಫರ್ಡ್‌ನಂಥ ಕೆಲವು ಪ್ರಮುಖ ವಿಶ್ವವಿದ್ಯಾಲಯಗಳು ಭಾರತಕ್ಕೆ ಬರುವುದು ಸಾಧ್ಯವಿಲ್ಲ ಎಂದು ಈಗಾಗಲೆ ಹೇಳಿಕೆ ಕೊಟ್ಟಿವೆ. ಬಹುಮಟ್ಟಿಗೂ ಎರಡನೆಯ ಅಥವಾ ಮೂರನೆಯ ದರ್ಜೆ ವಿಶ್ವವಿದ್ಯಾಲಯಗಳು ಬರುವ ಅವಕಾಶಗಳೇ ಹೆಚ್ಚು. ಅತ್ಯುತ್ತಮ ವಿಶ್ವವಿದ್ಯಾಲಯಗಳು

# ಕೆಲವು ಅಭಿಪ್ರಾಯಗಳು

**ಡಾ|| ನಿರಂಜನ ಆರಾಧ್ಯ, ವಿ. ಪಿ.**
**ಫೆಲೊ, ನ್ಯಾಷನಲ್ ಲಾ ಸ್ಕೂಲ್, ಬೆಂಗಳೂರು**

ಶಿಕ್ಷಣ ಮತ್ತು ಆರೋಗ್ಯವೇ ಮುಂತಾದ ಸಾರ್ವಜನಿಕ ಸೇವಾಕ್ಷೇತ್ರಗಳನ್ನು ಖಾಸಗೀಕರಣಗೊಳಿಸುವುದನ್ನು ನಾನು ಒಂದು ಸೈದ್ಧಾಂತಿಕ ವಿಷಯವಾಗಿ ವಿರೋಧಿಸುತ್ತೇನೆ. ಶಿಕ್ಷಣವೆಂಬುದು ಒಂದು ಸಾಮಾಜಿಕ ಸರಕಿನ ಸ್ವರೂಪದ್ದು. ಆದ್ದರಿಂದ ಈ ಕ್ಷೇತ್ರದಲ್ಲಿ ಪೈಪೋಟಿ ಅನಗತ್ಯ. ಶಿಕ್ಷಣಕ್ಷೇತ್ರದ ಎಲ್ಲ ಹಂತಗಳಲ್ಲೂ, ಪ್ರಾಥಮಿಕ ಶಿಕ್ಷಣದಿಂದ ಅತ್ಯುನ್ನತ ಮಟ್ಟದವರೆಗೂ ಎಲ್ಲರಿಗೂ ಮುಕ್ತವಾದ ಪ್ರವೇಶ ದೊರೆಯುವಂತಹ ರಾಷ್ಟ್ರೀಯ ನೀತಿ ಬೇಕು. ಇದು ರಾಷ್ಟ್ರನಿರ್ಮಾಣಕ್ಕೆ ಸಂಬಂಧಿಸಿದ ವಿಷಯ. ಖಾಸಗಿ ಸಂಸ್ಥೆಗಳು ಈ ಕ್ಷೇತ್ರವನ್ನು ಒಂದು ವ್ಯಾಪಾರವಾಗಿಸಿ, ಸರಕಾಗಿಸಿ, ಇಡೀ ಶಿಕ್ಷಣಕ್ಷೇತ್ರವನ್ನು ಹಾಳುಗೆಡವಿವೆ. ಖಾಸಗೀ ವಿಶ್ವವಿದ್ಯಾಲಯಗಳಿಗೂ ಇದು ಅನ್ವಯಿಸುತ್ತದೆ. ಈಗಿರುವ ವಿಶ್ವವಿದ್ಯಾಲಯ ವ್ಯವಸ್ಥೆಯಲ್ಲಿ ಕೆಳಸ್ತರದ ಜನರಿಗೆ ಒಂದಿಷ್ಟು ಅವಕಾಶ ಇನ್ನೂ ದೊರಕುತ್ತಿದೆ. ಖಾಸಗೀ ವಿಶ್ವವಿದ್ಯಾಲಯಗಳು ಇದನ್ನು ಇಲ್ಲವಾಗಿಸುತ್ತವೆ.

**ಭಾಮಿ ವಿ. ಶೆಣೈ**
**ಪೆಟ್ರೋಲಿಯಂ ವಿಜ್ಞಾನ ಪರಿಣತ, ಹೌಸ್ಟನ್, ಟೆಕ್ಸಾಸ್ ಅ.ಸಂ. ಸಂಸ್ಥಾನ**
**ಯಾದವಗಿರಿ, ಮೈಸೂರು.**

ಇಲ್ಲಿಯವರೆಗಿನ ಈ ಕುರಿತ ಚರ್ಚೆಗಳೆಲ್ಲ ಸೈದ್ಧಾಂತಿಕ ದೃಷ್ಟಿ, ಜಾತಿಯ ದೃಷ್ಟಿಕೋನ, ಎಡ-ಬಲ, ರಾಷ್ಟ್ರೀಯ-ರಾಷ್ಟ್ರ ವಿರೋಧಿ ಮುಂತಾದ ನೆಲೆಗಳಲ್ಲಿ ನಡೆಯುತ್ತಿವೆ. ಮೂರು ಮತ್ತು ನಾಲ್ಕನೆ ಹಂತದ ಈ ಹೊಸ ವಿಶ್ವವಿದ್ಯಾಲಯಗಳು ಇಂದು ಈ ಕ್ಷೇತ್ರದಲ್ಲಿ ತೆರೆದುಕೊಳ್ಳುತ್ತಿರುವ ಅಪಾರವಾದ ಲಾಭದ ಅವಕಾಶಕ್ಕಾಗಿ ಒಳಗೆ ಬರಲು ಪ್ರಯತ್ನಿಸುತ್ತಿವೆ. ಈ ವಾಣಿಜ್ಯೀಕರಣವನ್ನು ನಾನು ವಿರೋಧಿಸುತ್ತೇನೆ. ಈ ಹಿಂದೆ ವಿಶ್ವವಿದ್ಯಾಲಯ ಸ್ಥಾಪಿಸಿದ ಮದನ್ ಮೋಹನ್ ಮಾಳವೀಯ, ಜೆಮ್‌ಷೆಟ್‌ಜಿ ಟಾಟಾ, ಟಿ. ಎಂ. ಎ. ಪೈ ಮುಂತಾದವರು ಈ ಕ್ಷೇತ್ರದಲ್ಲಿ ಧಾರ್ಮಿಕ, ಸೇವಾ ಮತ್ತು ರಾಷ್ಟ್ರೀಯ ಭಾವನೆಗಳಿಂದ ಪ್ರೇರಿತರಾದವರು. ಈಗ ಎಲ್ಲೆಲ್ಲೂ, ಮಠಾಧಿಪತಿಗಳೂ ಸೇರಿದಂತೆ ಇದನ್ನು ಒಂದು ಉದ್ಯಮವೆಂಬಂತೆ ಪ್ರವೇಶಿಸುತ್ತಿದ್ದಾರೆ. ವಿದೇಶಿ ವಿದ್ಯಾಲಯಗಳೂ ಅದೇ ಕಾರಣದಿಂದ ಒಳಬರುತ್ತಿವೆ.

ಖಾಸಗಿ ಕ್ಷೇತ್ರದವರಿಂದ ಹಣ ಪಡೆದು ಹಾಗೂ ಹಳೆಯ ವಿದ್ಯಾರ್ಥಿಗಳ ಬೆಂಬಲದಿಂದ ನಡೆಯುತ್ತಿರುವ ಹಾರ್ವರ್ಡ್, ಕೊಲಂಬಿಯ, ಏಲ್, ಸ್ಟಾನ್‌ಫೋರ್ಡ್, ಕಾರ್ನೆಲ್, ನಾರ್ತ್‌ವೆಸ್ಟರ್ನ್, ಚಿಕಾಗೋ, ರೈಸ್, ಕಾರ್ನಿಜಿ, ಮೆಲೋನ್ ಮುಂತಾದ ವಿಶ್ವವಿದ್ಯಾಲಯಗಳು ನಮ್ಮ ನಾಡಿಗೆ ಬರುವುದು ಅಸಂಭವ. ಈಗಾಗಲೆ ಅವುಗಳಲ್ಲಿ ಭಾರತೀಯ ವಿದ್ಯಾರ್ಥಿಗಳು ಹೆಚ್ಚು ಸಂಖ್ಯೆಯಲ್ಲಿ ಪ್ರವೇಶಿಸಿದ್ದಾರೆ. ಅಮೇರಿಕಾದ ಕೆಲವು ವಾಣಿಜ್ಯ ಕಾಲೇಜುಗಳು ಈಗಾಗಲೆ ನಮ್ಮ ಕಾಲೇಜುಗಳೊಡನೆ ಒಪ್ಪಂದ ಪಡೆದು ಭಾಗವಹಿಸುತ್ತಿವೆ. ಇದರಿಂದ ಅವರಿಗೆ ಹೊಸ ಅರ್ಥವ್ಯವಸ್ಥೆಗಳನ್ನು ಹತ್ತಿರದಿಂದ ನೋಡಿ ತಿಳಿವಿನ ಲಾಭ ಪಡೆಯುವ ಅವಕಾಶ ಸಿಗುತ್ತದೆ. ಅದೇ ಅಮೇರಿಕದ ಮೂರನೆ, ನಾಲ್ಕನೆ ಹಂತದ ವಿಶ್ವವಿದ್ಯಾಲಯಗಳು ಈಗಾಗಲೆ ತಮ್ಮ ಹಲವು ರೀತಿಯ ಭ್ರಷ್ಟಾಚಾರಕ್ಕೆ ಹೆಸರಾದವು, ಕಾನೂನು ಮುರಿದು ಲಾಭ ಪಡೆಯುವವು ನಮ್ಮೊಳಗೆ ಬಂದಾವು! ಅವು ನಮಗೆ ಬೇಕಿಲ್ಲ. ಅವು ಸ್ವಾಯತ್ತ, ಕಾನೂನಿನೊಳಗೆ ಕೆಲಸ ಮಾಡುತ್ತವೆ, ಲಾಭ ಮಾಡಲು ಬಿಡುವುದಿಲ್ಲ ಎನ್ನುವುದು ವ್ಯರ್ಥವಾದ ಮಾತು. ಇವುಗಳು ಸ್ಟಾಕ್ ಮಾರ್ಕೆಟ್‌ಗಳಲ್ಲೂ ತಮ್ಮನ್ನು ನೊಂದಾಯಿಸಿಕೊಂಡಿರುವುದು ಸುಮ್ಮನೆ ಅಲ್ಲ. ಅತಿ ಹೀನಾಯವಾದ ವಾಣಿಜ್ಯಲೋಕದ ಮೌಲ್ಯಗಳನ್ನು ತರುವ ಇವು ನಮ್ಮ ಸಂಸ್ಕೃತಿ ಪರಂಪರೆಗೆ ಒಗ್ಗುವುದಿಲ್ಲ.

ವಿದೇಶಿ ವಿಶ್ವವಿದ್ಯಾಲಯಗಳು ಹೆಚ್ಚು ಸಂಬಳ ನೀಡಿ, ನಮ್ಮ ಒಳ್ಳೆಯ ಉಪಾಧ್ಯಾಯರೆಲ್ಲ ಅಲ್ಲಿ ಹೋಗಿ ಬಿಟ್ಟರೆ ಎನ್ನುವ ವಾದ ಶಿಕ್ಷಣ ಸಂಸ್ಥೆಗಳ ಆತ್ಮವಿಶ್ವಾಸದ ಕೊರತೆ. ಅವರಲ್ಲಿರುವ ಕೊರತೆಗಳನ್ನು ಪೈಪೋಟಿಯಲ್ಲಿ ಅವರು ಸರಿಪಡಿಸಿಕೊಳ್ಳಬೇಕು. ಆತ್ಮವಿಶ್ವಾಸ ಇರುವ ಐಐಟಿ, ಐಐಎಂಗಳು ಈ ಕುರಿತ ಮಸೂದೆಯನ್ನು ಇಲ್ಲಿಯವರೆಗೂ ವಿರೋಧಿಸಿಲ್ಲ. ಈ ಕ್ಷೇತ್ರದಲ್ಲಿ ಅಪಾರವಾದ ಬಂಡವಾಳ ಹೂಡಬೇಕು. ಅದು ನಮ್ಮಿಂದ ಸಾಧ್ಯವಿಲ್ಲ ಎನ್ನುವ ಕಾರಣ ಸರಿಯಲ್ಲ. ಊರ್ಜಾ ಕ್ಷೇತ್ರ ಒಂದರಲ್ಲಿ ನಮ್ಮ ಬಜೆಟ್ಟು ೧,೦೦,೦೦೦ ಕೋಟಿ ರೂಪಾಯಿ; ಇದರಲ್ಲಿ ಶೇಕಡ ೫೦ರಷ್ಟು ಅಪವ್ಯಯವಾಗುತ್ತಿದೆ. ಸರ್ಕಾರ ಶಿಕ್ಷಣ ಕ್ಷೇತ್ರಕ್ಕೆ ಆದ್ಯತೆ ನೀಡಿ, ಹಣ ನೀಡಬೇಕು, ಅದು ಸಾಧ್ಯ. ಪ್ರಾಥಮಿಕ ಕ್ಷೇತ್ರದಿಂದ ಹಿಡಿದು ಎಲ್ಲ ಹಂತದಲ್ಲೂ ಸಾಕಷ್ಟು ಸುಧಾರಣೆಯಾಗಬೇಕು. ಡಿಪಿಇಪಿ ಮತ್ತು ಸರ್ವಶಿಕ್ಷಣ ನೀತಿಯಲ್ಲಿ ಲೋಪದೋಷಗಳಿದ್ದು, ಅವನ್ನು ಪರಿಷ್ಕರಿಸಬೇಕಾಗಿದೆ.

ನಮ್ಮ ವಿದ್ಯಾರ್ಥಿಗಳು ವಿದೇಶದಲ್ಲಿ ವ್ಯಾಸಂಗ ಮಾಡಲು ವಾರ್ಷಿಕ ಸುಮಾರು ೧೦ ಬಿಲಿಯ ಡಾಲರ್ ವೆಚ್ಚವಾಗುತ್ತಿದೆ. ವಿದೇಶೀ ವಿಶ್ವವಿದ್ಯಾಲಯಗಳೂ ಬರುವುದರಿಂದ ಇದು ತಪ್ಪುವುದೇ? ಆಸ್ಟ್ರೇಲಿಯಕ್ಕೆ ಹೋಗಿ ಅವಮಾನಕ್ಕೆ ಒಳಗಾಗುವುದು ನಿಲ್ಲುವುದಾದರೆ ಅದು ಒಳ್ಳೆಯದೆ. ಆದರೆ ನಮ್ಮ ಶಿಕ್ಷಣದ ಗುಣಮಟ್ಟವನ್ನು ವಿದೇಶೀ ವಿಶ್ವವಿದ್ಯಾಲಯಗಳು ಉತ್ತಮಪಡಿಸುವುದೆಂಬುದು ಭ್ರಮೆ. ಅದನ್ನು ನಾವೇ ಮಾಡಿಕೊಳ್ಳಬೇಕು.

**ಡಾ|| ತೂಪ್ಪಿಲ್ ವೆಂಕಟೇಶ್, ಎಮೆರಿಟಸ್ ಪ್ರೊಫೆಸರ್**
**ಸೇಂಟ್ ಜಾನ್ಸ್ ಮೆಡಿಕಲ್ ಕಾಲೇಜು, ಬೆಂಗಳೂರು.**

ನಾವು ಇತರರಿಂದ ಪೈಪೋಟಿ ಎದುರಿಸುವುದು ಆರೋಗ್ಯಕರ.

ಶಿಕ್ಷಣ ವ್ಯವಸ್ಥೆ ನಿಂತ ನೀರಲ್ಲ. ಅದು ಚಲನಶೀಲವಾದುದು. ವಿದೇಶಿ ವಿಶ್ವವಿದ್ಯಾಲಯಗಳ ಪದವಿಗಳ ಗುಣಮಟ್ಟವನ್ನು ನಾವು ಮೊದಲು ಅಳೆದು ನಂತರ ಮನ್ನಣೆ ನೀಡಬೇಕು.

ಯಾವುದೇ ಸಾಂಸ್ಥಿಕ ವ್ಯವಸ್ಥೆಗಳೆ ಆಗಲಿ ಪ್ರಜಾಪ್ರಭುತ್ವಾತ್ಮಕ ವ್ಯವಸ್ಥೆಯಲ್ಲಿ ಸರ್ಕಾರದ ಪರೀಕ್ಷೆಗೆ ಒಳಗಾಗಬೇಕು. ಅಂಥವಕ್ಕೆ ಸಂಪೂರ್ಣ ಮುಕ್ತ ಸ್ವಾತಂತ್ರ್ಯವಿಲ್ಲ. ಶಿಕ್ಷಣ ಸಂಸ್ಥೆಗಳನ್ನು ಮನ್ನಣೆಯ ಪರೀಕ್ಷೆಗೆ ಒಳಪಡಿಸಿ ಮಾನ್ಯತೆ ನೀಡುವ ವ್ಯವಸ್ಥೆ ಬೇಕು. ಇದಕ್ಕೆ ವಿದೇಶಿ ವಿದ್ಯಾಸಂಸ್ಥೆಗಳು ಹೊರತಾಗಬಾರದು.

ಉತ್ತಮವಾದ ಸಂಸ್ಥೆಗಳೊಡನೆ ನಮ್ಮ ಸಂಸ್ಥೆಗಳೂ ಕೂಡಿ ಬೆಳೆದಾಗ, ನಮ್ಮವು ಮತ್ತಷ್ಟು ಗಟ್ಟಿಯಾಗುತ್ತವೆ. ಇದರಲ್ಲಿ ಏಕಾಂಗಿಯಾಗಿರುವ ಅಗತ್ಯವಿಲ್ಲ. ಮತ್ತೊಬ್ಬರೊಡನೆ ಸಂಪರ್ಕ ನಮ್ಮನ್ನು ನಾವು ಉತ್ತಮಪಡಿಸಿಕೊಳ್ಳುವ ಅವಕಾಶ ನೀಡುತ್ತದೆ.

**ರಾಜಾರಾಂ ಎಸ್. ಶರ್ಮ,**
**ಪ್ರೊಫೆಸರ್, ಎನ್‌ಸಿಇಆರ್‌ಟಿ, ನವದೆಹಲಿ.**

ನಾವು ನಮ್ಮಲ್ಲೇ ಸಾಕಷ್ಟು ಅನುಕೂಲಗಳನ್ನು ಕಲ್ಪಿಸಿಕೊಳ್ಳಲು ವಿಫಲರಾಗಿದ್ದೇವೆ. ನಮ್ಮ ಯುವಕರು ಮೊದಲು ಯೂರೋಪಿಗೆ, ನಂತರ ಅಮೇರಿಕ ಸಂಯುಕ್ತ ಸಂಸ್ಥಾನ ಈಗ ಆಸ್ಟ್ರೇಲಿಯ ನ್ಯೂಜಿಲೆಂಡ್ ಹೀಗೆಲ್ಲಾ ಹೊರಗೆ ವಿದ್ಯಾಭ್ಯಾಸಕ್ಕೆ ವಲಸೆ ಹೋಗುತ್ತಿದ್ದಾರೆ. ಅವರು ಅಲ್ಲಿ ಮಾಡಿದ ಸಾಧನೆಗಳನ್ನು ನಮ್ಮದೆ ಎಂದು ಜಂಭಪಡುತ್ತೇವೆ. ಇತ್ತೀಚೆಗೆ ನೊಬೆಲ್ ಪಾರಿತೋಷಕ ಪಡೆದ ವಿಜ್ಞಾನಿ ಶ್ರೀ ರಾಮಕೃಷ್ಣ ಈ ಜಂಭಪಡುವುದನ್ನು ಕಟುವಾಗಿ ವಿಮರ್ಶಿಸಿದರು ಕೂಡ. ನಮ್ಮ ವಿಶ್ವವಿದ್ಯಾಲಯಗಳು ಬಹುವಾಗಿ ಆ ಹೆಸರು ಬಳಸಲು ಅರ್ಹವಾದ ವಿದ್ಯಾಸಂಸ್ಥೆಗಳೇ ಆಗಲಿಲ್ಲ. ಅವುಗಳನ್ನು ಉತ್ತಮವೆನ್ನಿಸಿಕೊಂಡವೂ ಸಂಶೋಧನೆಯಲ್ಲಾಗಲೀ ಸಾಮಾಜಿಕ ಕೊಡುಗೆಯನ್ನಾಗಲಿ, ಪ್ರಬಂಧಗಳ ಪ್ರಕಟಣೆಯನ್ನಾಗಲೀ ಯಾವ ರೀತಿಯಲ್ಲೂ ಸಮರ್ಥವಾಗಿಲ್ಲ. ಅದೇಕೆ ಅವು ಹಾಗಿವೆಯೋ ತಿಳಿಯದು.

ಖಾಸಗಿ ಡೀಮ್ಡ್ ವಿಶ್ವವಿದ್ಯಾಲಯಗಳು ಹಣದೋಚಿ, ಡಿಗ್ರಿ ನೀಡುವ ಅಂಗಡಿಗಳಾಗಿವೆ. ಬೆಂಗಳೂರಿನ ಜೈನ್ ವಿಶ್ವವಿದ್ಯಾಲಯ ಪಿಎಚ್.ಡಿ. ಮಾಡುವ ವಿದ್ಯಾರ್ಥಿಗೆ ಅಪಾರವಾದ ಶುಲ್ಕ ವಿಧಿಸುತ್ತದೆ. ಇಂಥವೆಲ್ಲಾ ಕಾಮನ್‌ವೆಲ್ತ್ ಕ್ರೀಡಾ ಕೂಟದ ಭ್ರಷ್ಟಾಚಾರದಂಥವೇ. ಹೀಗಾಗಿ ರಾಷ್ಟ್ರೀಯ ಅಸ್ಮಿತೆ ಎಂಬ ಒಣ ಜಂಭಕ್ಕೆ ಮಾರುಹೋಗದೆ ಇರುವುದಾದರೆ ಮನೆಯ ಮುಂದೆ ಸಿಗುವ ವಿದೇಶಿ ಥಳಕಿನ ಪದವಿಯೇ ಹಲವು ಸಲ ಆಯ್ಕೆಗೆ ಅರ್ಹವೆನಿಸಬಹುದು.

ನಮ್ಮ ಸಂಸ್ಥೆಗಳು ವಿದೇಶಿ ಪೈಪೋಟಿಯ ಸವಾಲನ್ನು ಎದುರಿಸುವುದು ಅವುಗಳ ಆರೋಗ್ಯಕ್ಕೆ ಒಳ್ಳೆಯದು. ರಾಷ್ಟ್ರೀಯ ದೇಶೀ ಸ್ವಾವಲಂಬನೆಯ ಕೆಲಸವೂ ಸಾಕಷ್ಟು ಆಗುತ್ತಿದೆ. ನಮ್ಮದೆ ಇಂಟರ್‌ನೆಟ್, ೧,೫೦೦ ರೂಪಾಯಿಗೆ ಒಂದು ಕಂಪ್ಯೂಟರ್ ಮುಂತಾದ ಆವಿಷ್ಕಾರಗಳು ಅದನ್ನು ಸೂಚಿಸುತ್ತವೆ. ವಿದೇಶಿ ವಿಶ್ವವಿದ್ಯಾಲಯ ಬಂದರೂ ನಮ್ಮ ಜನ ಅದನ್ನು ಪರೀಕ್ಷಿಸಿ ಬಳಸಿಕೊಳ್ಳುತ್ತಾರೆಯೇ ವಿನಾ ಮಾರುಹೋಗುವುದಿಲ್ಲ. ಬೇರೆ ಕ್ಷೇತ್ರಗಳಲ್ಲೂ ವಿದೇಶಿ ಪ್ರವೇಶದಿಂದ ನಾವೇನೂ ನಮ್ಮ ಅಸ್ಮಿತೆಯನ್ನು ಕಳೆದುಕೊಂಡಿಲ್ಲವಷ್ಟೆ!

ಬರದಿದ್ದಲ್ಲಿ ಎರಡನೆಯ ದರ್ಜೆ ವಿಶ್ವವಿದ್ಯಾಲಯಗಳು ಬರುವುದು ಬೇಡ. ಆಕ್ಸ್‌ಫರ್ಡ್, ಕೇಂಬ್ರಿಡ್ಜ್, ಪ್ರಿನ್ಸ್‌ಟನ್, ಹಾರ್ವರ್ಡ್ ಬಿಟ್ಟು ಸಾಧಾರಣ ಮಟ್ಟದ ಚೈನಾ, ಹಾಂಗ್‌ಕಾಂಗ್ ಇತ್ಯಾದಿ ವಿಶ್ವವಿದ್ಯಾಲಯಗಳನ್ನು ಆಹ್ವಾನಿಸುವಷ್ಟು ಹತಾಶ ಪರಿಸ್ಥಿತಿ ನಮಗಿಲ್ಲ. ಇವುಗಳೇನು ಭಾರತದಲ್ಲಿರುವ ವಿಶ್ವವಿದ್ಯಾಲಯಗಳಿಗಿಂತ ಉತ್ತಮ ಎನ್ನುವ ಮಾಹಿತಿ ನಮಗಿಲ್ಲ. ಬರುವುದಾದರೆ ನಮ್ಮ ವಿಶ್ವವಿದ್ಯಾಲಯಗಳಿಗಿಂತ ಉತ್ತಮ ವಿಶ್ವವಿದ್ಯಾಲಯಗಳೇ ಬರಬೇಕು. ಆದರೆ ನಮ್ಮ ಭ್ರಷ್ಟ ರಾಜಕಾರಣಿಗಳು, ಬ್ಯೂರೊಕ್ರ್ಯಾಟ್‌ಗಳು, ಜಾತಿವಾದಿ ಅಧ್ಯಾಪಕ ವರ್ಗ ಅಂಥ ವಿಶ್ವವಿದ್ಯಾಲಯಗಳು ಶ್ರೇಷ್ಠಮಟ್ಟದಲ್ಲಿ ಕೆಲಸಮಾಡಲು ಬಿಡುವುದಿಲ್ಲ. ಕೊನೆಗೆ ಅವು ಐಪಿಎಲ್‌ನಂತಾದರೆ ಯಾರೂ ಆಶ್ಚರ್ಯಪಡಬೇಕಾಗಿಲ್ಲ.

ಈ ವಿಶ್ವವಿದ್ಯಾಲಯಗಳಲ್ಲಿ ಕೋರ್ಸಿಗೆ ಸೇರುವುದಕ್ಕೆ ಇಂಗ್ಲಿಷ್ ಭಾಷೆಯಲ್ಲಿ ಪರಿಣತಿ ಒಂದು ಪೂರ್ವಷರತ್ತಾಗಿ ಕಡ್ಡಾಯವಾಗಬಹುದು. ಭಾಷಾ ಜ್ಞಾನದ ವಿಭಾಗದಲ್ಲಿ ಅವರು ಇಂಗ್ಲಿಷ್ ಕಲಿಸಲು ಇಎಲ್‌ಟಿ ವಿಭಾಗವನ್ನೆ ಇಟ್ಟುಕೊಳ್ಳಬಹುದು. ಇದು ವಿದ್ಯಾರ್ಥಿಗಳಿಗೆ ತುಂಬಾ ಉಪಯುಕ್ತ. ನಾಳೆಯ ದಿನ ಇವರಿಗೆ ಲಾಭದಾಯಕ ಹುದ್ದೆ ಪಡೆಯುವಲ್ಲಿ ಇದು ಅನುಕೂಲವಾಗುತ್ತದೆ. ಆದರೆ ಈ ಕಾರಣಕ್ಕಾಗಿಯೆ ನಮ್ಮ ವಿದ್ಯಾರ್ಥಿಗಳು ಸ್ಥಳೀಯ ವಿಶ್ವವಿದ್ಯಾಲಯಗಳನ್ನು ದೂರಮಾಡಬಹುದು. ವಿದೇಶಿ ವಿಶ್ವವಿದ್ಯಾಲಯಗಳ ವಿರುದ್ಧ ಸ್ಪರ್ಧಿಸುವ ಶಕ್ತಿ ನಮ್ಮ ವಿಶ್ವವಿದ್ಯಾಲಯಗಳಿಗೆ ಈಗ ಇಲ್ಲ. ಈ ವಿಶ್ವವಿದ್ಯಾಲಯಗಳು ನಮ್ಮ ಉತ್ತಮ ವಿದ್ಯಾರ್ಥಿಗಳನ್ನು ಸೆಳೆದುಕೊಳ್ಳಲು ಸಾಧ್ಯವಾದರೆ / ಜಯಶೀಲರಾದರೆ ನಮ್ಮ ವಿಶ್ವವಿದ್ಯಾಲಯಗಳು ಸರ್ಕಾರಿ ಶಾಲೆಗಳಂತಾಗಿಬಿಡಬಹುದು. ೪-೫ ವಿಶ್ವವಿದ್ಯಾಲಯಗಳು ಈ ರೀತಿ ಕಡೆಗಣಿಸಲ್ಪಟ್ಟರೂ ಅದರಿಂದ ಆಗಬಹುದಾದ ಅಕೆಡೆಮಿಕ್ ಮತ್ತು ನೈತಿಕ ಪರಿಣಾಮಗಳು ಅಪಾರ. ಕಾರಣ ಅವರ ಸವಾಲಿಗೆ ಎದುರು ನಿಲ್ಲುವಂಥ ಪ್ರಾಧ್ಯಾಪಕ ವರ್ಗ ನಮ್ಮಲ್ಲಿ ಶೇಕಡ ೨೦ ಇದ್ದಾರೆ ಎಂದು ಹೇಳಲು ಸಾಧ್ಯವಾಗುವುದಿಲ್ಲ. ಮೈಸೂರು ವಿಶ್ವವಿದ್ಯಾನಿಲಯದ ಹಗರಣ ನೋಡಿದರೆ ಈ ರೀತಿ ಅನುಮಾನ ಸಹಜವಾಗಿಯೇ ಹುಟ್ಟುತ್ತದೆ.

ಅಧ್ಯಾಪಕವರ್ಗಕ್ಕೆ ಬಡ್ತಿ ಕೊಡುವಾಗ ಅವರ ಬಗ್ಗೆ ವಿದ್ಯಾರ್ಥಿಗಳ ಅಸೆಸ್‌ಮೆಂಟ್ ಪಡೆಯುವ ಅಭ್ಯಾಸ ನಮ್ಮಲ್ಲಿ ಇಲ್ಲ. ಇದರಿಂದ ಅಧ್ಯಾಪಕ, ಪ್ರಾಧ್ಯಾಪಕರ ಪಾಂಡಿತ್ಯ, ಇತ್ತೀಚಿನ ಸಂಶೋಧನೆಯ ಜ್ಞಾನ, ಭಾಷೆಯ ಬಳಕೆಯಲ್ಲಿ ಸೂಕ್ಷ್ಮತೆ, ನಯ ನಾಜೂಕು, ಪದಸಂಪತ್ತು, ಪಾಠಮಾಡುವ ಮಟ್ಟ, ವಿದ್ಯಾರ್ಥಿಗಳ ಜೊತೆಗಿನ ಸಂಬಂಧ, ಸಮಾಜದಲ್ಲಿ ಆತನಿಗಿರುವ ಮಾನಮರ್ಯಾದೆಗಳು ಇತ್ಯಾದಿಗಳನ್ನು ಪಡೆದುಕೊಳ್ಳುವ ವ್ಯವಸ್ಥೆ ಇಲ್ಲ. ಆದುದರಿಂದ ಆಯ್ಕೆಯಾಗುವ ಮತ್ತು ಬಡ್ತಿ ಪಡೆಯುವ ಅಧ್ಯಾಪಕರ ನಿಜವಾದ ಯೋಗ್ಯತೆಯನ್ನು ಅರಿಯಲು ಈಗ ಇರುವ ಒಂದೇ ಒಂದು ಮಾರ್ಗವೆಂದರೆ ಅವರು 'ಪ್ರಕಟಣೆ' ಎಂದು ವಿಶ್ವವಿದ್ಯಾಲಯಕ್ಕೆ ಕೊಡುವ ಕೆಲವು ಕಂಪ್ಯೂಟರ್ ಹಾರ್ಡ್ ಕಾಪಿಗಳು. ಇವನ್ನು ಯಾರು ಮೌಲ್ಯಮಾಪನ ಮಾಡುತ್ತಾರೆ, ಯಾವ ಅಳತೆಗೋಲನ್ನಿಟ್ಟುಕೊಂಡು ಮೌಲ್ಯಮಾಪನ ನಡೆಯುತ್ತದೆ ಎನ್ನುವುದು ಕೇವಲ ಕುಲಪತಿಗಳಿಗೆ ಮಾತ್ರ ತಿಳಿದಿರುತ್ತದೆ. ಇದು ಮುಂದೆ ಸಂದರ್ಶನ ಮಾಡುವ ಆಯ್ಕೆ ಸಮಿತಿಗೂ ತಿಳಿದಿರುವುದಿಲ್ಲ. ನಮ್ಮ ಕುಲಪತಿಗಳ ಯೋಗ್ಯತೆ ಏನು ಎನ್ನುವುದು ನಮಗೆ ತಿಳಿಯದಿರುವ ವಿಷಯವಲ್ಲ. ಇದಕ್ಕೆ ಕ್ಲಾಸಿಕ್ ಉದಾಹರಣೆಯಾಗಿ ಮೇಲೆ ಹೇಳಿದ ಡಾ॥ ಶಶಿಧರ ಪ್ರಸಾದ್ ಅವರ ಮೇಲೆ ಕರ್ನಾಟಕ ಉಚ್ಚ ನ್ಯಾಯಾಲಯದ ನಿವೃತ್ತ ನ್ಯಾಯಾಧೀಶ ರಂಗವಿಠಲಾಚಾರ್ ಅವರ ವರದಿಯಲ್ಲಿ ಕೊಟ್ಟಿರುವ ಒಂದು ಅಂಶದ ಸಾರವನ್ನು ಇಲ್ಲಿ ಉಲ್ಲೇಖಿಸುತ್ತೇನೆ :

''ಅದೇನೇ ಇರಲಿ, ಮಂಡಳಿಯ ಬಹುತೇಕ ಸದಸ್ಯರು, ಹಾಗೂ ತಜ್ಞರು ಬಿಚ್ಚುಮನಸ್ಸಿನ ಹೇಳಿಕೆಯನ್ನು ನೀಡುತ್ತ ಮೈಸೂರು ವಿಶ್ವವಿದ್ಯಾನಿಲಯದ ಅಧಿಕಾರವರ್ಗವು ಸಾಕಷ್ಟು ಮುಂಚೆಯೇ ಸಂದರ್ಶನದ ಸಂದರ್ಭದಲ್ಲಿ ಅಭ್ಯರ್ಥಿಗಳು ಸಲ್ಲಿಸಿದ ಪ್ರಬಂಧಗಳು ಮುಂತಾದುವನ್ನು ಕಳಿಸಿಕೊಡದ ಕಾರಣ, ಅಭ್ಯರ್ಥಿಗಳು ತಮ್ಮ ಅರ್ಜಿಗಳಲ್ಲಿ ಕಾಣಿಸಿರುವ ಸಂಖ್ಯೆ ಹಾಗೂ ಅವರಿಗೆ ನೀಡಲಾಗಿರುವ ಅಂಕೆಗಳನ್ನು ಆಧರಿಸಿ ತಾವು ತೀರ್ಮಾನಿಸಬೇಕಾಯಿತು'' ಎಂದಿದ್ದಾರೆ.

ನಿವೃತ್ತ ನ್ಯಾಯಾಧೀಶರಾದ ರಂಗವಿಠಲಾಚಾರ್ ಅವರೂ ಹೆಚ್ಚು ಕಡಿಮೆ ಇದೇ ರೀತಿ ಅಭಿಪ್ರಾಯಪಟ್ಟಿದ್ದಾರೆ.

ಈ ರೀತಿ ಆಗುವ ಆಯ್ಕೆಗಳಲ್ಲಿ ಅಕೆಡೆಮಿಕ್ ಪ್ರತಿಭೆ ಎಷ್ಟು ಇರುತ್ತದೆ, ಅಕೆಡೆಮಿಕ್ ಅಲ್ಲದ ಪ್ರತಿಭೆ ಎಷ್ಟು ಇರುತ್ತದೆ, ಎಂಬುದು ಎಲ್ಲರಿಗೂ ಗೊತ್ತಾಗಿರುತ್ತದೆ. ಆದರೆ ವಿಶ್ವವಿದ್ಯಾಲಯದ ಅಕೆಡೆಮಿಕ್ ಸ್ಟ್ಯಾಂಡರ್ಡ್ ಏನಾಗುತ್ತದೆ ? ವಿದ್ಯಾರ್ಥಿಗಳಿಗೆ ಆಗುವ ಅಪಾಯಗಳೇನು ? – ಎನ್ನುವ ಪ್ರಶ್ನೆಗಳು ಮುಖ್ಯ. ಡಾ॥ ಶಶಿಧರ ಪ್ರಸಾದ್ ಅವರು ಕುಲಪತಿಗಳಾಗಿದ್ದಾಗ ನೇಮಕವಾಗಿರುವ ಅಧ್ಯಾಪಕ ಪ್ರಾಧ್ಯಾಪಕರ ಬಗ್ಗೆ ವಿದ್ಯಾರ್ಥಿಗಳು ಏನು ಹೇಳುತ್ತಿದ್ದಾರೆ ಎನ್ನುವುದನ್ನು ಗಮನಿಸಬೇಕು. ಇವರು ತಯಾರು ಮಾಡುವ

ಪದವೀಧರರು ಮುಂದೆ ಯಾವ ರೀತಿಯ ಪ್ರಾಧ್ಯಾಪಕರಾಗುತ್ತಾರೆ ಎನ್ನುವುದು ನಮ್ಮನ್ನು ಕಾಡಬೇಕಾದ ಪ್ರಶ್ನೆ. ಆದರೆ ಇದನ್ನು ಅಸೆಸ್ ಮಾಡುವ ಪ್ರಯತ್ನ ನಮ್ಮಲ್ಲಿ ಎಲ್ಲೂ ನಡೆದಿಲ್ಲ. ನಮ್ಮ ವಿಶ್ವವಿದ್ಯಾಲಯಗಳು ಮತ್ತು ವಿದ್ಯಾಪರಿಷತ್ತುಗಳು ಹದಗೆಟ್ಟಿರುವುದಕ್ಕೆ ಕುಲಪತಿಗಳ / ನಿರ್ದೇಶಕರ ಈ ರೀತಿಯ ಭ್ರಷ್ಟತೆಯೆ ಕಾರಣ. ಬಿಜಾಪುರ ಮಹಿಳಾ ವಿಶ್ವವಿದ್ಯಾಲಯದ ಪ್ರಥಮ ಕುಲಪತಿ ಸೈದಾ ಅಖ್ತರ್ ಅವರ ಭ್ರಷ್ಟ ಚರಿತ್ರೆ ಈಗ ಎಲ್ಲರಿಗೂ ತಿಳಿದಿದೆ. ಅವರನ್ನು ಸ್ಥಾನದಿಂದ ಇಳಿಸಲಾಯಿತು. ಆದರೂ ಈ ಇಬ್ಬರ ಮೇಲೆ ಸರ್ಕಾರವೇ ಆಗಲಿ ಅಥವಾ ಛಾನ್ಸಲರೆ ಆಗಲಿ ಯಾವ ಕ್ರಮವನ್ನೂ ಜರುಗಿಸಿಲ್ಲ. ಯಾರಿಗೂ ಇದರ ಬಗ್ಗೆ ಕಾಳಜಿ ಇಲ್ಲ. ನೆನ್ನೆಮೊನ್ನೆ ಅಧಿಕಾರ ವಹಿಸಿಕೊಂಡ ಕುಲಪತಿಗಳೇ ಅವರ ರಕ್ಷಣೆಗೆ ನಿಂತಿರುವಾಗ ಕ್ರಮ ಜರುಗಿಸುವವರಾರು? ಇಂಜಿನಿಯರಿಂಗ್ ವಿಶ್ವವಿದ್ಯಾಲಯದ ಕುಲಪತಿಗಳಾಗಿದ್ದ ಡಾ|| ಎಚ್. ಪಿ. ಖಿಂಚ ಅವರು ಕೃತಿಚೌರ್ಯದ ಆರೋಪ ಹೊತ್ತು ಸ್ಥಾನ ಕಳೆದುಕೊಂಡರು. ಉತ್ತರ ಭಾರತದಲ್ಲಿ ವಿಶ್ವವಿದ್ಯಾಲಯದ ಕುಲಪತಿ ರಜ್‌ಪುತ್ ಎನ್ನುವವರನ್ನು ಭ್ರಷ್ಟತೆಯ ಆಪಾದನೆಯ ಮೇಲೆ ದಸ್ತಗಿರಿಮಾಡಲಾಗಿದೆ. ಶಿಲ್ಲಾಂಗ್‌ನಲ್ಲಿರುವ ನಾರ್ತ್ ಈಸ್ಟರ್ನ್ ಹಿಲ್ ಯೂನಿವರ್ಸಿಟಿಯಲ್ಲಿ ವಾರದಲ್ಲಿ ೩-೪ ಬಾರಿ ಅದರ ಕುಲಪತಿಯವರನ್ನು ವಿದ್ಯಾರ್ಥಿಗಳು ಘೇರಾವೋ ಮಾಡುತ್ತಿರುತ್ತಾರೆ. ಇಟಾ ನಗರದಲ್ಲಿರುವ ಕೇಂದ್ರ ವಿಶ್ವವಿದ್ಯಾಲಯದ ಕುಲಪತಿಗಳನ್ನು ಸಾರ್ವಜನಿಕರು, ವಿದ್ಯಾರ್ಥಿಗಳು ಮನಬಂದಂತೆ ಥಳಿಸಿದ್ದರು; ಇದಾದ ನಂತರ ಅವರನ್ನು ದಸ್ತಗಿರಿ ಮಾಡಲಾಗಿತ್ತು ಎಂದು ಪತ್ರಿಕೆಗಳಲ್ಲಿ ವರದಿಯಾಗಿತ್ತು. ಮುಂದೆ ಆಯೋಗ ರಚಿಸಿ ಅವರ ಮೇಲೆ ವಿಚಾರಣೆಯನ್ನೂ ನಡೆಸಲಾಯಿತು. ಇವೆಲ್ಲದರ ಅರ್ಥವೇನು?

ಇನ್ನು ಈ ವಿದೇಶಿ ವಿಶ್ವವಿದ್ಯಾಲಯಗಳು ಎಷ್ಟರಮಟ್ಟಿಗೆ ಯುಜಿಸಿಯ ನಿಯಂತ್ರಣದಲ್ಲಿರಲು ಒಪ್ಪುತ್ತವೆ ಎನ್ನುವುದು ಅನುಮಾನಾಸ್ಪದ. ಈಗ ಕರ್ನಾಟಕದಲ್ಲಿ ಆರಂಭವಾಗಿರುವ ಖಾಸಗಿ ವಿಶ್ವವಿದ್ಯಾಲಯ ಯುಜಿಸಿಯ ನಿಯಂತ್ರಣದಲ್ಲಿರುವುದು ಕೇವಲ ಹೆಸರಿಗೆ ಮಾತ್ರ, ಅದರ ಕುಲಪತಿಗಳು ಆ ವಿಶ್ವವಿದ್ಯಾಲಯ ನಡೆಸುತ್ತಿರುವ ಕೈಗಾರಿಕೆಯ ಎಂ.ಡಿ. ಅವರೆ. ನಾಳೆ ಇವರ ಜಾಗಕ್ಕೆ ಶ್ರೀಮಂತನಾದ ಒಬ್ಬ ಕ್ರಿಮಿನಲ್ ಬರಬಹುದು. ಆಗ ವಿಶ್ವವಿದ್ಯಾಲಯದ ಘನತೆ ಏನಾಗುತ್ತದೆ? ಇದರ ಮೇಲೆ ಸರ್ಕಾರದ ನಿಯಂತ್ರಣವೂ ಹೆಚ್ಚಾಗಿರುವುದಿಲ್ಲ. ಪಶ್ಚಿಮದ ವಿಶ್ವವಿದ್ಯಾಲಯಗಳು ಯುಜಿಸಿಯ ಅಥವಾ ಭಾರತ ಸರ್ಕಾರದ ನಿಯಂತ್ರಣಕ್ಕೆ ಒಳಪಡುತ್ತವೆ ಎಂದು ನಿರೀಕ್ಷಿಸುವುದು ಬಾಲಿಶವಾಗಬಹುದು. ಈಗ ಇರುವ ವಿದೇಶಿ ಕೈಗಾರಿಕೆಗಳು ಎಷ್ಟರಮಟ್ಟಿಗೆ ಸರ್ಕಾರದ ನಿಯಂತ್ರಣದಲ್ಲಿವೆ? ಹಾಗಿದ್ದಿದ್ದರೆ ಯೂನಿಯನ್ ಕಾರ್ಬೈಡ್‌ನಿಂದ ಭೋಪಾಲ್ ದುರಂತ ನಡೆಯುತ್ತಲೇ ಇರಲಿಲ್ಲ. ಅಮೆರಿಕಾ ಭಾರತದ ರಕ್ಷಣಾ ಪಡೆಗಳಿಗೆ ಮಾರುತ್ತಿರುವ ಸಂಪರ್ಕ ಸಾಧನಗಳ ಮೇಲೆ ಸಂಪೂರ್ಣ ನಿಯಂತ್ರಣವನ್ನು ಅವರೇ ಇಟ್ಟುಕೊಳ್ಳುವುದಾಗಿ ಷರತ್ತು ಹಾಕಿದ್ದಾರೆ ಎನ್ನುವ ಸಮಾಚಾರವನ್ನು ದೃಶ್ಯ ಮಾಧ್ಯಮಗಳು ಬಿತ್ತರಿಸಿವೆ. ಅವನ್ನು ಬಳಸಬೇಕಾದರೂ ಅಮೆರಿಕಾದ ಅಧಿಕಾರಿಗಳ ಅಪ್ಪಣೆ ಪಡೆಯಬೇಕಾದ ರೀತಿಯಲ್ಲಿ ಹಿಡಿತ ಸಾಧಿಸುವ ಹುನ್ನಾರ ಅವರದು. ಕಾಮನ್‌ವೆಲ್ತ್ ಗೇಮ್ಸ್ ಸಂದರ್ಭದಲ್ಲಿ ಬ್ರಿಟಿಷ್ ಅಧಿಕಾರಿಗಳು ನಡೆದುಕೊಂಡ ರೀತಿ ನಮ್ಮೆದುರಿಗೆ ಇದೆ. ಇಂತಹವರು ವಿಶ್ವ ವಿದ್ಯಾಲಯಗಳ ಬಗ್ಗೆ ಒಪ್ಪಂದ ಮಾಡಿಕೊಳ್ಳುವಾಗಲೇ ಈ ಎಲ್ಲ ನಿಯಂತ್ರಣದಿಂದ ಹೊರಗುಳಿದರೆ ಆಶ್ಚರ್ಯಪಡಬೇಕಾಗಿಲ್ಲ. ಈ ಹಿನ್ನೆಲೆಯಲ್ಲಿ ನೋಡಿದರೆ ಮೂರನೇ ರಾಷ್ಟ್ರದ ಕಾನೂನಿನಡಿಯಲ್ಲಿ ಯೂರೋಪಿನ ಅಥವಾ ಅಮೆರಿಕಾದ ಕುಲಪತಿಗಳು ಕೆಲಸ ಮಾಡಲು ಒಪ್ಪುತ್ತಾರೆ ಎಂದು ನಂಬುವುದು ಅಸಾಧ್ಯ. ನಮ್ಮ ಭ್ರಷ್ಟ ಅಧಿಕಾರಿಗಳನ್ನು ತಮ್ಮ ವಶಕ್ಕೆ ತೆಗೆದುಕೊಂಡು ಅವು ಸ್ವತಂತ್ರವಾಗಿ ದ್ವೀಪಗಳಂತೆ ಎಲ್ಲ ಹಿಡಿತಗಳಿಂದ ಹೊರಗೇ ಉಳಿಯಬಹುದು.

ಇನ್ನು ಈ ವಿದೇಶಿ ವಿಶ್ವವಿದ್ಯಾಲಯಗಳ ಪಠ್ಯಕ್ರಮ ಯಾವ ರೀತಿ ಇರುತ್ತದೆ, ಇದರ ಮೇಲೆ ಯಾರ ನಿಯಂತ್ರಣವಿರುತ್ತದೆ, ಯಾರು ಇದನ್ನು ರೂಪಿಸುವವರು, ಇದರಲ್ಲಿ ಭಾರತೀಯ ಪ್ರಾಧ್ಯಾಪಕರುಗಳ ಪಾತ್ರ ಎಷ್ಟು ಇರುತ್ತದೆ ಎನ್ನುವುದನ್ನು ಕಲ್ಪಿಸಿಕೊಳ್ಳುವುದು ಸುಲಭವಲ್ಲ. ಇದರ ಜೊತೆಗೆ ಈ ವಿಶ್ವವಿದ್ಯಾಲಯಗಳಲ್ಲಿ ಫೀ ಯಾವ ರೀತಿ ಇರುತ್ತದೆ ಎನ್ನುವುದು ಮತ್ತೊಂದು ಪ್ರಶ್ನೆ. ಶ್ರೇಷ್ಠಮಟ್ಟದ ವಿದ್ಯಾಭ್ಯಾಸ ಕೊಡಬೇಕಾದರೆ ಫೀ ಹೆಚ್ಚು ಇರಬೇಕಾಗುತ್ತದೆ. ಇಲ್ಲಿಯೂ ಪ್ರತಿಭಾವಂತರಾದ ಸಾಮಾನ್ಯವರ್ಗದಿಂದ ಬಂದ ಮತ್ತು ಆರ್ಥಿಕವಾಗಿ ಹಿಂದುಳಿದಿರುವ ವಿದ್ಯಾರ್ಥಿಗಳಿಗೆ ಈ ವಿಶ್ವವಿದ್ಯಾಲಯಗಳಲ್ಲಿ ಪ್ರವೇಶ ದೂರೆಯಾಗಬಹುದು, ಆದುದರಿಂದ ಅವರು ಈ ವಿಶ್ವವಿದ್ಯಾಲಯಗಳಿಂದ ದೂರವೇ ಉಳಿಯಬೇಕಾಗಬಹುದು.

ಈಗಿನ ಪರಿಸ್ಥಿತಿಯಲ್ಲಿ ಶ್ರೇಷ್ಠ ಮಟ್ಟದ ಜ್ಞಾನವನ್ನು ಕೊಡುವ ವಿಶ್ವವಿದ್ಯಾಲಯಗಳನ್ನು ಮಾತ್ರ ಆಯ್ಕೆ ಮಾಡುವ ಅವಶ್ಯಕತೆ ಇದೆ. ಮುಂದುವರಿದ ರಾಷ್ಟ್ರಗಳ ಜೊತೆ ಜಾಗತಿಕ ಮಟ್ಟದಲ್ಲಿ ಸ್ಪರ್ಧಿಸಬೇಕಾದರೆ ನಮ್ಮ ಮಾನವ ಸಂಪನ್ಮೂಲವನ್ನು ಅದಕ್ಕೆ ತಯಾರುಮಾಡಬೇಕಾಗುತ್ತದೆ. ಅಂದರೆ ಅವರಿಗೆ ಅತ್ಯುತ್ತಮ ವಿದ್ಯಾಭ್ಯಾಸ ಕೊಡಬೇಕಾಗುತ್ತದೆ. ನಮ್ಮ



## ತುಂಬಿರಯ್ಯ ಚೀಲಾ

ತುಂಬಿರಯ್ಯ ಚೀಲಾ ತುಮ್‌ತುಂಬಿರಯ್ಯ ಚೀಲಾ
ಎಷ್ಟು ತುಂಬಿದರು ತುಂಬದಾ ಬ್ರಹ್ಮಾಂಡ ಚೀಲವಾ
ತುಂಬಿರಯ್ಯ ಚೀಲಾ ತುಮ್‌ತುಂಬಿರಯ್ಯ ಚೀಲಾ || ಪ||
ನಿಂತೇ ತುಂಬಿ ನಡೆದಾಡಿ ತುಂಬಿ ನೀವ್ ಕೂತು ತುಂಬಿ
ಮಲಗಿದ್ದೂ ತುಂಬಿ ತುಮ್ ತುಂಬಿ ತುಂಬಿ ಎಷ್ಟಾರು ತುಂಬಿ
||ತುಂಬಿರಯ್ಯ ಚೀಲಾ||

ಮಕ್ಕಾಳ ತುಂಬಿ ಮರಿಗಾಳ ತುಂಬಿ ಹೆಂಡಾರ ತುಂಬಿ
ದಂಡೆಲ್ಲ ತುಂಬಿ ನಿಮ್ಮಂಥ ನಿಮ್ಮ ರಕ್ಕಸರ ತುಂಬಿ
ನಿಮ್ಮಂಥ ನಿಮ್ಮ ಕುರಿಗಾಳ ತುಂಬಿ
ಲೋಕಾವೆ ತುಂಬಿ ಸುರಿವಂಥ ಚೀಲವೇನೋ
ಬ್ರಹ್ಮಾಂಡ ಪೂರ ಸುರಿಸುರಿದು ತುಂಬಿ ಸುರಿವಂಥ ಚೀಲವೇನೋ
||ತುಂಬಿರಯ್ಯ ಚೀಲಾ||

ತುಂಬಿ ತುಂಬಿ ಸುರಿವಾಟದಲ್ಲಿ
ಹಿಂದಿಲ್ಲ ಲೋಕ ಮುಂದಿಲ್ಲ ಲೋಕ
ಈ ನೆಲವ ತುಂಬಿ ಈ ನದಿಯ ತುಂಬಿ ಜೀವಾದಿ ತುಂಬಿ
ತುಮ್‌ತುಂಬಿ ಸುರಿವ ಸರಕೋ
ಬ್ರಹ್ಮಾಂಡ ಪೂರ ತುಮ್‌ತುಂಬಿ ಸುರಿವ ತಿಂದುಣ್ಣುವಂಥ ಸರಕೋ
||ತುಂಬಿರಯ್ಯ ಚೀಲಾ||

ಹಿಂದನರಿಯೊ ಚೀಲಾ ನೀನು ಮುಂದನರಿಯೊ ಚೀಲಾ
ಚೀಲಾ ಚೀಲದೊಳಗೆ ಚೀಲಾ ತಾನೆ ಮೂರು ದಿನದ ಚೀಲಾ
ತುಂಬಿ ಸುರಿದು ಚೀಲಾ ತಾನೇ ಬರ್‌ದು ನೋಡು ಚೀಲಾ
ನೀನೆ ಹರಿದು ಹೋದಿ ಚೀಲಾ ನಿನ ನೀನರಿದು ನೋಡೋ ಚೀಲಾ
||ತುಂಬಿರಯ್ಯ ಚೀಲಾ||

ಎಲ್ಲಕ್ಕು ಮೊದಲೆ ತುಂಬೀದ ಮೇಲೆ ಲಯವಯ್ಯ ಲೀಲೆ
ಎಲ್ಲಕ್ಕು ಮೊದಲೆ ತಿಂದುಗಿದ ಮೇಲೆ ಲಯವಯ್ಯ ಲೀಲೆ
ಲೀಲೇಯ ಮೇಲೆ ಆಲೇಯನಾಡೊ ಒಳವೈತೆ ಮೇಲೆ
||ತುಂಬಿರಯ್ಯ ಚೀಲಾ||

ಡಾ|| ರಾಮಲಿಂಗಪ್ಪ ಟಿ. ಬೇಗೂರು
ಸಂಖ್ಯೆ ೩೫, ೭ನೇ ಬ್ಲಾಕ್, ಬನಗಿರಿನಗರ, ಬನಶಂಕರಿ ೩ನೇ ಹಂತ
ಬೆಂಗಳೂರು - ೫೬೦ ೦೮೫

ಅಂಥ ಅವಶ್ಯಕತೆಯನ್ನು ಪೂರೈಸಬಲ್ಲ ವಿಶ್ವವಿದ್ಯಾಲಯಗಳು ಬರಬೇಕು. ಆದರೆ ಅಂಥ ವಿಶ್ವವಿದ್ಯಾಲಯಗಳು ಈಗ ಬರುವ ಸೂಚನೆ ಇಲ್ಲ. ಎರಡನೇ ಅಥವಾ ಮೂರನೇ ದರ್ಜೆ ವಿಶ್ವವಿದ್ಯಾಲಯಗಳು ಖಂಡಿತ ಬರುವುದು ಬೇಡ.

ಈ ಸಂದರ್ಭದಲ್ಲಿ ಮತ್ತೊಂದು ಮಾತನ್ನು ಹೇಳದೆ ಬಿಟ್ಟರೆ ಲೇಖನ ಸಂಪೂರ್ಣವಾಗುವುದಿಲ್ಲ. ನಮ್ಮ ೨೧ ವಿಶ್ವವಿದ್ಯಾಲಯಗಳಲ್ಲಿ ಶೇಕಡ ೨೦ ವಿಶ್ವವಿದ್ಯಾಲಯಗಳು ಸರಿಯಾಗಿ ಕೆಲಸಮಾಡುತ್ತಿರಬಹುದು. ಆದರೆ ಉಳಿದ ಶೇಕಡ ೮೦ ಸಮಸ್ಯೆಗಳ ಮಹಾಪೂರದಲ್ಲೇ ಮುಳುಗಿವೆ. ಇವುಗಳಲ್ಲಿರುವ ಕುಲಪತಿಗಳು ಭ್ರಷ್ಟರು; ಭ್ರಷ್ಟರು ಎಂದು ಗೊತ್ತಿದ್ದರೂ ಸರ್ಕಾರ ಅವರನ್ನು ನೇಮಿಸಿದೆ / ಅಧಿಕಾರದಲ್ಲಿ ಉಳಿಸಿಕೊಂಡಿದೆ ಎನ್ನುವ ಅಭಿಪ್ರಾಯ ಜನಗಳಲ್ಲಿದೆ. ಹಲವಾರು ವಿಭಾಗಗಳಲ್ಲಿ ಅಧ್ಯಾಪಕವರ್ಗದ ಕೊರತೆ ಇದೆ. ಪ್ರತಿಭಾವಂತ ಅಭ್ಯರ್ಥಿಗಳಿಲ್ಲ ಎಂದಲ್ಲ, ಇದ್ದಾರೆ; ಬಹಳ ಜನ ಇದ್ದಾರೆ. ಆದರೆ ನಮ್ಮ ಕಲುಷಿತ ವಾತಾವರಣದಲ್ಲಿ ಅವರಲ್ಲನೇಕರು ಅಭ್ಯರ್ಥಿಗಳಾಗುವುದು ಅಪರೂಪ. ಹಾಗೇನಾದರೂ ಅಭ್ಯರ್ಥಿಗಳಾದರೆ ಆಯ್ಕೆ ಇನ್ನೂ ಹೆಚ್ಚು ಅಪರೂಪ. ಹೀಗಾಗಿ ವಿಶ್ವವಿದ್ಯಾಲಯಗಳ ಅಧ್ಯಾಪಕವರ್ಗಕ್ಕೆ ಆದರ್ಶ ಎನ್ನುವ ಸಿದ್ಧಾಂತಗಳನ್ನು ಪಾಲಿಸುವ ಅಥವಾ ವಿದ್ಯಾರ್ಥಿಗಳಿಗೆ ಬೋಧಿಸುವ ಬೌದ್ಧಿಕ ಆಯಾಮವೇ ಆಗಲಿ, ಬದ್ಧತೆಯೇ ಆಗಲಿ ಅಥವಾ ನೈತಿಕ ಶಕ್ತಿಯೇ ಆಗಲಿ ಇರುವುದಿಲ್ಲ. ಶೇಕಡ ೬೦ರಷ್ಟು ಅಧ್ಯಾಪಕವರ್ಗ ಕಾಲೇಜಿಗೆ ಬರುವುದಿಲ್ಲ; ಸ್ನಾತಕೋತ್ತರ ತರಗತಿಗಳಲ್ಲಿ ತಮ್ಮ ವಿಭಾಗಗಳಿಗೆ ಬರುವುದಿಲ್ಲ, ಕ್ಲಾಸ್ ತೆಗೆದುಕೊಳ್ಳುವುದಿಲ್ಲ. ಇದರ ಬಗ್ಗೆ ವಿಶ್ವವಿದ್ಯಾಲಯಗಳ ಕುಲಪತಿಗಳಿಗೆ ದೂರು ಕೊಟ್ಟರೂ ಯಾವುದೇ ಕ್ರಮ ಜರುಗಿಸಿಲ್ಲ ಎನ್ನುವ ಉದಾಹರಣೆ ಮೈಸೂರಿನಲ್ಲಿ ನಮ್ಮ ಕಣ್ಣೆದುರಿಗೇ ಇದೆ. ಹೆರಿಟೇಜ್ ವಿಶ್ವವಿದ್ಯಾಲಯ ಎಂದು ಆದರ್ಶ ವಿಶ್ವವಿದ್ಯಾಲಯ ಮಾಡಬೇಕೆಂದು ಹೊರಟಿರುವವರಿಗೆ ಇಲ್ಲಿಯ ಯಾವ ಸಮಸ್ಯೆಯನ್ನೂ ಬಗೆಹರಿಸಲು ಸಾಧ್ಯವಿಲ್ಲದಿದ್ದಾಗ ಇದು ಆದರ್ಶವಾಗುವುದು ಹೇಗೆ ? ಯಾವ ಆದರ್ಶಗಳನ್ನು ಇದು ಬೆನ್ನಟ್ಟಿದೆ ? ಭ್ರಷ್ಟತೆ ಮತ್ತು ಜಾತೀಯತೆಯ ಹಿನ್ನೆಲೆಯಲ್ಲಿ ಪ್ರಾಧ್ಯಾಪಕರುಗಳಾಗಿರುವ ಇವರೇ ಮುಂದೆ ಕುಲಪತಿಗಳಾಗಿ ಬರುತ್ತಾರೆ. ಇದು ದಶಕಗಳಿಂದ ಬಂದಿರುವ ಅಭ್ಯಾಸವಾಗಿದೆ.



ಇದರಿಂದಾಗಿ ನಮ್ಮ ವಿಶ್ವವಿದ್ಯಾಲಯಗಳ ಮಟ್ಟ ಕ್ರಮೇಣ ಕುಸಿಯುತ್ತಿದೆ.

ಇವೆಲ್ಲವನ್ನು ಸರಿಪಡಿಸಲು ಸಂಬಂಧಪಟ್ಟ ಮಂತ್ರಿಗಳು ಮತ್ತು ಛಾನ್ಸಲರ್‌ಗಳು ಸೂಕ್ತ ಕ್ರಮ ತೆಗೆದುಕೊಂಡು ವಿಶ್ವವಿದ್ಯಾಲಯಗಳನ್ನು ಸ್ವಚ್ಛಗೊಳಿಸುವುದಾದರೆ ಭಾರತಕ್ಕೆ ಯಾವುದೇ ವಿದೇಶಿ ವಿಶ್ವವಿದ್ಯಾಲಯಗಳ ಅವಶ್ಯಕತೆ ಇರುವುದಿಲ್ಲ. ಆದರೆ ಅಂಥ ಮಂತ್ರಿಗಳೇ ಆಗಲಿ ಅಥವಾ ಛಾನ್ಸಲರ್‌ಗಳೇ ಆಗಲಿ ನಮಗೆ ಕಾಣುತ್ತಿಲ್ಲ. ಸಿಂಡಿಕೇಟ್‌ಗೆ ಬರುವ ಸದಸ್ಯರಲ್ಲಿ ಉನ್ನತ ಶಿಕ್ಷಣದ ಬಗ್ಗೆ ಜಾಗತಿಕ ಮಟ್ಟದಲ್ಲಿ ವಿವೇಚನೆ ಮಾಡುವ ಸಾಮರ್ಥ್ಯ ಇರುವವರು ಬಹಳ ಕಡಿಮೆ. ನನ್ನ ಅನುಭವದಲ್ಲಿ ಇರುವಂತೆ ನೇಮಕವಾಗುವ ಸದಸ್ಯರು ಕುಲಪತಿಗಳ ಅಧೀನದಲ್ಲಿದ್ದು ಕೆಲಸಮಾಡ ಬೇಕಾಗಿರುವ ಅಧಿಕಾರಿಗಳಂತೆ ನಡೆದುಕೊಳ್ಳುತ್ತಾರೆ. ಹಾಗೇ ನಡೆದುಕೊಳ್ಳಬೇಕೆಂದು ಕುಲಪತಿಗಳು ನಿರೀಕ್ಷೆ ಮಾಡುತ್ತಾರೆ. ಸದಸ್ಯರು ತಾವೂ ಕುಲಪತಿಗಳಷ್ಟೇ ಜವಾಬ್ದಾರಿಯುತವಾದ ಸ್ಥಾನದಲ್ಲಿದ್ದೇವೆ ಎನ್ನುವುದನ್ನು ಮತ್ತು ಅವರು ಸ್ವತಂತ್ರವಾಗಿ ವಿವೇಚನೆ ಮಾಡಿ ಕುಲಪತಿಗಳ ಜೊತೆ ಸಹಕರಿಸುತ್ತ ಅವರಿಗೆ ಮಾರ್ಗದರ್ಶನ ಮಾಡುವ ಜವಾಬ್ದಾರಿ ಇದೆ ಎಂದು ತಿಳಿದಿದ್ದರೆ ಕುಲಪತಿಗಳು ವಿಶ್ವವಿದ್ಯಾಲಯಗಳಲ್ಲಿ ನಡೆಸುವ ಬಹಳಷ್ಟು ಭ್ರಷ್ಟತೆಯನ್ನು ತಡೆಯಬಹುದಿತ್ತು; ವಿಶ್ವವಿದ್ಯಾಲಯಗಳು ಅಧೋಗತಿಗಿಳಿಯುವ ವೇಗವನ್ನು ತಡೆಯಬಹುದಿತ್ತು.

ಈಗಿರುವ ವಿಶ್ವವಿದ್ಯಾಲಯದ ಪರಿಕಲ್ಪನೆಯೆ ಬದಲಾಗಬೇಕು. ಕುಲಪತಿ ಎನ್ನುವ ಒಬ್ಬ ವ್ಯಕ್ತಿಗೆ ಅಷ್ಟು ಅಧಿಕಾರ ಕೊಡುವ ಕಾಲ ಇದಲ್ಲ. ನಮ್ಮಲ್ಲಿ ಋಜುತ್ವ ಮತ್ತು ಪ್ರಾಮಾಣಿಕತೆ ಇರುವ ಜನಗಳು ಕಡಿಮೆಯಾಗುತ್ತಿದ್ದಾರೆ. ದೇಶದ ವಿಜಿಲೆನ್ಸ್ ಕಮಿಷನರ್‌ರ ಹಗರಣ ಇದಕ್ಕೆ ಉದಾಹರಣೆ. ಭಾರತದ ಉಚ್ಚ ನ್ಯಾಯಾಲಯ ಸರ್ಕಾರಕ್ಕೆ ಅತ್ಯಂತ ಮುಜುಗರ ಎನಿಸುವ ಪ್ರಶ್ನೆಗಳನ್ನು ಕೇಳಿದ್ದರೂ ಸಿವಿಸಿ ಪಿ. ಜೆ. ಥಾಮಸ್ ಅವರು 'ನಾನೆ ಸಿವಿಸಿ' ಎಂದು ಘೋಷಣೆ ಮಾಡಿಕೊಂಡರು. ಋಜುತ್ವ ಮತ್ತು ಪ್ರಾಮಾಣಿಕತೆ ಇರುವ ಜನ ಇಲ್ಲವೇ ಇಲ್ಲ ಎಂದಲ್ಲ, ಇದ್ದಾರೆ, ಆದರೆ ಹಾಗೆ ಇರುವ ಜನರನ್ನು ರಾಜಕಾರಣಿಗಳು ಮತ್ತು ಬ್ಯುರೊಕ್ರ್ಯಾಟ್‌ಗಳು ಅಧಿಕಾರಕ್ಕೆ ತರಲು ಇಚ್ಛೆಪಡುವುದಿಲ್ಲ. ಇಂಥ ಸಂದರ್ಭದಲ್ಲಿ ಅಧಿಕಾರದ ವಿಕೇಂದ್ರೀಕರಣವಾಗಬೇಕು. ಇಬ್ಬರು ಅಥವಾ ಮೂರು ಜನರು ವಿವಿಧ ರೀತಿಯಲ್ಲಿ ಕುಲಪತಿಯ ಅಧಿಕಾರ ಹಂಚಿಕೊಳ್ಳುವಂತಿರಬೇಕು. ಹೊರ ರಾಜ್ಯದಿಂದ ಇಬ್ಬರನ್ನು ಸಿಂಡಿಕೇಟ್‌ಗೆ ತರಬೇಕು. ಆಯ್ಕೆ ಸಮಿತಿಯಲ್ಲಿ ಇಬ್ಬರು ಪರಿಣತರು ಹೊರ ರಾಜ್ಯದವರಿರಬೇಕು ಮತ್ತು ಯುಜಿಸಿ ಪ್ರತಿನಿಧಿಗಳಿರಬೇಕು. ಈಗ ಕುಲಪತಿ ಮತ್ತು ವಿಭಾಗದ ಮುಖ್ಯಸ್ಥರು ಸೇರಿ ಸಮಿತಿಯನ್ನು ಆರಿಸುತ್ತಾರೆ. ಅಂದರೆ ಆಯ್ಕೆ ಸಂದರ್ಶನಕ್ಕೆ ಮುಂಚೆಯೆ ಮುಗಿದು ಹೋಗಿರುತ್ತದೆ. ಇದು ನಿಲ್ಲಬೇಕು. ಜೊತೆಗೆ ೧೫ ನಿಮಿಷಗಳ ಸಂದರ್ಶನವನ್ನು ರದ್ದುಮಾಡಿ ಎಲ್ಲ ಅಭ್ಯರ್ಥಿಗಳನ್ನೂ ಒಟ್ಟಿಗೆ ಸೇರಿಸಿ ೨ ದಿನಗಳ ಕಾಲ ಸಮಿತಿ ಸದಸ್ಯರ ಜೊತೆ ಸಂವಾದ ಏರ್ಪಡಿಸಬೇಕು. ವಿದ್ಯಾರ್ಥಿಗಳಿಂದಲೂ ಪಡೆದ ಅಸೆಸ್‌ಮೆಂಟನ್ನು ಪಡೆದು ಬಡ್ತಿ ಅಥವಾ ನೇಮಕಾತಿಗಳನ್ನು ಮಾಡುವಾಗ ಅದನ್ನು ಪರಿಗಣಿಸಬೇಕು. ಇದಿಷ್ಟೂ ವಿಡಿಯೋ ಮಾಡಿಡಬೇಕು. ಪ್ರತಿಯೊಬ್ಬ ಅಭ್ಯರ್ಥಿಗೂ ಇದರ ಪ್ರತಿ ಕೊಡಬೇಕು. ಅವಶ್ಯಕತೆ ಬಿದ್ದಾಗ ಇದು ನ್ಯಾಯಾಂಗ ಪರಿಶೀಲನೆಗೆ ದೊರಕುವಂತಿರ ಬೇಕು. ಆರ್‌ಟಿಐಗೂ ಇದರ ಪ್ರತಿ ಸಿಗುವಂತಿರಬೇಕು. ಎರಡನೇ ದಿನದ ಕೊನೆಯಲ್ಲಿ ಆಯ್ಕೆಯಾದ ಅಭ್ಯರ್ಥಿಗಳಿಗೆ ನೇಮಕಾತಿ ಅಪ್ಪಣೆ ಪತ್ರವನ್ನು ಅಲ್ಲೆ ಕೊಟ್ಟುಬಿಡುವ ವ್ಯವಸ್ಥೆಯಾಗಬೇಕು. ಹೀಗೆ ಮಾಡಿದ ನೇಮಕಾತಿ ಪಾರದರ್ಶಕವಾಗಿರುವ ಜೊತೆಗೆ ನಿಜವಾದ ಪ್ರತಿಭೆಯನ್ನು ಗುರುತಿಸಲು ಸಾಧ್ಯವಾಗಿರುತ್ತದೆ.

ವಿಶ್ವಗ್ರಾಮವಾಗಿರುವ ಈ ಜಗತ್ತಿನಲ್ಲಿ ಒಂದು ದೇಶ ನಮ್ಮಲ್ಲಿ ವಿಶ್ವವಿದ್ಯಾಲಯ ಆರಂಭಿಸುತ್ತೇವೆ ಎಂದಾಗ ಬೇಡ ಎನ್ನುವುದು ಸರಿಯಾಗಲಾರದು. ಆದರೆ ಅದು ಸಾಧ್ಯವಾಗುವ ವಾತಾವರಣ ನಮ್ಮಲ್ಲಿ ಸೃಷ್ಟಿಯಾಗಬೇಕು. ಬೇರೆ ಕ್ಷೇತ್ರದಿಂದ, ಉದಾಹರಣೆ ಕೊಡುವುದಾದರೆ, ಉಕ್ಕಿನ ಕೈಗಾರಿಕಾ ಕ್ಷೇತ್ರವನ್ನು ನೋಡಬಹುದು. ಇಲ್ಲಿಗೆ ಬರುವ ಯಾವುದೇ ಉದ್ಯಮಿ ಟಾಟಾ ಅಥವಾ ಮಿತ್ತಲ್ ಇವರ ಜೊತೆ ಸ್ಪರ್ಧಿಸಬೇಕು. ನಮ್ಮ ವಿಶ್ವವಿದ್ಯಾಲಯಗಳೂ ಆ ಮಟ್ಟಕ್ಕೆ ಬರುವವರೆಗೂ ಕಾಯಬೇಕು. ಇಲ್ಲದಿದ್ದಲ್ಲಿ ನಮ್ಮ ವಿಶ್ವವಿದ್ಯಾಲಯಗಳಿಗೆ ಹಾನಿಯಾಗಬಹುದು. ಈಗ ವಿದೇಶಿ ವಿಶ್ವವಿದ್ಯಾಲಯಗಳು ನಮಗೆ ಬೇಡ. ಅವನ್ನು ಆಹ್ವಾನಿಸುವುದಕ್ಕೆ ಇದು ಸಮಯವೂ ಅಲ್ಲ.


ಎನ್. ಎಸ್. ರಘುನಾಥ್
ಸಂ. ಎ-೧೧-೦೨, ಆಯಿಶ್ ಬಡಾವಣೆ, ೪ನೇ ಮುಖ್ಯರಸ್ತೆ,
ಬೋಗಾದಿ ೨ನೇ ಹಂತ, ಮೈಸೂರು - ೫೭೦ ೦೨೬



ವಿಶೇಷ ರಿಯಾಯಿತಿ!
2011ರ ಫೆಬ್ರವರಿ 6ರವರೆಗೆ ಮಾತ್ರ
77ನೇ ಅಖಿಲ ಭಾರತ
ಕನ್ನಡ ಸಾಹಿತ್ಯ ಸಮ್ಮೇಳನಾಧ್ಯಕ್ಷ
ಪ್ರೊ|| ಜಿ. ವೆಂಕಟಸುಬ್ಬಯ್ಯ
ಅವರಿಗೆ ಅಭಿನಂದನೆಗಳು
ಇಗೋ ಕನ್ನಡ
ಸಾಮಾಜಿಕ ನಿಘಂಟು
₹275
₹225
₹275
ಎರವಲು ಪದಕೋಶ
₹175
₹250 ಉಳಿತಾಯ
ಪ್ರೊ|| ಜಿ. ವಿ. ರಚಿಸಿರುವ ₹950 ಬೆಲೆಯ 4 ನಿಘಂಟುಗಳು
ಈ ಸಂದರ್ಭದಲ್ಲಿ ₹700ರ ರಿಯಾಯಿತಿ ದರದಲ್ಲಿ ಲಭ್ಯ
ಅಂಚೆ ಮೂಲಕ ಬೇಕಾದಲ್ಲಿ ವೆಚ್ಚ ಸೇರಿಸಿ ಒಟ್ಟು ₹740 ಮೊಬಲಗನ್ನು
ಕೆಳಗಿನ ವಿಳಾಸಕ್ಕೆ ಎಂ.ಒ ಅಥವಾ ಡಿ. ಡಿ. ಮೂಲಕ ಕಳಿಸಿ
ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೇಟ್ ಲಿಮಿಟೆಡ್
ಎಂಬೆಸಿ ಸೆಂಟರ್, 11, ಕ್ರೆಸೆಂಟ್ ರಸ್ತೆ, ಕೆ. ಪಿ. ಪೂರ್ವ, ಬೆಂಗಳೂರು - 1. ✆ 30578022, 22203580. ಫ್ಯಾಕ್ಸ್: 30578023.
e-mail : navakarnataka@gmail.com. URL : www.navakarnataka.com blog : http://navakarnataka.blogspot.com
ನವಕರ್ನಾಟಕ ಪ್ರಕಾಶನದ ಎಲ್ಲ ಮಳಿಗೆಗಳಲ್ಲೂ ಪ್ರದರ್ಶನಗಳಲ್ಲೂ ಈ ರಿಯಾಯಿತಿ ಲಭ್ಯ

## ಎಚ್. ಎಲ್. ಕೇಶವಮೂರ್ತಿ

ಬೆಳಗಿನ ವಾಕಿಂಗ್ ಶಾಸ್ತ್ರ ಮುಗಿದಿತ್ತು. ಹಿರಿಯ ನಾಗರಿಕರು ಎಂಬ ಹೆಸರಿನ ಹಣೆಪಟ್ಟಿ ಹೊತ್ತಿದ್ದ ನಾವು ಪಾರ್ಕಿನ ಸಿಮೆಂಟ್ ಬೆಂಚಿನ ಮೇಲೆ ಶೋಭಾಯಮಾನವಾಗಿದ್ದೆವು. ಘನ ಸರ್ಕಾರವೇ ಹಿರಿಯ ನಾಗರಿಕರು ಎಂದು ಘೋಷಿಸಿದ್ದರೂ ಪಾರ್ಕಿಗೆ ಬರುವ ಹದಿಹರೆಯದವರು 'ಮುದಿಯರು' ಎಂಬ ಬಿರುದಿನಿಂದಲೂ, ನಮ್ಮ ಘನಗಂಭೀರ ಚಿಂತನ ಮಂಥನಗಳನ್ನು 'ಗೊಡ್ಡುಹರಟೆ' ಎಂಬ ನಾಮಾಂಕಿತದಿಂದಲೂ ಗುರುತಿಸುತ್ತಿದ್ದದನ್ನು ಕುರಿತು ಚಿಂತಿಸುತ್ತಿದ್ದೆ. ಅಂತಹ ಅಮೃತ ಮುಹೂರ್ತದಲ್ಲೇ ರಾಯರು, ''ಒಂದು ಸಲ ಏನಾಯಿತು ಅಂದರೆ'', ಎನ್ನುತ್ತಾ ಯಾವುದೋ ವಿಷಯ ಹೇಳಲು ಪೀಠಿಕೆ ಹಾಕಿದರು. ರಾಯರು ಕೋರ್ಟಿನಲ್ಲಿ ಬೆಂಚ್ ಕ್ಲರ್ಕ್ ಆಗಿದ್ದವರು. ಈಗ ವಿಶ್ರಾಂತಿ ಜೀವನವನ್ನು ಬಹುಶ್ರಮದಿಂದ ಕಳೆಯಬೇಕಾದ ಅನಿವಾರ್ಯತೆ ಉದ್ಭವಿಸಿತ್ತು. ಅದು ಹಾಗಿರಲಿ, ರಾಯರ ದನಿ ಕೇಳಿ ಅವರತ್ತ ದೃಷ್ಟಿ ಕೇಂದ್ರೀಕರಿಸಿ, ಕಿವಿಯನ್ನು ಸಜ್ಜುಗೊಳಿಸಿದೆವು. ಕೋರ್ಟಿನ ಜವಾನ, ''ಆದರ್ಶ, ಆದರ್ಶ, ಆದರ್ಶ'' ಎಂದು ಮೂರು ಸಲ ಕೂಗಿದ. ಕುತೂಹಲದ ಕಣ್ಣುಗಳಿಂದ ಆದರ್ಶ ನೋಡಿದೆ. ಈ ಆದರ್ಶ ಯಾರು ಅಂದರೆ ಮೂರು ರೇಪು, ಎರಡು ಮರ್ಡರ್ ಮಾಡಿದ್ದೋನು! ತಾನು ಏನೂ ಮಾಡೇ ಇಲ್ಲ, ತಾನು ನಿರ್ದೋಷಿ ಅಂತ ಈ ರೇಪ್ ಆದರ್ಶ, ಮರ್ಡರ್ ಆದರ್ಶನ ವಾದವಾಗಿತ್ತು. ಆದರ್ಶ ಹಗರಣ ನೋಡಿದಾಗ ಅವನ ನೆನಪಾಯಿತು. ''ಇದೂ ಹಾಗೇ ಅಲ್ವಾ'' ಎಂದು ಹೇಳಿದಾಗ ಕುಚೋದ್ಯದ ದನಿ ಗುರುತಿಸಿದೆ. ಅವರ ಮಾತನ್ನು ಬಲವಾಗಿ ಪ್ರತಿರೋಧಿಸಿದೆ. 'ಜ್ಞಾನವೃದ್ಧರಾದ ನಾವು ಹಾದಿ ಬೀದಿಯಲ್ಲಿ ಹೋಗುವವರ ತರಹ ಮಾತನಾಡುವುದು ತರವಲ್ಲ' ಎಂದು ಊಹಿಸಿದೆ. ಆದರ್ಶ ಹಗರಣವೇ ಅಲ್ಲ ಎಂಬುದನ್ನು ಸಾಕ್ಷಿ-ಪುರಾವೆಗಳ ಸಹಿತ ಮಂಡಿಸಿದೆ. ಆದರ್ಶಕ್ಕೆ ನಾನೂ ಪಾಲುದಾರನಿರಬೇಕೆಂಬ ಅನುಮಾನ ಅವರ ಮುಖಚರ್ಯೆಯಲ್ಲಿ ಎದ್ದು ಕಾಣುತ್ತಿತ್ತು. ಆ ಕ್ಷಣವೇ ಜನತಾ ಜನಾರ್ದನನ ಮುಂದೆ ಹೋಗಬೇಕೆಂದು ತೀರ್ಮಾನಿಸಿದೆ. ಅದರ ಪ್ರತಿಫಲವೇ ಇದು :




ಯೋಧರು ಯುದ್ಧಭೂಮಿಯಲ್ಲಿ ಮರಣವನ್ನಪ್ಪುತ್ತಾರೆ.

ಆಮೇಲೆ ?

ಮಾಧ್ಯಮಗಳಲ್ಲಿ ಸುದ್ದಿ ; ಸಕಲ ಸರ್ಕಾರಿ ಮರ್ಯಾದೆಯೊಂದಿಗೆ ಅಂತ್ಯ ಸಂಸ್ಕಾರ !

ಅಲ್ಲಿಗೆ ಮುಗಿಯಿತು ದೇಶದ ಕರ್ತವ್ಯ !

ವಿಧವಾ ಪತ್ನಿಯರ ಚಿಂತೆ ಯಾರಿಗೂ ಇಲ್ಲ!

ಹೀಗಾಗಬಾರದು ಎಂಬುದು ಹಲವರ ಅಭಿಮತ. ಆದರೂ ಆಗುತ್ತಿರುವುದು ಅದೇ !

ಕಾರ್ಗಿಲ್ ಯುದ್ಧದಲ್ಲಿ ಯೋಧರು ಸತ್ತರು. ಮತ್ತೆ ಅದೇ ಸರ್ಕಾರಿ ಮರ್ಯಾದೆ. ವಿಧವೆ ಮಡದಿಯರ ಬದುಕು ನಿತ್ಯ ನರಕ.

ಕರಗಿತು ಕೆಲವು ಹೃದಯವಂತರ ಮನಸ್ಸು.

ದೇಶಕ್ಕಾಗಿ ತಮ್ಮ ಪ್ರಾಣವನ್ನೇ ತ್ಯಾಗ ಮಾಡಿದ ಹುತಾತ್ಮರಿಗೆ ಇದುವೆ ಭಾರತದ ಕೊಡುಗೆ? ಬದುಕಲು ಅವರ ಮಡದಿಯರಿಗೆ ಒಂದು ಯೋಗ್ಯ ತಾಣ ಬೇಡವೆ ? ಹಸನು ಮಾಡಬಾರದೆ ಅವರ ಬಾಳ !

ಚಿಂತಿಸಿದರು ಹೃದಯವಂತರು. ಅವರ ಶ್ರಮದ ಫಲ ಜನ್ಮತಾಳಿತು ಆದರ್ಶ ಹೌಸಿಂಗ್ ಸೊಸೈಟಿ.

ಜನ ಭೇಷ್ ಭೇಷ್ ಅಂದರು.

ಗೃಹ ನಿರ್ಮಾಣಕ್ಕೆ ನಿವೇಶನ !

ಮುಂಬಯಿಯ ಕೊಲಾಬಾದಲ್ಲಿ ಗೋಚರಿಸಿತು ಅದು. ವಿಶ್ವದಲ್ಲೇ ಅತಿ ದುಬಾರಿಯಾದ ಸ್ಥಳವಂತೆ ಅದು. ಆದರೇನಂತೆ. ಕಾರ್ಗಿಲ್ ಯೋಧರಿಗೆ ಇಷ್ಟೂ ಮಾಡಲಾಗದ ಕೃತಘ್ನವಾಗುವುದೆ ಭಾರತ? ಸಮುದ್ರದ ದಡದಲ್ಲಿ ಮನೆಯಾದರೆ... ಸಮುದ್ರದ ಮೇಲಿನಿಂದ ಬೀಸಿಬರುವ ತಂಗಾಳಿ ಕುಡಿಯುತ್ತಾ... ಆಹಾ ಅದ್ಭುತ ಕಲ್ಪನೆ !

ಪ್ರವರ್ತಕರು ಅರ್ಜಿ ಸಲ್ಲಿಸಿದರು.

ಮಡಿದ ಕಾರ್ಗಿಲ್ ಯೋಧರ ಮಡದಿಯರಿಗೆಂದರೆ ಇಲ್ಲ ಎನ್ನುವವರುಂಟೆ! ಅಂದರೆ ರಾಷ್ಟ್ರದ್ರೋಹ ವೆಸಗಿದಂತೆಯೇ ಸರಿ !



ಮಂಜೂರಾತಿ ದೊರೆಯಿತು. ಇನ್ನೇನು ನಿರ್ಮಾಣ ಪ್ರಾರಂಭಿಸಬೇಕು. ಅಷ್ಟರಲ್ಲಿ... ಈಗ ನಿರ್ಮಿಸಲು ಬಯಸಿರುವುದು ಆರು ಅಂತಸ್ತಿನ ಸಮುಚ್ಚಯ. ಯುದ್ಧ ನಡೀತಾನೆ ಇರುತ್ತೆ. ಯೋಧರು ಸಾಯ್ತಾನೆ ಇರ್ತಾರೆ. ಅವರ ಮಡದಿಯರ ಬಾಳೂ ಹಸನಾಗಬೇಕಲ್ವಾ...? ಈ ಕಲ್ಯಾಣ ಯೋಜನೆ ಆದರ್ಶ ಆಗಿರಬೇಕಲ್ವಾ... ಕಟ್ಟೋದು ಕಟ್ಟುತ್ತೀವಿ. ೩೧ ಅಂತಸ್ತಿನ ಸಮುಚ್ಚಯಾನೇ ಕಟ್ಟೋಣ ಅಂದುಕೊಂಡರು ಪ್ರವರ್ತಕರು.

ಅನಂತರದಲ್ಲಿ ಅವರಿಗೆ ಒಂದು ವಿಷಯ ಹೊಳೀತು. ಯೋಧರ ವಿಧವಾ ಪತ್ನಿಯರೇ ಅಲ್ಲಿ ವಾಸಕ್ಕೆ ಬಂದರೆ ಅದೂ ಒಂದು ತರಹದಲ್ಲಿ ಮಿಲಿಟರಿ ಕ್ಯಾಂಪ್ ಇದ್ದ ಹಾಗೇ ಇರುತ್ತೆ. ಇತರೆ ನಾಗರಿಕರಿಗೂ ಅವಕಾಶ ನೀಡಿದರೆ 'ಕಾಸ್ಮೊಪಾಲಿಟನ್ ಲುಕ್' ಬರ್‍ತದಲ್ಲಾ... ಹಾಗಾದರೆ ಹೀಗೆ ಮಾಡೋಣ, ಶೇಕಡ ೪೦ ಭಾಗ ಮನೆಗಳನ್ನು ಇತರರಿಗೆ ಕೊಡೋಣ ಎಂದು ತೀರ್ಮಾನಿಸಿದರು.

ಆದರೇನಾಯ್ತು ಅಂತೀರಿ. ಇದ್ದದ್ದು ನೂರ ಒಂದು ಮನೆಗಳು. ಆ ಮನೆಗಳಿಗೆ ಕಾರ್ಗಿಲ್ ವಿಧವೆಯರು ಯಾರೂ ಬರಲಿಲ್ಲ! ಮನೆಕಟ್ಟಿಸಿ ಆಗಿದೆ. ಆದರೆ ವಾಸಕ್ಕೆ ಜನ ಇಲ್ಲ!

ಏನು ಮಾಡಬೇಕು ಪ್ರವರ್ತಕರು ?

ಮುಖ್ಯಮಂತ್ರಿಗಳ ಬಳಿಗೆ ಹೋದರು. ತಮ್ಮ ಗೋಳನ್ನು ನಿವೇದಿಸಿಕೊಂಡರು. ಅವರ ಸಂಕಟ ನೋಡಲಾಗದೆ ಅವರು 'ಇನ್ನೇನ್ ಮಾಡೀರಿ. ಮನೆ ಕಟ್ಟಾಗದೆ. ಹಂಗೇಬುಟ್ರೆ ಬೇಗ ಹಾಳಾಯ್ತದೆ. ಅದಕ್ಕೆ ಬಿಡಬಾರದು. ನಮ್ಮತ್ತೆಗೊಂದ, ನನ್ನ ನಾದಿನಿಗೊಂದ, ನನ್ನ ಭಾವಮೈದನಿಗೊಂದ ಬರೀರಿ' ಅಂದ್ರು. ಮಾಜಿಗಳೂ, ಆಯಕಟ್ಟಿನ ಸ್ಥಾನದಲ್ಲಿರೋ ಮಂದೀನೂ ಕಾರ್ಗಿಲ್ ವಿಧವೆಯರಿಗೆ ಕಟ್ಟಿಸಿದ ಮನೆಗಳು ಹಾಳಾಗ ಬಾರದು ಎನ್ನುವ ಘನ ಉದ್ದೇಶದಿಂದ ಬೇಕು ಬೇಕಾದವರಿಗೆ ಬರೆಸಿದ್ರು. ಕೆಲವು ಮಿಲಿಟರಿ ಅಧಿಕಾರಿಗಳೂ ಇದರೊಳಗೆ ಸೇರ್‍ಕಂಡ್ರು! ಪಾಪ ಅವರಿಗೆ ಇದು ಕಾರ್ಗಿಲ್ ವಿಧವೆಯರಿಗೆ ಮೀಸಲಿರುವ ಮನೆಗಳು ಅನ್ನೋದೆ ತಿಳಿದಿರಲಿಲ್ಲವಂತೆ! ಹಗರಣ ಅಂತ ಎಲ್ಲಾ ಕೂಗಾಡಕ್ಕೆ ಹತ್ತಿದರಲ್ಲ ಆಗ ಅವ್ರು ಅವನ್ನ ವಾಪಸ್ಸು ಮಾಡಿದರಂತೆ! ಶುದ್ಧ ಹೇತ್ಲಾಂಡಿ ಮುಂಡೇವು!

ಅಲ್ಲ ಇದನ್ನೆಲ್ಲ ಅರ್ಥಮಾಡಿಕೊಳ್ಳದೆ 'ಆದರ್ಶ ಹಗರಣ' ಅಂತಾರಲ್ಲ ಇದು ನ್ಯಾಯವಾ...?



ಎಚ್. ಎಲ್. ಕೇಶವಮೂರ್ತಿ
ಸಂಖ್ಯೆ ೧೩, ಹೌಸಿಂಗ್ ಬೋರ್ಡ್ ಅಪಾರ್ಟ್‌ಮೆಂಟ್ಸ್, ಅಗ್ನಿಶಾಮಕ ಠಾಣೆ ಎದುರು, ಗುತ್ತಲು ಅಂಚೆ, ಮಂಡ್ಯ - ೫೭೧ ೪೦೧

■ ನಾಗಮಂಗಲ ಕೃಷ್ಣಮೂರ್ತಿ

ಇಡೀ ಊರು ಪ್ರಕ್ಷುಬ್ಧಗೊಂಡಿದೆ. ತಮ್ಮೂರ ನೆತ್ತಿಯ ಮೇಲೆ ಚಾಚಿಕೊಂಡ ಕರಿನೆರಳು ಜನಮಾನಸದ ಧೃತಿಗೆಡಿಸಿದೆ. ನಾಡಿನ ಅಗ್ರ ರೈತ ನಾಯಕರು ಜಾಗೃತಿ ಸಭೆ ನಡೆಸಿದ್ದಾರೆ.

''ಯಾವ್ದೋ ದೇಶದಿಂದ ತಂದು ಇಲ್ಲಿ ಬೀಜ ಬಿತ್ತರಂತೆ... ಬೆಳೆ ಬೆಳ್ದರಂತೆ ?

''ಯಾಕೆ ನಮ್ಮತ್ರ ಬೀಜಗುಳಿಲ್ವಾ...?! ಹಂಗಾದ್ರೆ ನಾವೆಲ್ಲಾ ಸೀಡ್‌ಲೆಸ್ಸಾ...? ತಾತ-ಮುತ್ತಾತರ ಕಾಲದಿಂದ ಮ್ಮದೇ ಬೀಜ, ನಮ್ಮದೇ ಹೊಲ... ಬೆಳೆದಿಲ್ವಾ ಬೆಳೆನಾ ? ಸ್ವಾಮಿ... ನಮ್ದು ಜವಾರಿ ಬೀಜ ಅದೆ. ನಿಮ್ಮ ಗಿಲೀಟಿನ ೀಜ ನೀವೇ ಮಡಿಕ್ಕಳಿ, ನಮಗೆ ಬ್ಯಾಡ. ಪ್ರಪಂಚಕ್ಕೇ ಗೊತ್ತು ನಮ್ಮ ಬೀಜ-ಬೆಳೆ ಎಂಥಾದ್ದು ಅಂತಾವ.

''ಕೈಗಾರಿಕೆ, ಲಾಬ್ರೇಟ್ರಿ, ಲ್ಯಾವೇಟ್ರಿ ಎಲ್ಲಾ ಒಂದೇ ತಾವ ಬರಂಗೆ ಅದೆಂಥದೋ ಕಾಂಪ್ಲೆಕ್ಸ್ ಮಾಡರಂತೆ ? ಂಗಂದ್ರೆ ಏನು ? ಹಿಟ್ಟು-ಸೊಪ್ಪು -ಅನ್ನ-ಸಾರು ಎಲ್ಲಾ ವಂದ್ಗೇ ಕಲಸಿಕೊಂಡು ಉಣ್ಣೋದು ಅಂತ್ಲಾ...?!

''ತಿಳ್ಕಳಿ ಕಾಂಪ್ಲೆಕ್ಸು ಅಂದ್ರೆ ಸಂಕೀರ್ಣ ಅಂತಾ. ಇನ್ನೊಂದು ಅರ್ಥದಲ್ಲಿ ಎಲ್ಲಾ ಗೋಜಲು-ಗೊಂದಲ ಇವು ೀಕಾ ನಮಗೆ ?''

# 'ದೀಪಾನ ಕೊಳ್ಳಿರಯ್ಯಾ...'



ಅಗ್ರನಾಯಕರ ಅಮೋಘ ಾಗ್‌ಝರಿ, ಉಪನಾಯಕರ ನುಮೋದನೆ ರೈತ ಮಕ್ಕಳ ರತಾಡನದಲ್ಲಿ ಸಭೆ ಮುಗಿದಿತ್ತು. ದರೆ ಮೂಲ ಸಮಸ್ಯೆ ಮಾತ್ರ ಂಗೇ ಉಳಿದಿತ್ತು.

* * *

ಮರವು ಗ್ರಾಮದ 'ದೇವರ ಪಾಳು' ಎಂಬ ದೆಕರೆ ಗ್ರಾಮಠಾಣಾ ಜಾಗವನ್ನು ವಿದೇಶಿ ಕಂಪನಿಯೊಂದಕ್ಕೆ ಸರ್ಕಾರ ಂಜೂರು ಮಾಡಿತ್ತು. ಅಲ್ಲಿ ಆ ಮಲ್ಟಿನ್ಯಾಶನಲ್ ಕಂಪೆನಿಯು ಬಿ.ಟಿ. ಬೀಜೋತ್ಪಾದನಾ ಘಾರಂ, ್ಯಾಬರೇಟರಿ, ಕೃಷಿ ಆಧಾರಿತ ಕೈಗಾರಿಕೆ, ನೇರ ಮಾರಾಟ ಮಳಿಗೆಗಳು, ಡೆಮಾನ್‌ಸ್ಟ್ರೇಷನ್‌ಗಾಗಿ ಬೆಳೆ ಬೆಳೆಯುವ ದ್ದೆ... ಇತ್ಯಾದಿ ಒಂದೇ ಜಾಗದಲ್ಲಿ ಪಿವಿಧೋದ್ದೇಶದ 'ಅಗ್ರಿಕಲ್ಚರಲ್ ಕಾಂಪ್ಲೆಕ್ಸ್' ನಿರ್ಮಿಸಲು ಉದ್ದೇಶಿಸಿತ್ತು.

ಸದರಿ ಸಂಗತಿಯು ರೈತ ನಾಯಕರ ಆಕ್ರೋಶಕ್ಕೆ, ಊರ ಜನರ ಆಘಾತಕ್ಕೆ ಕಾರಣವಾಗಿತ್ತು. ಊರ ಸಂತೆಗೆ, ುಡುಗರ ಆಟಕ್ಕೆ, ಸಂಕ್ರಾಂತಿಯಲ್ಲಿ ದನಕರು ಕಿಚ್ಚುಹಾಯಲಿಕ್ಕೆ, ನಾಟಕ ಬಯಲಾಟಗಳಿಗೆ... ಹೀಗೆ ಸಕಲಕ್ಕೂ ದಗುವ ಈ ಜಾಗವನ್ನು ಉಳಿಸಿಕೊಳ್ಳುವುದು ಹೇಗೆಂಬುದೇ ಎಲ್ಲರ ಚಿಂತೆಯಾಗಿತ್ತು.

ದೇವರ ಪಾಳಿನ ಉತ್ತರ ತುದಿಯ ಮಹಾನವಮಿ ದಿಬ್ಬದಂತೆ ತೋರುವ 'ಮಹಾಮಣ್ಣಿನ ದಿಬ್ಬ'ದ ಎದುರಿನ ೇಪಿನ ಮರದ ನೆರಳಿನಲ್ಲಿ ಗ್ರಾಮಸ್ಥರ ಚಿಂತನಾ ಚಾವಡಿಯು ಚಾಲನೆಗೊಂಡಿತ್ತು. ವಿಶಾಲವಾದ ದೇವರ ಪಾಳು, ಲ್ಲಿ ಆಟವಾಡುವ ಹುಡುಗರ ಸಡಗರ, ಮಣ್ಣಿನದಿಬ್ಬದ ನೆತ್ತಿಯ ಮೇಲೆ ನಿಂತ ಪುಟ್ಟ ಸಂಕ್ರಾಂತಿ ಗುಡಿ ಇವೇ ಇತ್ಯಾದಿ ದೃಶ್ಯಗಳು ಅಲ್ಲಿ ಕುಂತವರ ಕಣ್ಣು ತುಂಬುತ್ತಾ ಭಾವ ಕೋಶಗಳನ್ನು ಮೀಟುತ್ತಿದ್ದವು !

ಬಿಸಿಬಿಸಿ ಚರ್ಚೆ-ತರ್ಕ, ವಿವಿಧ ಉಪಾಯ-ಆಲೋಚನೆಗಳು ಮೂಡಿ ಮಥಿಸಿ 'ಮಹಾಮಣ್ಣಿನ ದಿಬ್ಬ'ದ ಮೇಲಿರುವ ಪುಟ್ಟ ಸಂಕ್ರಾಂತಿ ಗುಡಿಯನ್ನು ಕೆಡವಿ ಅಲ್ಲಿ ಬಸವಣ್ಣನ ದೊಡ್ಡ ಗುಡಿ ಕಟ್ಟಿ ಭಾರೀ ದನಗಳ ಜಾತ್ರೆ ನಡೆಸುವ ಮೂಲಕ ರೈತನಾಯಕರನ್ನು ಬದಿಗಿರಿಸಿ 'ಧರ್ಮಸೂಕ್ಷ್ಮ'ವಾಗಿ ಪರಿಹಾರ ಕಂಡುಕೊಳ್ಳುವ ನಿರ್ಧಾರ ಸಭೆಯಲ್ಲಿ ಪ್ರಕಟಗೊಂಡಿತ್ತು.

ತತಾಯಗತಾಯ 'ವಿದೇಶಿ ಬೀಜಾಸುರ'ರಿಂದ ದೇಸಿ

ದೇವರ ಪಾಳನ್ನು ಉಳಿಸಿಕೊಳ್ಳುವ ಏಕಾಂತದ ಕಾರ್ಯ ಪೂಜಿಯು ಇಡೀ ಹಳ್ಳಿಯನ್ನೇ ಟೊಂಕ ಕಟ್ಟಿ ನಿಲ್ಲುವಂತೆ ಮಾಡಿತ್ತು.

ಊರ ಉತ್ಸಾಹಿ ಹುಡುಗರ ದಂಡು ಕ್ರಿಯಾಶೀಲ ಯುವಕ ದ್ಯಾವಣ್ಣನ ನೇತೃತ್ವದಲ್ಲಿ, ಗ್ರಾಮ ಮುಖಂಡರ ಮಾರ್ಗದರ್ಶನದಲ್ಲಿ 'ಮಹಾಮಣ್ಣಿನ ದಿಬ್ಬ'ವನ್ನು ಅಗೆದು ಬಸವಣ್ಣನ ಗುಡಿಗೆ ತಳಪಾಯ ತೋಡುವ ಕಾಯಕದಲ್ಲಿ ತೊಡಗಿತ್ತು. ಶ್ರಮದಾನವು ಯುದ್ಧೋತ್ಸಾಹದಲ್ಲಿ ನಡೆದಿರಲು, ಅಗೆಯುವ ಹಾರೆಗಳಿಗೆ ಅಡೆತಡೆಯೂ, ಗುದ್ದಲಿ-ಪಿಕಾಸಿಗಳಿಗೆ ಪೀಕಲಾಟವೂ ಉಂಟಾಗಿ ಅವು ಉಂಟುಮಾಡುವ ಠಣ್-ಠಣ್...ಢಡ್-ಢಡ್ ಶಬ್ದಗಳಿಗೆ ಜನಮನವು ಚಿಂತೆಗೀಡಾಯಿತು.

''ದ್ವೊಡ್ಡ ಬಂಡೆ ಸಿಕ್ಕ್ಯದೆ.. ಹಾರೆ ಗುದ್ದಲೀಲಿ ಆಗೋ ಕೆಲ್ಸವಲ್ಲ... ಡೈನಮೆಂಟ್ ತರ್ಸುರ್ರಾ...'' ಅಂತ ಯಾರೋ ಅಂದರು. ''ಅಣ್ಣೋ, ಇಲ್ಲಿ ಹಾರೆ ಇಳಿತಾದೆ...'' ಅಂತಾ ಬುತ್ತಿಗಿಡ್ಡ ಅಗೆದು ತೋರುತ್ತಾ ಧಸಕ್ಕನೆ ಭೂಮಿಗಿಳಿದುಬುಟ್ಟ. ಅಲ್ಲಿ ಸುತ್ತು ಬಾವಿಯಂಥಾ ಹೊಂಡವೊಂದು ಬಾಯಿ ತೆರೆದಿತ್ತು! ಕಿಸಕ್ಕನೆ ನಕ್ಕ ಹುಡುಗರು ತಕ್ಷಣವೇ ಹಗ್ಗ ಬಿಟ್ಟು ಮೇಲೆತ್ತಿಕೊಂಡರು. ಪರಿಶೀಲಿಸಿದ ಹಿರಿಯರು ಅದೊಂದು 'ಭತ್ತ ತುಂಬುವ ಹಗೇವು' ಇರಬಹುದು ಎಂದು ಅಂದಾಜಿಸಿದರು.

ಮಣ್ಣು ಬಗೆದಂತೆ ಚೆಂಡುಗಳನ್ನು ಹೋಲುವಂಥಾ ವಿವಿಧ ಆಳತೆಯ ಕಲ್ಲುಗುಂಡುಗಳು, ಹಸೆಕಲ್ಲು, ಒರಳುಕಲ್ಲು, ಮುರಿದ ಶಾಸನ, ವೀರಗಲ್ಲುಗಳು, ಚಪ್ಪಡಿ, ಕಲ್ಲುಕಂಬಗಳು ಸಿಗಲಾರಂಭಿಸಿದವು. ...ಇವೇ ಮುಂತಾದ ಘನವಸ್ತುಗಳು ಹಾರೆ, ಗುದ್ದಲಿಗಳಿಗೆ ತಡೆಯೊಡ್ಡುತ್ತಿದ್ದರೂ ಅಗೆತ ನಿರಾತಂಕವಾಗಿತ್ತು.

ಹಾರೆ ತುದಿಗೆ ಸಿಕ್ಕಿಕೊಂಡ ಮನುಷ್ಯನ ಅಸ್ಥಿಪಂಜರ ವೊಂದು ಧಿಗ್ಗನೆ ಮೇಲೆದ್ದಿತ್ತು! ಎಮ್ಮೆಯೋ-ದನವೋ ಆಗಿರಬಹುದಾದ ಪ್ರಾಣಿಯ ಅಸ್ಥಿಪಂಜರವೂ ಪತ್ತೆಯಾಗಿ ಜನ ಭೀತರಾದರು! ಆದರೂ ಮುಂದಿಟ್ಟ ಹೆಜ್ಜೆ ಹಿಂತೆಗೆಯಲುಂಟೇ, ಎಂಬ ಛಲದಲ್ಲಿ ಗ್ರಾಮಸ್ಥರು ಮುಂಬರಿದಾಗ ಕಂಡದ್ದು ಬರೇ ವಿಸ್ಮಯದ ಸಂತೆ!!

...ಗಾಡಿ ಚಕ್ರದಂಥಾ ದೊಡ್ಡ ಕಬ್ಬಿಣದ ಬಳೆ, ತುಕ್ಕಿಡಿದ ನೇಗಿಲು, ಕುಡುಗೋಲು, ತುಕ್ಕೇ ಹಿಡಿಯದ ಭರ್ಜಿ,ಈಟಿ, ಖಡ್ಗಗಳು... ಕೊಳಗ, ಬೀಸೋಕಲ್ಲು, ಒನಕೆ, ಒಡೆದ ಗುಡಾಣ ಹಾಗೂ ಬೀರಿನ ಬೊಡ್ಡೆಗಳು; ಅಗೆದಂತೆಲ್ಲಾ ಮತ್ತಷ್ಟು ಹಗೇವುಗಳು, ಚಪ್ಪೆ ಕಲ್ಲು ಮುಚ್ಚಲಾದ ಚಿಕ್ಕ-ದೊಡ್ಡ ಮಡಕೆಗಳು, ಕಬ್ಬಿಣದ ದೊಡ್ಡ ಪೆಠಾರಿ ಸಿಕ್ಕವು.

ಜನರ ಧ್ಯಾಸವೆಲ್ಲಾ ಮಣ್ಣಿನ ಮಡಕೆಗಳಲ್ಲೇನಿದೆ, ಕಬ್ಬಿಣದ ಪೆಟ್ಟಿಗೆಯೊಳಗೆ ನಿಧಿ ಇರಬಹುದೇ, ಎಂಬ ಜಿಜ್ಞಾಸೆಯಲ್ಲಿ ಮುಳುಗಿತ್ತು. ಅದೇ ಕುತೂಹಲದಲ್ಲಿ ಮಡಕೆಗಳನ್ನು ಒಡೆದು ನೋಡಲಾಗಿ, ಎಂಥವೋ ಥರಾವರಿ ಬೀಜಗಳು, ಬೊಡ್ಡೆ-ಬೇರುಗಳು... ಥುತ್ತೇರಿ! ಎಂದು ಮಡಕೆಗಳನ್ನು ಪಕ್ಕಕ್ಕೆಸೆದು, ಕಬ್ಬಿಣದ ಪೆಠಾರಿ ಯನ್ನು ಹಾರೆಯಿಂದ ಮೀಟಿದರು. ಪೆಠಾರಿ ಯೊಳಗೊಂದು ತಾಳೆಗರಿಗಳ ಕಟ್ಟು ಇದ್ದರೆ, ಅದರ ಕೆಳಗಿನ ಕಪಾಟಿನಲ್ಲಿ ಏಕತಾರಿಯೊಂದು ತಣ್ಣಗೆ ಮಲಗಿತ್ತು.

...ಮಹಾಜನತೆ ನಿರಾಶರಾದರು. ಕೆಲಸ ಕೈಬಿಟ್ಟು ಬೀಡಿ ಕಚ್ಚಿದ ಬಾಯಲ್ಲಿ ಥರಾವರಿ ಮಾತುಗಳು, ಕಂಡು ಕೇಳಿರದ ಕಥೆಗಳು ಹುಟ್ಟಿದವು. ಪುಕಪುಕನೆ ಉಗುಳುವ ಬೀಡಿ ಹೊಗೆಯ ಸಂಗಡ ಅವು ನಭೋಮಂಡಲವ ತಲುಪುವ ಹಾದಿಯಲ್ಲಿ ಕರಗಿ ಕಾಣದಾಗುತ್ತಿರಲು...

ಕಾದ ನೆಲದ ಹಬೆಗೋ ಬಗೆಬಗೆಯ ಹೊಗೆಯ ದಟ್ಟಣೆಗೋ ಮೋಡಗಳು ಕಪ್ಪಿಟ್ಟು ಹನಿ ಉದುರಿಸ ಲಾರಂಭಿಸಿದವು! ಬೆಳಿಗ್ಗೆಯಿಂದ ಸೀದ ನೆತ್ತಿಗೆ ತಣ್ಣಗಾಯಿತು. ಜನರು ಜೋರಾದ ಮಳೆಗೆ ಬೆದರಿ ಓಟ ಕಿತ್ತರು. ಓಡುವ ಭರದಲ್ಲಿ 'ಐನೋರ ಪದ್ಮನಾಭು' ಬಹುಭಕ್ತಿಯಿಂದ ತಾಳೆಗರಿ ಕಟ್ಟನ್ನು ಟವೆಲ್ಲಿನಲ್ಲಿ ಸುತ್ತಿಕೊಂಡರೆ, ದ್ಯಾವಣ್ಣ ಏಕತಾರಿಯ ಇರುಕಿಕೊಂಡ. ಇನ್ನುಳಿದವರು ಅವರವರ ಆಸೆ-ಆಸಕ್ತಿಗೆ ತಕ್ಕಾಗಿ ಸಿಕ್ಕಿದ್ದನ್ನು ಎತ್ತಿಕೊಂಡು ದಿಕ್ಕಾಪಾಲಾದರು.

* * *

ಮೈಮುರಿದು ದುಡಿದು ಸಾಕಾಗಿ ಇಡೀ ಮರವು ಗ್ರಾಮವೇ ಮೈಮರೆತು ಮಲಗಿತ್ತು. ದ್ಯಾವಣ್ಣನ ತಲೆತುಂಬ ಬಸವಣ್ಣನ ಗುಡಿಯ ಪಾಯಕ್ಕೆ ಶುರುವಾದ ಅಗೆತ ಊರೊಟ್ಟಿನ ಉತ್ಖನನವಾಗಿ ಮಾರ್ಪಟ್ಟಿದ್ದು, ಚಿತ್ರವಿಚಿತ್ರ ವಸ್ತುಗಳು ಸಿಕ್ಕಿದ್ದು, ಪೆಠಾರಿ-ಮಡಕೆಗಳನ್ನು ಒಡೆದದ್ದು.... ಇತ್ಯಾದಿ ಸಂಗತಿಗಳೇ ತುಂಬಿದ್ದವು. ಚಿತ್ರವತ್ತಾಗಿ ಕೆತ್ತಲ್ಪಟ್ಟ ಕಲ್ಲುಕಂಬಗಳು, ಉಬ್ಬು

ಲಿಗಳು, ಅವನ ನಿದಿರೆಯ ತುಂಬೆಲ್ಲಾ ಕದಲುತ್ತಾ ಹೊಸದೇ ಲೋಕವೊಂದನ್ನು ಕಟ್ಟಿಕೊಳ್ಳುತ್ತಿದ್ದವು.

ಕಂಬಗಳಿಗೆ ಮೆತ್ತಿದ್ದ ಮಣ್ಣು ಕೀಳಲು, ನಟು ವಾಂಗದ ಸದ್ದು ಕೈಯ ತಲುಪಿ, ಹೆಜ್ಜೆ-ಗೆಜ್ಜೆಯ ಪಲುಕು ಕಿವಿಯ ತುಂಬಿ, ನಾದಲೀಲೆಯ ಸೊಲ್ಲೊಂದು ಮನವ ತುಂಬಿತ್ತು. ಮರುಗಳಿಗೆಯೇ –

ಒಡಲೊಳು ಕಿಚ್ಚದಾಗುವುದು, ಅರೆಗಳಿಗೆಯು
ತಡೆದರೆ ಪ್ರಾಣ ಹೋಗುವುದು
ನುಡಿದರೆ ನಿಮಗೆ ತಾಕುವುದು, ಒಂದು
ಪಡಿಯಕ್ಕಿಗಾಗಿ ಅಪಕೀರ್ತಿಬಹುದು
ಊಟಕೆ ಬಂದೆವು ನಾವು...

ಅಲ್ಲೆಲ್ಲಾ ಚೆಲ್ಲಾಡಿದ್ದ ಮುರಿದ ಮಡಕೆಯ ಚೂರುಗಳೇ ಒಟ್ಟಾಗಿ ಹಾಡಿದಂತೆ, ಹಿನ್ನೆಲೆಗೆ ಏಕತಾರಿ ನುಡಿದಂತೆ ಭಾಸವಾಗಿ ಧಿಗ್ಗನೆದ್ದ ದ್ಯಾವಣ್ಣ..! ಕಗ್ಗತ್ತಲು... ಜೀರುಂಡೆಗಳು ಚೀರುತ್ತಿವೆ. ತನಗೆ ತಾನೇ ಸಾಂತ್ವನಿಸಿ ಕೊಡು ಮತ್ತೆ ಮಲಗಿದ. ಜೋಂಪು ಆವರಿಸಿದಂತಾಯಿತು.

ಎಲ್ಲೋ ಒಂದೆಡೆಯಲ್ಲಿ ಇದ್ದೆನಲ್ಲ, ನಾ
ನಿಲ್ಲದಂತ ಜಗವೀಗ ತೋರದಲ್ಲ...

ಯಾವುದೋ ಬೆರಳು ಏಕತಾರಿಯ ಮೀಟಿ ವಿಷಾದ ರಾಗವ ಮಿಡಿಯುತ್ತಿತ್ತು. ಅಷ್ಟರಲ್ಲೇ ತಟ್ಟನೆ ಮುಖದ ಮೇಲೆ ಏನೋ ಬಿದ್ದ ಸದ್ದು... ಕಣಜದ ಮೇಲೆ ಒರಗಿಸಿದ್ದ ಪುರಾತನ ಏಕತಾರಿಯು ಬೆಕ್ಕು-ಇಲಿಗಳ ಚೆಲ್ಲಾಟಕ್ಕೆ ಉರುಳಿಬಿದ್ದಿತ್ತು. ಇದಾಗಿ ದ್ಯಾವಣ್ಣನ ಕಣ್ಣಿಗೆ ನಿದ್ದೆಯು ಹತ್ತದಾಗಿ ಶರೀರವಿಲ್ಲದ ಶಾರೀರದ ಮಿಡಿತ-ನುಡಿತಗಳ ಸೋಜಿಗಕ್ಕೆ ಬೆರಗುಗಣ್ಣಾಗಿ ಕೂತುಬಿಟ್ಟನು.

*　　　*　　　*

ಮರವು ಗ್ರಾಮವು ರಾತ್ರಿ ಕಳೆದು ಬೆಳಗಾಗುವುದರಲ್ಲಿ ನಾಡಿನಾದ್ಯಂತ ಸುದ್ದಿಬಿಂದುವಾಗಿತ್ತು!

ಸ್ವಾವಲಂಬಿ ಗ್ರಾಮ್ಯ ಬದುಕಿನ ಪರಿಕರಗಳು ಪತ್ತೆಯಾಗಿ ಕಲ್ಲು-ಗುಂಡು, ಹಗೇವುಗಳಿಗೊಂದೊಂದು ಕಥೆ ಹುಟ್ಟಿಕೊಂಡವು.

ಇಡೀ ಗ್ರಾಮವೇ ಎದ್ದು ಆಕಳಿಸಿ ಮೈಮುರಿದು ಕಥೆಗಳಿಗೆ ಕಿವಿಯಾಗುವ ಮೊದಲೇ ಹತ್ತಿಕ್ಕಲಾರದ ಕುತೂಹಲದಿಂದ ದ್ಯಾವಣ್ಣ ನಸುಕಿನಲ್ಲೇ ಸದರಿ ಸ್ಥಳವ ತಲುಪಿದ್ದ. ಮಳೆ ತೊಳೆದ ನಭವು ಕೊಂಚ ಬೆಳ್ಳಗಾಯಿತು. ಸೂರಿಯ ಸ್ವಾಮಿ ಕಿರುನಗೆ ಬೀರಿದ, ಒಡೆದ ಮಡಕೆ ಎಸೆಯಲಾದ ಜಾಗೆಯಲ್ಲಿ ಕಿಸರು ಗಣ್ಣುಬಿಟ್ಟಿದ್ದ ಹೊಸ ಲೋಕವೊಂದು ಕಣ್ಣಿಗೆ ರಾಚಿತು. ದ್ಯಾವಣ್ಣ ವಿಸ್ಮಿತನಾದ!

...ಅಲ್ಲೆಲ್ಲಾ ಚೆಲ್ಲಾಡಿದ್ದ ಎಂತೆಂಥದೋ ಬೀಜ, ಬೊಡ್ಡೆ-ಬೇರುಗಳು ಮೊಳೆತು, ಚಿಗಿತು ಹಸಿರಾಗಿ ನಲಿದಾಡುತ್ತಿದ್ದವು. ಅಚ್ಚರಿ, ಗೊಂದಲ ಅನುಮಾನ ಗಳೊಂದಿಗೆ ಅವೇನೆಂದು ಪರೀಕ್ಷಿಸಿಯೇ ಬಿಡುವ ತವಕದಲ್ಲಿ ದ್ಯಾವಣ್ಣ ಕಾರ್ಯಕ್ಕೆ ಉನ್ಮುಖನಾದ!

ಅಷ್ಟೊತ್ತಿಗೆ... ನಿಧಾನಕ್ಕೆ ಆಕಳಿಸಿ ನೆಟಿಗೆ ಮುರಿಯುತ್ತಾ ಥರಾವರಿ ಸುದ್ದಿ-ಸ್ವಾರಸ್ಯಗಳೊಡನೆ ದ್ಯಾವಣ್ಣನ ಗುಡಿಯ ಹದಿಪಾಯದೆಡೆಗೆ ಸಮಸ್ತ ಮರವು ಗ್ರಾಮವೇ ಧಾವಿಸತೊಡಗಿತು.

"ಒಂದೆ ರಾಜರ ಕಾಲದಲ್ಲಿ ಇಲ್ಲಿ ದೊಡ್ಡ ಅರಮನೆ ಇತ್ತು. ಹಂಗೆ... ದೊಡ್ಡ ದೇವಸ್ಥಾನವೂ ಇತ್ತು. ಅರಮನೆಯಿಂದ ದೇವರ ಗುಡಿಗೆ ಪ್ರವೇಶದ್ವಾರವಿತ್ತು. ಗರ್ಭಗುಡಿಯ ಎಡಭಾಗದ ಸುರಂಗ ಶ್ರೀರಂಗಪಟ್ಟಣ, ಮೇಲುಕೋಟೆಗೆ ಹೋಗುವುದಂತೆ...!! ಅದಕ್ಕೇ ಇದನ್ನು 'ದೇವರಪಾಳು' ಅಂತಾ ಕರೀತಾರೆ. ಅರಮನೆ ಅಂದ್ಮೇಲೆ ನಗ-ನಾಣ್ಯ ಇದ್ದದ್ದೇ..! ಇನ್ನೂ ಅಗೆದರೆ ನಿಧಿ ಸಿಗಬಹುದು" ಎಂಬುದು ಅಲ್ಲಿ ನೆರೆದವರ ಮಾತು-ಕತೆಗಳ ಒಟ್ಟು ಸಾರಸಂಗ್ರಹವಾಗಿತ್ತು.

*　　　*　　　*

ಗ್ರಾಮದ ಇಬ್ಬರು ಕ್ರಿಯಾಶೀಲ ಹುಡುಗರು ಬೇರೆಬೇರೆ ದಿಕ್ಕುಗಳಲ್ಲಿ 'ಮಹಾಮಣ್ಣಿನ ದಿಬ್ಬ'ದ ರಹಸ್ಯವನ್ನು ಭೇದಿಸಲು ಹೊರಟಿದ್ದರು.

ಐನೋರ ಪದ್ಮನಾಬು ಹಿರಿಯ ಸಂಸ್ಕೃತ ವಿದ್ವಾಂಸರಲ್ಲಿಗೆ ತನಗೆ ಸಿಕ್ಕ ತಾಳೆಗರಿಗಳ ಕಟ್ಟನ್ನು ಒಯ್ದು ಅದೇನೆಂದು ತಿಳಿಯಬಯಸಿದನು. "ಇದೊಂದು ವೇದಗಳ ವಿಮರ್ಶಾ ಕೃತಿಯಾಗಿದ್ದು, ಬಹುಶಃ ವಿಜಯ ನಗರ ಕಾಲದಲ್ಲಿದ್ದ ಮಾಧವ-ಸಾಯಣರೆಂಬ ಮಹಾ ವಿದ್ವಾಂಸರು ಸಂಪಾದಿಸಿದ 'ವೇದಾರ್ಥ ಪ್ರಕಾಶನ' ಗ್ರಂಥ ಇದೇ ಇರಬಹುದು" ಎಂಬ ಅಭಿಪ್ರಾಯ ಬಂತು. ಇದರಿಂದ ಪುಳಕಿತನಾದ ಪದ್ಮನಾಬು ಸದರಿ ವಿದ್ವಾಂಸರ ನೆರವಿನಿಂದ ಆ ಉದ್ಗ್ರಂಥವನ್ನು ತಲಸ್ಪರ್ಶಿಯಾಗಿ ಅಭ್ಯಸಿಸಲು ಉದ್ಯುಕ್ತನಾದನು.

ಇತ್ತ ದ್ಯಾವಣ್ಣನು ಮಂಡ್ಯ, ಮೈಸೂರುಗಳಿಂದ ಇತಿಹಾಸಕಾರರು, ಕೃಷಿತಜ್ಞರನ್ನು ಕರೆಸಿದ್ದ. ಅಳಿದುಳಿದ ಬೀಜ-ಬೊಡ್ಡೆಗಳ ಜೊತೆಗೆ ಮೊಳಕೆಯೊಡೆದ ಬೀಜಗಳನ್ನು ಜೋಪಾನವಾಗಿ ಕಿತ್ತು ಕೃಷಿ ಸಂಶೋಧನಾ ಕೇಂದ್ರಕ್ಕೂ, ಭಗ್ನಮೂರ್ತಿಗಳು, ಮುರಿದ ಶಾಸನ, ಕಲ್ಲು ಕಂಬದ ಉಬ್ಬುಶಿಲ್ಪಗಳು... ಇವೇ ಇತ್ಯಾದಿಗಳನ್ನು ಪ್ರಾಚ್ಯವಸ್ತು ಇಲಾಖೆಗೂ ರವಾನಿಸಲಾಯಿತು.

ತಮಗೆ ದೊರೆತ ಪರಿಕರಗಳ ಮೂಲಕ ಭಿನ್ನಭಿನ್ನ ದಿಕ್ಕು ದೆಸೆಗಳಿಂದ ಆಳದ ಪರಂಪರೆಯನ್ನು ಅರ್ಥೈಸಿ ಕೊಳ್ಳಲು ಈ ಹುಡುಗರು ಹೆಣಗುತ್ತಿದ್ದರು.

*　　　*　　　*

ನೀರವ ರಾತ್ರಿಯ ಮೌನ ಭಂಗವಾಯಿತು. ನಡು ರಾತ್ರಿಯ ತಿಮಿರದೊಳಗೊಂದು ನೋವಿನ ಸೊಲ್ಲು... ವಿಷಾದರಾಗದಲ್ಲಿ ಬದುಕಿನ ಪದ ಪಲುಕುತ್ತಿದ್ದ ನುಡಿಗೆ ಏಕತಾರಿಯು ದುಡಿಯುತ್ತಲೇ ಇತ್ತು. ನಿದಿರಾವಸ್ಥೆಯಲ್ಲೂ ಎಂಥದೋ ಅಸಮಾಧಾನ ಗೊಂದಲಗಳಿಂದ ತಳಮಳಿಸುತ್ತಿದ್ದ ದ್ಯಾವಣ್ಣ.

ಕಾರೆಂಬ ಕತ್ತಲಲಿ ಜೋರೆಂಬ ಮಳೆ ಸುರಿದು
ಕೆರೆಕಟ್ಟೆ ಬಯಲಾಗಿ ಹೋಗುವ ಕಾಲಕ್ಕೆ
ತನ್ನ ಬಯಲಿಗೊಂದು ಮಾತ
　　　　ಹೇಳದೆ ಹೋದೆ ಹಂಸೆ!!

ಇಂತಿರುವಾಗ ದ್ಯಾವಣ್ಣ ಸುಮ್ಮನೆ ಮಲಗಲಾಗಲಿಲ್ಲ. ಎದ್ದು ಏಕತಾರಿಯ ಎದೆಗೊತ್ತಿಕೊಂಡು ಮೀಟಲು ಅದು ಅಸಾಧ್ಯ ನೋವಿನಿಂದ ನರಳಿತು. ಕಳ್ಳುಬಳ್ಳಿಯ ಆಳದಲ್ಲೊಂದು ಛಳುಕು ಬಾಧಿಸಿತು. 'ಯಾವುದೀ ನೋವು ?' ಎಂಬ ಪ್ರಶ್ನೆಯು ದೊಡ್ಡದಾಗುತ್ತಾ ಹೋಯಿತು. ದ್ಯಾವಣ್ಣ ಅರಿವಿಲ್ಲರಿಯದೆ ದಿಗಿಲು ಬೀಳುತ್ತಿದ್ದನು!

*　　　*　　　*




ಕುಡಿ ದೀಪದ
ಬೆಳಗುತ್ತಿರುವ ಜ್ವಾಲೆಯ ಮುಂದೆ
ತದೇಕಚಿತ್ತ ನಿಂತೆ
ಹಳದಿ-ಕೆಂಪು ಮಿಶ್ರಿತ ಉರಿಯೊಡನೆ
ಕಂಪಿಸುತ್ತ ಬತ್ತಿಯಿದು ಇಷ್ಟಿಷ್ಟೇ
ಕ್ರಮದಲ್ಲಿ ಉರಿಯುತ್ತಿದ್ದರೂ
ಅದೆಷ್ಟು ಪ್ರಶಾಂತ!

ತೈಲದ ಪಾತ್ರಕ್ಕೆ ಅರ್ಥ ಈ ಕುಡಿಬೆಳಕು
ಶಬ್ದಾರ್ಥ ಒಂದಾದ ಅರ್ಧನಾರೀಶ್ವರನಂತೆ
ಬತ್ತಿ ಚಿಕ್ಕದಾಗುತ್ತ
ಎಣ್ಣೆ ಕಡಿಮೆಯಾಗುತ್ತ
ಬಂದರೂ
ಬೆಳಕನ್ನು ಪಡೆದ
ದೀಪದ ಸುತ್ತಲಿನ ಕತ್ತಲ ಸ್ಥಳ
ಧನ್ಯತೆಯಿಂದ ಬೀಗಿರುತ್ತದೆ

ಕತ್ತಲೆಯ ಒಂಟಿತನ
ದೀಪದ ಸನಿಹವನ್ನು
ಸದಾ ಬಯಸುತ್ತಿರುತ್ತದೆ
ವಿರಹವನ್ನು ಬೆಳಗಿಸುವ
ಮಿಡಿತದ ಸಂದೇಶದಂತೆ
ಕತ್ತಲೆಯ ತಪ್ತ ಹೃದಯವನ್ನು
ಸಂತೈಸಲು ಇರುವ ಏಕೈಕ
ಪ್ರಾಣದೀಪದಂತೆ
ಈ ದೀಪಾವಳಿಯ ಹಣತೆ
ಕಣ್ಣ ಕುಡಿ ಬೆಳಕನ್ನು ಕಾಯುತ್ತಿದೆ.



ಜ್ಯೋತಿ ಗುರುಪ್ರಸಾದ್
'ಕಾವೇರಿ', ತೆಳ್ಳಾರು ರಸ್ತೆ, ೧೬ ನೇ ತಿರುವು, ಕಾರ್ಕಳ - ೫೭೪ ೧೦೪

''ಗಣಪತಿ ಮಾಡಕ್ಹೋಗಿ ಅವರಪ್ಪನ್ನ ಮಾಡ್ದಂಗಾಯ್ತು...'' ಅಂತಾ ಜನವೆಲ್ಲಾ ಊರಮುಂದಿನ ಕಟ್ಟೆಯ ಮೇಲೆ ಮಿಡುಕುತ್ತಿತ್ತು. ಎಲ್ಲ ಮಿಡುಕಾಟ, ನಿಟ್ಟುಸಿರುಗಳ ನಡುವೆ ಇತಿಹಾಸ ತಜ್ಞರ ನಿರ್ದೇಶನದಂತೆ ಉತ್ಖನನ ಮತ್ತೆ ಶುರುವಾಯಿತು. ಈ ಬಾರಿ ಧಾಡಸಿತನದ ಅಗೆತ, ಬಗೆತಗಳನ್ನು ಕಂಟ್ರೋಲು ಮಾಡಿ ಜಾಗ್ರತೆಯಿಂದ ಕೆಲಸ ಮುಂದುವರಿಸಲಾಯಿತು. ದೇವಸ್ಥಾನದ ಗೋಪುರದ ಗಾರೆಗಚ್ಚಿನ ತುಂಡುಗಳು, ಕೆನ್ನೆ-ಮೂಗು ಎದೆಯ ಭಾಗ ಭಿನ್ನಗೊಂಡ ಶಿಲಾಬಾಲಿಕೆಯರು, ಬಾಚಿ, ಕೈಗೊಡಲಿ, ತತ್ರಾಣಿ, ಭಗ್ನಗೊಂಡ ಕುಂಬಾರಿಕೆ ಚಕ್ರ, ಕೈಕಾಲು ಮುರಿದ ಭಗ್ನಮೂರ್ತಿ... ಇತ್ಯಾದಿಗಳು ಸಿಕ್ಕವು.

ಎಲ್ಲ ಕುರುಹು, ಕೆತ್ತನೆ, ಕಲ್ಲು-ಮಣ್ಣುಗಳ ಅಡಿಯಲ್ಲಿ ಮನಸ್ಸಿನಷ್ಟು... ಆಳದಲ್ಲಿ ಅಡಿಪಾಯವೊಂದು ಗೋಚರಿಸಿತು. ಅದರ ವಿನ್ಯಾಸದಿಂದ ಅದು ದೇವಸ್ಥಾನದ ತಳಪಾಯ ಎಂದು ಗುರುತಿಸಲಾದರೂ ಅದರ ಮೇಲೆ ದೇಗುಲ-ಶಾಲೆ, ಮಸೀದಿ-ಮದರಸ, ಬಸದಿ, ಸ್ತೂಪ, ಅರಮನೆ-ಸೆರೆಮನೆ... ಹೀಗೆ ಏನನ್ನಾದರೂ ಕಟ್ಟಬಹುದಾದಂಥ ವಿಶಾಲ ವಿನ್ಯಾಸದ ತಳಹದಿ ಅದು! ನಮ್ಮ ಪೂರ್ವಿಕರು ಅಂತಹ ಸುವಿಶಾಲ ತಳಹದಿಯ ಮೇಲಲ್ಲವೇ ತಮ್ಮ ಬದುಕಿನ ಪರಂಪರೆಯನ್ನು ಕಟ್ಟಿಕೊಂಡದ್ದು!?

* * *

ಹಗಲು-ಇರುಳು, ನಿದ್ದೆ-ಎಚ್ಚರದಲ್ಲೂ ಏಕತಾರಿಯ ನುಡಿತ ಮಿಡಿತಗಳು ದ್ಯಾವಣ್ಣನಿಗೆ ಹಿತವಾದ ನೋವಿನಂತೆ ಕಾಡುತ್ತಲೇ ಇದ್ದವು.

*ಬಿತ್ತಿ ಬೆಳೆವ ಕೈ ಕೆಸರಲ್ಲೇ ಹೂತರೆ*
*ಕಾಳು ಮೊಳೆವುದೆಂತು?*
*ಅಟ್ಟುಣ್ಣುವ ಮಡಕೆಯೇ ಒಡೆದರೆ*
*ಬಾಳು ಉಳಿವುದೆಂತು!?*

* * *

ನಿಧಿ ಸಿಕ್ಕವರಂತೆ ಮರವು ಗ್ರಾಮಕ್ಕೆ ದೌಡಾಯಿಸಿದ ಕೃಷಿ ವಿಜ್ಞಾನಿಗಳು ಮತ್ತು ಅಧಿಕಾರಿಗಳ ತಂಡವು ಊರೇ ನೆರೆವಂತೆ ಮಾಡಿ, ನೆರೆದ ಊರ ಮುಂದೆ ನೆಲದಾಳದ ಅಚ್ಚರಿ ಬಿಚ್ಚಿಟ್ಟರು.



''ನಿಧಿ ಸಿಕ್ಕಲಿಲ್ಲ ಅಂತಾ ನೀವು ಚಿಂತಿಸುವಂತಿಲ್ಲ. ಯಾವ ಮುತ್ತುರತ್ನಗಳಿಗೂ ಕಡಮೆಯಿಲ್ಲದ ಅಮೂಲ್ಯ ಬೀಜ ನಿಧಿ ಸಿಕ್ಕಿದೆ ಈ ಮಣ್ಣಲ್ಲಿ. ಇಡೀ ನಾಡಿಗೆ ಸ್ವಾವಲಂಬಿ, ಸ್ವಾಭಿಮಾನದ ಬದುಕು ಕಲಿಸಿಕೊಡುವ ತಾಕತ್ತು ಈ ಮಣ್ಣಿಗಿದೆ. ಇಲ್ಲಿ ಸಿಕ್ಕ ಬೀಜ-ಬೊಡ್ಡೆ-ಬೇರುಗಳನ್ನು ನಮ್ಮ ಕೃಷಿ ವಿಜ್ಞಾನಿಗಳು ಪರಿಶೀಲಿಸಿದ್ದಾರೆ.

''ಈವತ್ತಿಗೆ ಕಣ್ಮರೆಯಾದ ಅಪರೂಪದ ಭತ್ತ, ರಾಗಿ, ಜೋಳ, ಸಜ್ಜೆ, ನವಣೆ, ಆರಕ, ಊದಲು, ಸಾಮೆ, ಕೊರಲು ಇತ್ಯಾದಿ ಧಾನ್ಯಗಳ ಜೊತೆಗೆ ಅಮೂಲ್ಯವಾದ ಔಷಧಿ ಸಸ್ಯಗಳ ಕಾಂಡ, ಬೇರು,ಬೀಜಗಳು ಇಲ್ಲಿ ಸಿಕ್ಕಿವೆ. ಇಲ್ಲಿ ನೋಡಿ; ಭತ್ತದಲ್ಲಿ ರಾಜಕಯಮೆ, ದೇವಮಲ್ಲಿಗೆ, ಪುನುಗುರಾಜಗಳಾದರೆ, ರಾಗಿಯಲ್ಲಿ ಅಂಗನಮಡ್ಡೆ, ಎಡಕಲು ರಾಗಿ, ಹಾಗಲಕೋಟೆ ರಾಗಿ ತಳಿಗಳು. ಪುಲ್ಲಗಾರ, ಕೋಡಮುರುಕ, ಕಾವಿ ಜೋಳಗಳು, ಕಣ್ಣು ಸಜ್ಜೆ, ಹಾಲುಸಜ್ಜೆ, ಹುರುಕಲು ನವಣೆ, ಕೊಕ್ಕು ನವಣೆ, ಮಲ್ಲಿಗೆ ಸಾಮೆ, ಪನಿವರೆಗು, ಹೆಜ್ಜಾಮೆ ತಳಿಗಳು ಇವು. ಆಶ್ಚರ್ಯ ಅಂದ್ರೆ, ಆಗಿನ ಕಾಲದ ಬೀಜೋಪಚಾರ, ರಾಸಾಯನಿಕ ವಿಧಾನಗಳಿಂದ ಸಂರಕ್ಷಿಸಿಟ್ಟಿದ್ದಾರೆ! ಪುಣ್ಯಾತ್ಮರು ಯಾರು ಹೂತಿಟ್ಟರೋ ಗೊತ್ತಿಲ್ಲ, ಆದರೆ ದಯವಿಟ್ಟು ಇಂಥಾ ಅಪೂರ್ವ ತಳಿಗಳನ್ನು ಉಳಿಸಿಕೊಳ್ಳಿ. ಇವಕ್ಕೆ ಜೀವ ಕೊಡಿ. ನಾವು ನಿಮ್ಮ ಜೊತೆಗೆ ಇರ್ತೀವಿ'' ಎಂದು ಸುದೀರ್ಘ ವಿವರಣೆ, ಕೋರಿಕೆಗಳೊಂದಿಗೆ ಅವುಗಳನ್ನು ದ್ಯಾವಣ್ಣನಿಗೆ ಹಸ್ತಾಂತರಿಸಿದರು.

ನಿಜಕ್ಕೂ ಎಲ್ಲರೆದೆಯ ತಾವುಗಳಲ್ಲಿ ತಾವುಗಳಲ್ಲೂ ಹಲವು ಬೀಜಗಳು ಮೊಳೆತವು.

ದ್ಯಾವಣ್ಣನಿಗೆ ಇದೀಗ ಏಕತಾರಿಯ ವಿಷಾದರಾಗ, ಅಶರೀರವಾಣಿಯ ನೋವಿನ ಹಾಡುಗಳು ಅರ್ಥವಾಗತೊಡಗಿದ್ದೊ!

* * *

'ವೇದಾರ್ಥ ಪ್ರಕಾಶನ'ದ ಸತತಾಭ್ಯಾಸದಿಂದಾಗಿ ವೇದವಿಜ್ಞಾನಿಯೇ ಆಗಿ ಹೋಗಿದ್ದ ಐನೋರ ಪದ್ಮನಾಬು ಸನಾತನ ಪರಂಪರೆಯನ್ನು ಪುನರುಜ್ಜೀವನಗೊಳಿಸಿ ಇಡೀ ಊರಿಗೆ, ನಾಡಿಗೆ ಸಂಸ್ಕೃತಿ-ಸಂಸ್ಕಾರಗಳನ್ನು ನೀಡಬೇಕೆಂದು ಬಯಸಿದ್ದನು. ಅದಕ್ಕಾಗಿ ಏನೇನು ಮಾಡಬಹುದು, ಎಂಬುದರ ಲೆಕ್ಕಾಚಾರದಲ್ಲಿ ತೊಡಗಿದ್ದನು.

ಇತ್ತ ದ್ಯಾವಣ್ಣನಾದಿಯಾಗಿ ಹುಡುಗರು, ಊರವರು ಬೀಜನಿಧಿಯ ಸಮ್ಮುಖದಲ್ಲಿ ಗೊಂದಲಪುರ ನಿವಾಸಿಗಳಂತೆ ಚಡಪಡಿಸುತ್ತಾ ತಲ್ಲಣಿಸುವ ಹೊತ್ತಲ್ಲಿ ಅಗೆತ ಸ್ಥಗಿತವಾಗಿ ಉತ್ಖನನ ಪೂರ್ಣಗೊಂಡಿತ್ತು. ಅದಾದ ವಾರ ಒಪ್ಪತ್ತಿನಲ್ಲಿ ವರದಿಯೊಂದಿಗೆ ಊರಿಗೆ ಬಂದ ಇತಿಹಾಸ ತಜ್ಞರು ಹೇಳಿದ್ದಿಷ್ಟು:

''ಇಲ್ಲಿ ದೊರೆತ ವಸ್ತುಗಳು, ತಾಳೆಗರಿ ಗ್ರಂಥ, ದೇವಸ್ಥಾನದ ಅವಶೇಷಗಳು, ಭಗ್ನಮೂರ್ತಿ, ಮುರಿದ ಶಾಸನಗಳನ್ನು ಗಮನಿಸಿದರೆ ಇದು ಕ್ರಿ.ಶ. ೧೩೩೬ ರಿಂದ ೧೩೭೭ರ ನಡುವಿನ ವಿಜಯನಗರದ ಪ್ರಾರಂಭಿಕ ಅರಸರ ಕಾಲಘಟ್ಟಕ್ಕೆ ಸೇರಿದ್ದು ಅನ್ನಿಸ್ತದೆ. ಇದೇ ಕಾಲದಲ್ಲಿ ಇಲ್ಲಿ ದೇವಸ್ಥಾನ ನಿರ್ಮಾಣ ಆಗಿದೆ. ಅಂತಾ ಶಾಸನದ ಪಾಠ ಹೇಳ್ತದೆ. ಭಗ್ನಮೂರ್ತಿಯನ್ನು ಪರಿಶೀಲಿಸಿದರೆ; ಕೃಷಿ ದೇವತೆ ಬಲರಾಮನ ಮೂರ್ತಿ ಎಂದು ತೋರುತ್ತದೆ. ಕೈಯಲ್ಲಿರುವ ಮುರಿದ ಆಯುಧ ನೇಗಿಲಿನಂತೆಯೇ ಇದೆ. ಆದ್ದರಿಂದ ಇದು ಅಪರೂಪವಾದ ಬಲರಾಮನ ಗುಡಿ ಎಂಬುದು ತಿಳಿಯುತ್ತದೆ. ಆದರೆ ಇಲ್ಲಿ ಸಿಕ್ಕ ವಸ್ತುಗಳ ಜತೆಗೆ ದೇಗುಲದ ತಳಪಾಯದಲ್ಲಿ ದೊರೆತ ಕೈಗೊಡಲಿ, ಬಾಚಿ, ತತ್ರಾಣಿ, ಕುಂಬಾರಿಕೆ ಚಕ್ರಗಳನ್ನು ನೋಡಿದರೆ : ಆದಿಮಾನವನ ಕಾಲದಿಂದ ಆಧುನಿಕ ಕಾಲದವರೆಗೆ ಹಲವು ಕಾಲಘಟ್ಟಗಳಲ್ಲಿ ಅಪ್ಪಟ ಸ್ವಾವಲಂಬಿ ಜೀವನ ಕ್ರಮವೇ ಇಲ್ಲಿ ಉಸಿರಾಡಿದೆ ಎಂಬುದು ಗೊತ್ತಾಗ್ತದೆ. ಹಲವು ಬಾರಿ ನಾಶ ಹೊಂದಿ, ಸ್ಥಳೀಯ ತಾಂತ್ರಿಕತೆಯಿಂದ ಮತ್ತೆ ಮತ್ತೆ ಕಟ್ಟಿಕೊಂಡ ಬದುಕಿನ ಕುರುಹುಗಳು ಇಲ್ಲಿವೆ. ಇವೆಲ್ಲಾ ದೃಷ್ಟಿಯಿಂದ ಈ ನೆಲ ಐತಿಹಾಸಿಕ ಮಹತ್ವದ್ದು. ಇದನ್ನು ಹೇಗೆ ಉಳಿಸಿ,ಬಳಸಿ-ಬದುಕು ಕಟ್ಟಿಕೊಳ್ತೀರಿ ಅನ್ನೋದು ನಿಮ್ಮ ವಿವೇಚನೆಗೆ ಬಿಟ್ಟಿದ್ದು...'' ಇತಿಹಾಸಕಾರರ ಇಂಥ ಶೋಧನೆಯ ಮಾತಿನಿಂದ ತಮ್ಮ ಮೈಮರೆವಿಗೆ ತಾವೇ ನಾಚಿ ವಿಚಿತ್ರ ಪುಳಕ ಅನುಭವಿಸಿದರು, ಮರವು ಗ್ರಾಮಸ್ಥರು!

* * *

ಏಕತಾರಿಯ ಮಿಡಿತವು ಇದೀಗ ದ್ಯಾವಣ್ಣನಿಗಷ್ಟೇ ಅಲ್ಲದೆ ಸಮಸ್ತ ಬದುಕಿನ ಶೂನ್ಯಕ್ಕೆ ಸೊಲ್ಲಾಗಿ, ಆಕಾರವಿಲ್ಲದ ಶಾರೀರಕ್ಕೆ ಸಾಥಿಯಾಗಿ ಮಿಡಿದ ಶಬುದವು ಎದೆಯಿಂದ ಎದೆಗೆ ತಾಗುತ್ತ ಸಾಗಿರಲು... ದ್ಯಾವಣ್ಣ ಬೊಗಸೆಯಲ್ಲಿಡಿದ ಬೀಜನಿಧಿಯನ್ನು ದಿವ್ಯವಾಗಿ ದಿಟ್ಟಿಸುತ್ತ ಗೊಂದಲದ ಗೂಡೊಳಗೆ ಏನೂ ತೋಚದೆ ತಿಣುಕುತ್ತಿದ್ದ.

ಅದೆಷ್ಟನೆ ಜಾವವೋ... ಆ ಪದ ಈ ಪದ ಪಾಡಿ ಸಾಕಾದ ಏಕತಾರಿಯಪ್ಪನು ಕಟ್ಟಕಡೆಗೆ ಒಡಪು ಬಿಚ್ಚಿ ಹಾಡಿದ್ದ.

*ಹರಗೋಣ ಬಾ ಹೊಲ ಹದವಾಗಿ*
*ಬಿದ್ವೈತೆ ಹ್ಯಾಗೋ ಕಾಲ್ ಕಸವಾಗಿ*
*ನಂಬಿಗೀಲೆ ಬಿತ್ತೋಣ ನಮ್ಮ ಕಾಳು*
*ನಂಬಿಗೀಲೆ ತುಂಬ್ತಾದೆ ನಮ್ಮ ಬಾಳು.*

ಇದೀಗ ದ್ಯಾವಣ್ಣ ದೃಢವಾದ. ಹೊತ್ತು ಮೂಡಲು ಕಾದ. ''ಇವತ್ತ್ಯಾಕೋ ಮಗುಂದು ಬೆಳಕು ಹರೀನೇವಲ್ಲು...'' ಎಂದು ಬೈದು ಅಡ್ಡಾದ. ಜೋಂಪು ಆವರಿಸಿದ ಚಣ ಹೊತ್ತಿಗೇ ಬಾನ ಸ್ವಾಮಿ ಕಳ್ಳನಂತೆ ಮೂಡಿ ಕಣ್ಣ ರೆಪ್ಪೆಗೆ ಚುಚ್ಚಿ ಅಣಕವಾಡಿದ್ದ.

* * *

ಊರೊಟ್ಟಿನ ಮಾತುಕತೆ ಮಹತ್ವದ ತೀರ್ಮಾನ ಕೈಗೊಂಡಿತು. ''ಬೀಜ ನಿಧಿಯನ್ನು ಊರಿನೆಲ್ಲಾ ರೈತರಿಗೂ ಹಂಚಿ ಬಿತ್ತಿಸುವುದು, ಐದೆಕರೆ ದೇವರ ಪಾಳಿನ ಜಮೀನಿನಲ್ಲಿ ಎರಡೆಕರೆ ಊರಿಗೆ ಬಿಟ್ಟು ಉಳಿಕೆ ಜಾಗದಲ್ಲಿ ಅಪರೂಪದ ಬೀಜಗಳನ್ನು ಬಿತ್ತಿ ತಳಿ ವೃದ್ಧಿ ಮಾಡೋದು, ಔಷಧಿ ಗಿಡ, ಬೇರು, ಬೊಡ್ಡೆಗಳನ್ನು ಚಿಗರಿಸೋದು... ಬಲರಾಮನ ಹೆಸರಿನಲ್ಲಿ ದೇವರ ಕಾಡು ಬೆಳೆಸೋದು, ಉತ್ಖನನದ ಮತ್ತು ಪಕ್ಕದ ಜಾಗವನ್ನು ದೇಸಿ ಸಾಂಸ್ಕೃತಿಕ ಕೇಂದ್ರವನ್ನಾಗಿ ರೂಪಿಸೋದು...'' ಇವೇ ಇತ್ಯಾದಿ ತೀರ್ಮಾನಗಳು ಅಂಗೀಕೃತವಾದೊ. ಇಂಥಾ ಐತಿಹಾಸಿಕ ನಿರ್ಧಾರಕ್ಕೆ ಸರ್ಕಾರವೂ-ಮಲ್ಟಿನ್ಯಾಷನಲ್ ಕಂಪನಿಯೂ ಮಣಿದು ಉದ್ದೇಶಿತ ಯೋಜನೆಯನ್ನು ರದ್ದುಗೊಳಿಸಿಕೊಂಡವು. ಆದರೆ ಒಂದು ಸಣ್ಣ ಅವಕಾಶವೂ ಬಾರದಿರದೆ, ಎಂಬ ನಿರೀಕ್ಷೆ ಮಾತ್ರ ಜೀವಂತವಾಗಿತ್ತು.

ದ್ಯಾವಣ್ಣ ಎಲ್ಲರೆದೆಯ ಹೊಲಗಳಲ್ಲಿ ಚೆಲ್ಲಿದ ಬೀಜಗಳು ಚಿಗುರಿಗೊಂಡು ಊರಿಗೆ ಊರೇ ಹಸಿರ ಬಯಲಾಗಿತ್ತು!

**ಆಳುದ್ದದ ಕಾಡು - ಪಾಡು...**

ವರುಷ ಒಂಭತ್ತು ತಿಂಗಳೊಳಗೆ ಹತ್ತಾರು ಊರ ಹೆಗಲುಗಳು ಸವೆದು, ಆಳುದ್ದದ ಕಾಡು ಬೆಳೆದು ಊರಿಗೇ ಜೀಸಣಿಗೆಯಾಗಿತ್ತು! ಹಲವು ಸಂಸ್ಥೆಗಳು, ವ್ಯಕ್ತಿಗಳು ಸೇರಿ ಗಿಣ್ಣು-ಬೇರಿಗೆ ನೀರುಣಿಸಿದ್ದರು. ಬಿತ್ತಿದ ಬೀಜಗಳು ದ್ವಿಗುಣಗೊಂಡಿದ್ದೊ.

ಸೊಗದೆ, ಉತ್ತರಾಣೆ, ಕೊನ್ನಾರಿ, ಉಮ್ಮತ್ತಿ, ನೆಲನೆಲ್ಲಿ, ಚಕ್ರಮುನಿ... ಮುಂತಾದ ಔಷಧಿ ಗಿಡಗಳ ಉಪವನ ತಲೆ ಎತ್ತಿತ್ತು, ಊರ ಉಪಯೋಗಕ್ಕೆ ಬಿಡಲಾದ ಜಾಗೆಯಲ್ಲಿ ವಾರಕ್ಕೊಮ್ಮೆ ಊರಸಂತೆಯಾಗಿ, ಹುಡುಗರಿಗೆ ಚೆಂಡಿನ ಮಾಳವಾಗಿ, ನಾಟಕ ಬಯಲಾಟಗಳ ತಾಣವಾಗಿ ಯಥಾಸ್ಥಿತಿಯು ಮರುಸ್ಥಾಪನೆಯಾಯ್ತು.

ಇವೆಲ್ಲದರ ನಡುವೆಯೂ ''ಇಲ್ಲೊಂದು ವೈನಾದ ದೇವುಸ್ಥಾನ ಕಟ್ಟಿದ್ರೆ ಛೇಷಿತ್ತು...'' ಎಂಬ ಗೊಣಗಾಟ ಇದ್ದೇ ಇತ್ತು.

...ಇಂತಿಪ್ಪ ಗೊಣಗಾಟಗಳಿಗೆ ಒಳದನಿಯಾದವನು ಪೈನೋರ ಪದ್ಮನಾಬು. ಹಲವು ಅಸಮಾಧಾನಗಳು ಅವನೊಳಗೆ ಕುದಿಬಿಂದುವಾಗಿ ಬುರುಗೆಬ್ಬಿಸುತ್ತಿದ್ದವು.

* * *

ಯಾವ್ಯಾವುದೋ ಲಿಂಕಿಡಿದು ಮುಖ್ಯಮಂತ್ರಿಗಳ ಬಳಿಗೆ ತಲುಪಿಬಿಟ್ಟ ಪದ್ಮನಾಬು ಮಜಬೂರಿ ಪ್ರಸ್ತಾವನೆಯನ್ನು ಸರ್ಕಾರದ ಮುಂದಿಟ್ಟ.

**ಕಾರು-ಬೈಕ್‌ಗಳ ಮಾರಾಟ ವೃದ್ಧಿ**



ಪಾರ್ಕಿಂಗ್ ಸಮಸ್ಯೆ ಮಾರಾಯ್ರೆ...
ಅದ್ಕೆ ಮನೆಯಲ್ಲೇ ಶಾಶ್ವತವಾಗಿ
ಪಾರ್ಕಿಂಗ್ ಮಾಡಿಬಿಟ್ಟಿದ್ದೇನೆ...

''ಮರವು ಗ್ರಾಮದ ಉತ್ಖನನ ಜಾಗದಲ್ಲಿ ಪುರಾತನ ದೇಗುಲದ ಅವಶೇಷಗಳು ಪತ್ತೆಯಾಗಿವೆ. ದೊರೆತ ಭಗ್ನ ಮೂರ್ತಿಯು ಶ್ರೀರಾಮನದ್ದಾಗಿದೆ. ಆದ್ದರಿಂದ ಅಲ್ಲಿ ಶ್ರೀರಾಮ ದೇವಸ್ಥಾನ ಇತ್ತೆಂಬುದು ದೃಢವಾಗುತ್ತದೆ. ಕ್ರಿ.ಶ. ೧೪೬೫-೮೫ರ ಕಾಲಘಟ್ಟದಲ್ಲಿದ್ದ ವಿಜಯನಗರದ ದೊರೆ ೩ನೇ ವಿರೂಪಾಕ್ಷನ ಕಾಲದಲ್ಲಿ ಬಹಮನಿ ಸುಲ್ತಾನರು ಕೈಗೊಂಡ ಕಂಚಿ ದಂಡಯಾತ್ರೆ ಸಂದರ್ಭದಲ್ಲಿ ಈ ದೇಗುಲವನ್ನೂ ನಾಶ ಮಾಡಲಾಗಿದೆ. ಸತತ ದಾಳಿಗೆ ಒಳಗಾಗಿರುವ ನಮ್ಮ ಸಂಸ್ಕೃತಿ-ಪರಂಪರೆಗಳನ್ನು ರಕ್ಷಿಸಿ ಧರ್ಮಪುನರುತ್ಥಾನ ಕೈಗೊಳ್ಳುವ ಸಲುವಾಗಿ ಸದರಿ ಜಾಗದಲ್ಲಿ ಶ್ರೀರಾಮ ದೇಗುಲ ನಿರ್ಮಾಣ ಮಾಡಬೇಕು. ವೇದ ವಿಶ್ವವಿದ್ಯಾನಿಲಯ ಸ್ಥಾಪಿಸಬೇಕು, ಸಂಸ್ಕೃತ-ಉಪನಿಷತ್ ಅಧ್ಯಯನ ಕೇಂದ್ರಗಳನ್ನು ತೆರೆಯಬೇಕು...'' ಎಂಬಿತ್ಯಾದಿ ಹದಿನಾಲ್ಕು ಅಂಶಗಳ ಬೇಡಿಕೆ ಉಳ್ಳ ಹತ್ತಾರು ಸಹಿಗಳಿದ್ದ ಪ್ರಸ್ತಾವನೆ ಸಲ್ಲಿಕೆಯಾಯಿತು.

ಇದಾದ ವಾರಬಪ್ಪತ್ತಿನಲ್ಲಿ; ಅಳೆದು ಸುರಿದು ಲೆಕ್ಕಾಚಾರ ಹಾಕಿದ ಸರ್ಕಾರವು ಮತಮಾನ್ಯಗಳ ಬಗ್ಗೆ ತನಗಿರುವ ಪ್ರೀತಿಯನ್ನು ನವೀಕರಿಸುವ ನೆಪದಲ್ಲಿ ಮಲ್ಟಿನ್ಯಾಷನಲ್ ಕಂಪನಿಯ ಎದುರಿಗೆ ಮರವು ಗ್ರಾಮದ ಜನತೆ ತನಗೆ ಮಾಡಿದ ಮುಖಭಂಗಕ್ಕೆ ಸರಿಯಾದ ಸೇಡು ತೀರಿಸಿಕೊಳ್ಳಲು ಹವಣಿಸಿ ಆದೇಶ ಹೊರಡಿಸಿತು.

''ಮರವು ಗ್ರಾಮದ ಉತ್ಖನನ ಪ್ರದೇಶದಲ್ಲಿ ಶ್ರೀರಾಮ ದೇಗುಲ ನಿರ್ಮಾಣಕ್ಕಾಗಿ ೨ ಕೋಟಿ ರೂಪಾಯಿಗಳನ್ನು ಮೊದಲ ಕಂತಾಗಿ ಬಿಡುಗಡೆ ಮಾಡಲಾಗಿದೆ. ಬೆಂಗಳೂರಿನ ಇಸ್ಕಾನ್ ದೇಗುಲದ ಮಾದರಿಯಲ್ಲಿ ಶ್ರೀಕ್ಷೇತ್ರವನ್ನು ಸಮಗ್ರವಾಗಿ ಅಭಿವೃದ್ಧಿಪಡಿಸಲು ಜರ್ಮನ್ ಮೂಲದ 'ಐಸ್‌ಪೈಸ್' ಸಂಸ್ಥೆಯನ್ನು ಗುರ್ತಿಸಲಾಗಿದೆ. ಜರ್ಮನ್ ಸಂಸ್ಥೆ ಮತ್ತು ಸರ್ಕಾರದ ಸಹಭಾಗಿತ್ವದ ಈ ಯೋಜನೆಯು ಪೂರ್ಣಗೊಂಡ ನಂತರ ಮುಂದಿನ ಹತ್ತು ವರ್ಷಗಳ ಕಾಲ ಸದರಿ ಐಸ್‌ಪೈಸ್ ಕಂಪೆನಿಯು ಇದರ ನಿರ್ವಹಣೆ ಜವಾಬ್ದಾರಿ ಹೊರಲಿದೆ...''

* * *

ಇದೀಗ ಮರವು ಗ್ರಾಮವು ಸೂತಕದ ಮನೆಯಾಗಿತ್ತು. ದ್ಯಾವಣ್ಣ ಮತ್ತವನ ಹುಡುಗರು ಕಾಡುಗಿಡಗಳ ತಬ್ಬಿ ರೋದಿಸುತ್ತಿದ್ದರು.

ರೈತ ನಾಯಕರು ಮತ್ತೊಂದು ಹೋರಾಟಕ್ಕೆ ಕರೆ ಕೊಟ್ಟರು. ತಾಲ್ಲೂಕು ಕೇಂದ್ರದ ಮಿನಿ ವಿಧಾನಸೌಧದ ಎದುರು ಸಭೆ ನಡೆದಿತ್ತು.

''ಬೀಜ ಉಳಿಸಿ, ಬೆಳೆ ಬೆಳೆದು ದೇಶದ ಜನಕ್ಕೆ ಅನ್ನ ಕೊಡಿ ಅಂದ್ರೆ : ಗುಡಿ ಕಟ್ತೀರಿ... ರೈತರು ಬಡವರನ್ನು ಕಾಪಾಡಿ ಅಂದ್ರೆ ವಿದೇಶಿ ಕಂಪನಿಗಳ ಕಾವಲು ಕಾಯ್ತೀರಿ. ಥೂ! ನಾಚಿಕೆ ಅಗಲ್ವಾ ನಿಮಗೆ?'' ಎಂದು ರೈತ ನಾಯಕರು ಆಕ್ರೋಶದಿಂದ ವಾಗ್ಬಾಣಗಳನ್ನೆಸೆಯುತ್ತಿದ್ದರೆ ಜನತೆಯಲ್ಲೂ ಆವೇಶದ ಭಾವ ತುಯ್ಯುತ್ತಿತ್ತು.

* * *

ಬೆಳಿಗ್ಗೆಯಿಂದ ನಡುರಾತ್ರಿಯ ತನಕವೂ ಒಂದೇ ಯೋಚನೆ : ಅದು ಬಲರಾಮನ ಮೂರ್ತಿ, ಶ್ರೀರಾಮನ ಮೂರ್ತಿ ಹೇಗಾಯಿತು, ಎಂಬುದು. ಚಿಂತಿಸಿ ದಣಿದಿದ್ದರೂ ನಿದ್ದೆ ಬಾರದ ದ್ಯಾವಣ್ಣ ಕ್ಷಣ ಕ್ಷಣಕ್ಕೂ ಪ್ರಕ್ಷುಬ್ಧಗೊಳ್ಳುತ್ತಿದ್ದ. ಕೋಲುಗುದ್ದಲಿ ಹೆಗಲಿಗಾಕಿಕೊಂಡು ಕೊರಕೊರನೆ ಹದಿಪಾಯದ ಬಳಿಗೆ ಬಂದ. ಅಲ್ಲೊಂದು ಬೆಕ್ಕಟ್ಟೆ ಬೆಳ್ಳಗಿನ ತೋಡವೊಂದು ಮೂತಿಯಿಂದ ಮೀಟಿ, ಕಾಲಿಂದ ಕೆರೆದು ಬಿತ್ತಿದ ಬೀಜಗಳ ಬಗೆಯುತ್ತಿತ್ತು. ಕೋಪದಿಂದ ಕಲ್ಲು ಬೀರಿದ. ಓಡಿಹೋಯಿತು. ಆದರೆ ಅಲ್ಲೇ ಮರದ ಮೇಲೆ ಕೂತಿದ್ದ ರಣಹದ್ದು ತನ್ನ ಸರದಿಗಾಗಿ ಕಾಯುತ್ತಿತ್ತು!

ಸಪ್ಪಟ್ಟು ಸರಿರಾತ್ರಿಯಲ್ಲಿ ತಳಪಾಯದ ತಳಕ್ಕಿಳಿದು ಅಗೆಯತೊಡಗಿದ್ದ ದ್ಯಾವಣ್ಣ, ಕಳಚಿಹೋದ ಪರಂಪರೆಯ ಕೊಂಡಿಯೊಂದನ್ನು ಬಗೆದು ತೆಗೆವ ಧಾವಂತದಲ್ಲಿ ಬಲರಾಮನ ಮುರಿದ ನೇಗಿಲ ತಡಕುತ್ತಿದ್ದನು. ಕಲ್ಲೂ-ನೀರು ಕರಗಿ ಕಗ್ಗತ್ತಲೂ ಬೆವರುತ್ತಿತ್ತು!

...ಇತ್ತ ಸಮ್ಮನಿರದ ಏಕತಾರಿಯು ತಿಮಿರ ತೊಡರಿದ ಹಾದಿಯಲ್ಲೂ ಭರವಸೆಯ ಕಂದೀಲು ಹಿಡಿದು ಮನೆ-ಮನೆಗಳ ಕದತಟ್ಟಿ ಮಿಡಿಯುತ್ತಲಿತ್ತು...

*ಮುಳ್ಳಾಗೆ ಕಲ್ಲಾಗೆ ಬಂದೇವಯ್ಯಾ*
*ತಂದೇವಿ ದೀಪಾನ ಕೊಳ್ಳೀರಯ್ಯಾ*
*ಬಾಗಿಲು ತೆಗೆದ ಕೈಗೆ ಭಾಗ್ಯದ ಮಳೆ ಬಂದು*
*ದೀಪ ಕೊಂಡವರಿಗೆ ದೊರೆ ಪದವಿ- ದೊರೆಯಲಿ*
*ದೀಪದೇವರ ಕರುಣೆರಲಿ.*
*ತಂದೇವಿ ದೀಪಾನ ಕೊಳ್ಳೀರಯ್ಯಾ...*



**ನಾಗಮಂಗಲ ಕೃಷ್ಣಮೂರ್ತಿ**
ಪ್ರಥಮ ದರ್ಜೆ ಸಹಾಯಕರು, ಶಿಶು ಅಭಿವೃದ್ಧಿ ಯೋಜನಾಧಿಕಾರಿಗಳ ಕಚೇರಿ, ಬಾಲಭವನದ ಪಕ್ಕ, ಮಹಿಳಾ ಸಮಾಜ ಹತ್ತಿರ
೨ನೇ ಕ್ರಾಸ್, ಅಶೋಕ ನಗರ, ಮಂಡ್ಯ - [illegible]

# ರಾಜ್ಯ ಶಿಕ್ಷಣ ಸಂಶೋಧನೆ ಮತ್ತು ತರಬೇತಿ ಇಲಾಖೆ

## ಇವರಿಂದ ರಚಿತವಾದ ಕೃತಿಗಳು




ಸಂಪುಟ 1 : ರೂ. 320/-




ಸಂಪುಟ 2 : ರೂ. 250/-



ಸಂಪುಟ 3 : ರೂ. 425/-




ರೂ. 995/-

ಪ್ರಸ್ತುತ ಭೂಗೋಳ ಸಂಗಾತಿ ಪುಸ್ತಕವನ್ನು ಪ್ರಾಥಮಿಕ ಹಾಗೂ ಪ್ರೌಢಶಾಲಾ ಶಿಕ್ಷಕರಿಗೆ ಮತ್ತು ವಿದ್ಯಾರ್ಥಿ ವೃಂದಕ್ಕೆ ವಿಶಾಲವಾದ ವಿಶ್ವ, ಸೌರವ್ಯೂಹ ಹಾಗೂ ಮಾನವನ ಆವಾಸ ಸ್ಥಾನವಾದ ಪೃಥ್ವಿಯನ್ನು ಕುರಿತ ಆಳವಾದ ಅಧ್ಯಯನ ಮಾಡಲು ವಿಶೇಷವಾಗಿ ರಚಿಸಲಾಗಿದೆ. ಶಿಲೆಗಳು ಮತ್ತು ಭೂಮೇಲ್ಮೈ ಸ್ವರೂಪಗಳನ್ನು ರೂಪಿಸಿ ಹಾಗೂ ಏರ್ಪಡಿಸಿ ವೈವಿಧ್ಯಮಯವಾದ ಸ್ವರೂಪಗಳನ್ನು ಸೃಷ್ಟಿಸುವ ಶಕ್ತಿಗಳಿಂದ ಗೋಚರಿತ ಮತ್ತು ಆಕರ್ಷಣೀಯ ವಿವಿಧ ಮಜಲುಗಳನ್ನು ಈ ಪುಸ್ತಕವು ಪ್ರತಿಬಿಂಬಿಸುತ್ತದೆ.

... ಈ ಸಂಪುಟದಲ್ಲಿ ನಾವು ಜೀವಮಂಡಲ ವೆಂಬ ನಾಲ್ಕನೆಯ ಮಂಡಲದ ಬಗ್ಗೆ ಪರಿಚಯ ಮಾಡಲು ಪ್ರಯತ್ನಿಸಿದ್ದೇವೆ... ಇಲ್ಲಿ ಜೀವಮಂಡಲದ ಪ್ರಾಮುಖ್ಯತೆ ಹಾಗೂ ಪರಿಸರದ ಮೇಲೆ ಮಾನವನ ಪ್ರಭಾವದಿಂದುಂಟಾದ ಪರಿಸರದ ನಾಶ ಮತ್ತು ಪರಿಸರ ಮಾಲಿನ್ಯ ಕುರಿತು ಸವಿಸ್ತಾರವಾಗಿ ಬರೆಯಲಾಗಿದೆ.

... 'ಭೂಗೋಳ ಸಂಗಾತಿ ಸಂಪುಟ 3 'ಪೃಥ್ವಿಯ ಮೇಲೆ ದೊರೆಯುವ ವಿವಿಧ ಬಗೆಯ ಸಂಪನ್ಮೂಲಗಳು, ವಿವಿಧ ಪ್ರದೇಶಗಳಲ್ಲಿ ಮಾನವ ಚಟುವಟಿಕೆಗಳಲ್ಲಿನ ವ್ಯತ್ಯಾಸಗಳು ಹಾಗೂ ಅವುಗಳ ಪರಿಣಾಮ ಸ್ವರೂಪವಾಗಿ ಮಾನವನ ವಿವಿಧ ಉದ್ಯೋಗಗಳು, ಉಂಟಾದ ಸಂಪನ್ಮೂಲಗಳ ಅಭಿವೃದ್ಧಿಗಳನ್ನು ವಿವರಿಸುತ್ತದೆ. ಶಿಕ್ಷಕರ ಮತ್ತು ವಿದ್ಯಾರ್ಥಿಗಳ ಸೃಜನಾತ್ಮಕ ಶಕ್ತಿಯನ್ನು ಹೆಚ್ಚಿಸಲು ಹಾಗೂ ಭೂಗೋಳ ಶಾಸ್ತ್ರದ ಅಧ್ಯಯನವನ್ನು ಚಟುವಟಿಕೆ ಆಧಾರಿತವನ್ನಾಗಿ ಮಾಡಲು ಸೂಕ್ತ ಚಟುವಟಿಕೆಗಳನ್ನು ಸೂಚಿಸಲಾಗಿದೆ... ಮಾನವನ ಚಟುವಟಿಕೆಗಳ ಮೇಲೆ ನೈಸರ್ಗಿಕ ಪರಿಸರವು ಪ್ರಭಾವ ಬೀರುತ್ತದೆ ಹಾಗೂ ಮಾನವನು ನೈಸರ್ಗಿಕ ಪರಿಸರದೊಳಗೆ ತನ್ನ ಲಾಭಕ್ಕಾಗಿ ಮಧ್ಯೆ ಪ್ರವೇಶಿಸುತ್ತಾನೆ ಎಂಬುದನ್ನು ಈ ಸಂಪುಟವು ವಿವರಿಸುತ್ತದೆ.

... ಈ ಪುಸ್ತಕದ ವಿಷಯವು ಪ್ರೌಢಶಾಲಾ ಹಂತದ ಪಠ್ಯವಸ್ತುವನ್ನು ಒಳಗೊಂಡಿದೆ. ಭೂಮಿಯ ಉಗಮದಿಂದ, ಜೀವಿಗಳ ವಿಕಾಸದಿಂದ ಹಿಡಿದು ಆಧುನಿಕ ಯುಗದ ಘಟನೆಗಳನ್ನು ಒಳಗೊಂಡಿದೆ... ಚಿತ್ರ ನೋಡಿ ನಿರೂಪಣೆ ಓದುತ್ತ ಹೋದರೆ ಗತಕಾಲದ ವಾಸ್ತವ ಮನಸ್ಸಿನಲ್ಲಿ ಅಚ್ಚಳಿಯದೇ ಉಳಿಯುತ್ತದೆ.... ಚರಿತ್ರೆಯ ಸಾಮಾಜಿಕ, ಸಾಂಸ್ಕೃತಿಕ, ಸಾಧನೆಗಳ ದರ್ಶನ, ಜನತೆಯ ಜೀವನ ರೂಪುಗೊಂಡ ವಿಧಾನದ ಪರಿಚಯ, ಮಾನವ ಜನಾಂಗದ ಅಧ್ಯಯನ, ಕಾಲದೊಂದಿಗೆ ಮಾನವರ ಪಯಣ ಎಂಬ ಮಹತ್ವದ ಅಂಶಗಳನ್ನು ಮಕ್ಕಳಿಗೆ ತಿಳಿಯಹೇಳಿ, ಚರಿತ್ರೆಯ ಬೋಧನೆಗೆ ಹೊಸ ಆಯಾಮಗಳನ್ನೂ ಸೂಚಿಸುವುದು. ವೈಜ್ಞಾನಿಕ ದೃಷ್ಟಿಕೋನವನ್ನು ಮೂಡಿಸುವುದು ಹಾಗೂ ಚರಿತ್ರೆಯ ಅಭ್ಯಾಸವನ್ನು ಸುಸಂಗತಗೊಳಿಸುವುದೇ ಈ ಪುಸ್ತಕ ರಚನೆಯ ಮೂಲ ಆಶಯವಾಗಿದೆ.

## ಶ್ರೀ ಗಾಯತ್ರಿ ಎಂಟರ್‌ಪ್ರೈಸಸ್

483, ಎಂ. ಜಿ. ರಸ್ತೆ, ಫೋರ್ಟ್ ಮೊಹಲ್ಲಾ, ಮೈಸೂರು - 4

ಫೋನ್ : 2446023, 244343. ಮೊಬೈಲ್ : 9448074435

ಸಂದರ್ಶನ

ಸಂದರ್ಶಕರು : ಕೆ. ಎಸ್. ಪಾರ್ಥಸಾರಥಿ

# ಐ.ಟಿ. ಎಂಬ ಬೌದ್ಧಿಕ ವ್ಯಾಪಾರ

''ಹೊರಗುತ್ತಿಗೆ ಎಂಬ ವಿಷಯದಲ್ಲಿ ಕೀಳರಿಮೆ ಸಲ್ಲ. ಇದು ಪರಸ್ಪರ ಅವಲಂಬನೆಯೇ ವಿನಾ ಒಮ್ಮುಖವಲ್ಲ''

- ಅಶೋಕ್ ಸೂತ



ಅಶೋಕ್ ಸೂತ ನಮ್ಮ ನಾಡಿನ ಐಟಿ ಜಗತ್ತಿನಲ್ಲಿ ಶಾಶ್ವತವಾಗಿ ನಿಲ್ಲುವ ಒಂದು ಹೆಸರು. ಇನ್‌ಫೋಸಿಸ್ ಜತೆ ಜತೆಗೆ ಅಜೀಂ ಪ್ರೇಮ್‌ಜಿ ಅವರ ವಿಪ್ರೋ ಕಂಪನಿಯು ತನ್ನ ಇನ್ನಿತರ ಕೈಗಾರಿಕೆಗಳ ಉದ್ದಿಮೆಯನ್ನು ಉಳಿಸಿ ಕೊಂಡೇ, ಐಟಿ ಕ್ಷೇತ್ರವನ್ನು ಪ್ರವೇಶಿಸಿತು. ಅದರ ಪ್ರಥಮ ನಾಯಕತ್ವ ಅಶೋಕ್ ಸೂತ ಅವರದು. ಇನ್‌ಫೋಸಿಸ್ ಮತ್ತು ಟಿಸಿಎಸ್‌ಗೆ ಸಮಾನವಾಗಿ ವಿಪ್ರೋ ಇನ್‌ಫೋಟೆಕ್ ಕಂಪನಿಯನ್ನು ಕಟ್ಟಿ ಬೆಳೆಸಿದ ಕೀರ್ತಿ ಇವರದು. ತದನಂತರ ವಿಪ್ರೋ ಬಿಟ್ಟು ಸಮಾನ ಮನಸ್ಕ ತಂತ್ರಜ್ಞರೂ, ನಿರ್ವಹಣಾ ಅನುಭವಿಗಳೂ ಆದ ಇನ್ನೂ ಹತ್ತು ಜನರೊಡನೆ ಕೂಡಿ, ಚರ್ಚಿಸಿ ೧೯೯೯ರಲ್ಲಿ ತಮ್ಮದೇ ಐಟಿ ಸಂಸ್ಥೆಯೊಂದನ್ನು ನಿರ್ಮಿಸಿದರು. ಅದೇ ಇಂದು ತುಂಬ ಹೆಸರುವಾಸಿಯಾದ ಮೈಂಡ್ ಟ್ರೀ. ಅವರ ಮುಖ್ಯ ಹಿರಿಮೆ ಎಂದರೆ ತಮ್ಮದೇ ಹಣಕಾಸು ಬಂಡವಾಳವಿಲ್ಲದೆಯೂ, ಕೇವಲ ಬೌದ್ಧಿಕ ಬಂಡವಾಳ ಮತ್ತು ಕನಸುಗಾರಿಕೆ ಇದ್ದರೆ ಬೃಹತ್ತಾದ ಕೆಲಸ ಮಾಡಬಹುದೆಂದು ಮಾಡಿತೋರಿಸಿ. ಅಂತಹ ಬೇರೆ ಹತ್ತು ಮಂದಿ ಈ ಸಂಸ್ಥೆಯ ಸ್ಥಾಪಕರು. ಈ ಹತ್ತು ಜನ ಒಂದೆಡೆ ಬೆಟ್ಟದಲ್ಲೋ - ಕಾಡಿನಲ್ಲೋ ಮೂರು ದಿನ ಕುಳಿತು ಸತತ ಚಿಂತಿಸಿ, ಮೈಂಡ್ ಟ್ರೀ ಕಂಪನಿಯನ್ನು ಸ್ಥಾಪಿಸುವ ತೀರ್ಮಾನಕ್ಕೆ ಬಂದರಂತೆ. ಅದರ ಹೆಸರೂ ಅಲ್ಲೇ ಸ್ಫುರಿಸಿದ್ದು. ಬೌದ್ಧಿಕ ಜ್ಞಾನದ ನಾಲೆಡ್ಜ್ ಇಂಡಸ್ಟ್ರೀಸ್ ಎಂದೇ ಹೆಸರಾದ ಭಾರತದ ಈ ಸೇವಾಕ್ಷೇತ್ರ ಈ ಜ್ಞಾನದ ಮಿತಿಯನ್ನು ಜಿಗಿದು ಯೋಗದಲ್ಲಿ ಬರುವ ಮನೋಮಯ ಜಗತ್ತಿನ ದಿಗಂತ ವ್ಯಾಪಿಯಾಗುವ ಸರಹದ್ದಿಲ್ಲದ ಚಿಂತನೆಯಾಗ ಬೇಕೆಂಬ ಮಹತ್ವಾಕಾಂಕ್ಷೆಯ ಗುರುತಾಗಿ ''ಮೈಂಡ್ ಟ್ರೀ'' ಅವರಿಗೆ ಕಂಡುಬಂದಿದ್ದು. ಈ ಚಿಂತನೆಗೆ ತಮ್ಮ ಗೆಳೆಯ ಡಾ|| ತೂಪ್ಪಿಲ್ ವೆಂಕಟೇಶ್ ಕಾರಣ ಎನ್ನುತ್ತಾರೆ ಅಶೋಕ್ ಸೂತ. ಮೈಂಡ್ ಟ್ರೀ ಈಗ ೯೦೦೦ ಐಟಿ ಕಾರ್ಮಿಕರನ್ನು ಒಳಗೊಂಡಿದ್ದು, ಅಮೆರಿಕಾದಲ್ಲಿ ಮಾತ್ರ ವಲ್ಲದೆ ಯೂರೋಪಿನಲ್ಲೂ ಇತರ ಎಡೆಗಳಲ್ಲೂ ಹರಡಿದೆ. ಯಾರೂ ಈಗಾಗಲೆ ಪ್ರವೇಶಿಸದ ಹೊಸ ಕ್ಷೇತ್ರಗಳು, ಹೊಸ ಸವಾಲುಗಳನ್ನು ಕೈಗೆತ್ತಿಕೊಳ್ಳುವುದು ನಿಮ್ಮ ಬಯಕೆ ಯಾದರೆ ಮೈಂಡ್ ಟ್ರೀಗೇ ಬನ್ನಿ, ಮೈಂಡ್ ಟ್ರೀ ಕಂಪನಿಯಲ್ಲಿ ನಿಮಗೆ ಪರಿಹಾರ ಖಂಡಿತ ದೊರಕುತ್ತದೆ ಎನ್ನುವ ಅಶೋಕ್ ಅವರನ್ನು 'ಹೊಸತು' ಸಂಧಿಸಿ ಕೆಲವು ಪ್ರಶ್ನೆಗಳನ್ನು ಮುಂದಿಟ್ಟಿತು. ಈ ಸಂದರ್ಶನದ ವರದಿಯನ್ನು ಸಂದರ್ಶಕ ಕೆ. ಎಸ್. ಪಾರ್ಥಸಾರಥಿಯವರು ಇಲ್ಲಿ ಸಾದರಪಡಿಸಿದ್ದಾರೆ.

**ಹೊಸತು :** 'ಮೈಕ್ರೋಸಾಫ್ಟ್'ನಂಥ ಒಂದು ಛಾಪು (ಬ್ರ್ಯಾಂಡ್) ಮೂಡಿಸುವ ಜಾಗತಿಕ ಕಂಪನಿ ನಮ್ಮಲ್ಲಿ ಏಕೆ ಬರಲಿಲ್ಲ? ನಾವು ಕೇವಲ ಸಾಫ್ಟ್‌ವೇರ್‌ನವರು ಎನ್ನುತ್ತಾರೆ. ಹಾರ್ಡ್‌ವೇರ್ ಏಕೆ ಬರಲಿಲ್ಲ, ಕೇವಲ ಹೊರಗುತ್ತಿಗೆ ಮಾಡುವ ಕಂಪ್ಯೂಟರ್ ಕೂಲಿಗಳ ಕ್ಷೇತ್ರವಾಗಿದ್ದೇವೆ, ನಮ್ಮದು ಅಮೆರಿಕಾ ಸಂಯುಕ್ತ ಸಂಸ್ಥಾನದಂಥ ಹೊರ ವ್ಯವಸ್ಥೆಗಳ ಅಧೀನ ಬೆಳವಣಿಗೆ – ಹೀಗೆಲ್ಲಾ ಟೀಕೆಗಳಿವೆಯಲ್ಲ?

**ಅಶೋಕ್ ಸೂತ :** 'ಮೈಕ್ರೋಸಾಫ್ಟ್' ಕಂಪನಿಯಂಥವು ಹಲವಾರು ತಾಂತ್ರಿಕ ಸರಕುಗಳನ್ನು ತಯಾರಿಸುತ್ತವೆ. ನಾವು ಕೇವಲ ಸೇವಾಕ್ಷೇತ್ರ ಅಂದರೆ ಮಾಹಿತಿ ತಂತ್ರಜ್ಞಾನದ ಸರಕುಗಳನ್ನು ಬಳಸುವೆಡೆ ಅಗತ್ಯ ಬೀಳುವ ಹಾಗೂ ಆಧುನಿಕ ಕೈಗಾರಿಕೆಗಳಲ್ಲೇ ಅವುಗಳ ಸಾಮರ್ಥ್ಯ, ಉತ್ಪಾದಕತೆಯನ್ನು ಹೆಚ್ಚಿಸಿ, ವೆಚ್ಚಗಳನ್ನು ತಗ್ಗಿಸಬಲ್ಲ ಮಾಹಿತಿ ತಂತ್ರಗಾರಿಕೆಯ ಸೌಲಭ್ಯಗಳನ್ನು ಅಳವಡಿಸುವಂಥವು. ಇವು ತಾವೇ ಸರಕುಗಳಲ್ಲ. ಈ ಸಾಫ್ಟ್‌ವೇರ್ ಎನ್ನುವ ಗಣಕ ಸೌಲಭ್ಯ ಕ್ಷೇತ್ರದಲ್ಲಿ ನಾವು ಜಾಗತಿಕವಾಗಿ ಅತ್ಯಂತ ಉನ್ನತ ಮಟ್ಟದಲ್ಲಿರುವ ಮನ್ನಣೆ ಪಡೆದಿದ್ದೇವೆ. ಇದರೊಂದಿಗೆ ನಮ್ಮದೆ ಹಾರ್ಡ್‌ವೇರ್ ಕ್ಷೇತ್ರವೂ ಬೆಳೆದಿದ್ದರೆ ನಾವು ಜಗತ್ತಿನ ಕಾರ್ಯಾಗಾರವಾಗಿಬಿಡಬಹುದಿತ್ತು. ೧೯೯೧ ರವರೆಗೂ ನಮ್ಮಲ್ಲಿದ್ದ ಕೆಲವು ಆರ್ಥಿಕ ನೀತಿಗಳ ಪರಿಣಾಮವಾಗಿ, ಮುಕ್ತಮಾರುಕಟ್ಟೆಯ ಅವಕಾಶವಿರದೆ ಈ ಕುರಿತ ತಂತ್ರಜ್ಞಾನ ಮತ್ತು ಬೇಕಾದ ಬಹುಹೆಚ್ಚಿನ ಹೂಡಿಕೆಯ ಬಂಡವಾಳ ಚೀನಾ, ಹಾಂಕಾಂಗ್, ದಕ್ಷಿಣ ಕೊರಿಯ ಮತ್ತು ಆಗ್ನೇಯ ರಾಷ್ಟ್ರಗಳಿಗೆ ಹರಿದು, ಈ ಕ್ಷೇತ್ರದ ಹೆಚ್ಚುಗಾರಿಕೆ ಅವುಗಳ ಪಾಲಾಯ್ತು. ನಮ್ಮದೆ ಕೈಗಾರಿಕೆಗಳು ಪ್ರಬುದ್ಧವಾಗಿ, ಮಾಹಿತಿ ತಂತ್ರಜ್ಞಾನದ ಮೂಲ ಸರಕುಗಳಿಗೆ ಆಂತರಿಕ ಬೇಡಿಕೆ ಹೆಚ್ಚಾದಾಗ, ಬಹುಶಃ ನಮ್ಮದೆ ಹಾರ್ಡ್‌ವೇರ್ ಕ್ಷೇತ್ರವೂ ಬೆಳೆಯಬಹುದೆಂಬ ಸೂಚನೆ ಇದೆ. ಸದ್ಯಕ್ಕೆ ನಮ್ಮ ಕೈಗಾರಿಕೆಗಳು ಜಾಗತಿಕ ಮಟ್ಟದೊಡನೆ ಹೋಲಿಸಿದಾಗ ಇನ್ನೂ ಮಾನವ ಶ್ರಮಕೇಂದ್ರಿತ – ಲೇಬರ್ ಇನ್‌ಟೆನ್ಸಿವ್ ಆಗಿವೆ. ಹೆಚ್ಚಿನ ಉದ್ಯೋಗವನ್ನು ಸೃಷ್ಟಿಸುವ ಅಗತ್ಯವಿರುವ ಅಭಿವೃದ್ಧಿಶೀಲ ಮತ್ತು ಹಿಂದುಳಿದ ಆರ್ಥಿಕ ಕ್ಷೇತ್ರಗಳಲ್ಲಿ ಇನ್ನೂ ಸ್ವಲ್ಪ ಕಾಲ ಸೇವಾಕ್ಷೇತ್ರವೇ ಹೆಚ್ಚಾಗಿ ಬೆಳೆಯುವುದು ಹೆಚ್ಚಿನ ಉದ್ಯೋಗ ಸೃಷ್ಟಿಸುವ ದೃಷ್ಟಿಯಿಂದ ಅಗತ್ಯವಾಗುತ್ತದೆ. ರೈಲ್ವೆ ಟಿಕೆಟ್ ಕಾದಿರಿಸುವ ವ್ಯವಸ್ಥೆ, ನಮ್ಮ ಬ್ಯಾಂಕಿಂಗ್ ವ್ಯವಸ್ಥೆ, ಬರಲಿರುವ ಸಾರ್ವತ್ರಿಕ ಗಣಕೀಕೃತ ಗುರುತಿನ ಚೀಟಿ ನೀಡುವ ವ್ಯವಸ್ಥೆ ಮುಂತಾದ ಹಲವಾರು ಕ್ಷೇತ್ರಗಳಲ್ಲಿ ಅಪಾರವಾದ ಅತ್ಯಾಧುನಿಕ ಮಾಹಿತಿ ತಂತ್ರಜ್ಞಾನ ಬಳಕೆಯಾಗುತ್ತಿದೆ.

ಇನ್ನು 'ಹೊರಗುತ್ತಿಗೆ' ಎಂಬ ವಿಷಯದಲ್ಲಿ ಕೀಳರಿಮೆ ಸಲ್ಲ. ಇದು ಪರಸ್ಪರ ಅವಲಂಬನೆಯೇ ವಿನಾ ಏಮ್ಮುಖವಲ್ಲ. ಅಮೆರಿಕಾ ಸಂಯುಕ್ತ ಸಂಸ್ಥಾನ ನಮ್ಮ ದೇಶದ ತಂತ್ರಜ್ಞರನ್ನು ಕೆಲಸಕ್ಕೆ ನಿಯಮಿಸಿಕೊಳ್ಳಲು ಒಂದು ಡಾಲರು ವೆಚ್ಚ ಮಾಡಿದರೆ ಅವರಿಗೆ ೧.೫ ಡಾಲರಿನಷ್ಟು ಉತ್ಪಾದನೆಯಾಗುತ್ತಿದೆ. ಅದೇ ಅವರು ನಮ್ಮ ಮೇಲೆ ಅವಲಂಬಿಸಿರುವುದರ ಗುಟ್ಟು. ಇದು ಉಭಯತ್ರ ಲಾಭದ ವಿಷಯವೇ ವಿನಾ ಇದನ್ನು ಕುರಿತ ಹೆದರಿಕೆ, 'ಗುತ್ತಿಗೆ' ಪದದ ಕೀಳರಿಮೆ ಆತ್ಮವಿಶ್ವಾಸದ ಕೊರತೆಯಾಗುತ್ತದೆ. ನಮ್ಮ ಇಂದಿನ ಮಾಹಿತಿ ತಂತ್ರಜ್ಞಾನದ ಹಿರಿಮೆಯ ಬಗ್ಗೆ ನಾವು ಧೈರ್ಯವಾಗಿ ಹೆಮ್ಮೆ ಪಡಬಹುದು. ಅರ್ಥವ್ಯವಸ್ಥೆಯ ಜಾಗತಿಕ ಸಂಬಂಧಗಳು ಪರಸ್ಪರ ಅವಲಂಬನೆಯೇ ವಿನಾ ಅವು ಹಿಂದಿನಂತೆ ವಸಾಹತು ತರಹದ್ದಲ್ಲ. ಮಾಹಿತಿ ಜ್ಞಾನದ ಕ್ಷೇತ್ರದಲ್ಲಿ ಇದನ್ನು ಧೈರ್ಯವಾಗಿ ಹೇಳಬಹುದು. ಮುಂದುವರಿದ ಜಪಾನಿನ ಅರ್ಥವ್ಯವಸ್ಥೆಗೆ ಚೀನಾ ಮಾಹಿತಿ ತಂತ್ರಜ್ಞಾನದ ಸೇವೆಯನ್ನು ಒದಗಿಸುತ್ತದೆ ಎಂದಾಗ ಇದು ಅರ್ಥವಾದೀತು. ಜಾಗತಿಕವಾಗಿ ಇಂದಿನ ಪರಸ್ಪರ ಅವಲಂಬಿತ ಸಂಬಂಧದಿಂದಾಗಿ, ಕೈಗಾರಿಕೆಗಳ ಮಾದರಿಗಳು ಸ್ವಲ್ಪ ಹೆಚ್ಚುಕಡಿಮೆ ಒಂದೇ ಸ್ವರೂಪದವಾಗಿ ಎಲ್ಲ ದೇಶಗಳಲ್ಲೂ ವಿಕಾಸವಾಗುತ್ತವೆ.

**ಹೊಸತು :** ಸಾರ್ವಜನಿಕ ಕ್ಷೇತ್ರ ನಮ್ಮ ನಾಡಿನಲ್ಲಿ ಮುಂದುವರಿಯಬೇಕೆ ?

**ಅಶೋಕ್ ಸೂತ :** ಎಲ್ಲ ಕಾಲಕ್ಕೂ ಕೆಲವು ಕ್ಷೇತ್ರಗಳಲ್ಲಿ ಸಾರ್ವಜನಿಕ ಹೂಡಿಕೆ ಅಗತ್ಯ. ನಮ್ಮ ಬಿಇಎಲ್, ರಕ್ಷಣಾ ಕ್ಷೇತ್ರ, ಬಿಹೆಚ್‌ಇಎಲ್, ಪವರ್ ಗ್ರಿಡ್ ಕಾರ್ಪೊರೇಷನ್ ಮುಂತಾದುವು ಸಾರ್ವಜನಿಕ ಕ್ಷೇತ್ರದಲ್ಲೇ ಇರಬೇಕಾಗುತ್ತದೆ. ಅವುಗಳಲ್ಲೂ ಖಾಸಗಿಯವರು ಭಾಗಿಯಾದರೂ, ನಿಯಂತ್ರಣ ಸರ್ಕಾರದ್ದಿರ ಬೇಕು. ಒಂದು ಕಾಲಕ್ಕೆ ಅಗತ್ಯವಾಗಿದ್ದ ಸಾರ್ವಜನಿಕ ಕ್ಷೇತ್ರದ ದೂರಸಂಪರ್ಕ ವ್ಯವಸ್ಥೆ ಇಂದೂ ಅಲ್ಲಿಯೇ ಮುಂದುವರಿಯುವ ಅಗತ್ಯವೇ ಇಲ್ಲ. ಅದು ತೀರ ಲಾಭದಾಯಕ ವ್ಯವಹಾರ. ಪೈಪೋಟಿಗೆ ತೆರೆದುಕೊಂಡು, ತ್ವರಿತ ಗತಿಯಲ್ಲಿ ನೀತಿಗಳನ್ನು ಬದಲಾಯಿಸಿಕೊಳ್ಳುತ್ತಾ ಮುಂದುವರಿಯುವ ವ್ಯವಸ್ಥೆ ಬೇಕಾಗುವಲ್ಲಿ ಸರ್ಕಾರೀ ಮಾದರಿ ತಕ್ಕುದಲ್ಲ. ಈಗ ಕೇಳಿಬರುತ್ತಿರುವ ಆ ವ್ಯವಸ್ಥೆಯಲ್ಲಿನ ಭ್ರಷ್ಟಾಚಾರ ಮುಂತಾದುವುಗಳು, ಈ ಕ್ಷೇತ್ರವನ್ನು ಸಂಪೂರ್ಣ ಮಾರುಕಟ್ಟೆಗೆ ತೆರೆದಿಡಬೇಕು ಎಂಬುದಕ್ಕೆ ಸಮರ್ಥನೆ ಆಗುತ್ತವೆ. ದೂರಸಂಪರ್ಕ ಕ್ಷೇತ್ರವನ್ನು ಸಾರ್ವಜನಿಕವಾಗಿ ನಿಯಂತ್ರಿಸುವ ವಿಷಯವೇ ಬೇರೆ. ಹಾಗೆ ಮಾಡಬೇಕಾದರೆ ಸರ್ಕಾರ ಅದೇ ವಾಣಿಜ್ಯ ವ್ಯವಹಾರದಲ್ಲಿ ತಾನೇ ತೊಡಗಿಲ್ಲದಿದ್ದರೆ ಹೆಚ್ಚು ಸಮರ್ಥವಾಗುತ್ತದೆ. ಹಾಗೆಯೇ ಮೂಲಭೂತ ಸೌಕರ್ಯ ಗಳನ್ನು ಕಲ್ಪಿಸುವುದೂ ಸಾರ್ವಜನಿಕ ಕ್ಷೇತ್ರವಾಗಬೇಕು. ರೈಲು ವ್ಯವಸ್ಥೆಯಲ್ಲಿ ಖಾಸಗಿಕ್ಷೇತ್ರ



ಭಾಗವಹಿಸಬಲ್ಲ ವಿಭಾಗಗಳಿವೆ. ಆದರೂ ಒಟ್ಟಾರೆ ವ್ಯವಸ್ಥೆ ಸಾರ್ವಜನಿಕ ಹಿಡಿತದಲ್ಲಿರಬಹುದು. ಅದೇ ಉನ್ನತವರ್ಗದವರು ಬಳಸುವ ವಿಮಾನಯಾನ ಕ್ಷೇತ್ರವನ್ನು ಸರ್ಕಾರಿಕ್ಷೇತ್ರ ನಡೆಸಲಾರದೆ, ಆ ಕ್ಷೇತ್ರ ಮುಕ್ತವಾಗಿ ವಿಕಾಸವಾಗದೆ ಆಗಿರುವ ಪರಿಸ್ಥಿತಿಯನ್ನು ನೋಡಿದರೆ, ಈ ಕ್ಷೇತ್ರ ಸಂಪೂರ್ಣವಾಗಿ ಖಾಸಗಿಯಾಗದೆ ವಿಧಿಯಿಲ್ಲ. ಈ ಹಿಂದೆ ಸರ್ಕಾರ ಹೋಟೆಲ್ ನಡೆಸುವುದನ್ನು ಕೈಬಿಟ್ಟಂತೆ ಇದೂ ಕೂಡ ಆಗಬೇಕು. ಇದರಲ್ಲಿ ಯಾವುದೇ ಸೈದ್ಧಾಂತಿಕತೆ ಬೇಕಾಗಿಲ್ಲ.

**ಹೊಸತು :** ಮಾಹಿತಿ ತಂತ್ರಜ್ಞಾನ ಕ್ಷೇತ್ರ ತುಂಬ ಲಾಭ ಗಳಿಸುತ್ತಿದ್ದು ಆರೋಗ್ಯಕರವಾಗಿದೆ. ಆದರೂ ಇನ್ನೂ ಅನೇಕ ಸರ್ಕಾರಿ ಸೌಲಭ್ಯಗಳನ್ನು ತೆರಿಗೆ ವಿನಾಯಿತಿಗಳನ್ನು ಪಡೆಯುತ್ತಿದೆ. ಇದೇನು ನ್ಯಾಯವೇ ?

**ಅಶೋಕ್ ಸೂತ :** ನೀವು ಹೇಳುವುದು ಮೇಲ್ನೋಟಕ್ಕೆ ಸರಿ ಎಂದೆನಿಸಿದರೂ ಒಂದೆರಡು ಕಾರಣಗಳೂ ಇವೆ. ಈ ಪರಿಸ್ಥಿತಿಗೆ ನಮ್ಮೊಂದಿಗೆ ಪೈಪೋಟಿ ಮಾಡುವ ದೇಶಗಳು, ಉದಾಹರಣೆಗೆ ಚೀನಾ, ತಮ್ಮದೇ ಕಂಪನಿಗಳಿಗೆ ಬಹಿರಂಗವಾಗಿ ಹಾಗೂ ಒಳಗೊಳಗೇ ಹಲವು ವಿಧದ ವಿನಾಯ್ತಿ ಮತ್ತು ಬೆಂಬಲಗಳನ್ನು ನೀಡುತ್ತಿದೆ. ಹಾಗಾಗಿ ಅವರ ಸರಕು, ಸೇವೆಗಳು ನಮ್ಮದಕ್ಕಿಂತ ಸುಲಭದರವಾಗಿಬಿಡುತ್ತವೆ. ಅವರೊಡನೆ ಸ್ಪರ್ಧೆಗೆ ನಿಲ್ಲಲು ನಮಗೆ, ಅದರಲ್ಲೂ ನಮ್ಮ ಪ್ರಾರಂಭಿಕ ಕಂಪನಿಗಳಿಗೆ ಅಂಥದೇ ಸೌಲಭ್ಯ ಬೇಕಾಗುತ್ತದೆ. ಈಗ ಸದ್ಯದಲ್ಲಿ ಇರುವ ಹಲವು ಬೆಂಬಲಗಳು ಇಂಥ ಪ್ರಾರಂಭಿಕ ಕಂಪನಿಗಳಿಗೆ ಸಂಬಂಧಪಟ್ಟವು. ಈ ಬೆಂಬಲಗಳನ್ನು ಈಗಾಗಲೇ ನಿಗದಿಯಾಗಿರುವ ತಾರೀಖಿನವರೆಗೆ ಹೀಗೆಯೇ ಮುಂದುವರಿಸಿ, ತದನಂತರ ಪುನಃ ಅವನ್ನು ನೀಡದಿರುವುದಕ್ಕೆ ನನ್ನ ಬೆಂಬಲವಿದೆ. ಈ ಬೆಂಬಲ ದೊರೆಯುವುದೆಂಬ ವಿಶ್ವಾಸದ ಮೇಲೆ ಪ್ರಾರಂಭವಾದ ಹೊಸ ಕಂಪನಿಗಳಿಗೆ, ಇವನ್ನು ಹಠಾತ್ತನೆ ನಿಲ್ಲಿಸಿದರೆ ಕಷ್ಟವಾಗುತ್ತದೆ.

**ಹೊಸತು :** ಒಂದೆರಡು ವರ್ಷಗಳ ಹಿಂದೆ ಕರ್ನಾಟಕದ ಕೆಲವು ಅತ್ಯಂತ ಮುಂದುವರಿದ ಐಟಿ ಕಂಪನಿಗಳು ವಿಪರೀತವೆಂದೆನಿಸುವಷ್ಟು ಭೂಮಿ ಬೇಡಿ, ಸರ್ಕಾರ ಅದನ್ನು ನೀಡದಿದ್ದರೆ ತಾವು ಬೇರೆ



ರಾಜ್ಯಗಳಿಗೆ ತಮ್ಮ ವಹಿವಾಟನ್ನು ರವಾನೆ ಮಾಡುವುದಾಗಿಯೂ ಬೆದರಿಕೆ ಹಾಕಿದ್ದವು. ಐಟಿ ಕಂಪನಿಗಳಲ್ಲಿ ಅಂ
ಹೇಳಿಕೊಳ್ಳುವಂಥ ದೊಡ್ಡದೊಡ್ಡ ಯಂತ್ರಗಳೇ ಮುಂತಾದ ಹೆಚ್ಚು ಭೂಮಿ ಬೇಡುವ ಮೂ
ವಿನ್ಯಾಸಗಳಿಲ್ಲದಿರುವಾಗ ಅಷ್ಟೊಂದು ಭೂಮಿ ಕೇಳುವುದು ಯಾವ ನ್ಯಾಯ? ಅದೇನು ರಿಯಲ್ ಎಸ್ಟೇಟ
ಧಂಧೆಯೆ? ಭವಿಷ್ಯತ್ತಿನ ಆತಂಕಗಳಿಗೆ ರಕ್ಷೆ ಎಂತಲೇ?

**ಅಶೋಕ್ ಸೂತ:** ಈ ಕ್ಷೇತ್ರದಲ್ಲಿ ನಡೆಯುವುದು ಬೌದ್ಧಿಕ ವ್ಯವಹಾರ ಹಾಗೂ ಹೆಚ್ಚು ಸಂಖ್ಯೆಯಲ್ಲಿ ಪರಿಣ
ಕಾರ್ಮಿಕರನ್ನು ನಿಯಮಿಸಿಕೊಳ್ಳುತ್ತದೆ. ಈ ಕೆಲಸಕ್ಕೆ ತಕ್ಕಂತೆ ಕಛೇರಿಯಲ್ಲಿ ಪರಿಸರ ನಿರ್ಮಿಸಿಕೊಡಬೇಕು. ಕುಳಿತ
ಕೆಲಸಮಾಡಲೂ ಸಾಕಷ್ಟು ಸ್ಥಳಾವಕಾಶ ಬೇಕು: ಕ್ಯಾಂಟೀನ್, ಲೈಬ್ರರಿ, ಆಟದ ಪ್ರದೇಶ, ಸಭಾಂಗಣ, ತರಬೇತಿ
ಜಾಗ ಹೀಗೆಲ್ಲ ಅಂತರರಾಷ್ಟ್ರೀಯ ಮಟ್ಟದಲ್ಲಿ ನಿರ್ವಹಿಸಬೇಕು. ಕಾರಣ ನಮ್ಮೊಡನೆ ಅಂತರರಾಷ್ಟ್ರೀಯ ವಾಣಿಜ್ಯವ
ಹೆಚ್ಚು. ಹಾಗಾಗಿ ಸ್ವಲ್ಪ ಭೂಮಿ ಹೆಚ್ಚೆನಿಸುವಷ್ಟೇ ಬೇಕಾಗುತ್ತದೆ. ಹಾಗೆಂದು ಈ ನೆಪದಲ್ಲಿ ವಿಪರೀತ ಭೂಮಿ
ಆಕ್ರಮಿಸಿಕೊಳ್ಳುವುದು ಸರಿಯಲ್ಲ.

**ಹೊಸತು:** ಮಾಹಿತಿ ತಂತ್ರಜ್ಞಾನವೂ ಸೇರಿದಂತೆ ವಿವಿಧ ಕೈಗಾರಿಕಾ ಕ್ಷೇತ್ರಗಳು ತಾವು ಆರಿಸಿಕೊಳ್ಳುವ
ಇಂಜಿನಿಯರಿಂಗ್ ಪದವೀಧರರನ್ನು ಉತ್ಪಾದಿಸಲು ಶಿಕ್ಷಣಕ್ಷೇತ್ರ ಅಪಾರವಾದ ಹಣ ಖರ್ಚು ಮಾಡುತ್ತದೆಯಾದ್ದರಿಂದ
ಆ ಉತ್ಪಾದನಾ ವೆಚ್ಚವನ್ನು ತೂಗಿಸಲು, ಆ ಪರಿಣತನನ್ನು, ಒಂದು ಸರಕಿನಂತೆ, ಆತನ ಉತ್ಪಾದನಾ ವೆಚ್ಚವನ್ನು ತಾವ
ವಹಿಸಿಕೊಳ್ಳಬಾರದೇಕೆ? ಆ ಹಣವನ್ನು ಒಂದು ಸ್ವಾಯತ್ತ ಸಂಸ್ಥೆ ಇಂಜಿನಿಯರಿಂಗ್ ಮತ್ತಿನ್ನಿತರ ಔದ್ಯೋಗಿಕ ಶಿಕ್ಷ
ಹಾಗೂ ವೈಜ್ಞಾನಿಕ ವಿದ್ಯಾಭ್ಯಾಸವನ್ನು ಪ್ರೋತ್ಸಾಹಿಸಲು, ವಿದ್ಯಾರ್ಥಿಗಳಿಗೆ ಶಿಕ್ಷಣ ಶುಲ್ಕ, ಶಿಷ್ಯವೇತನ ಮುಂತಾಗಿ ವೆ
ಮಾಡಬಹುದು. ಅದು ಈ ಕೈಗಾರಿಕಾ ಕ್ಷೇತ್ರ ತನ್ನ ಸಾಮಾಜಿಕ ಹೊಣೆಗಾರಿಕೆಯನ್ನು ನಿರ್ವಹಿಸಿದಂತೆ ಆಗುತ್ತದೆ ಅಲ್ಲವೆ?

**ಅಶೋಕ್ ಸೂತ:** ಇದು ಸರಿಯಲ್ಲ. ನಾವು ಶಿಕ್ಷಣದ ಉದ್ಯಮದಲ್ಲಿಲ್ಲ. ನಾವು ಉದ್ಯಮ ಸೃಷ್ಟಿಸಿ, ಉದ್ಯೋಗ
ನೀಡುವುದೆ ನಮ್ಮ ಪ್ರಥಮ ಸಾಮಾಜಿಕ ಹೊಣೆಗಾರಿಕೆ ಹಾಗೂ ನಾವು ತುಂಬ ತೆರಿಗೆ ನೀಡುತ್ತೇವೆ. ಅದಕ್ಕೂ ಮೇ
ಬಹುಭಾಗ ಉದ್ಯಮಗಳು ತಮ್ಮ ಲಾಭದಲ್ಲಿ ಒಂದಿಷ್ಟು ಪಾಲನ್ನು ಸಾಮಾಜಿಕ ಸೇವಾಕ್ಷೇತ್ರಗಳಲ್ಲಿ ವಿನಿಯೋಗಿಸುತ್ತಿವೆ
ನಮ್ಮದೆ ಸಂಸ್ಥೆ ತನ್ನ ಲಾಭದಲ್ಲಿ ಸುಮಾರು ಶೇಕಡ ೧.೫ರಷ್ಟು ಹಣವನ್ನು ಅಂಗವಿಕಲರು, ಅಂಧರು ಮುಂತಾಗಿ ಅವರ
ಕ್ಷೇಮಕ್ಕೆ, ಪ್ರಾಥಮಿಕ ಶಿಕ್ಷಣಕ್ಕೆ ಹೀಗೆಲ್ಲಾ ವಿನಿಯೋಗಿಸುತ್ತಿದ್ದೇವೆ. ಶಿಕ್ಷಣಕ್ಷೇತ್ರದ ಪ್ರಾಥಮಿಕ ಹೊಣೆಗಾರಿಕೆ ಸರ್ಕಾರದ್ದು.

ಕೆ. ಎಸ್. ಪಾರ್ಥಸಾರಥಿ
ನಂ. ೨೪೭, 'ಬೆಳಕು', ವನಸಿರಿ ಬಡಾವಣೆ, ವಿದ್ಯಾನಗರ, ಬೆಟ್ಟಹಲಸೂರು ಅಂಚೆ, ಬೆಂಗಳೂರು - ೫೬೨ ೧೫೭

# ಆರಂಭ




■ ಡಾ॥ ಕೆ. ವೈ. ನಾರಾಯಣಸ್ವಾಮಿ

## ಮೊದಲ ಪಾದ

ಗಾವುದ ಗಾವುದ ದೂರದಲಿತ್ತು
ಒಂದಾನೊಂದು ಊರು
ಏನು ಚಂದವೋ ಎಂಥ ಅಂದವೋ
ಅದ ನೋಡಲು ನೂರು ಕಣ್ಣಿರಬೇಕು.
ಸುತ್ತ ಮುತ್ತಲ ನಾಡಿಗೆಲ್ಲಾ ಹೆಸರವಾಸಿ ಈ ಹಳ್ಳಿ
ಬನಹಳ್ಳಿ ಎಂದು ಇದರ ಜನ ಕರೆಯುವರು
ಊರ ಸುತ್ತಲು ಕಣ್ ಕಾವಲಾಗಿ
ಕೋಟೆ ಕಾಯುತ್ತಿತ್ತು ಹಗಲಿರಳು
ಊರ ಬೆನ್ನಿಗೆ ಬೆಂಗಾವಲಾಗಿ
ಬೆಟ್ಟ ನಿಂತಿತ್ತೋ ಉದ್ದಕೆ ಗಿರಿ ಮುಗಿಲು
ಊರಿಗೆ ಹಸಿರು ದಿಬ್ಬಣವಾಗಿ
ಕಾಡು ಮೇಡಿತ್ತು ದಟ್ಟ ಕಾಡು ಮೇಡಿತ್ತು.
ಊರ ಸೆರಗಿನಲ್ಲಿ ಕೆರೆಯು ತುಂಬಿ ತುಳಿಕಿತ್ತು.
ಧರೆಯಲಿಂಥ ಊರ ನೋಡಿ ಕರಬುತ್ತಾರೆ ಮೇಲ್ ದೇವರು
ಊರಲಿದ್ದ ಜಾತಿ ಗೀತಿ ಊರಲಿದ್ದಾ ಜೀವ ಗೀವಾ
ಸುಖವೇ ಬಂದಿಯಾಗಿತ್ತೋ ಸರಸರನೇ ಬದುಕು ಸಾಗಿತೋ
ಜಗಳವಿಲ್ಲ ಜಾಡ್ಯವಿಲ್ಲ ಒಡಹುಟ್ಟಿದಂತಿತ್ತೋ
ಊರು ಸುಖ ತಾಂಡವಾಡುತ್ತಿತ್ತು ಬಾಳು
ಕಾಲ ಕಾಲಕ್ಕೆ ಮಳೆ ಮಾರು ಸುರಿದು
ನೆಲನಂಬಿ ದುಡಿವಲ್ಲಿ ಬೆವರ ಹೊಳೆ ಹರಿದು
ಮಣ್ಣ ಸೋಕಿದ ಬೀಜಗಳು ಗಿಡವಾಗಿ ಬೆಳೆದು
ಬೆಳೆಯಾಗಿ ಬೆಳೆದು ಹೊಲಗದ್ದೆ ತುಂಬ ತೆನೆಗಳದೇ ಹಬ್ಬ
ಕಣ ಕಣದ ತುಂಬಾ ಕಾಳಿನದೇ ರಾಶಿ
ತುಂಬಿ ತುಳಿಕಿತ್ತೋ ಹಗೇವು ಕಣಜ

ಅಷ್ಟ ದಿಕ್ಕುಗಳಿಗೆ ಹಸ್ತಬಂಧವಾಗಿ
ಊರಾಚೆಗಿದ್ದವೋ ಹಸಿದು ರೋಗ ರುಜಿನಗಳು
ಹೊನ್ನೇರು ಮಾರ್ನಾಮಿ ಸಂಕ್ರಾಂತಿ ಯುಗಾದಿ
ವರ್ಷಕ್ಕೆ ಒಂದಾವರ್ತಿ ದ್ಯಾವರ ಬಂದೇ ಬರತೈತೆ
ಊರ ದ್ಯಾವರ ಓಣಿ ದ್ಯಾವರ ಮನೆಯ ದ್ಯಾವರ
ತಳದ ದ್ಯಾವರ ಮುಂದ್ಯಾವರ ಹೊಸದ್ಯಾವರಾ...
ಬಂದೇ ಬರತೈತೆ ದ್ಯಾವರ ಬಂದೇ ಬರತೈತೆ
ಊರಿಗೆ ಊರೇ ಒಂದುಗೂಡುತ್ತಾ
ಪದವಾಡುತ್ತಾ ಪರವು ಮಾಡುತ್ತಾ
ಮಳೆರಾಯನಿಗೆ ಮಂಗಳಾರತಿ
ಮಾರುತಿಗೇನೋ ತುಪ್ಪದಾರತಿ
ಬನದಮ್ಮನಿಗೆ ದೀಪದಾರತಿ
ಬಡವ ಬಲ್ಲಿದ ಮೇಲು ಕೀಳು ಭೇದವಿಲ್ಲವೋ ಪರಸೆಯಲ್ಲಿ
ಹಂಗು ಇಲ್ಲವೋ ವರಸೆಯಲ್ಲಿ
ಹಿಂಗೆ ಹಾಲಂತೆ ಸಾಗಿತ್ತು ಬಾಳು

## ಪಾದ ಎರಡು

ಇಂಥ ಕಾಲಕ್ಕೆ ಕೊನೆಗೂ ಕೊನೆ ಬಂತು
ಯಾವ ದೇವತೆಯು ಯಾಕೆ ಮುನಿದಳೋ ಕಾಣೆ
ಎತ್ತಣ ಕೇಡೋ ಇತ್ತಣ ದಾರಿಗೆ ಯಾಕೆ ಬಂದಿತೋ
ಬೆಟ್ಟದ ಮರೆಗೆ ಕರೆಗೆ ಕಾಯುತ್ತಿದ್ದ ಮೋಡಗಳು
ಮರೆಯಾದವು ಮುನಿಸಿಕೊಂಡವರ ಹಾಗೆ
ಭರಣಿ ಕಳೆದರೂ ಧರಣಿಯ ಮೇಲೊಂದನಿಯಿಲ್ಲ
ಬಾನಿನ ಬಾಗಿಲಿನಲ್ಲಿ ಮೋಡಗಳ ಸುಳಿವಿಲ್ಲ
ಕೆಂಡದ ಕೊಪ್ಪರಿಗೆ ಧಗಧಗ ಉರಿವಂಗೆ
ಸುಡು ಸುಡು ಸುಡುತ್ತಾನೆ ತಲೆ ಮ್ಯಾಲೆ ಸೂರಿಣ್ಣ
ಮಳೆಗಾಲದಲೇ ಹಿಂಗಿ ಹೋದವು ಕೆರೆಕುಂಟೆ ಬಾವಿಗಳು
ದಿನಗಳು ತುಂಬಿ ತಿಂಗಳು ಆದವು
ತಿಂಗಳು ಉರಳಿ ವರ್ಷಗಳು ಆದವು
ನೆಮ್ಮದಿ ಸುಖಗಳು ಗುಳೇ ಹೋದವು
ಭೂಮಿಯು ಕಾದ ಬೋಗುಣಿಯಾಯಿತು.
ಪಶು ಪಕ್ಷಿಗಳು ಸಕಲ ಜೀವಗಳು ತತ್ತರಗೊಂಡವು
ಮಕ್ಕಳು ಮುದುಕರು ನಿತ್ರಾಣಗೊಂಡರು
ಕಾಡು ಒಣಗಿತೋ ಬೆಂಕಿ ಹೊತ್ತಿತ್ತೋ
ಹಸಿ ಕಾಳ್ಗಿಚ್ಚಿನಲಿ ಸುಟ್ಟು ಹೋದವು ಜೀವ ಜಂತುಗಳು
ಖಾಲಿಯಾದವು ಕಾಳು ಬರಿದೋ ಹಗೇವು ಕಣಜ

ಬೇಕಿತ್ತು ಎಲ್ಲರಿಗೂ ನೆಪವೊಂದು ಕಾರಣ.

## ಪಾದ ನಾಲ್ಕು

ಮತ್ತೆ ವಾಯಿದೆ ಬಿತ್ತು ಊರವರ ಪಯಣ
ಒಣಗಿ ಬರುಡಾದ ಒಡು ನೆಲದಲ್ಲಿ
ಮೊದ್ದು ರಾಮಣ್ಣ ಹುಳುಮೆಯ ಮಾಡುತ್ತಾನೆ
ಭೂತಾಯಿ ನೆತ್ತಿ ಮೇಲೆ ಹಣೆಬರಹ ಬರೆವಂಗೆ
ಗುಳು ಹರಿದ ಗೀರು ಹೊಲದ ತುಂಬ
ಜನ ಅಕ್ಕಿ ಬಾಯಲಿ ತುಂಬಿ ಕಾಯುತ್ತವರೆ ಊರ ಜನ
ಉರಿ ಬಿಸಿಲು ಹಬೆಗೆ ಹಠದ ಕರ್ಪೂರ
ಕರಗಿ ನೀರಂತೆ ಇಂದಲ್ಲ ನಾಳೆ
ಬಂದೇ ಬರುತ್ತಾನೆ ಗುಳ್ಳೆ ಹೊಂಟು
ಇತ್ತ ಊರಿನ ಜನರು ಕ್ಷಣವೊಂದು ಯುಗವಾಗಿ ಕಾಯುತವರೆ
ಅತ್ತ ರಾಮಣ್ಣನಿಗೆ ಮಣ್ಣ ದ್ಯಾನದಲಿ
ದಿನವೊಂದು ಕ್ಷಣವಗಿ ಕಳೆಯುತ್ತಾದೆ.
ಇಂಥ ಇಬ್ಬಂದಿಯಲಿ ಕೊರುಗುವ ಜನರ ತಲೆ ಮ್ಯಾಲೆ
ಹಗಲು ಇರುಳಿನ ಚಕ್ರ ಉರುಳುರುಳಿ ಹೋಗುವಾಗ
ಮೇಲೆ ಆಕಾಸದಲ್ಲಿ ಬಿಳಿ ಆನೆಗಳ ಹಿಂಡು
ಮಳೆ ಸುರಿಸೋ ಕಾಯವ ಕೈ ಬಿಟ್ಟು
ದೇಶ ಸಂಚಾರ ಮಾಡುತ್ತಾವೆ ಮೋಡಗಳು
ಲೋಕ ತಲ್ಲಣ ಕಂಡು ಉಬ್ಬುಬ್ಬಿ ನಗುತ್ತಾವೆ.
ಮೈಯೆಲ್ಲಾ ನೀರಿದ್ದರೂ ಕನಿಕರ ಹನಿಯಿಲ್ಲ
ಆಕಾಸದಿ ಮೋಡಗಳ ಅಟ್ಟಹಾಸ ನಡೆದಿತ್ತು
ದಿನವೊಂದು ದಿನವೆರಡು ಹೀಗೆ ಒಂದು ವಾರವು ಕಳೆದು
ಹಸಿವು ಮತ್ತಷ್ಟು ಬಾದಿಸುತ್ತಿರಲು
ಹಣೆಬರ ಇದ್ದಂತೆ ಆಗಲಿ ಮುಂದಿನದು ದೇವರ ಚಿತ್ತವೆಂದು
ರಾಮಣ್ಣನನ್ನು ತೊರೆದು ಊರು ಬಿಡಲು ಜನ
ಮಾರನೆಯ ದಿನ ಹೊತ್ತು ಗೊತ್ತು ಮಾಡಿದರು ವ್ಯಥೆಯಿಂದ
ಅಂದು ಕೂಡ ರಾಮಣ್ಣ ಮನೆಯಲ್ಲಿ ಕೂರದೆ
ಬಡಕಲೆತ್ತುಗಳ ಹೆಗಲಿಗೆ ನೊಗವೂಡಿ ನಡೆದನು ಹೊಲಕೆ
ನಿತ್ಯವು ಬಂದಂತೆ ಇಂದು ಕೂಡ ಬಂದು ಒಣ ಹೊಲದ
ಒಡಲಿನ ಮೇಲೆ ಕಾಳು ಚೆಲ್ಲುವ ವ್ಯಕ್ತಿಯನು ಕಂಡು
ಆಕಾಶ ಮಾರ್ಗದಲ್ಲಿ ಸಂಚಾರ ಮಾಡುತ್ತಿದ್ದ ಮೋಡಗಳು
ಅಚ್ಚರಿಗೊಂಡು ಇವನ್ಯಾರೋ ಹುಚ್ಚನಿರಬೇಕೆಂದು
ಇಳಿದು ಬಂದವು ರಾಮಣ್ಣನ ಹೊಲದ ಬಳಿಗೆ
ಎಲವೋ... ಎಲೆಲೆ... ನರ ಮನುಷ್ಯ ನಿನಗೇನು ? ಭ್ರಾಂತೋ ಹುಚ್ಚೋ..
ಬರಗಾಲದಲ್ಲಿ ಬೇಸಾಯ ಮಾಡುವುದುಂಟೆ ?
ಒಣ ಹೊಲಕೆ ಬೀಜ ಬಿತ್ತುವುದುಂಟೆ ?
ಮಳೆಯಿರದೆ ಬೆಳೆಯ ಬೆಳೆಯುವುದುಂಟೆ ?
ಉಂಟೆ... ಉಂಟೆ... ಯಾತಕೆ ಈ ಕೂರಿಗೆ ಗುಂಟೆ ?
ಗಹಗಹಿಸಿ ನಗುತ್ತಾ ಪ್ರಶ್ನೆ ಕೇಳಿದವು ಮೋಡಗಳು

ಮನೆಮನೆಯಲ್ಲಿ ತಾಂಡವಾಡಿತೋ ಹಸಿವಿನ ಕೂಗು
ನಿಟ್ಟಿಸಿರಿಟ್ಟಿತ್ತು ಊರಿಗೆ ಊರೇ
ಕಂಡ ಕಂಡ ದೇವರಿಗೆಲ್ಲಾ ಹೊತ್ತರು ಹರಿಕೆ
ಅರಿಷಿಣ ಕೊಂಬನು ಇಳಿತೆಗೆದು ಕಟ್ಟಿದ್ದರು ಮೀಸಲು
ಬರಲಿಲ್ಲ ಯಾರು ನೆರವಿಗೆ ಬರಗಾಲ ಬಂದಿತ್ತು ಊರಿಗೆ
ದಿಕ್ಕಗಾಣದೆ ಮಂದಿ ಕೂಡಿದರು ಊರ ಮುಂದೆ
ಶವ ಮುಖದ ಕಳೆಯಿತ್ತು ಮಂದಿ ಮಾರಿಯ ಮೇಲೆ
ಅಳುವ ಕಣ್ಣೊಳು ನೀರು ಬತ್ತಿತ್ತು.
ಮುಂದೆ ಹೇಗೋ ಏನೋ ಬಾಳು ಎಂದೂ
ಹಲುಬಲುಬಿ ಕೇಳುತ್ತಾರೆ ಅವರ ಇವರನಿಂದು
ಏನು ಈ ವಿಪರೀತ, ನರಕ ಮೈದೆರದಂತೆ
ಹುತ್ತದೊಳಗೆ ಸುಸ್ತಾದ ಹಾವು ನಾಲಿಗೆಯಾಗಿ
ಮಾತು ಕತ್ತಿರಿಸಿ ಮಲಿಗ್ಯಾವೆ ಬಿಸಿಲ ನೆರಳಲ್ಲಿ
ಉಕ್ಕುವ ದುಕ್ಕವನು ಹತ್ತಿಕ್ಕಿ ಹಿರಿಯನೊಬ್ಬ ನುಡಿದಾನು ದಮ್ಮುಕಟ್ಟಿ
ಕೈ ಕಟ್ಟಿ ಕುಂತರೆ ಕಾಯದೋ ಕಾಲ
ಕಾರಣಿಕಾವ ಕೇಳಿ ಎಂದಿಗೆ ಮುಗಿವುದೋ ಯಮಗಂಡಕಾಲ
ಕೊರವಂಜಿ ಕಣಿ ಕೇಳಿ ಮಠದ ಸ್ವಾಮಿಯವರಲ್ಲಿ
ಹೊತ್ತಿಗೆ ತೆಗಿಸಿ ಕೇಳಿರಿ ಕರ್ಮ ಫಲವಾ.
ದಿಕ್ಕು ದಿಕ್ಕಿಗೆ ಅಟ್ಟಿದರು ಆಳುಗಳ ಹುಡುಕಿ ಬನ್ನಿರೋ ಜೀವ ತಾಣಗಳ
ಉಳಿದುಕೊಂಡರೆ ಸಾಕು ಹಸು ಕಂದ ಜೀವಗಳು
ನಾಳೆ ಸೂರ್ಯನ ಬೆಳಕು ಸುಡದಿರಲಿ ಭೂಮಿಯನು
ರಾಹು ಕೇತುಗಳಿಗೆ ಬಲಿ ಇನ್ನೂ ಸಾಲದೇನು ?
ಶನಿ ಗುರು ಶುಕ್ರರು ಯಾವ ಮನೆ ಹೊಕ್ಕಿಹರೋ
ಕಳೆವುದು ಎಂದಿಗೋ ಊರ ಪೀಡೆ
ಕೊರವಂಜಿ ಬಂದಳೋ ಅಂಜನವಾ ಹಾಕಿದಳೋ
ಐನೋರು ಹೊತ್ತಿಗೆಯ ತೆಗೆದು ಓದಿದರು
ಇಂದಿಗೆ ತೀರಿತೋ ಊರ ಉಪ್ಪಿನ ಋಣವು
ಕರಗಿ ಹೋಗಿರಬೇಕು ಪುರದ ಪುಣ್ಯ

## ಪಾದ ಮೂರು

**ಊ**ರ ಫಲವೆಲ್ಲಾ ಸುಟ್ಟ ಸುಡುಗಾಡೋ
ಜೀವ ಉಳಿಯಲು ಜಾಗ ಬಿಡಬೇಕೋ
ದೈವದ ಆಣತಿ ಇದು ಎಚ್ಚರಿರಬೇಕು.
ಕಾರಣಿಕವ ಕೇಳಿ ತಲ್ಲಣಗೊಂಡಿತೋ ತನುವು
ಹೌಹಾರಿ ಹೋಯಿತೋ ಮನವು..
ತಾಯಂಥ ಊರು ತಬ್ಬಲಿ ಮಾಡಿತೋ
ಬೆತ್ತಿಂಗಳ ಕಾವಿಗೆ ಕಣ್ಣೀರು ಬತ್ತಿತ್ತೋ
ಮುಮ್ಮಲ ಮರುಗಿತು ಊರು, ಮಾರು
ತಲೆ ತಲೆಮಾರುಗಳ ಕಾಯ್ದಂಥ ಸೂರು
ಕತ್ತರಿಸಿ ಬಿದ್ದಿತೋ ಕರುಳಿನ ಚೂರು
ಸಾಟು ಸಾರಿದರು ದೇಟು ಕಟ್ಟಿದರು
ನಾಳೆ ಹುಣ್ಣಿಮೆಯ ಕಲ್ಲು ಕರಗೋ ಹೊತ್ತು
ದಾಟ ಬೇಕು ಊರ ಬಾಗಿಲನು
ಬಿಟ್ಟುಬಿಡಬೇಕು ಆಸ್ತಿಪಾಸ್ತಿಯನು

ಊರ ದೊಡ್ಡವರು ನುಡಿದು ನೊಂದವರೆ
ಒರಸಿಕೊಂಡರೆ ಒದ್ದೆಯಾದ ತಮ್ಮ ಕಣ್ಣುಗಳನ್ನು
ಆ ರಾತ್ರಿ ಯಾಕೋ ನಿದ್ದುರದೇವಿ
ಆ ಊರಿನ ಕಡೆಗೆ ಬರಲಿಲ್ಲ
ಬಿಟ್ಟ ಕಣ್ಣೊಳಗೆ ಜಾರಿದವು ಜಾವಗಳು
ಬೆಳಕು ಇನ್ನೆಂದಿಗೂ ಮೂಡದಿರಲಿ
ತಾಯಂದಿರು ನೊಂದು ಹರಿಸಿದರು
ಮೂಡಣದಿ ಕೋಟೆಯ ಮೇಲೇರಿ ಬಂದಾನು ಸೂರಿಣ್ಣು
ಉಸಿರಾಡೋ ದಟ್ಟಗಳು ನಿಟ್ಟುಸಿರಿನ ಮನಸುಗಳು
ಇದ್ದ ಬದ್ದ ಚೂರುಪಾರಾಸ್ತಿಯ ಗಂಟು ಮೂಟೆ ಕಟ್ಟಿ
ಬಂದು ನೆರೆದರು ಊರ ಬಾಗಿಲಿಗೆ
ಬೆಟ್ಟದ ತಾಯಿ ಬನದಮ್ಮ ದೇವರು ಇನ್ನು
ಒಬ್ಬಂಟಿ ಬದುಕಿ ಬಾಳಿದ ಊರು ಪಾಳು
ಮಕ್ಕಳು ಮರಿಗಳು ದೊಡ್ಡೋರು ಚಿಕ್ಕೋರು
ಅಳಿದು ಉಳಿದವರು ಜೀವ ಕೈಯಲಿಡಿದು ಬಂದವರೆ
ಹೊತ್ತು ಬಲಿಯುವ ಮುನ್ನ ಸಾಗಲಿ ದಾರಿ
ಮರೆತು ನಡೆಯಿರಿ ಊರಿನ ಗ್ಯಾನ
ಎಲ್ಲರು ಬಂದವರೇನಾ ? ಹೊರಡುವ ಮುನ್ನ
ಕೇಳಿದರು ಕುಲದ ಹಿರಿಯರು
ದಿಟ್ಟಿಸಿ ನೋಡಿದರೆ ಇರಲಿಲ್ಲ ಗುಂಪಲ್ಲಿ
ಮೂಲೆ ಮನೆಯ ಮೊದ್ದು ರಾಮಣ್ಣ
ಬೆಚ್ಚಿದ ಜನರು ಧಾವಿಸಿ ಬಂದರು
ಊರಂಚಿನಲ್ಲಿತ್ತು ಹತ್ತು ಅಂಕಣದ ಮೂಲೆ ಮನೆ
ಬಂದು ನೋಡುತ್ತಾರೆ ಏನು ಅಚ್ಚರಿಯೋ
ರಾಮಣ್ಣ ಏರು ಕಟ್ಟುತ್ತವನೆ ಆಹಾ ಶಿವನೆ
ಬಡಕಲೆತ್ತುಗಳು ಗಾಳಿಗೆ ವಾಲುತಿವೆ ಮುಖಣಿ ಏರಿಸುತವನೆ
ಊರು ಬಿಡುವ ಚಿಂತೆ ಅವನ ಕಾಡುತ್ತಿಲ್ಲ.
ಸಾಮಾನು ಸರಂಜಾಮು ಕಟ್ಟಿಲ್ಲ ಗಂಟು ಮೂಟೆ ಕಾಣುತ್ತಿಲ್ಲ
ಏ ಐಲು ರಾಮಣ್ಣ ನಿನಗೆ ಹುಚ್ಚೋ ಗಿಚ್ಚೋ
ಹೊತ್ತು ಮೀರುತಿದೆ ಜನ ಅಲ್ಲಿ ಕಾಯುತವರೆ
ಮಣ್ಣಿನ ಋಣವು ನೆನ್ನೆಗೆ ತೀರಿತು
ತಬ್ಬಲಿಯಾದೆವೂ ತಡ ಇನ್ನೂ ಯಾಕೋ
ಬಿರಬಿರನೆ ನಡೆಯಣ್ಣ ಗಾವುದ ಯೋಜನೆ
ದಾಟ ನಡಿಬೇಕೋ ಬೆಟ್ಟ ಗುಡ್ಡ.
ಜಪ್ಪಯ್ಯ ಅಂದರೂ ಜಗ್ಗಲಿಲ್ಲ ಜಟ್ಟಿ
ಹುಟ್ಟಿದ ಮಣ್ಣಿಗೆ ದಟ್ಟವಾ ಕೊಡಬೇಕು
ಸತ್ತರೆ ಇಲ್ಲೇ ಸಾಯ್ತಿನಿ ನಾನು
ಬಿಟ್ಟು ಬಿಡಿ ನನ್ನನ್ನ ಊರು-ಹೊಲ ತೊರೆದು
ಬೋಗ ಬಾಗ್ಯ ಕೊಟ್ಟರು ಬರಲಾರೆ ನಾನು
ಮಂದಿ ಅಚ್ಚರಿಗೊಂಡು ಸುದ್ದಿ ಹೋಯಿತು ಹಿರಿಯರಿಗೆ
ಅಲ್ಲಿಗೆ ಬಂತು ಊರ ಹಿರಿಯರ ದಂಡು
ಪರಿಪರಿಯ ಮಾತುಗಳ ಆಡಿ ಒಲಿಸಿದರು
ರಾಮಣ್ಣನ ಹಠವೋ ಕರಗಲಿಲ್ಲೋ ಕರಿಕಲ್ಲು
ಹೊಂಟೇ ಹೋದನೋ ಹೊಲಕೆ ರಾಮಣ್ಣ
ಒಂಟಿಯಾಗಿಸಿ ಅವನ ಹೋಗಲು ಮನಸ್ಸಿಲ್ಲ

ಸುತ್ತಮುತ್ತಲಿನ ನೂರು ಊರುಗಳು ಗುಳೇ ಹೋದವು
ನೀರು ನಿಡಿ ಹುಡುಕಿ ಹೊರಡು ಉಳಿಸಿಕೋ ನಿನ್ನಯ ಪ್ರಾಣ
ಅಟ್ಟು ಕಾಡಿಗೆ ಈ ಬಡಕಲ ಎತ್ತುಗಳನ್ನ
ನಡಿ ನಡಿ ಊರಿಗೆ ನಡಿ ನಡಿ ದಾರಿಗೆ
ಸಾಕು ಮಾಡು ನಿನ್ನ ಬೇಸಾಯ...
ಒಂಟಿ ನೀನು ಹಸಿವಿನಿಂದ ಸಾಯಬೇಡವೋ ಮಾರಾಯ
ಗೇಲಿಯ ಮಾಡಿದವು ? ಗಹಗಹಿಸಿ ನಕ್ಕವು
ಮೋಡಣ್ಣಗಳೇ ಮೋಡಕ್ಕಗಳೇ...
ಭ್ರಾಂತು ನಾನಲ್ಲ ಹುಚ್ಚು ನನಗಿಲ್ಲ
ಮಾಡದಿದ್ದರೆ ನಾನು ಬೇಸಾಯವನು ನಿತ್ಯ
ಮರೆತು ಹೋದೇನು ಬಿತ್ತನೆ ಮಾಡುವ ವಿದ್ಯೆಯನು
ಸುಗ್ಗಿ ಮಾಡುವ ತಂತ್ರವನು ಕಳೆ ತೆಗೆಯುವ ಉಪಾಯವನು
ಇಂದಲ್ಲದಿದ್ದರು ಎಂದಾದರು ಒಂದು ದಿನ
ಮತ್ತೆ ಮಳೆ ಬಂದರೆ ಭೂಮಿಯು ಹದಗೊಂಡರೆ
ಮಾಡುವುದೇಗೆ ವ್ಯವಸಾಯ, ಮರೆಯದೆ ಹಾಗೆ ಬೇಸಾಯ
ನೆನಪಿಟ್ಟುಕೊಳ್ಳುವ ಸಲುವಾಗಿ ನಿತ್ಯ ದುಡಿಯುವನು ಬಿವರಾಗಿ
ಅಭ್ಯಾಸ ಮಾಡದೆ ಯಾವ ಜ್ಞಾನವು ದಕ್ಕದೋ
ನೆನಪ್ಪಿಟ್ಟು ಕೊಳ್ಳಲು ಬೇಸಾಯದ ವಿದ್ಯೆಯನು
ಮಾಡುವೆನು ಈ ಕಸರತ್ತು
ಆ ತಂತ್ರ ನಿಮಗೇನು ಗೊತ್ತು... ?



## ಪಾದ ಐದು

ರೈತನ ಮಾತ ಕೇಳಿ ಮೋಡಗಳು ಗಾಬರಿ ತಾಳಿ
ಬಿರನೆ ಬಿರಬಿರನೆ ಬಂದ ದಾರಿಯಲಿ ಹಿಂದಕ್ಕೆ ಬಂದವು
ಮೈಲು ಬಂಡೆಯ ಮೇಲೆ ಮೀಟಿಂಗನು ಮಾಡಿದವು.
ಮೂರುವರ್ಷದ ಮೇಲಾಯ್ತು ಮಳೆ ಸುರಿಸದ ಲಾಗಾಯ್ತು
ರೈತನ ಹಾಗೆ ನಮಗೂನು ಮರೆತು ಹೋಗಬಹುದೇನು ?
ನಾವು ಕಳೆದುಕೊಳ್ಳುವೇವೇನು ? ನಮ್ಮಯ ವೃತ್ತಿಯನು
ಫಳಫಳ ಎಂದು ಮಿಂಚಾಗಿ ಮಿಂಚುವುದನ್ನ
ಢಳಿರ್ ಢಳಿರ್ ಎಂದೂ ಗುಡುಗಾಗಿ ಗುಡುಗುವುದನ್ನ
ಸಿಡಿಲಾಗಿ ಸಿಡಿಯುವುದನ್ನ
ಧೋ ಎಂದು ಸುರಿವ ಮುಸಲ ಧಾರೆಯನ್ನ
ಹನಿ ಹನಿಯಾಗಿ ತುಂತರು ತುಂತರು ಸೋನೆ ಸುರಿವಿದನ್ನ
ನೀರಾಗಿ ಹರಿಯುವುದನ್ನ, ಹವಿಯಾಗಿ ಹರಿಯುವುದನ್ನ
ಮೋಡ ಕಟ್ಟುವುದನ್ನ ಇಂಥ ಈ ಎಲ್ಲಾ ಮಾಯಾ ಶಕ್ತಿಯನು ?
ಮರತರೆ ಗತಿಯೇನು ? ಉಳಿಗಾಲವು ಇಲ್ಲವೇನು ?
ಗಡ ಗಡ ನಡುಗಿದವು ಮೋಡಗಳು
ತರತರ ಅದುರಿದವು ಮೋಡಗಳು
ಇನ್ನು ಹಿಂದು ಮುಂದು ನೋಡಿದರೆ
ನಮಗೆ ಕಾದಿದೆ ಅವಸಾನ ದೇವಸಭೆಯಲಿ ಅಪಮಾನ ?
ಮಿಂಚಿರಿ ಮಿಂಚಾಗಿ ಗುಡುಗಾಗಿ ಗುಡುಗಿರಿ
ಧೋ ದೋ ಎಂದು ಸುರಿಸಿರಿ ಮಳೆಯನ್ನ
ನಡೆಯಿರಿ ಲೋಕದ ಮೂಲೆ ಮೂಲೆಗೂ
ಜಗ್ಗಿಸಿ ಹೊಡಿಯಿರಿ ಮಳೆಯನ್ನ
ಭಯಗೊಂಡವು ಮೋಡಗಳು ದಿಕ್ಕಪಾಲಾಗಿ ಓಡಿದವು
ಮಳೆ ಸುರಿಸೋ ಯುಕ್ತಿ ಮರೆತಿಲ್ಲ ಎಂಬುದು ಖಾತ್ರಿ
ಧೋ ಧೋ ಎಂದು ಸುರಿದವು ಮಳೆಯ
ಭೂಮಿ ಬಾಯಾರಿಕೆ ಹಿಂಗುವ ಹಾಗೆ
ತುಂಬ್ ತುಂಬಿ ಹರಿದುವು ಹೊಳೆಯು
ರಾತ್ರಿ ಪೂರ ನಡೆಯಿತು ಮಳೆಯ ದರ್ಬಾರು
ಬೆಳ್ಳಂ ಬೆಳಗ್ಗೆ ಇಳೆಯ ತುಂಬ ಹೊಸ ನೀರು
ಜೀವ ಸಂಚಾರ ಮಳೆ ನೀರು... ಹೊಳೆ ನೀರು
ಕೆರೆ ತುಂಬಿತ್ತು ಬಾವಿ ತುಂಬಿತ್ತು ತುಂಬಿತು
ಜನರ ಕಣ್ಣ ಬಟ್ಟಲು ಆನಂದದ ಕಣ್ಣೀರು...
ಊರು ತೊರೆಯುವ ಯೋಚನೆ ಕೊಚ್ಚಿ ಹೋಯಿತು ನೀರಲ್ಲಿ
ನಿರಾಶೆ ದುಃಖ ಕರಗಿತ್ತು ಕತ್ತಲಿನಲ್ಲಿ
ರೈತನ ವಿವೇಕ ಉಳಿಸಿತ್ತು ರಾಮಣ್ಣನ ಹಠವೇ ಗೆದ್ದಿತ್ತು
ಊರಿಗೇ ಊರೇ ಸಂಭ್ರಮಗೊಂಡರು
ತುಕ್ಕುಹಿಡಿದ ವ್ಯವಸಾಯದ ಸಲಕರಣೆ
ಬಂದವು ಹೊರಗೆ ಸರಸರನೆ ನಡೆದವು ಹೊಲಗದ್ದೆಗೆ ಬಿರುಬಿರನೆ
ಮರಳಿತು ಸಿರಿಯು ಊರಿಗೆ ಹಸಿರಿನ ವನಸಿರಿ ಕಾಡಿಗೆ
ಹಳ್ಳಿಯ ಬದುಕು ಉಳಿಯಲಿ ಲೋಕಕ್ಕೆ ಅನ್ನವ ನೀಡಲಿ.


**ಡಾ॥ ಕೆ. ವೈ. ನಾರಾಯಣಸ್ವಾಮಿ**
ನಂಬ್ರ ೧೭, ಎನ್. ಆರ್. ಲೇಔಟ್, ೫ನೇ ಮುಖ್ಯರಸ್ತೆ, ಎಲಾಟನಗರ
ಬೊಮ್ಮನಹಳ್ಳಿ, ಬೆಂಗಳೂರು - ೫೬೦ ೦೬೮



ನಭಾವಲೋಕನ

# ಹೊಸ ಬೆಳಕು

**ಹೊ**ಸ ವರ್ಷದ ಮೊದಲ ಬೆಳಗ್ಗೆ ಪೂರ್ವ ದಿಕ್ಕಿನತ್ತ ದೃಷ್ಟಿ ಹರಿಸಿ. ಶುಕ್ರ, ಬುಧ ಇವುಗಳೊಡನೆ ರೇಖಾ ಚಂದ್ರ. ಸ್ವಲ್ಪ ಎತ್ತರಕ್ಕೆ ಶನಿ ಮತ್ತು ಚಿತ್ತಾ ನಕ್ಷತ್ರಗಳೂ ಕಾಣುವುವು. ೮ ಮತ್ತು ೯ರಂದು ಶುಕ್ರ ಮತ್ತು ಬುಧ ಗ್ರಹಗಳು ಗರಿಷ್ಠ ಎತ್ತರದಲ್ಲಿ ಕಾಣುತ್ತವೆ. ಗುರುತಿಸಲು ಒಳ್ಳೆಯ ಅವಕಾಶ.

ಶನಿಗ್ರಹದ ಹಿನ್ನಡೆ ೨೬ರಿಂದ ಆರಂಭ; ಆದರೆ ಬಹಳ ನಿಧಾನವಾಗಿ ಚಲಿಸುವ ಈ ಗ್ರಹದ ಹಿನ್ನಡೆಯನ್ನು ಗುರುತಿಸುವುದು ಕಷ್ಟವೇ.

೨೦ರಂದು ಪುನಃ ಬೆಳಗ್ಗೆ ಪೂರ್ವದತ್ತ ನೋಟ ಹರಿಸಿ. ಶುಕ್ರ ಮತ್ತು ರೇಖಾ ಚಂದ್ರ ಜೊತೆಯಾಗಿರುತ್ತವೆ. ಆದರೆ ಬುಧ ಕಾಣುವುದಿಲ್ಲ. ತಿಂಗಳುದ್ದಕ್ಕೂ ಮಂಗಳ ದಿಗಂತದ ಅಂಚಿನಲ್ಲೇ ಇರುವುದರಿಂದ ಕಾಣುವುದು ಕಷ್ಟ.

ಉತ್ತರಾಯಣ ಕಳೆದ ತಿಂಗಳೇ ಕಳೆದುಹೋಗಿದೆ. ಸುಗ್ಗಿಯ ಆಚರಣೆ ೧೪ಕ್ಕೆ, ಮಕರ ಸಂಕ್ರಮಣ ಎಂಬ ಹೆಸರಿನಲ್ಲಿ. ಅಂದು ಸಂಜೆ ಚಂದ್ರನನ್ನು ನೋಡಲು ಮರೆಯದಿರಿ. ಅರ್ಧ ಚಂದ್ರದ ಪಕ್ಕದಲ್ಲೇ ಕಾಣುವುದು ಕೃತ್ತಿಕಾ ನಕ್ಷತ್ರಗುಚ್ಛ. ಬರಿಗಣ್ಣಿಗೇ ಕಾಣುತ್ತದೆಯಾದರೂ ದುರ್ಬೀನು ಬಳಸಿದಲ್ಲಿ ಗುಚ್ಛದ ನಕ್ಷತ್ರಗಳು ಚೆನ್ನಾಗಿ ಕಾಣುವುವು. ಹಾಗೆಯೇ ೧೭ರಂದೂ ಚಂದ್ರನನ್ನು ಗಮನಿಸಿ. ಮಿಥುನ ದಿಗಂತದಂಚಿಗೆ; ದಕ್ಷಿಣಕ್ಕೆ ಮಹಾವ್ಯಾಧ; ಉತ್ತರಕ್ಕೆ ಪಂಚಕೋನಾಕೃತಿಯ ವಿಜಯ ಸಾರಥಿ. ಈ ನಕ್ಷತ್ರಪುಂಜಗಳನ್ನು ಗುರುತಿಸಲು ಅಂದು ಸದವಕಾಶ. ಮಹಾವ್ಯಾಧ, ಮಹಾಶ್ವಾನ, ವಿಜಯ ಸಾರಥಿ ಇವುಗಳನ್ನೊಳಗೊಂಡು ಹಾದುಹೋಗುವ ಆಕಾಶ ಗಂಗೆಯ ಭಾಗ ಇದು. ಅತಿ ಪ್ರಕಾಶಮಾನವಾದ ನಕ್ಷತ್ರ ಸಿರಿಯಸ್ (ಲುಬ್ಧಕ). ಸುಮಾರು ಎಂಟುಗಂಟೆಯ ಹೊತ್ತಿಗೆ ಇನ್ನೊಂದು ಪ್ರಕಾಶಮಾನ ನಕ್ಷತ್ರ ಕೆನೋಪಸ್ (ಅಗಸ್ತ್ಯ) ಕೂಡ ಕಾಣುತ್ತದೆ. ಮಹಾವ್ಯಾಧನ ಸೊಂಟಪಟ್ಟಿಯ ಭಾಗದ ಮೂರು ನಕ್ಷತ್ರಗಳನ್ನು ಗಮನಿಸಿ. ಕತ್ತಿ ಸಿಕ್ಕಿಸಿಕೊಂಡಂತೆ ಕಾಣುವ ಭಾಗದಲ್ಲಿ ಗಮನವಿಟ್ಟು ನೋಡಿ. ಅಲ್ಲಿರುವುದು ನಕ್ಷತ್ರವಲ್ಲ; ನೆಬ್ಯುಲಾ. ಚಳಿಗಾಲದ ಈ ಶುಭ್ರ ರಾತ್ರಿಗಳಲ್ಲಿ ಒರೈಯನ್ ನೆಬ್ಯುಲಾ ಕಾಣುವುದು ಸಾಧ್ಯ.



*೧೪-೧-೨೦೧೧ರ ಸಂಜೆ ಚಂದ್ರ ಮತ್ತು ಕೃತ್ತಿಕಾ*




ತಿಂಗಳ ಆರಂಭಕ್ಕೆ ೪ರಂದು ಸೂರ್ಯಗ್ರಹಣ; ಆದರೆ ಅದು ನಮಗೆ ಕಾಣುವುದಿಲ್ಲ. ಉತ್ತರ ಭಾರತದ ವಾಯವ್ಯದ ಅಂಚಿಗೆ ಮಾತ್ರ ಕಾಣುತ್ತದೆ. ಉದಾಹರಣೆಗೆ ದೆಹಲಿಯಲ್ಲಿ ಮಧ್ಯಾಹ್ನ ೩:೧೨ ನಿಮಿಷದಿಂದ ೩:೩೨ರವರೆಗೆ ಮಾತ್ರ ಕಾಣುತ್ತದೆ. ದ್ವಾರಕಾದಲ್ಲಿ ಕೇವಲ ಇಪ್ಪತ್ತು ನಿಮಿಷ ಕಾಣುತ್ತದೆ. ಈ ಬಗ್ಗೆ ಮಾಧ್ಯಮಗಳು (ಅಪ)ಪ್ರಚಾರ ಮಾಡದೆ ಇದ್ದರೆ ಗ್ರಹಣ ನಡೆದದ್ದು ಯಾರ ಗಮನಕ್ಕೂ ಬರುವುದಿಲ್ಲ. ಕಷ್ಟಪಟ್ಟು ದೂರ ದರ್ಶಕವನ್ನು ಜೋಡಿಸಿ ಸೂರ್ಯಬಿಂಬವನ್ನು ಮೂಡಿಸಿದರೆ ದೆಹಲಿಯಲ್ಲಾಗಲಿ, ಜಯಪುರದಲ್ಲಾಗಲಿ, ದ್ವಾರಕಾದಲ್ಲಾಗಲೀ ಸೂರ್ಯನ ಅಂಚು ಮಾತ್ರ ಕತ್ತರಿಸಿದ ಹಾಗೆ ಕಾಣಬಹುದು.

೩ರಂದು ಭೂಮಿ ಸೂರ್ಯನಿಗೆ ಅತಿ ಸಮೀಪವಿರುತ್ತದೆ. ಇದಕ್ಕೆ ದೀರ್ಘ ವೃತ್ತಾಕಾರದ ಕಕ್ಷೆಯೇ ಕಾರಣ. ಆದರೆ ನಮಗೆ ಚಳಿಗಾಲ ಎಂಬುದು ಕೆಲವರಿಗೆ ಆಶ್ಚರ್ಯ ತರಬಹುದು. ದೂರದ ಈ ಸಣ್ಣ ವ್ಯತ್ಯಾಸ ಋತುಗಳಿಗೆ ಕಾರಣವಲ್ಲ.

೪ರಂದು ಕ್ವಾಡ್ರಾಂಟಿಡ್ ಎಂಬ ಉಲ್ಕಾವೃಷ್ಟಿ ಇದೆ. ಚಂದ್ರನ 'ಕಾಟ' ಇಲ್ಲದಿರುವುದರಿಂದ ಕ್ಷೀಣವಾದವುಗಳೂ ಕಾಣಬಹುದು. ಗಂಟೆಗೆ ಹತ್ತಿಪ್ಪತ್ತು ಕಾಣಬಹುದು ಎಂಬುದು ಅಂದಾಜು.

**ಖಗೋಳ ದಿನಚರಿ**

೨. ಬುಧ - ಚಂದ್ರ ಜೋಡಿ
೩. ಭೂಮಿ - ಸೂರ್ಯ ದೂರ ಕನಿಷ್ಠ
೪. ಅಮಾವಾಸ್ಯೆ - ಸೂರ್ಯ ಗ್ರಹಣ - ವಾಯುವ್ಯ ಭಾರತಕ್ಕೆ ಮಾತ್ರ ಗೋಚರ
೫. ಮಂಗಳ - ಚಂದ್ರ ಜೋಡಿ
೮. ಶುಕ್ರ ಗ್ರಹದ ಗರಿಷ್ಠ ಕೋನೋನ್ನತಿ *
೯. ಬುಧ ಗ್ರಹದ ಗರಿಷ್ಠ ಕೋನೋನ್ನತಿ *
೧೦. ಚಂದ್ರ - ಗುರು ಜೋಡಿ *
೧೨. ಚಾಂದ್ರಮಾಸದ ಮೊದಲ ಪಾದ
೧೫. ಶುಕ್ರ - ಜ್ಯೇಷ್ಠಾ ಜೋಡಿ *
೧೯. ಹುಣ್ಣಿಮೆ
೨೫. ಶನಿ - ಚಂದ್ರ ಜೋಡಿ *
೨೬. ಚಾಂದ್ರಮಾಸದ ಕೊನೆಯ ಪಾದ
೩೦. ಚಂದ್ರ - ಶುಕ್ರ ಜೋಡಿ *
ಫೆಬ್ರುವರಿ ೧ ಬುಧ - ಚಂದ್ರ ಜೋಡಿ *
(* ಛಾಯಾಗ್ರಹಣಕ್ಕೆ ಸದವಕಾಶ)

**ಡಾ|| ಬಿ. ಎಸ್. ಶೈಲಜಾ**
ಜವಾಹರಲಾಲ್ ನೆಹರು ತಾರಾಲಯ, ಹೈಗ್ರೌಂಡ್ಸ್, ಬೆಂಗಳೂರು - ೫೬೦ ೦೦೧

# ಹೊಸ ಪ್ರಕಟಣೆಗಳು

**ಪ್ರಸಾರಾಂಗ**
**ಕನ್ನಡ ವಿಶ್ವವಿದ್ಯಾಲಯ, ಹಂಪಿ**

| ಕ್ರ. | ಪುಸ್ತಕ / ಲೇಖಕರು | ಬೆಲೆ |
|---|---|---|
| ೧. | ತುದಿ ಇರದ ಹಾದಿ<br>ಡಾ. ಚಂದ್ರಶೇಖರ ಕಂಬಾರ | ೮೦.೦೦ |
| ೨. | ವಸಾಹತು ಕಾಲಘಟ್ಟದ ಮೈಸೂರು ಸಂಸ್ಥಾನ<br>ಡಾ. ಎನ್. ಚಿನ್ನಸ್ವಾಮಿ ಸೋಸಲೆ | ೧೦೦.೦೦ |
| ೩. | ಮಾರ್ವಾಡಿ ಶೇಠ್<br>(ಸಂ) ಡಾ. ಸ.ಚಿ. ರಮೇಶ್ | ೧೫೦.೦೦ |
| ೪. | ಸಿದ್ಧ ಸಾಹಿತ್ಯ<br>ಡಾ. ಮ.ಸು. ಕೃಷ್ಣಮೂರ್ತಿ | ೨೦೦.೦೦ |
| ೫. | ಕ್ರಾಂತಿಕಾರಿ ತುಕಾರಾಮ<br>(ಅನು) ಚಂದ್ರಕಾಂತ ಪೋಕಳೆ | ೮೦.೦೦ |
| ೬. | ಕೃಷಿ ವಿಜ್ಞಾನ ಸಾಹಿತ್ಯ ನಡೆದು ಬಂದ ಹಾದಿ<br>ಡಾ. ಜೆ. ಬಾಲಕೃಷ್ಣ | ೪೦.೦೦ |
| ೭. | ಲಿಂಗಸಂಬಂಧಗಳು ಮತ್ತು ಅಭಿವೃದ್ಧಿ<br>ಡಾ. ಟಿ.ಆರ್. ಚಂದ್ರಶೇಖರ | ೧೨೦.೦೦ |
| ೮. | ಗ್ರಾಮಾಯಣ : ಸಾಂಸ್ಕೃತಿಕ ಮುಖಾಮುಖಿ<br>(ಸಂ) ಅಮರೇಶ ನುಗಡೋಣಿ | ೧೨೦.೦೦ |
| ೯. | **Institutions Decentralization and Development**<br>Dr. M. Chandra Poojary | ೨೦೦.೦೦ |
| ೧೦. | ಶ್ರೀ ರಾಮಾಯಣ ದರ್ಶನಂ ಮಹಾಕಾವ್ಯದಲ್ಲಿ ಪೌರಾಣಿಕತೆ<br>ಡಾ. ವಿಠಲರಾವ್ ಟಿ. ಗಾಯಕ್ವಾಡ್ | ೧೫೦.೦೦ |
| ೧೧. | ಈ ಪರಿಯ ಸೊಬಗು<br>(ಸಂ) ಎಚ್.ಎಸ್. ಮುರಳೀಧರ | ೨೦೦.೦೦ |
| ೧೨. | ಜನಪದ ಗಾಯಕ ಬಾಳಪ್ಪ ಹುಕ್ಕೇರಿ<br>ಡಾ. ನಂದಾ ಎಂ. ಪಾಟೀಲ | ೫೦.೦೦ |
| ೧೩. | ಕರ್ನಾಟಕದ ಜನಪದ ಆಚರಣೆಗಳು<br>ಡಾ. ಸ.ಚಿ. ರಮೇಶ್ | ೧೫೦.೦೦ |
| ೧೪. | ನುಡಿ ಬಿನ್ನಪ - ೧, ಬಿ.ವಿ.ಎ. ಪ್ರಥಮ ವರ್ಷದ ಪಠ್ಯಪುಸ್ತಕ<br>(ಸಂ) ಡಾ. ಅಮರೇಶ ನುಗಡೋಣಿ,<br>ಡಾ. ಅಶೋಕ ಕುಮಾರ ರಂಜೇರೆ | ೧೦೦.೦೦ |
| ೧೫. | ಹಂಪಿ ಪರಿಸರದ ಆದಿಮಾನವನ ನೆಲೆಗಳು<br>ಡಾ. ಎಲ್. ಶ್ರೀನಿವಾಸ | ೮೦.೦೦ |
| ೧೬. | ಪರಿವರ್ತನೆಯ ಹಾದಿಯಲ್ಲಿ ಬುಡಕಟ್ಟು ಸಮಾಜ<br>(ಸಂ) ಡಾ. ಎಲ್. ಶ್ರೀನಿವಾಸ | ೧೦೦.೦೦ |
| ೧೭. | ಕಲ್ಯಾಣ ಕರ್ನಾಟಕದ ಅರಸುಮನೆತನಗಳು<br>(ಸಂ) ಡಾ. ಎಂ. ಕೊಟ್ರೇಶ್ | ೧೦೦.೦೦ |
| ೧೮. | ಹಾಲುಮತ ಅಧ್ಯಯನ, ಸಂಪುಟ-೧<br>(ಸಂ) - ಡಾ. ಎಫ್.ಟಿ. ಹಳ್ಳಿಕೇರಿ | ೧೨೦.೦೦ |
| ೧೯. | ಹಂಪಿ ಜೀವಜಾಲ ಜಾನಪದ<br>ಡಾ. ಮೊಗಳ್ಳಿ ಗಣೇಶ್ | ೧೦೦.೦೦ |
| ೨೦. | ಶಂಬಾ ಜೋಶಿ ಭಾಷಿಕ ವಿವೇಚನೆ<br>ಡಾ. ಎಸ್.ಎಸ್. ಅಂಗಡಿ | ೧೦೦.೦೦ |
| ೨೧. | ದಾಸಸಾಹಿತ್ಯ ಭಾಷೆ<br>ಡಾ. ಎಸ್.ಎಸ್. ಅಂಗಡಿ | ೨೦೦.೦೦ |
| ೨೨. | ಬ್ರಹ್ಮಗಿರಿ<br>(ಸಂ) ಡಾ. ಎಸ್.ವೈ. ಸೋಮಶೇಖರ್ | ೧೦೦.೦೦ |
| ೨೩. | ಜಗಲೂರು<br>(ಸಂ) ಡಾ. ಎಸ್.ವೈ. ಸೋಮಶೇಖರ್ | ೧೦೦.೦೦ |
| ೨೪. | ಜೈನ ಟೀಕಾಸಾಹಿತ್ಯ<br>ಡಾ. ಕೆ. ರವೀಂದ್ರನಾಥ | ೪೦.೦೦ |
| ೨೫. | ವಾಲ್ಮೀಕಿ ಮತ್ತು ತಿರುವಳ್ಳುವರ್ ರಾಜನೀತಿ ಪರಿಕಲ್ಪನೆ<br>ಡಾ. ವಿರೂಪಾಕ್ಷಿ ಪೂಜಾರಹಳ್ಳಿ | ೪೦.೦೦ |
| ೨೬. | ಕುಣಬಿಯರು<br>ಡಾ. ಹಿ.ಚಿ. ಬೋರಲಿಂಗಯ್ಯ | ೧೦೦.೦೦ |
| ೨೭. | ಕುವೆಂಪು : ಮಹಿಳಾ ಮಂಥನ<br>(ಸಂ) ಡಾ. ಹಿ.ಚಿ. ಬೋರಲಿಂಗಯ್ಯ | ೧೮೦.೦೦ |
| ೨೮. | ಯಾರಿಗೆ ಪ್ರಜಾಪ್ರಭುತ್ವ?<br>(ಅನು) ಡಾ. ಎ. ಶ್ರೀಧರ | ೧೦೦.೦೦ |
| ೨೯. | ಯಾಕೀಗ ಭೂಮಿ ಪ್ರಶ್ನೆ<br>ಡಾ. ಎಂ. ಚಂದ್ರ ಪೂಜಾರಿ | ೧೦೦.೦೦ |
| ೩೦. | ಕರ್ನಾಟಕದ ಪಂಚವಾರ್ಷಿಕ ಯೋಜನೆ<br>ಡಾ. ಎಂ. ಚಂದ್ರ ಪೂಜಾರಿ | ೮೦.೦೦ |
| ೩೧. | ಶೈಕ್ಷಣಿಕ ಪ್ರೇರಕಾಂಶಗಳ ಸಾಮಾಜಿಕ ಆಯಾಮಗಳು<br>ಡಾ. ಎಚ್.ಡಿ. ಪ್ರಶಾಂತ್ | ೬೦.೦೦ |
| ೩೨. | ಕೆನರಾ ವಿಭಜನೆ<br>ಡಾ. ಕೆ. ಮೋಹನ್‌ಕೃಷ್ಣ ರೈ | ೧೦೦.೦೦ |
| ೩೩. | ಟೆಂಪೆಸ್ಟ್ : ಒಂದು ಅಧ್ಯಯನ<br>ಡಾ. ಕರೀಗೌಡ ಬೀಚನಹಳ್ಳಿ | ೧೦೦.೦೦ |
| ೩೪. | ಪುರಂದರ ಸಾಹಿತ್ಯ ಅಧ್ಯಯನ<br>(ಸಂ) ಡಾ. ಅಮರೇಶ ನುಗಡೋಣಿ | ೧೨೦.೦೦ |
| ೩೫. | ಕನ್ನಡ ಕ್ರಿಯಾರಚನೆ - ಬಗೆಗಳು<br>ಡಾ. ಸಾಂಬಮೂರ್ತಿ | ೪೦.೦೦ |
| ೩೬. | ಸಂಶೋಧನೆ : ತಾತ್ವಿಕ ಆಯಾಮಗಳು<br>ಡಾ. ಬಿ.ಎಂ. ಪುಟ್ಟಯ್ಯ | ೧೦೦.೦೦ |
| ೩೭. | ಪರಿಷೆ v/s ಮಾನ್ಯೇವು<br>ಡಾ. ಮಂಜುನಾಥ ಬೇವಿನಕಟ್ಟಿ | ೧೫೦.೦೦ |
| ೩೮. | ಪದವಿನ್ಯಾಸ<br>ಡಾ. ಅಶೋಕಕುಮಾರ ರಂಜೇರೆ | ೬೦.೦೦ |
| ೩೯. | ಬಸವನ ಬಾಗೇವಾಡಿ<br>(ಸಂ) ಡಾ. ವಾಸುದೇವ ಬಡಿಗೇರ | ೧೪೦.೦೦ |
| ೪೦. | ನಮ್ಮ ಆಟಗಳು ನುಡಿಕಟ್ಟು<br>ಡಾ. ಪಾಂಡುರಂಗಬಾಬು | ೬೦.೦೦ |
| ೪೧. | ಶಾಂತವೇರಿ ಗೋಪಾಲಗೌಡ ನೆನಪಿನ ಸಂಪುಟ<br>ಡಾ. ಕಾಳೇಗೌಡ ನಾಗವಾರ, ಡಾ. ಜಿ.ವಿ. ಆನಂದಮೂರ್ತಿ | ೩೦೦.೦೦ |
| ೪೨. | ಕನ್ನಡ ಓದಿ-ಬರೆ<br>ಡಾ. ಪಿ. ಮಹಾದೇವಯ್ಯ | ೧೦೦.೦೦ |
| ೪೩. | ಹಾಲುಮತ ವ್ಯಾಸಂಗ -೨<br>(ಸಂ) ಡಾ. ಎಫ್.ಟಿ. ಹಳ್ಳಿಕೇರಿ | ೧೨೦.೦೦ |
| ೪೪. | ದ್ರಾವಿಡ ಅಧ್ಯಯನಕಾರರು<br>ಡಾ. ಸುಚೇತಾ ನವರತ್ನ | ೬೦.೦೦ |
| ೪೫. | ಹೆಳವರು<br>ಡಾ. ಎ.ಎಸ್. ಪ್ರಭಾಕರ | ೧೦೦.೦೦ |
| ೪೬. | ಉದ್ಧರಣೆ ಸಾಹಿತ್ಯ<br>ಡಾ. ಕೆ. ರವೀಂದ್ರನಾಥ | ೧೫೦.೦೦ |
| ೪೭. | ಮಲೆಗಳಲ್ಲಿ ಮದುಮಗಳು : ಸಾಂಸ್ಕೃತಿಕ ಮುಖಾಮುಖಿ<br>(ಸಂ) ಡಾ. ರಹಮತ್ ತರೀಕೆರೆ | ೧೫೦.೦೦ |
| ೪೮. | Understanding Human Development<br>and Regional Disparities in Karnataka<br>Dr. B. Sheshadri | ೧೦೦.೦೦ |
| ೪೯. | ಮಹಿಳೆ ಮತ್ತು ಧರ್ಮ<br>ಡಾ. ಶಿವಾನಂದ ಎಸ್. ವಿರಕ್ತಮಠ | ೮೦.೦೦ |
| ೫೦. | ಶೈಲಿಶಾಸ್ತ್ರ ಮತ್ತು ಜ್ಞಾನಶಾಸ್ತ್ರ<br>ಡಾ. ಬಿ.ಬಿ. ರಾಜಪುರೋಹಿತ | ೮೦.೦೦ |
| ೫೧. | ನಾಡೋಜ ಮುದೇನೂರು ಸಂಗಣ್ಣ<br>ಎಂ.ಎಂ. ಶಿವಪ್ರಕಾಶ | ೩೦.೦೦ |
| ೫೨. | ನಾಡೋಜ ವ್ಯಾಕರಣತೀರ್ಥ ಚಂದ್ರಶೇಖರ ಶಾಸ್ತ್ರಿ<br>ಎಂ.ಎಂ. ಶಿವಪ್ರಕಾಶ | ೩೦.೦೦ |

ಇವಲ್ಲದೆ ಮಂಟಪ ಮಾಲೆಯಡಿಯಲ್ಲಿ ೬೭ ಪುಸ್ತಕಗಳು ಪ್ರಕಟಣೆಗೊಂಡಿದೆ. ಪ್ರತಿ ಶೀರ್ಷಿಕೆಯ ಪುಸ್ತಕದ ಮುಖಬೆಲೆ ರೂ. ೨೦/-

**ಪುಸ್ತಕಗಳು ದೊರೆಯುವ ಸ್ಥಳ ಹಾಗೂ ಸಂಪರ್ಕ**

ಮಾರಾಟ ವಿಭಾಗ, ಪ್ರಸಾರಾಂಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬
ಹೊಸಪೇಟೆ ತಾಲೂಕು, ಬಳ್ಳಾರಿ ಜಿಲ್ಲೆ
ದೂರವಾಣಿ : ೦೮೩೯೪ - ೨೪೧೩೩೧

ಕನ್ನಡ ವಿಶ್ವವಿದ್ಯಾಲಯ ಪ್ರಾದೇಶಿಕ ಕಚೇರಿ
ಮತ್ತು ಪ್ರಸಾರಾಂಗ ಪುಸ್ತಕ ಮಾರಾಟ ಮಳಿಗೆ
ನಂ. ೧. ಹಳೆಯ ಕಾನೂನು ಕಾಲೇಜು ಕಟ್ಟಡ
ಮೈಸೂರು ಬ್ಯಾಂಕ್ ವೃತ್ತ, ಅರಮನೆ ರಸ್ತೆ, ಬೆಂಗಳೂರು ೫೬೦ ೦೦೯
ದೂರವಾಣಿ : ೦೮೦ - ೨೨೩೭೨೩೮೮

# ನ್ಯಾನೊಟೆಕ್ನಾಲಜಿ : ಒಂದು ಅವಲೋಕನ

■ **ಪ್ರೊ॥ ನವಕಾಂತ ಭಟ್**



೧ ನ್ಯಾನೋಮೀಟರ್



೧.೩ ನ್ಯಾನೋಮೀಟರ್



೨ ನ್ಯಾನೋಮೀಟರ್



೨ ಬಿಲಿಯನ್ ನ್ಯಾನೋಮೀಟರ್



೫ ಮಿಲಿಯನ್ ನ್ಯಾನೋಮೀಟರ್



೨,೦೦೦ ನ್ಯಾನೋಮೀಟರ್



೭೫,೦೦೦ ನ್ಯಾನೋಮೀಟರ್

ಇತ್ತೀಚಿನ ದಿನಗಳಲ್ಲಿ ನ್ಯಾನೊಟೆಕ್ನಾಲಜಿ ಕ್ಷೇತ್ರವು ಹಲವಾರು ನಿರೀಕ್ಷೆಗಳನ್ನು ತೆರೆದಿಟ್ಟಿದೆ. ಕೆಲವು ಮಾಧ್ಯಮಗಳಲ್ಲಿ, ನಮ್ಮೆಲ್ಲಾ ಸಮಸ್ಯೆಗಳಿಗೆ ಪರಿಹಾರ ಕಂಡುಕೊಳ್ಳಬಲ್ಲ 'ಮಂತ್ರದಂಡ'ಎಂದು ಎಂದೂ ಬಣ್ಣಿಸಲಾಗುತ್ತಿದೆ. ಇದರಿಂದ ನಿಜವಾದ ಸಾಧ್ಯತೆಗಳು ಹಾಗೂ ಉತ್ಪ್ರೇಕ್ಷೆಗಳ ನಡುವಿನ ವ್ಯತ್ಯಾಸ ಗೋಚರಿಸದಂತಾಗುತ್ತದೆ. ಹಾಗಾಗಿ ಈ ತಂತ್ರಜ್ಞಾನದ ಬಗ್ಗೆ ವಸ್ತುನಿಷ್ಠವಾಗಿ ಅರಿತುಕೊಳ್ಳುವ ಅಗತ್ಯವಿದೆ. ನ್ಯಾನೊಟೆಕ್ನಾಲಜಿಯ ಶಬ್ದಾರ್ಥ ಹೀಗಿದೆ. ಇಲ್ಲಿ ನ್ಯಾನೊ ಎಂಬ ಪದ ನ್ಯಾನೊಮೀಟರ್ ಎಂಬ ಉದ್ದಳತೆಯ ಮಾನವನ್ನು ಸೂಚಿಸುತ್ತದೆ. ಟೆಕ್ನಾಲಜಿ ಎಂದರೆ ತಂತ್ರಜ್ಞಾನ ಎಂದು ಅರ್ಥ. ಆದುದರಿಂದ ನ್ಯಾನೊಟೆಕ್ನಾಲಜಿ ಎಂದರೆ ಒಂದು ನೂರು ನ್ಯಾನೊಮೀಟರ್‌ಗಿಂತ ಕಡಿಮೆ ಅಳತೆಯ ಭೌತಿಕ, ರಾಸಾಯನಿಕ ಮತ್ತು ಜೈವಿಕ ವಸ್ತುಗಳನ್ನು ನಮ್ಮ ಉಪಯೋಗಕ್ಕೆ ಬೇಕಾದಂತೆ ಹೊಂದಿಸಿ ಹೊಸ ಉತ್ಪನ್ನಗಳನ್ನು ಸೃಷ್ಟಿಸುವ ತಂತ್ರಜ್ಞಾನ ಎಂದು ಅರ್ಥ.

ನಾವು ನಮ್ಮ ದೈನಂದಿನ ಚಟುವಟಿಕೆಗಳಲ್ಲಿ ಮೀಟರ್, ಕಿಲೊಮೀಟರ್, ಸೆಂಟಿಮೀಟರ್ ಇತ್ಯಾದಿ ಅಳತೆಯ ಮಾನಗಳನ್ನು ಉಪಯೋಗಿಸುತ್ತೇವಷ್ಟೇ ? ಹಾಗಾದರೆ ಈ ನ್ಯಾನೊಮೀಟರ್ ಎಂಬ ಅಳತೆ ಎಷ್ಟು ದೊಡ್ಡದು ? ಒಂದು ಮೀಟರ್‌ನಲ್ಲಿ ನೂರು ಕೋಟಿ ಸಮಭಾಗಗಳನ್ನು ಮಾಡಿದರೆ, ಅದರಲ್ಲಿಯ ಒಂದು ಭಾಗ ನ್ಯಾನೊಮೀಟರ್‌ಗೆ ಸಮ. ಇಂತಹ ಸೂಕ್ಷ್ಮ ಅಳತೆ ನಮ್ಮ ಕಲ್ಪನೆಗೆ ಸುಲಭವಾಗಿ ನಿಲುಕುವುದಿಲ್ಲ. ಇನ್ನೊಂದು ರೀತಿಯಲ್ಲಿ ವಿವರಿಸಬೇಕಾದರೆ, ಒಂದು ನ್ಯಾನೊಮೀಟರ್‌ಅನ್ನು ಒಂದು ಚಿಕ್ಕ ಗೋಲಿಯ ಗಾತ್ರಕ್ಕೆ ಹಿಗ್ಗಿಸಿದರೆ, ಒಂದು ಮೀಟರ್ ಅಳತೆ ನಮ್ಮ ಭೂಗೋಳದ ಗಾತ್ರದಷ್ಟು ದೊಡ್ಡದಾಗುತ್ತದೆ !

**ನ್ಯಾನೊಟೆಕ್ನಾಲಜಿಯ ಹಿನ್ನೆಲೆ ಮತ್ತು ಉಗಮ**

ಇದರ ಹುಟ್ಟಿಗೆ ಒಂದು ನಿರ್ದಿಷ್ಟ ಜನ್ಮದಿನಾಂಕವನ್ನು ನಿಗದಿಪಡಿಸಲಾಗದು. ಈ ತಂತ್ರಜ್ಞಾನಕ್ಕೆ ಸಂಬಂಧಿಸಿದ ಕೆಲವು ಪ್ರಮುಖ ಬೆಳವಣಿಗೆಗಳನ್ನು ಈ ಕೆಳಕಂಡಂತೆ ಗುರುತಿಸಬಹುದು. 'ನ್ಯಾನೊಟೆಕ್ನಾಲಜಿ' ಎಂಬ ಪದದ ಬಳಕೆಯನ್ನು ಮೊಟ್ಟಮೊದಲಿಗೆ ೧೯೭೪ರಲ್ಲಿ ಜಪಾನಿನ ವಿಜ್ಞಾನಿ ನೊರಿಯೊ ತಾನಿಗುಚಿಯವರು ಬಳಸಿದುದನ್ನು ನಾವು ಗುರುತಿಸಬಹುದು. 'On the basic concept of Nanotechnology' ಎಂಬ ಲೇಖನದಲ್ಲಿ ಅಣು ಮತ್ತು ಪರಮಾಣುಗಳ ಮಟ್ಟದಲ್ಲಿ ಧಾತುಗಳನ್ನು ಜೋಡಿಸುವ ಮತ್ತು ವಿಭಜಿಸುವ ತಂತ್ರಜ್ಞಾನ ಎಂಬ ವ್ಯಾಖ್ಯೆ ನೀಡಿದರು. ಆದರೆ ಇದಕ್ಕೂ ಬಹಳ ವರ್ಷಗಳ ಮೊದಲು, ನ್ಯಾನೊಟೆಕ್ನಾಲಜಿ ಎಂಬ ಪದವನ್ನು ಬಳಸದೆ, ಇಂಥ ಒಂದು ತಂತ್ರಜ್ಞಾನದ ಸಾಧ್ಯತೆಯ ಬಗ್ಗೆ ವಿವರವಾದ ವೈಜ್ಞಾನಿಕ ವಿವರಣೆಯನ್ನು ನೀಡಿದ ಕೀರ್ತಿ ಅಮೆರಿಕಾದ ನೊಬೆಲ್ ಪ್ರಶಸ್ತಿ


ಭಾರತೀಯ ವಿಜ್ಞಾನ ಸಂಸ್ಥೆಯಲ್ಲಿ ಹೊಸದಾಗಿ ಪ್ರಾರಂಭಗೊಂಡಿರುವ ನ್ಯಾನೊ ವಿಜ್ಞಾನ ಮತ್ತು ತಂತ್ರಜ್ಞಾನ ಕೇಂದ್ರದ ಕಟ್ಟಡ



ನ್ಯಾನೋ ಫ್ಯಾಬ್‌ನ ಸ್ವಚ್ಛ ಕೋಣೆಯ ಒಂದು ದೃಶ್ಯ

ವಿಜೇತ ರಿಚರ್ಡ್ ಫೇನ್‌ಮನ್‌ಗೆ ಸಲ್ಲುತ್ತದೆ. ೧೯೫೯ರ ಡಿಸೆಂಬರ್ ೧೯ರಂದು ಅವರು ಅತ್ಯಂತ ಪ್ರಸಿದ್ಧವಾದ ಒಂದು ಭಾಷಣ ನೀಡಿದರು. ಅದರ ಶೀರ್ಷಿಕೆ 'There is plenty of room at the bottom' (ಸೂಕ್ಷ್ಮ ಜಗತ್ತಿನಲ್ಲಿ ಬಹಳಷ್ಟು ಸ್ಥಳಾವಕಾಶ ಇದೆ) ಎಂದು. ಈ ಭಾಷಣದಲ್ಲಿ ಅವರು, ಮುಂದೊಂದು ದಿನ ತಂತ್ರಜ್ಞಾನ ಒಂದೊಂದು ಅಣು ಮತ್ತು ಪರಮಾಣುಗಳನ್ನು ನಿಯಂತ್ರಿಸುವ ಮೂಲಕ ಹೇಗೆ ಕ್ರಾಂತಿಕಾರಿ ಪರಿವರ್ತನೆಗಳನ್ನು ತರಬಲ್ಲದು ಎಂದು ವೈಜ್ಞಾನಿಕ ವಿವರಣೆ ನೀಡಿದರು. ಇಂಥ ಒಂದು ತಂತ್ರಜ್ಞಾನದ ಮೂಲಕ ಬ್ರಿಟಾನಿಕಾ ಎನ್‌ಸೈಕ್ಲೋಪೀಡಿಯಾ ವಿಶ್ವಕೋಶದ ಸಂಪೂರ್ಣ ಗ್ರಂಥಮಾಲೆಯನ್ನು ಒಂದು ಸೂಜಿ ಮೊನೆಯಲ್ಲಿ ಸಂಗ್ರಹಿಸಿಡಬಹುದು ಎಂದು ಭವಿಷ್ಯ ನುಡಿದರು. ಹಾಗೆಯೇ ಅತ್ಯಂತ ಸೂಕ್ಷ್ಮ ಯಂತ್ರಗಳ ಸಹಾಯದಿಂದ ವೈದ್ಯರು ಮನುಷ್ಯನ ದೇಹದಲ್ಲಿ ಅದ್ಭುತವಾದ ಶಸ್ತ್ರಚಿಕಿತ್ಸೆಗಳನ್ನು ನಡೆಸುವ ಸಾಧ್ಯತೆಯನ್ನು ವಿವರಿಸಿದರು. ಇಂಥ ಒಂದು ತಂತ್ರಜ್ಞಾನದ ಭವಿಷ್ಯವನ್ನು ನಿಖರವಾಗಿ ಹೇಳಿದುದರಿಂದ ಫೇನ್‌ಮನ್ ಅವರನ್ನು ನ್ಯಾನೊಟೆಕ್ನಾಲಜಿಯ ಜನಕ ಎಂದೂ ಗುರುತಿಸುತ್ತಾರೆ.

ಆದರೆ ಮೊಟ್ಟಮೊದಲ ಬಾರಿಗೆ ಅಣು-ಪರಮಾಣುಗಳ ಮಟ್ಟದಲ್ಲಿ ಧಾತುಗಳ ಜೋಡಣೆಯನ್ನು ನಿರ್ದೇಶಿಸಿ ತೋರಿಸಿದ ಶ್ರೇಯಸ್ಸು ಜೆಡ್ ಬಿನ್ನಿಂಗ್ ಮತ್ತು ಹೆನ್ರಿ ರೊಹರರ್ ಎಂಬ ವಿಜ್ಞಾನಿಗಳಿಗೆ ಸಲ್ಲುತ್ತದೆ. ೧೯೮೧ರಲ್ಲಿ ಸ್ಕ್ಯಾನಿಂಗ್ ಟನೆಲಿಂಗ್ ಮೈಕ್ರೊಸ್ಕೋಪ್ ಎಂಬ ಯಂತ್ರವನ್ನು ಸೃಷ್ಟಿಸಿ, ಪರಮಾಣುಗಳನ್ನು ನೋಡುವ ಮತ್ತು ಅವುಗಳ ಸ್ಥಾನವನ್ನು ಮಾರ್ಪಡಿಸುವ ಸಾಮರ್ಥ್ಯವನ್ನು ಅವರು ಹುಟ್ಟುಹಾಕಿದರು. ೧೯೮೬ರಲ್ಲಿ ಇಂಥದೇ ಸಾಮರ್ಥ್ಯದ ಅಟಾಮಿಕ್ ಫೋರ್ಸ್ ಮೈಕ್ರೊಸ್ಕೋಪ್ ಎಂಬ ಯಂತ್ರದ ಆವಿಷ್ಕಾರವಾಯಿತು. ಇದೇ ವರ್ಷದಲ್ಲಿ ಅಮೆರಿಕಾದ ಎಮ್.ಐ.ಟಿ. ವಿಶ್ವವಿದ್ಯಾಲಯದ ಎರಿಕ್ ಡ್ರೆಕ್ಸಲರ್ ಎಂಬ ವಿಜ್ಞಾನಿ 'Engines of Creation - The Coming Era of Nanotechnology' ಎಂಬ ಪುಸ್ತಕವನ್ನು ಪ್ರಕಟಿಸಿ ಹಲವು ಲೇಖನ ಮತ್ತು ಭಾಷಣಗಳ ಮೂಲಕ ನ್ಯಾನೊಟೆಕ್ನಾಲಜಿ ಕ್ಷೇತ್ರವನ್ನು ಪ್ರಚುರಪಡಿಸಿದರು. ಅಣು ಪರಮಾಣುಗಳೆಂಬ ಬಿಡಿಭಾಗಗಳನ್ನು ಬಳಸಿಕೊಂಡು ಹಲವು ಯಂತ್ರೋಪಕರಣಗಳನ್ನು ಸೃಷ್ಟಿಸುವ ಕನಸನ್ನು ಕಟ್ಟಿಕೊಟ್ಟರು.

೧೯೯೦ರ ದಶಕದಿಂದ ಹಲವು ಕಂಪನಿಗಳು ನ್ಯಾನೊಟೆಕ್ನಾಲಜಿ ಆಧಾರಿತ ಹೊಸ ಉತ್ಪನ್ನಗಳನ್ನು ಮಾರುಕಟ್ಟೆಗೆ ಬಿಡುಗಡೆ ಮಾಡಿ, ಆ ಬಗ್ಗೆ ಹಲವು ಜಾಹೀರಾತುಗಳನ್ನು ನೀಡಲಾರಂಭಿಸಿದವು. ಆದರೆ ಹೆಚ್ಚಿನ ಮಟ್ಟದಲ್ಲಿ ಇವೆಲ್ಲವನ್ನೂ ನಾವು ನ್ಯಾನೊ ಟೆಕ್ನಾಲಜಿಯ ನಿಷ್ಕ್ರಿಯ (passive) ಉತ್ಪನ್ನಗಳು ಎಂದು ವರ್ಗೀಕರಿಸಬಹುದು. ಅಂದರೆ ಈ ಉತ್ಪನ್ನಗಳು ಯಾವುದೋ ಒಂದು ಹಂತದಲ್ಲಿ ನ್ಯಾನೊ ಗಾತ್ರದ ಧಾತುಗಳನ್ನು, ಕಣಗಳನ್ನು ಮಾತ್ರ ಹೊಂದಿರುತ್ತವೆ ಎಂದರ್ಥ. ಆದರೆ ಪರಮಾಣು ಯಂತ್ರದ ಕಲ್ಪನೆಯಿಂದ ಇವು ಗಾವುದ ದೂರದಲ್ಲಿ ನಿಲ್ಲುತ್ತವೆ.

ನ್ಯಾನೊಟೆಕ್ನಾಲಜಿಯ ನಿಷ್ಕ್ರಿಯ ಉತ್ಪನ್ನಗಳ ಬಗ್ಗೆ ಮಾತಾಡುವಾಗ ಒಂದು ಕುತೂಹಲಕಾರಿ ವಿಷಯವನ್ನು ಉಲ್ಲೇಖಿಸಬೇಕು. ಭಾರತದ ಆಯುಧ ತಯಾರಕರು, ಚಿತ್ರಕಾರರು, ತಮಗರಿವಿಲ್ಲದಂತೆಯೇ, ಸುಮಾರು ಎರಡು ಸಾವಿರ ವರ್ಷಗಳ ಹಿಂದೆಯೇ ಇಂಥ ಉತ್ಪನ್ನಗಳನ್ನು ಉಪಯೋಗಿಸುತ್ತಿದ್ದರು. ೧೯೯೬ರ ರಸಾಯನಶಾಸ್ತ್ರದ ನೊಬೆಲ್ ಪ್ರಶಸ್ತಿ ವಿಜೇತ ರಾಬರ್ಟ್ ಫ್ಲಾಯ್ಡ್ ಹೇಳುವಂತೆ, ಇಲ್ಲಿ ತಯಾರಿಸುತ್ತಿದ್ದ ಉಕ್ಕಿನಲ್ಲಿ, ಇಂಗಾಲವನ್ನು ಕಬ್ಬಿಣದೊಂದಿಗೆ ನಿರ್ದಿಷ್ಟ ಪ್ರಮಾಣದಲ್ಲಿ ಮಿಶ್ರಣಮಾಡಿ ಕುಲುಮೆಯಲ್ಲಿ ಸಂಸ್ಕರಿಸುವುದರ ಮೂಲಕ ಉಕ್ಕಿಗೆ ಹೆಚ್ಚಿನ ಬಾಳಿಕೆ ಬರುವಂತೆ ಮಾಡಿದ್ದರು. ಜೊತೆಗೆ ಈ ಉಕ್ಕಿನಿಂದ ತಯಾರಿಸಿದ ಆಯುಧಗಳಲ್ಲಿ ಇಂಗಾಲದ ನ್ಯಾನೊಕಣಗಳು ಮತ್ತು ನ್ಯಾನೊಕೊಳವೆಗಳು (Carbon Nanoparticles and Nanotubes) ಇರುವುದು ಪತ್ತೆಯಾಗಿದೆ. ಹಾಗೆಯೇ ಅಜಂತಾ-ಎಲ್ಲೋರಾಗಳ ಗುಹೆಗಳಲ್ಲಿ ಬಳಸಿದ ಬಣ್ಣಗಳಿಗೂ ವರ್ಷಾಂತರಗಳ ಬಾಳಿಕೆ ಸಿಕ್ಕಿರುವುದು ಇಂತಹ ವಿಶಿಷ್ಟ ನ್ಯಾನೊ ಮಿಶ್ರಣಗಳಿಂದ. ಅಂದು ನ್ಯಾನೊ ಗಾತ್ರ ಇರಲಿ, ಅದಕ್ಕಿಂತ ಸಾವಿರ ಪಟ್ಟು ದೊಡ್ಡದಾದ ಮೈಕ್ರಾನ್ ಗಾತ್ರವನ್ನು ನೋಡುವ ಉಪಕರಣಗಳೇ ಇರಲಿಲ್ಲ ಎಂಬುದನ್ನು ನಾವು ನೆನಪಿಡಬೇಕು.

ಆದರೆ ಇಂದು ನಮಗೆ ನ್ಯಾನೊ ಗಾತ್ರದ ವಸ್ತುಗಳನ್ನು ಸ್ಪಷ್ಟವಾಗಿ ನೋಡಿ, ಅಳೆಯಲು ಸಾಧ್ಯವಿರುವುದರಿಂದ, ಆಯಾಯ ಉಪಯೋಗಗಳಿಗೆ ತಕ್ಕಂತೆ, ವಿವಿಧ ಧಾತುಗಳ ನ್ಯಾನೊಕಣಗಳನ್ನು ತಯಾರಿಸಿ ಉಪಯೋಗಿಸುವ ಸಾಧ್ಯತೆಯೂ ನಮಗಿದೆ. ಇಂದು ಇಂಗಾಲದ ಕೊಳವೆಗಳ ತಂತ್ರಜ್ಞಾನವನ್ನು ಹಲವು ಕ್ಷೇತ್ರಗಳಲ್ಲಿ ಬಳಸಲಾಗುತ್ತಿದೆ. ೧೯೯೯ರಲ್ಲಿ ನ್ಯಾನೊ ಎಲೆಕ್ಟ್ರಾನಿಕ್ಸ್‌ನ ಉಗಮವಾಯಿತು. ಆ ವರ್ಷದಲ್ಲಿ ನೂರು ನ್ಯಾನೊಮೀಟರ್‌ಗಿಂತ ಕಡಿಮೆ ಅಳತೆಯ ಟ್ರಾನ್ಸಿಸ್ಟರ್‌ಗಳನ್ನು ಬಳಸಿ ಸಿಲಿಕಾನ್ ಚಿಪ್‌ಗಳನ್ನು ಮಾಡುವ ತಂತ್ರಜ್ಞಾನದ ಸೃಷ್ಟಿಯಾಯಿತು. ಇದನ್ನು ನ್ಯಾನೊಟೆಕ್ನಾಲಜಿಯ ಮೊಟ್ಟ ಮೊದಲ ಸಕ್ರಿಯ (active) ಉತ್ಪನ್ನ ಎನ್ನಬಹುದು. ಅಂದರೆ ನ್ಯಾನೊ ಗಾತ್ರದ ಹಲವು ಮಿಲಿಯನ್ ಟ್ರಾನ್ಸಿಸ್ಟರ್‌ಗಳನ್ನು ಒಂದು ಚದರ ಸೆಂಟಿಮೀಟರ್‌ನಷ್ಟು ಪುಟ್ಟ ಜಾಗದಲ್ಲಿ ನಮಗೆ ಬೇಕಾದಂತೆ ಕ್ರೋಡೀಕರಿಸಿದ ಸಿಲಿಕಾನ್ ಚಿಪ್‌ನ ಮೂಲಕ ಅತ್ಯಂತ ಕ್ಲಿಷ್ಟಕರವಾದ ಕಾರ್ಯಗಳನ್ನು ಮಾಡುವಂಥ ಸಾಮರ್ಥ್ಯದ ಅನಾವರಣವಾಯಿತು. ಇಂದು ನ್ಯಾನೊಎಲೆಕ್ಟ್ರಾನಿಕ್ಸ್ ತಂತ್ರಜ್ಞಾನ ಇನ್ನಷ್ಟು ಮುಂದುವರಿದು, ಸಿಲಿಕಾನ್ ಚಿಪ್‌ಗಳಲ್ಲಿ ೨.೦ ನ್ಯಾನೊ ಮೀಟರ್‌ನಷ್ಟು ಚಿಕ್ಕದಾದ ಟ್ರಾನ್ಸಿಸ್ಟರ್‌ಗಳ ಬಳಕೆಯಾಗುತ್ತಿದೆ. ಈ ಕಾರಣದಿಂದಲೇ ಮೊಬೈಲ್, ಡಿಜಿಟಲ್ ಕ್ಯಾಮರಾ ಇತ್ಯಾದಿ ಎಲೆಕ್ಟ್ರಾನಿಕ್ ಉಪಕರಣಗಳು ಅತ್ಯಂತ ಶಕ್ತಿಯುತವಾಗುತ್ತಿರುವುದಲ್ಲದೆ, ಕಡಿಮೆ ಬೆಲೆಗೆ ಸಿಗುವುದೂ ಸಾಧ್ಯವಾಗುತ್ತಿದೆ. ಮುಂದಿನ ಕೆಲವು ವರ್ಷಗಳಲ್ಲಿ ನ್ಯಾನೊ ಟೆಕ್ನಾಲಜಿಯ ಬೆಳವಣಿಗೆ ಅತ್ಯಂತ ಕ್ಷಿಪ್ರಗತಿಯಲ್ಲಿ ಸಾಧ್ಯವಾಗಲಿದೆ.

## ನ್ಯಾನೊಟೆಕ್ನಾಲಜಿಯ ಉಪಯೋಗಗಳು ಮತ್ತು ಸಾಧ್ಯತೆಗಳು

ನಾವು ಮೈಕ್ರೋ ಟೆಕ್ನಾಲಜಿಯನ್ನು ಎಲ್ಲ ಕ್ಷೇತ್ರಗಳಲ್ಲಿ ಕಳೆದ ಸುಮಾರು ನಾಲ್ಕು-ಐದು ದಶಕಗಳಿಂದ ಬಳಸುತ್ತಿದ್ದೇವೆ. ಮೈಕ್ರಾನ್ ಅಥವಾ ಮೈಕ್ರೋಮೀಟರ್ ಎಂಬುದು ನ್ಯಾನೊಮೀಟರ್‌ನ ಸಾವಿರ ಪಾಲು ದೊಡ್ಡದು. ಮೈಕ್ರೋಟೆಕ್ನಾಲಜಿಯು ನೂರು ಮೈಕ್ರಾನ್‌ಗಳಿಗಿಂತ ಚಿಕ್ಕದಾದ ಅಳತೆಯ ಆದರೆ ನೂರು ನ್ಯಾನೊಮೀಟರ್‌ಗಿಂತ ದೊಡ್ಡದಾದ ವಸ್ತುಗಳನ್ನು ಬಳಸಿ ಹೊಸ ಉತ್ಪನ್ನಗಳನ್ನು ಸೃಷ್ಟಿಸುವ ತಂತ್ರಜ್ಞಾನ. ಒಂದು ರೀತಿಯಲ್ಲಿ ನ್ಯಾನೊಟೆಕ್ನಾಲಜಿಯನ್ನು ಮೈಕ್ರೋಟೆಕ್ನಾಲಜಿಯ ಮುಂದುವರಿದ ಭಾಗ ಎಂದುಕೊಳ್ಳಬಹುದು. ಆದರೆ ಇಷ್ಟೇ ಆಗಿದ್ದರೆ ನ್ಯಾನೊ ಟೆಕ್ನಾಲಜಿಯ ಬಗ್ಗೆ ಅಷ್ಟೊಂದು ಕುತೂಹಲ, ಸಂಭ್ರಮಗಳು ಇರುತ್ತಿರಲಿಲ್ಲ. ಒಂದು ಪ್ರಮುಖವಾದ ವ್ಯತ್ಯಾಸವೆಂದರೆ ನ್ಯಾನೊ ಗಾತ್ರದಲ್ಲಿ ವಸ್ತು ವಿಜ್ಞಾನ ಅತ್ಯಂತ ಭಿನ್ನವಾಗಿ ಕಂಡುಬರುತ್ತದೆ. ನ್ಯಾನೊಕಣಗಳ ಮೇಲ್ಮೈ ವಿಸ್ತೀರ್ಣ ಮತ್ತು ಗಾತ್ರದ ಅನುಪಾತ ಮೈಕ್ರೋಕಣಗಳಿಗಿಂತ ಸಾವಿರ ಪಟ್ಟು ಹೆಚ್ಚಾಗಿರುತ್ತದೆ. ಹಾಗಾಗಿ ಯಾವುದೇ ರಾಸಾಯನಿಕ ಕ್ರಿಯೆಗಳಲ್ಲಿ ನ್ಯಾನೊಕಣಗಳ ತೀಕ್ಷ್ಣತೆ ಅಷ್ಟೇ ಹೆಚ್ಚಾಗಿರುತ್ತದೆ. ಜೀವಸಂಕುಲದ ಮೂಲಭೂತ ಘಟಕವಾದ ಡಿ.ಎನ್.ಎ.ಯ ಅಳತೆ ಸುಮಾರು ಮೂರು ನ್ಯಾನೊಮೀಟರ್‌ನಷ್ಟು. ವಸ್ತುವಿಜ್ಞಾನ ಮತ್ತು ಜೀವವಿಜ್ಞಾನಗಳನ್ನು ಅವುಗಳ ಮೂಲಭೂತ ಘಟಕದ ಮಟ್ಟದಲ್ಲಿ ಸಂಯೋಜನೆಗೊಳಿಸಿ, ಕ್ರಾಂತಿಕಾರಿ ಬದಲಾವಣೆಗಳನ್ನು ತರಲು ಸಾಧ್ಯವಾಗಬಹುದು ಎಂಬುದು ಈ ಟೆಕ್ನಾಲಜಿ ಬಗೆಗಿನ ಅತ್ಯಂತ ದೊಡ್ಡ ನಿರೀಕ್ಷೆ.

ನ್ಯಾನೊಟೆಕ್ನಾಲಜಿ ಎಂಬುದು ಯಾವುದೇ ಒಂದು ನಿರ್ದಿಷ್ಟ ಕ್ಷೇತ್ರಕ್ಕೆ ಸೀಮಿತವಾಗಿಲ್ಲ. ವೈದ್ಯಕೀಯ, ವಿದ್ಯುತ್ ಉತ್ಪಾದನೆ,

ವಿದ್ಯುನ್ಮಾನ ಮತ್ತು ಸಂಪರ್ಕ, ಕಂಪ್ಯೂಟರ್, ಸಾರಿಗೆ, ವಾಹನ ತಯಾರಿಕೆ, ಆಹಾರ ಉತ್ಪಾದನೆ ಮತ್ತು ಸಂರಕ್ಷಣೆ, ಟೆಕ್ಸ್ಟೈಲ್ (ಬಟ್ಟೆ ತಯಾರಿಕಾ ಉದ್ಯಮ) ಇತ್ಯಾದಿ ಎಲ್ಲಾ ಕ್ಷೇತ್ರಗಳಲ್ಲಿ ನ್ಯಾನೊಟೆಕ್ನಾಲಜಿಯ ಉಪಯೋಗವಾಗುತ್ತದೆ. ನ್ಯಾನೊ ಟೆಕ್ನಾಲಜಿಯಲ್ಲಿ ಹಲವು ವಿಭಾಗಗಳಿವೆ ಎನ್ನಬಹುದು. ನ್ಯಾನೊಮೆಟೀರಿಯಲ್ಸ್ ಎಂಬುದು ಧಾತು ಮತ್ತು ವಸ್ತು ಸೂತ್ರಜ್ಞಾನ. ನ್ಯಾನೊಮೆಕ್ಯಾನಿಕ್ಸ್ ಎಂಬುದು ಯಂತ್ರೋಪಕರಣಗಳಿಗೆ ಸಂಬಂಧಿಸಿದರೆ, ನ್ಯಾನೊಎಲೆಕ್ಟ್ರಾನಿಕ್ಸ್ ಎಂಬುದು ವಿದ್ಯುನ್ಮಾನ ಉಪಕರಣಗಳಿಗೆ ಸಂಬಂಧಿಸಿದೆ. ನ್ಯಾನೊ ಬಯೊಟೆಕ್ನಾಲಜಿ ಎಂಬುದು ವೈದ್ಯಕೀಯ ತಂತ್ರಜ್ಞಾನಕ್ಕೆ ಸಂಬಂಧಿಸಿದ ವಿಭಾಗ. ವಾಹನ ತಂತ್ರಜ್ಞಾನ ಕ್ಷೇತ್ರದಲ್ಲಿ ನ್ಯಾನೊಟೆಕ್ನಾಲಜಿ ಮೂಲಕ ಅತಿ ಹಗುರವಾದ ಆದರೆ ಅತ್ಯಂತ ಶಕ್ತಿಯುತವಾದ ಧಾತುಗಳನ್ನು, ವಸ್ತುಗಳನ್ನು ಸೃಷ್ಟಿಸಿ ವಾಹನಗಳ ಕಾರ್ಯಕ್ಷಮತೆ ಹೆಚ್ಚಿಸಬಹುದು. ಎಲೆಕ್ಟ್ರಾನಿಕ್ಸ್ ತಂತ್ರಜ್ಞಾನ ಕ್ಷೇತ್ರದಲ್ಲಿ ನ್ಯಾನೊ ಮೀಟರ್‌ಗಿಂತ ಕಡಿಮೆ ಅಳತೆಯ ಟ್ರಾನ್ಸಿಸ್ಟರ್‌ಗಳನ್ನು ಬಳಸಿ ಅಂಗೈ ಅಗಲದ ಮೊಬೈಲ್ ಫೋನಿನಲ್ಲಿ ಸೂಪರ್ ಕಂಪ್ಯೂಟರನ್ನು ಅಳವಡಿಸಬಹುದು. ವೈದ್ಯಕೀಯ ರಂಗದಲ್ಲಿ ರೋಗ ಪತ್ತೆಗೆ ಉಪಯೋಗಿಸುವ ಹಲವು ಉಪಕರಣಗಳನ್ನು ಅಂಗೈ ಅಗಲದ ಕ್ಯಾಲುಕ್ಯುಲೇಟರ್‌ನ ಗಾತ್ರಕ್ಕೆ ತರಬಹುದಾದ ಸಾಧ್ಯತೆಯಿದೆ. ಎಷ್ಟೋ ಹಳ್ಳಿಗಳ ಪ್ರಾಥಮಿಕ ಆರೋಗ್ಯ ಕೇಂದ್ರಗಳಲ್ಲಿ ರಕ್ತ ಪರೀಕ್ಷೆಯ ಸೌಲಭ್ಯ ಇರುವುದಿಲ್ಲ, ಇದಕ್ಕಾಗಿ ಜನರು ದೊಡ್ಡ ಪೆಥಾಲಜಿ ಲ್ಯಾಬ್‌ಗಳಿಗೆ ಹೋಗಬೇಕಾಗುತ್ತದೆ.

ಮುಂದಿನ ಕೆಲವು ವರ್ಷಗಳಲ್ಲಿ ನ್ಯಾನೊಟೆಕ್ನಾಲಜಿಯಿಂದಾಗಿ 'ಲ್ಯಾಬ್ ಆನ್ ಚಿಪ್ (ಚಿಪ್‌ನಲ್ಲಿ ಪ್ರಯೋಗಶಾಲೆ)' ಎಂಬ ತಂತ್ರಜ್ಞಾನ ಅಭಿವೃದ್ಧಿಯಾಗಿ ಪ್ರತಿಯೊಬ್ಬ ವೈದ್ಯರ ಕೈಯಲ್ಲಿ ಇಂಥ ಸಾಧನ ಸಿಕ್ಕರೆ, ರೋಗವನ್ನು ಕ್ಷಣಾರ್ಧದಲ್ಲಿ ಗುರುತಿಸ ಬಹುದು. ಹಾಗೆಯೇ ಕ್ಯಾನ್ಸರ್, ಡಯಾಬಿಟಿಸ್‌ನಂತಹ ರೋಗಗಳಿಗೆ ಪರಿಣಾಮಕಾರಿ ಚಿಕಿತ್ಸೆಯನ್ನು ಕಂಡುಹಿಡಿಯುವ ಸಾಧ್ಯತೆಯೂ ಇದೆ. ಕೆಲವು ಬಗೆಯ ರೆಟಿನಾ ತೊಂದರೆಯಿಂದ ಬಳಲುವ ಅಂಧರಿಗೆ ಸಿಲಿಕಾನ್ ರೆಟಿನಾದ ಮೂಲಕ ದೃಷ್ಟಿ ನೀಡುವ ದಿನಗಳೂ ದೂರವಿಲ್ಲ. ಇನ್ನು ಮನರಂಜನೆಯ ವಿಷಯಕ್ಕೆ ಬಂದರೆ ಮೊಬೈಲ್‌ನಲ್ಲೇ




೫೦ ನ್ಯಾನೋಮೀಟರ್ ಗಾತ್ರದ ಲೋಹದ ಗೆರೆಗಳನ್ನು ಎಲೆಕ್ಟ್ರಾನ್ ಕಿರಣಗಳ ಲಿಥೋಗ್ರಾಫಿಯಿಂದ ಮೂಡಿಸಲಾಗಿದೆ.

ಟಿ.ವಿ. ನೋಡುವ, ಮೊಬೈಲ್‌ನಲ್ಲಿ ಮಾತಾಡುವಾಗ ವ್ಯಕ್ತಿಗಳ ಚಿತ್ರವನ್ನು ನೋಡುವ, ಬೇಕೆಂದಲ್ಲಿ ಯಾವುದೇ ಗೋಡೆಯ ಮೇಲೆ ಪರದೆಯನ್ನು ಸೃಷ್ಟಿಸಿ ಮೊಬೈಲ್ ಅನ್ನು ಪ್ರೊಜೆಕ್ಟರ್‌ನಂತೆ ಬಳಸಿ ಚಲನಚಿತ್ರವನ್ನು ನೋಡುವಂತಹ ತಂತ್ರಜ್ಞಾನವೂ ಸೃಷ್ಟಿಯಾಗಲಿದೆ. ಹಾಗೆಯೇ ನಮ್ಮ ಮನೆಗಳ ಮೇಲೆ ಅತೀ ಹೆಚ್ಚಿನ ಕಾರ್ಯಕ್ಷಮತೆಯ ಸೂರ್ಯಫಲಕಗಳನ್ನು ಅಳವಡಿಸಿ ನಮ್ಮೆಲ್ಲ ಅಗತ್ಯಗಳಿಗೆ ಬೇಕಾಗುವ ವಿದ್ಯುತ್ ಶಕ್ತಿಯನ್ನು ಸೌರಶಕ್ತಿ ಇಂದಲೇ ಉತ್ಪಾದಿಸಬಹುದು. ಇದರಿಂದ ಪರಿಸರದಲ್ಲಿ ಇಂಗಾಲದ ಡೈ ಆಕ್ಸೈಡ್‌ನಿಂದ ಆಗುತ್ತಿರುವ ಮಾಲಿನ್ಯವನ್ನು ತಡೆಗಟ್ಟಬಹುದು. ಇವು ಕೆಲವು ಉದಾಹರಣೆಗಳು.

## ನ್ಯಾನೊಟೆಕ್ನಾಲಜಿಯ ವಸ್ತುಗಳನ್ನು ಮಾಡುವ, ನೋಡುವ ಬಗೆ

ನ್ಯಾನೊಟೆಕ್ನಾಲಜಿಯ ನಿಷ್ಕ್ರಿಯ (passive) ಉತ್ಪನ್ನಗಳನ್ನು ರಾಸಾಯನಿಕ ವಿಧಾನಗಳ ಮೂಲಕ ಸೃಷ್ಟಿಸಬಹುದು. ಉದಾಹರಣೆಗೆ ಮೀಥೇನ್ ಅನಿಲವನ್ನು ಹೆಚ್ಚಿನ ತಾಪಮಾನದಲ್ಲಿ ವಿಭಜಿಸಿ ಇಂಗಾಲದ ನ್ಯಾನೊಕಣಗಳನ್ನು ತಯಾರಿಸಬಹುದು. ಹಾಗೆಯೇ ಸಿಲ್ವರ್ ನೈಟ್ರೇಟ್ ದ್ರಾವಣವನ್ನು ಸಂಸ್ಕರಿಸುವ ಮೂಲಕ ಬೆಳ್ಳಿಯ ನ್ಯಾನೊಕಣಗಳನ್ನು ತಯಾರಿಸಬಹುದು.

ಇನ್ನು ನ್ಯಾನೊಟೆಕ್ನಾಲಜಿಯ ಸಕ್ರಿಯ (active) ಉತ್ಪನ್ನಗಳಾದ ಸಿಲಿಕಾನ್ ಚಿಪ್, ನ್ಯಾನೊಮೀಟರ್ ಇತ್ಯಾದಿಗಳನ್ನು ಸದ್ಯಕ್ಕೆ 'Top-Down' ಅಥವಾ 'ದೊಡ್ಡ ಗಾತ್ರದಿಂದ-ಸೂಕ್ಷ್ಮಗಾತ್ರಕ್ಕೆ' ಎಂಬ ವಿಧಾನದಿಂದ ತಯಾರಿಸುತ್ತಾರೆ. ಇದು ಒಂದು ದೊಡ್ಡ ಕಲ್ಲಿನ ಮೇಲೆ ಶಿಲ್ಪಿಯು ಅನಗತ್ಯ ಭಾಗಗಳನ್ನು ಕೆತ್ತಿ ಸೂಕ್ಷ್ಮ ಬಿಡಿ ಭಾಗಗಳನ್ನು ರಚಿಸಿ ಶಿಲ್ಪವನ್ನು ತಯಾರಿಸುವ ಬಗೆಯನ್ನು ಹೋಲುತ್ತದೆ. ಈ ಚಿಪ್‌ಗಳನ್ನು ನ್ಯಾನೊಫ್ಯಾಬ್ (ಕಾರ್ಖಾನೆ)ಗಳ ಸ್ವಚ್ಛ ಕೋಣೆ (clean room)ಗಳಲ್ಲಿ ತಯಾರಿಸುತ್ತಾರೆ. ಕೋಣೆಯನ್ನು ಸ್ವಚ್ಛಗೊಳಿಸಲು ಶೋಧಿಸಿದ ಗಾಳಿಯನ್ನು ಕೋಣೆಯೊಳಗೆ ಬಿಡುವ ವ್ಯವಸ್ಥೆ ಇರುತ್ತದೆ. ಈ ಕೋಣೆಯೊಳಗೆ ಪ್ರವೇಶಿಸಬೇಕಾದರೆ ವಿಶೇಷ ರೀತಿಯ ದಿರಿಸು ಧರಿಸಿಕೊಂಡು, ಹೋಗಬೇಕಾಗುತ್ತದೆ. ಸಿಲಿಕಾನ್‌ನ ಒಂದು ದೊಡ್ಡ ವೇಫರ್‌ನಿಂದ ಪ್ರಾರಂಭಿಸಿ ಹಲವು ಮಿಲಿಯನ್ ನ್ಯಾನೊಟ್ರಾನ್ಸಿಸ್ಟರ್‌ಗಳನ್ನು ಫೋಟೊಲಿಥೊಗ್ರಫಿ (ಬೆಳಕಿನ ಕಲ್ಲಚ್ಚು) ಎಂಬ ತಂತ್ರಜ್ಞಾನದಿಂದ ಮುದ್ರಿಸಿ ಅನಗತ್ಯವಾದ ವಸ್ತುವನ್ನು ಕೆತ್ತಿ ತೆಗೆದು ನ್ಯಾನೊ ಎಲೆಕ್ಟ್ರಾನಿಕ್ ಚಿಪ್‌ಗಳನ್ನು ತಯಾರಿಸಲಾಗುತ್ತದೆ.

ಭವಿಷ್ಯದಲ್ಲಿ ಇಂಥ ಉತ್ಪನ್ನಗಳನ್ನು 'Atoms-up' ಅಥವಾ ('ಪರಮಾಣು ಸಂಯೋಜನೆಯಿಂದ ವೃದ್ಧಿ' ಎಂಬ ವಿಧಾನದಿಂದ ತಯಾರಿಸುವ ಕಲ್ಪನೆಯಿದೆ. ಒಂದೊಂದು ಪರಮಾಣುವನ್ನು ಬಿಡಿಭಾಗ ಎಂದು ಪರಿಗಣಿಸಿ ಅವುಗಳನ್ನು ಕೋಟ್ಯಾಂತರ ಸಂಖ್ಯೆಯಲ್ಲಿ ಸಂಯೋಜಿಸಿ ನ್ಯಾನೊಟೆಕ್ ಉತ್ಪನ್ನಗಳನ್ನು ತಯಾರಿಸುವ ಪರಿಕಲ್ಪನೆಯಿದು. ಈ ಮೊದಲಿಗೆ ಹೇಳಿದ ಸ್ಕ್ಯಾನಿಂಗ್ ಟನೆಲಿಂಗ್ ಮೈಕ್ರೋಸ್ಕೋಪ್ ಮತ್ತು ಅಟಾಮಿಕ್ ಫೋರ್ಸ್ ಮೈಕ್ರೋಸ್ಕೋಪ್ ಉಪಕರಣಗಳು ಅಬ್ಬಬ್ಬಾ ಎಂದರೆ ಸುಮಾರು ನೂರು ಪರಮಾಣುಗಳನ್ನು ಬಹಳ ನಿಧಾನವಾಗಿ ಒಟ್ಟುಗೂಡಿಸಬಹುದಷ್ಟೆ. ಇಂಥ ಸಂಯೋಜನೆಯಿಂದ ಒಂದು ಚಿಕ್ಕ ಸಿಲಿಕಾನ್ ಚಿಪ್ ತಯಾರಿಸುವುದು ಕಠಿಣ

ಮಾತು. ಆದರೆ ನಮ್ಮ ಪ್ರಕೃತಿ ಎಲ್ಲ ಜೀವ ಸಂಕುಲವನ್ನು ಸೃಷ್ಟಿಸುವುದು ಇದೇ ಬಗೆಯಲ್ಲಿ. ಉದಾಹರಣೆಗೆ ಮನುಷ್ಯನ ಬೆಳವಣಿಗೆ ಎರಡು ಜೀವಕೋಶಗಳಾದ ವೀರ್ಯಾಣು ಮತ್ತು ಅಂಡಾಣುವಿನಿಂದ ಮೊದಲುಗೊಂಡು ವೃದ್ಧಿಯಾಗಿ ಸಂಪೂರ್ಣ ರೂಪ ತಾಳುತ್ತದೆ. 'Atoms-up' ನ್ಯಾನೊಟೆಕ್ನಾಲಜಿಯಲ್ಲಿ ಹಲವು ವರ್ಷಗಳಿಂದ ಸಂಶೋಧನೆ ನಡೆಯುತ್ತಿದ್ದರೂ, ಇದು ನಮ್ಮ ಕೈಗೆ ಎಟಕುವ ಸಾಧ್ಯತೆ ಕಾಣುತ್ತಿಲ್ಲ.

ನ್ಯಾನೊ ವಿಷಯಗಳನ್ನು ತಯಾರಿಸುವ ವಿಧಾನವನ್ನು ಅರಿತ ನಂತರ, ನಮ್ಮೆದುರು ಬರುವ ಸಹಜವಾದ ಪ್ರಶ್ನೆ ಇಂಥ ಸೂಕ್ಷ್ಮ ವಿಷಯಗಳನ್ನು ನೋಡುವ ಬಗೆ ಹೇಗೆ ? ಇದನ್ನು ತಿಳಿದುಕೊಳ್ಳುವ ಮೊದಲು ನಮ್ಮ ಕಣ್ಣುಗಳು ವಸ್ತುಗಳನ್ನು ಗ್ರಹಿಸುವ ರೀತಿಯನ್ನು ಅರ್ಥಮಾಡಿಕೊಳ್ಳಬೇಕು. ನಮ್ಮ ದೃಷ್ಟಿಯಲ್ಲಿ ಎರಡು ಆಯಾಮಗಳಿವೆ. ಒಂದು ವಸ್ತುವಿನ ಬಣ್ಣ, ಇನ್ನೊಂದು ವಸ್ತುವಿನ ಗಾತ್ರ. ಯಾವುದೇ ವಸ್ತುವಿನಿಂದ ಚದುರಿಸಲ್ಪಟ್ಟ ಬೆಳಕು ನಮ್ಮ ಅಕ್ಷಿಪಟಲದ ಮೇಲೆ ಬೀಳುತ್ತದೆ. ಬೆಳಕಿನ ಶಕ್ತಿ ವಿದ್ಯುದಯಸ್ಕಾಂತೀಯ ಅಲೆಗಳ (electromagnetic waves) ರೂಪದಲ್ಲಿ ಚಲಿಸುತ್ತದೆ. ಈ ಅಲೆಗಳ ಒಂದು ಮುಖ್ಯ ಲಕ್ಷಣವೆಂದರೆ ತರಂಗಾಂತರ. ಅಥವಾ ಒಂದು ಅಲೆಯಿಂದ ಒಂದು ಅಲೆಗಿರುವ ದೂರ. ಬೆಳಕಿನ ಅಲೆಗಳ ತರಂಗಾಂತರದ ವ್ಯಾಪ್ತಿ ಅಗಾಧ. ಇದಕ್ಕೆ ವಿದ್ಯುದಯಸ್ಕಾಂತೀಯ ವರ್ಣಪಟಲ (electromagnetic spectrum) ಎನ್ನುತ್ತೇವೆ. ಇದರಲ್ಲಿ ನಮ್ಮ ದೃಷ್ಟಿಗೆ ಗೋಚರವಾಗುವ ತರಂಗಾಂತರಗಳು ಸುಮಾರು ೪೦೦ ನ್ಯಾನೊಮೀಟರ್ (ನೇರಳೆ ಬಣ್ಣ)ನಿಂದ ೮೦೦ ನ್ಯಾನೊಮೀಟರ್ (ಕೆಂಪು ಬಣ್ಣ) ವ್ಯಾಪ್ತಿಯಲ್ಲಿ ಮಾತ್ರ. ೪೦೦ ನ್ಯಾನೊ ಮೀಟರ್‌ಗಿಂತ ಕಡಿಮೆ ತರಂಗಾಂತರದ ವ್ಯಾಪ್ತಿಯಲ್ಲಿ ನಮ್ಮ ಕಣ್ಣಿಗೆ ಕಾಣದ ಅತಿ ನೇರಳೆ (ultra violet), ಕ್ಷ-ಕಿರಣ (x-ray) ಇತ್ಯಾದಿಗಳಿವೆ. ಹಾಗೆಯೇ ೮೦೦ ನ್ಯಾನೊಮೀಟರ್‌ಗಿಂತ ಹೆಚ್ಚಿನ ತರಂಗಾಂತರಗಳಲ್ಲಿ ನಮಗೆ ಕಾಣದ ಇನ್‌ಫ್ರಾರೆಡ್, ಮೈಕ್ರೋವೇವ್ ಮತ್ತು ರೇಡಿಯೋ ಅಲೆಗಳಿವೆ. ಯಾವುದೇ ವಸ್ತುವು ಚದುರಿಸಿದ ಬೆಳಕಿನಲ್ಲಿ ೪೦೦ರಿಂದ ೮೦೦ ನ್ಯಾನೊ ಮೀಟರ್ ವ್ಯಾಪ್ತಿಯ ವಿವಿಧ ತರಂಗಾಂತರಗಳ ತೀಕ್ಷ್ಣತೆಯ ಮೇರೆಗೆ ಅದರ ಬಣ್ಣದ ನಿರ್ಧಾರವಾಗುತ್ತದೆ. ಇನ್ನು ವಸ್ತುವಿನ ಗಾತ್ರಕ್ಕೆ ಬಂದರೆ, ನಮ್ಮ ಬರಿಗಣ್ಣಿನಿಂದ ಸುಮಾರು ಅರ್ಧ ಮಿಲಿಮೀಟರ್‌ಗಿಂತ (ಅಂದರೆ ೫೦೦ ಮೈಕ್ರಾನ್‌ಗಳು ಅಥವಾ ೫ ಲಕ್ಷ ನ್ಯಾನೊಮೀಟರ್‌ಗಳು) ಸೂಕ್ಷ್ಮವಾದ ವಸ್ತುವನ್ನು ಗ್ರಹಿಸಲು ಅಸಾಧ್ಯ. ಇದಕ್ಕಿಂತ ಸೂಕ್ಷ್ಮ ವಸ್ತುಗಳನ್ನು ನೋಡಲು ನಾವು ಸೂಕ್ಷ್ಮದರ್ಶಕವನ್ನು ಬಳಸಬೇಕಾಗುತ್ತದೆ. ಉದಾಹರಣೆಗೆ, ಚಿಕ್ಕ ಮಕ್ಕಳು ಆಟಿಕೆಯಂತೆ ಬಳಸುವ ಭೂತಗನ್ನಡಿ, ವಸ್ತುಗಳ ಗಾತ್ರವನ್ನು ಸುಮಾರು ಹತ್ತುಪಟ್ಟು ಹೆಚ್ಚಿಸಬಹುದು. (ಅಂದರೆ ೫೦ ಮೈಕ್ರಾನ್‌ಗಳವರೆಗೆ ನೋಡಲು ಸಾಧ್ಯ). ಪ್ರಯೋಗಶಾಲೆಗಳಲ್ಲಿ ಬಳಸುವ, ಅಧಿಕ ಸಾಮರ್ಥ್ಯದ ಮಸೂರಗಳನ್ನೊಳಗೊಂಡ ಸೂಕ್ಷ್ಮದರ್ಶಕಗಳು ಅತ್ಯಧಿಕವೆಂದರೆ ಸುಮಾರು ಒಂದು ಸಾವಿರ ಪಟ್ಟು ಗಾತ್ರ ಹೆಚ್ಚಿಸಬಹುದಷ್ಟೆ. ಅಂದರೆ ೫೦೦ ನ್ಯಾನೊ ಮೀಟರ್ ಅನ್ನು ಸಾವಿರ ಪಟ್ಟು ಹೆಚ್ಚಿಸಿ ಅರ್ಧ ಮಿಲಿಮೀಟರ್ ಗಾತ್ರಕ್ಕೇರಿಸಿ ನೋಡಬಹುದಷ್ಟೆ. ಬೆಳಕಿನ ಯಾವುದೇ ಸೂಕ್ಷ್ಮದರ್ಶಕ ಬಳಸಿದರೂ ನಮಗೆ ೪೦೦ ನ್ಯಾನೊಮೀಟರ್‌ಗಿಂತ ಕಡಿಮೆ ಗಾತ್ರವನ್ನು ನೋಡಲಾಗದು. ಇದಕ್ಕೆ ಬೆಳಕಿನ ಅಲೆಗಳ ಮೂಲಭೂತ ಲಕ್ಷಣವಾದ diffraction ಅಂದರೆ ಬಾಗುವಿಕೆ ಕಾರಣ. ಈ ಲಕ್ಷಣದಿಂದಾಗಿ ಬೆಳಕಿನ ತರಂಗಾಂತರಕ್ಕಿಂತ ಸೂಕ್ಷ್ಮವಾದ ವಸ್ತುವನ್ನು ನೋಡಲಾಗದು. ಹಾಗಾಗಿ ನಾವು ೧೦೦ ನ್ಯಾನೊಮೀಟರ್‌ಗಿಂತ ಕಡಿಮೆ ಗಾತ್ರವನ್ನು ನೋಡಲು ಇನ್ನಿತರ ಸಾಧನಗಳನ್ನು ಬಳಸಬೇಕಾಗುತ್ತದೆ. ಇದರಲ್ಲೊಂದು ಬಗೆ, ಎಲೆಕ್ಟ್ರಾನ್ ಮೈಕ್ರೋಸ್ಕೋಪ್ ಎಂಬ ಸಾಧನ (ಎಲೆಕ್ಟ್ರಾನ್ ಸೂಕ್ಷ್ಮದರ್ಶಕ). ಇದರಲ್ಲಿ ಬೆಳಕಿನ ಕಿರಣಗಳ ಬದಲಾಗಿ ಅತ್ಯಧಿಕ ಶಕ್ತಿಯ ಎಲೆಕ್ಟ್ರಾನ್ ಕಣಗಳನ್ನು ಬಳಸಲಾಗುತ್ತದೆ. ಈ ಎಲೆಕ್ಟ್ರಾನ್‌ಗಳು ಪರೀಕ್ಷಿಸುತ್ತಿರುವ ಸೂಕ್ಷ್ಮವಸ್ತುಗಳನ್ನು ತಗುಲಿದಾಗ ಪ್ರತಿಫಲನಗೊಳ್ಳುತ್ತವೆ. ಇಂಥ ಪ್ರತಿಫಲಿತ ಎಲೆಕ್ಟ್ರಾನ್‌ಗಳನ್ನು ಲೆಕ್ಕ ಹಾಕಿ ಸೂಕ್ಷ್ಮವಸ್ತುಗಳ ಚಿತ್ರವನ್ನು ಕಂಪ್ಯೂಟರ್ ಪರದೆಯ ಮೇಲೆ ಮೂಡಿಸಲಾಗುತ್ತದೆ. ಈ ಮೂಲಕ ಒಂದು ನ್ಯಾನೊಮೀಟರ್‌ನಷ್ಟು ಚಿಕ್ಕ ಕಣಗಳನ್ನು ನೋಡಲು ಸಾಧ್ಯ. ಇನ್ನೊಂದು ಬಗೆಯ ಉಪಕರಣಗಳೆಂದರೆ, ಈ ಮೊದಲು ಉಲ್ಲೇಖಿಸಿದ ಸ್ಕ್ಯಾನಿಂಗ್ ಟನ್ನೆಲಿಂಗ್ ಮೈಕ್ರೋಸ್ಕೋಪ್ ಮತ್ತು ಅಟಾಮಿಕ್ ಫೋರ್ಸ್ ಮೈಕ್ರೋಸ್ಕೋಪ್‌ಗಳು. ಈ ಉಪಕರಣಗಳಲ್ಲಿ ಅತ್ಯಂತ ಸೂಕ್ಷ್ಮವಾದ ಸೂಜಿಮೊನೆಯನ್ನು (ಅದರ ತುದಿ ಒಂದು ನ್ಯಾನೊಮೀಟರ್‌ನಷ್ಟು ಚಿಕ್ಕದಾಗಿರಬಹುದು) ವಸ್ತುವಿನ ಮೇಲೆ ಚಲಿಸುವಂತೆ ಮಾಡಲಾಗುತ್ತದೆ. ಆಗ ವಸ್ತುವಿನ ಉಬ್ಬು ತಗ್ಗುಗಳನ್ನಾಧರಿಸಿ ಸೂಜಿಮೊನೆ ಮೇಲೆ ಕೆಳಗೆ ಹೋಗುತ್ತಿರುತ್ತದೆ. ಈ ಚಲನೆಯ ಮೂಲಕ ಸೂಕ್ಷ್ಮ ವಸ್ತುಗಳ ಮೇಲ್ಮೈಯನ್ನು ೧ ನ್ಯಾನೊಮೀಟರ್‌ಗಿಂತಲೂ ಕಡಿಮೆ ಅಳತೆಯಲ್ಲಿ ಚಿತ್ರೀಕರಿಸಲಾಗುತ್ತದೆ. ಒಂದು ರೀತಿಯಲ್ಲಿ ಇದು ನಮ್ಮ ಸ್ಪರ್ಶ ಜ್ಞಾನದಿಂದ ನಾವು ವಸ್ತುಗಳನ್ನು ಗ್ರಹಿಸುವ ಕ್ರಿಯೆಯನ್ನು ಹೋಲುತ್ತದೆ.

ಹೆಚ್ಚಿನ ಜನರಿಗೆ ನ್ಯಾನೊಟೆಕ್ನಾಲಜಿಯ ಉತ್ಪನ್ನಗಳು ನ್ಯಾನೊ ಅಳತೆಯಲ್ಲಿಯೇ ಇರುತ್ತವೆಯೇ ಎಂಬ ಗೊಂದಲ ಮೂಡುತ್ತದೆ. ಒಂದು ಉತ್ಪನ್ನವನ್ನು ಉತ್ಪಾದಿಸುವಾಗ ಯಾವುದೋ ಒಂದು ಹಂತದಲ್ಲಿ ನೂರು ನ್ಯಾನೊಮೀಟರ್‌ಗಿಂತ ಚಿಕ್ಕ ಗಾತ್ರದ ವಸ್ತು ಅಥವಾ ಧಾತುಗಳನ್ನು ಅಳವಡಿಸಿ ಕೊಂಡಿದ್ದರೂ ಅದು ನ್ಯಾನೊಟೆಕ್ ಉತ್ಪನ್ನವಾಗುತ್ತದೆ.




ಯಾವ ಪಕ್ಷದವರು ಅಂತ
ಪರೀಕ್ಷೆಯಿಂದ ತಿಳಿದ್ರೆ
ಚೆನ್ನಾಗಿತ್ತು, ಅಲ್ವೇ ಸಾರ್...?

ಹಾಗಾಗಿ ಹೆಚ್ಚಿನ ಸಂದರ್ಭಗಳಲ್ಲಿ ಅಂತಹ ಉತ್ಪನ್ನ ನಮ್ಮ ಕಣ್ಣಿಗೆ ಕಾಣಿಸುವ ಗಾತ್ರದಲ್ಲಿಯೇ ಇರುತ್ತದೆ. ಉದಾಹರಣೆಗೆ, ಈಗಿನ ಕೆಲವು ಹೊಸ ವಾಶಿಂಗ್ ಮೆಶಿನ್‌ಗಳ ಜಾಹಿರಾತುಗಳಲ್ಲಿ ''ಸಿಲ್ವರ್ ನ್ಯಾನೊ ಪಾರ್ಟಿಕಲ್ ಆಧರಿಸಿದ ನ್ಯಾನೊಟೆಕ್ ಉತ್ಪನ್ನ'' ಎಂದು ಸೇರಿಸುತ್ತಾರೆ. ವಾಷಿಂಗ್‌ಮೆಶಿನ್ ನಮ್ಮ ಕಣ್ಣಿಗೆ ಕಾಣಿಸ ಬೇಕಲ್ಲವೇ ? ಇದರರ್ಥವಿಷ್ಟೇ. ಇವುಗಳಲ್ಲಿ ಬಟ್ಟೆಗಳನ್ನು ತೊಳೆಯುವಾಗ ಬೆಳ್ಳಿಯ ನ್ಯಾನೊ ಕಣಗಳನ್ನು ನೀರಿನಲ್ಲಿ ಸೇರಿಸುವ ತಂತ್ರಜ್ಞಾನ ಅಳವಡಿಸಿರುತ್ತಾರೆ. ಈ ಕಣಗಳಿಗೆ ಕೊಳೆಯಲ್ಲಿ ಇರುವ ಬ್ಯಾಕ್ಟೀರಿಯಗಳನ್ನು ನಾಶ ಮಾಡುವ ಶಕ್ತಿ ಇರುತ್ತದೆ, ಹಾಗಾಗಿ ಬಟ್ಟೆಗಳು ಅತ್ಯಂತ ಶುದ್ಧವಾಗುತ್ತವೆ ಎಂಬುದು ಈ ಜಾಹೀರಾತುಗಳ ಅರ್ಥ.

ಇತ್ತೀಚೆಗೆ ನ್ಯಾನೊಪೈಂಟ್ (ಬಣ್ಣ)ಗಳು ಮಾರುಕಟ್ಟೆಗೆ ಬಂದಿವೆ. ಇವು ಕೂಡ ನಮ್ಮ ಕಣ್ಣಿಗೆ ಕಾಣುತ್ತವಲ್ಲವೇ ? ಆದರೆ ಅವುಗಳಲ್ಲಿ ಕೆಲವು ನ್ಯಾನೊಕಣಗಳನ್ನು ಬಳಸಿ, ಗೀರುಗಳು ಅಷ್ಟು ಸುಲಭವಾಗಿ ಆಗದಂತೆ ಮಾಡ ಬಹುದು. ಹಾಗೆಯೇ ನ್ಯಾನೊಟೆಕ್‌ನ ಮೊಬೈಲ್ ಫೋನ್‌ಗಳು ಕೂಡ ನ್ಯಾನೊ ಗಾತ್ರದ ಟ್ರಾನ್ಸಿಸ್ಟರ್‌ಗಳನ್ನು ಹೊಂದಿರುವುದರಿಂದ ನ್ಯಾನೊ ಉತ್ಪನ್ನಗಳಾಗುತ್ತವೆ.

## ನ್ಯಾನೊಟೆಕ್ನಾಲಜಿಯಿಂದ ಅಪಾಯಗಳಿವೆಯೆ ?

ಯಾವುದೇ ತಂತ್ರಜ್ಞಾನವು ಎರಡು ಅಲುಗಿನ ಕತ್ತಿ ಇದ್ದಂತೆ. ಅದು ನಾವು ಬಳಸುವ ರೀತಿಯನ್ನು ಹೊಂದಿಕೊಂಡು ಒಳ್ಳೆಯದೂ ಆಗಬಹುದು, ಕೆಟ್ಟದ್ದೂ ಆಗಬಹುದು. ಉದಾಹರಣೆಗೆ, ವಾಹನ ತಂತ್ರಜ್ಞಾನದಿಂದ ನಮಗೆ ಸಿಕ್ಕಿರುವ ಸ್ಕೂಟರನ್ನೇ ತೆಗೆದುಕೊಳ್ಳಿ. ನಮ್ಮ ಹದ್ದುಬಸ್ತಿನಲ್ಲಿ ಇಟ್ಟುಕೊಂಡು ಓಡಿಸಿದರೆ ಸಂಚಾರಕ್ಕೆ ಅತ್ಯುತ್ತಮ ಮಾರ್ಗ. ಎರ್ರಾಬಿರ್ರಿಯಾಗಿ ಓಡಿಸಿದರೆ ಅಪಘಾತವಾಗಿ ಜೀವ ಕಳೆದುಕೊಳ್ಳುವ ಸ್ಥಿತಿ ಬಂದೀತು. ಹಾಗೆಯೇ ನ್ಯಾನೊಟೆಕ್ನಾಲಜಿ ಸಹ.

ಉದಾಹರಣೆಗೆ, ನ್ಯಾನೊಕಣಗಳು ಜೀವಕೋಶಗಳಿಗೆ ಅಪಾಯಕಾರಿಯಾಗಬಹುದು. ಅಮೆರಿಕಾದ Project for Emerging Nanotechnology ಎಂಬ ಸಂಸ್ಥೆಯು ನಡೆಸಿದ ಒಂದು ಅಧ್ಯಯನದ ಪ್ರಕಾರ ೨೦೧೧ರಿಂದ ೨೦೨೦ರ ವರೆಗೆ ವಿಶ್ವದಾದ್ಯಂತ ಸುಮಾರು ೫೮,೦೦೦ ಟನ್ ನ್ಯಾನೊಕಣಗಳು ಉತ್ಪತ್ತಿಯಾಗಲಿವೆಯಂತೆ ! ಉದಾಹರಣೆಗೆ ಬೆಳ್ಳಿಯ ನ್ಯಾನೊ ಕಣಗಳು ಎಲ್ಲಾ ಬಗೆಯ ಬ್ಯಾಕ್ಟೀರಿಯಗಳನ್ನು ನಾಶ ಮಾಡುತ್ತವೆ. ವಾಷಿಂಗ್‌ಮೆಶಿನ್‌ನ ಬೆಳ್ಳಿಯ ನ್ಯಾನೊ ಕಣಗಳು ಒಳಚರಂಡಿ ನೀರಿನ ಮೂಲಕ ಮಣ್ಣನ್ನು ಸೇರಿಕೊಂಡರೆ ಮಣ್ಣಿನಲ್ಲಿರುವ ಒಳ್ಳೆಯ ಬ್ಯಾಕ್ಟೀರಿಯಗಳನ್ನು ನಾಶಮಾಡಿ ಮಣ್ಣಿನ ಫಲವತ್ತತೆಗೆ ಮಾರಕವಾಗಬಹುದು. ಆದುದರಿಂದಲೇ ಯೂರೋಪಿನ ಕೆಲವು ದೇಶಗಳಲ್ಲಿ ಇಂಥ ವಾಷಿಂಗ್‌ಮೆಶಿನ್‌ಗಳನ್ನು ಬಹಿಷ್ಕರಿಸಿದ್ದಾರೆ. ಇದು ಒಂದು ರೀತಿಯಲ್ಲಿ ಆ್ಯಂಟಿ ಬಯಾಟಿಕ್ ಔಷಧಿಗಳ ಉಪಯೋಗವಿದ್ದಂತೆ. ರೋಗಕ್ಕೆ

ಕಾರಣವಾದ ಬ್ಯಾಕ್ಟೀರಿಯಗಳ ಜೊತೆಗೆ ಈ ಔಷಧಿಗಳು ನಮ್ಮ ದೇಹದಲ್ಲಿರುವ ಇತರ ಒಳ್ಳೆಯ ಸೂಕ್ಷ್ಮಜೀವಿಗಳನ್ನು ಮತ್ತು ನಮ್ಮ ಜೀವಕೋಶಗಳನ್ನೂ ನಾಶಪಡಿಸುತ್ತವೆ. ಇಂಥ ಔಷಧಿಗಳನ್ನು ಎಗ್ಗಾಬಿಗ್ಗಿಯಾಗಿ ಬಳಸಿದರೆ ಹಾನಿಯಾಗುವುದೇ ಹೆಚ್ಚು. ನ್ಯಾನೊಟೆಕ್ನಾಲಜಿಯ ಪರ ಮತ್ತು ವಿರುದ್ಧ ಸಂಪೂರ್ಣ ಧ್ರುವೀಕೃತ ವಾದಸರಣಿಯನ್ನು ಪ್ರತಿಪಾದಿಸುವ ಗುಂಪುಗಳಿವೆ. ಆದರೆ ಅಂಥ ರೀತಿಯಲ್ಲಿ ಯಾವುದೇ ಪಕ್ಷವನ್ನು ವಹಿಸದೆ, ಈ ತಂತ್ರಜ್ಞಾನದ ಸಾಧಕ ಬಾಧಕಗಳನ್ನರಿತು ಅದನ್ನು ನಮ್ಮ ಉಪಯೋಗಕ್ಕೆ ಸೂಕ್ತ ರೀತಿಯಲ್ಲಿ ಬಳಸುವ ಜವಾಬ್ದಾರಿ ನಮ್ಮ ಮೇಲಿದೆ.

### ಭಾರತದಲ್ಲಿ ನ್ಯಾನೊಟೆಕ್ನಾಲಜಿಯ ಬೆಳವಣಿಗೆ

ನ್ಯಾನೊಟೆಕ್ನಾಲಜಿಯು ಭವಿಷ್ಯದ ಮಹತ್ವದ ತಂತ್ರಜ್ಞಾನ ಎನ್ನುವುದರಲ್ಲಿ ಯಾವುದೇ ಸಂದೇಹವಿಲ್ಲ. ಇನ್ನು ಕೆಲವು ವರ್ಷಗಳಲ್ಲಿ ಯಾವುದೇ ರಾಷ್ಟ್ರದ ವಿಜ್ಞಾನ, ತಂತ್ರಜ್ಞಾನ ಹಾಗೂ ಆ ಮೂಲಕ ಆರ್ಥಿಕ ಸದೃಢತೆಯು ಈ ತಂತ್ರಜ್ಞಾನದಲ್ಲಿನ ಪ್ರಗತಿಯನ್ನು ಅವಲಂಬಿಸಿರುತ್ತದೆ. ಈ ತಂತ್ರಜ್ಞಾನದ ಮಹತ್ವವನ್ನು ಅರಿತು, ಈ ಕ್ಷೇತ್ರದಲ್ಲಿ ಶಿಕ್ಷಣ, ಸಂಶೋಧನೆಯನ್ನು ತೀವ್ರಗೊಳಿಸಿ, ಹೊಸ ಕೈಗಾರಿಕೆಗಳನ್ನು ಹುಟ್ಟು ಹಾಕಲು ಭಾರತ ಸರ್ಕಾರ ಹಲವು ಯೋಜನೆಗಳನ್ನು ಕೈಗೆತ್ತಿಕೊಂಡಿದೆ. ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆಯು 'ರಾಷ್ಟ್ರೀಯ ನ್ಯಾನೊಮಿಶನ್' ಎಂಬ ಯೋಜನೆಯಡಿಯಲ್ಲಿ ೨೦೦೭-೨೦೧೨ರವರೆಗಿನ ೫ ವರ್ಷದ ಅವಧಿಗೆ ಸಾವಿರ ಕೋಟಿ ರೂಪಾಯಿಗಳ ವೆಚ್ಚದಲ್ಲಿ, ಶಿಕ್ಷಣ ಮತ್ತು ಸಂಶೋಧನೆಯನ್ನು ಬೆಂಬಲಿಸುತ್ತಿದೆ. ಇದರಡಿಯಲ್ಲಿ ನ್ಯಾನೊ ವಿಜ್ಞಾನ ಮತ್ತು ತಂತ್ರಜ್ಞಾನದ ಸಂಸ್ಥೆಗಳನ್ನು ಸ್ಥಾಪಿಸುವ ಯೋಜನೆ ಹಾಕಿಕೊಂಡಿದೆ.

ಭಾರತ ಸರ್ಕಾರದ ಇನ್ನೊಂದು ಪ್ರಮುಖ ಇಲಾಖೆಯಾದ ಮಾಹಿತಿ ತಂತ್ರಜ್ಞಾನ ಮತ್ತು ಸಂಪರ್ಕ ಇಲಾಖೆಯು ಬೆಂಗಳೂರಿನ ಭಾರತೀಯ ವಿಜ್ಞಾನ ಸಂಸ್ಥೆ ಮತ್ತು ಮುಂಬಯಿಯ ಭಾರತೀಯ ತಂತ್ರಜ್ಞಾನ ಸಂಸ್ಥೆಗಳಲ್ಲಿ ಎರಡು ಅತ್ಯಾಧುನಿಕ ನ್ಯಾನೊ ಎಲೆಕ್ಟ್ರಾನಿಕ್ಸ್ ಕೇಂದ್ರಗಳನ್ನು ಸ್ಥಾಪಿಸಿದೆ. ಈ ಕೇಂದ್ರಗಳು ನ್ಯಾನೊ ಟೆಕ್ನಾಲಜಿಯ ಹಲವು ಕ್ಷೇತ್ರಗಳಲ್ಲಿ ಉನ್ನತ ಶಿಕ್ಷಣ ಮತ್ತು ಸಂಶೋಧನಾ ಕಾರ್ಯಗಳನ್ನು ಆರಂಭಿಸಿವೆ. ಭಾರತೀಯ ವಿಜ್ಞಾನ ಸಂಸ್ಥೆಯ ನ್ಯಾನೊಟೆಕ್ನಾಲಜಿಯ ಕೇಂದ್ರದ ಬಗ್ಗೆ ಹೆಚ್ಚಿನ ಮಾಹಿತಿಯನ್ನು www.nano.iisc.ernet.in ಎಂಬ ವೆಬ್‌ಸೈಟ್‌ನಿಂದ ಪಡೆಯಬಹುದಾಗಿದೆ.

ಕರ್ನಾಟಕ ಸರ್ಕಾರವೂ ಐ.ಟಿ. ಮತ್ತು ಬಿ.ಟಿ. ತಂತ್ರಜ್ಞಾನಗಳ ನಂತರ ಎನ್.ಟಿ. ಅಥವಾ ನ್ಯಾನೊಟೆಕ್ನಾಲಜಿ ತಂತ್ರಜ್ಞಾನ ರಾಜ್ಯದ ಕೈಗಾರಿಕಾ ಬೆಳವಣಿಗೆಯಲ್ಲಿ ಅತ್ಯಂತ ಪ್ರಮುಖ ಸ್ಥಾನವಹಿಸಲಿದೆ ಎಂಬ ಮುಂದಾಲೋಚನೆಯಿಂದ ಬೆಂಗಳೂರಿನಲ್ಲಿ 'ನ್ಯಾನೊಟೆಕ್ ಪಾರ್ಕ್' ಸ್ಥಾಪಿಸುವ ಯೋಜನೆ ಹಮ್ಮಿಕೊಂಡಿದೆ. ಈ ಮೂಲಕ ಹಲವು ಕೈಗಾರಿಕೆಗಳನ್ನು ಪ್ರೋತ್ಸಾಹಿಸುವುದು ಇದರ ಉದ್ದೇಶ.

ಹಲವು ವಿಶ್ವವಿದ್ಯಾಲಯಗಳು ನ್ಯಾನೊಟೆಕ್ನಾಲಜಿಗೆ ಸಂಬಂಧಿಸಿದ ವಿಷಯಗಳನ್ನು ಪಠ್ಯಕ್ರಮದಲ್ಲಿ ಅಳವಡಿಸಿಕೊಂಡಿವೆ. ನ್ಯಾನೊಟೆಕ್ನಾಲಜಿಯಲ್ಲಿ M.Sc. ಮತ್ತು M.Tech. ಪದವಿ ಕಾರ್ಯಕ್ರಮಗಳೂ ಸಹ ಆರಂಭಗೊಂಡಿವೆ. ಇದಲ್ಲದೆ, IBM, GM, GE ಅಂತಹ ಹಲವು ಬಹುರಾಷ್ಟ್ರೀಯ ಕಂಪನಿಗಳು ಬೆಂಗಳೂರು ಮತ್ತು ಇತರ ಕಡೆಗಳಲ್ಲಿ ಸಂಶೋಧನೆ ಮತ್ತು ಅಭಿವೃದ್ಧಿ ಕೇಂದ್ರಗಳನ್ನು ಸ್ಥಾಪಿಸಿ ಈ ಕ್ಷೇತ್ರದಲ್ಲಿ ಹೆಚ್ಚಿನ ಪ್ರಮಾಣದ ಉದ್ಯೋಗಾವಕಾಶ ಕಲ್ಪಿಸುತ್ತಿವೆ. ಹಾಗೆಯೇ ಸರಕಾರೀ ಸ್ವಾಮ್ಯದ D.R.D.O. (ರಕ್ಷಣಾ ವಿಜ್ಞಾನ ಸಂಸ್ಥೆ), ISRO (ಅಂತರಿಕ್ಷ ತಂತ್ರಜ್ಞಾನ ಸಂಸ್ಥೆ), D.A.E. (ಅಣು ತಂತ್ರಜ್ಞಾನ ಸಂಸ್ಥೆ), C.S.I.R. (ವಿಜ್ಞಾನ ಮತ್ತು ಕೈಗಾರಿಕಾ ಸಂಶೋಧನ ಸಂಸ್ಥೆ) ಪ್ರಯೋಗಾಲಯಗಳು ನ್ಯಾನೊಟೆಕ್ನಾಲಜಿಯ ಸಂಶೋಧನೆ ಮತ್ತು ಉತ್ಪನ್ನಗಳಿಗೆ ಒತ್ತು ನೀಡಿ ಉದ್ಯೋಗಾವಕಾಶ ಸೃಷ್ಟಿಸುತ್ತಿವೆ.

ಒಟ್ಟಿನಲ್ಲಿ ಹೇಳುವುದಾದರೆ ನ್ಯಾನೊಟೆಕ್ನಾಲಜಿಗೆ ಭಾರತದಲ್ಲಿ ಉಜ್ವಲ ಭವಿಷ್ಯ ಕಾದಿದೆ ಎನ್ನಬಹುದು.

**ಪ್ರೊ॥ ನವಕಾಂತ ಭಟ್**

ಅಸೋಸಿಯೇಟ್ ಪ್ರೊಫೆಸರ್, ಎಂ.ಇ.ಎಂ.ಎಸ್. ಮೈಕ್ರೋ ಎಲೆಕ್ಟ್ರಾನಿಕ್ಸ್ ಲ್ಯಾಬ್, ಡಿಪಾರ್ಟ್‌ಮೆಂಟ್ ಆಫ್ ಎಲೆಕ್ಟ್ರಿಕಲ್ ಕಮ್ಯುನಿಕೇಷನ್ ಇಂಜಿನಿಯರಿಂಗ್, ಇಂಡಿಯನ್ ಇನ್‌ಸ್ಟಿಟ್ಯೂಟ್ ಆಫ್ ಸೈನ್ಸ್, ಬೆಂಗಳೂರು - ೫೬೦ ೦೧೨

# ಗಾಳಿಗೆ ತೂರಿದ ಬೂದಿ



**ಹೊ**ರನೋಟಕ್ಕೆ ಆ ಹುಡುಗನ ಮುಖದಲ್ಲೊಂದು ಬಗೆಯ ಕಪಟ ಸೌಮ್ಯವಿದ್ದು ಅದು ಅವನ ಕೇಡಿಗತನವನ್ನು ಸ್ಪಷ್ಟವಾಗಿ ಸೂಚಿಸುತ್ತಿತ್ತು. ಸುಮಾರು ಅರ್ಧಗಂಟೆಯಿಂದ ಅವನು ಅಹಿತಕರವಾದ ಏನನ್ನೋ ಹೇಳಲು ತಲೆತಗ್ಗಿಸಿ ನೆಲವನ್ನೇ ನೋಡುತ್ತಾ ಸಾಧ್ಯವಾಗದೇ ಒದ್ದಾಡುತ್ತಿದ್ದಾನೆ. ಹೊಲದ ನಡುವಣ ಮನೆಯ ಮುಂದೆ ಬಿದ್ದಿದ್ದ ಮರದ ದಿಮ್ಮಿಯ ತುದಿಯಲ್ಲಿ ಕೂತು ತನ್ನ ಕೊಳಕಲು ಪಾದರಕ್ಷೆಗಳಿಂದ ನೆಲವನ್ನು ಸುಮ್ಮನೆ ಕೆರೆಯುತ್ತಿರುವವನು. ಕಪ್ಪುಬಣ್ಣಕ್ಕೆ ತಿರುಗಿದ ಅವನ ಕೆಂಪು ಟೋಪಿ ಮಣಕು ಹಿಡಿದು ಗಬ್ಬಾಗಿದೆ. ಮನೆಯ ಯಜಮಾನ ಜೂನ್‌ಗೆ ಇವನು ಚಿರಪರಿಚಿತ ವ್ಯಕ್ತಿ. ಜೂನ್‌ನ ಹಳೆಯ ಗೆಳೆಯ ಸೈಮಾನ್ ಅರಿವಾಲೊ ಮತ್ತು ಅವನ ಹೆಂಡತಿ ಲಾರಾ – ಇವರ ಮಗ ಈ ಹುಡುಗ, ಅರಿವಾಲೊ. ಚಿಕ್ಕಂದಿನಿಂದಲೇ ಅರಿವಾಲೊ ಎಂಥ ಕೆಟ್ಟ ಹುಡುಗ ಎಂಬುದು ಊರಿಗೆಲ್ಲಾ ತಿಳಿದಿತ್ತು – ಆದರೆ ತನ್ನ ತಂದೆಯ ನೆಂಟರು-ಸ್ನೇಹಿತರು ಪರಿಚಯಸ್ಥರ ವಿಷಯದಲ್ಲಿ ಇವನು ಇಷ್ಟು ಹೊಲಸಾಗಿ ನಡೆದುಕೊಳ್ಳುತ್ತಾನೆಂದು ಯಾರೂ ನಿರೀಕ್ಷಿಸಿರಲಿಲ್ಲ. ಜೂನ್ ಮಾರ್ಟಿನೆಸ್ ಸಹ ಈ ಹುಡುಗನ ಬಗ್ಗೆ ಮೋಸ ಹೋಗಿದ್ದ. ಆದರೆ ಈಗ...

''ಈ ಕೂಡಲೇ ಮನೆ ಖಾಲಿಮಾಡಿ, ಇಲ್ಲಿಂದ ಹೊರಟುಹೋಗಿ... ಇಲ್ಲದಿದ್ದರೆ ನಿಮ್ಮ ಪರಿಣಾಮ ನೆಟ್ಟಗಾಗಲಿಕ್ಕಿಲ್ಲ...'' ... ತಲೆ ಮೇಲಕ್ಕೆತ್ತದೆ ಅದೇ ಮಾತನ್ನು ಹುಡುಗ ಎರಡನೇ ಸಲ ಹೇಳುತ್ತಾನೆ. ಜೂನ್ ಮಾರ್ಟಿನೆಸ್ ಮೌನ. ಆಕಾಶದ ತುಂಬಾ ಕರಿಯ ಮೋಡಗಳು, ಕೆಟ್ಟ ಸೆಕೆ, ಬಿಸಿ ಗಾಳಿ ಬೀಸುತ್ತಿದ್ದು ಉಸಿರುಕಟ್ಟುವಂಥ ಸೆಕೆ. ಜೂನ್ ಮಾರ್ಟಿನೆಸ್ ಕತ್ತೆತ್ತಿ ಕಣಿವೆಯ ಉದ್ದಕ್ಕೂ ಹರಡಿದ ಹಸಿರು ಹಳದಿ ಪೈರು ಪಚ್ಚೆಯ ಹೊಲವನ್ನು ಕಾತರನಾಗಿ ವೀಕ್ಷಿಸುತ್ತಿದ್ದಾನೆ. ತಾನು ಬೆವರು ಸುರಿಸಿ ತಿಂಗಳಾನುಗಟ್ಟಲೆ ಕೃಷಿ ಮಾಡಿ ಬೆಳೆಸಿದ ಪೈರು ಈಗ ಕೊಯ್ಲಿಗೆ ಬಂದಿದೆ. ಮತ್ತೆ ಮತ್ತೆ ಸುತ್ತ ತಿರುಗಿ ನೋಡಿ ಅವನ ಕಣ್ಣು ತುಂಬಿ ಬರುತ್ತದೆ. ಇನ್ನು ಒಂದೆರಡು ವರ್ಷದ ಮಟ್ಟಿಗಾದರೂ ತನ್ನ ಪುಟ್ಟ ಸಂಸಾರದ ಹೊಟ್ಟೆಯ ಪಾಡಿಗೆ ಮೋಸವಿಲ್ಲ...

''ಯಾರದು? ಯಾರು ಬಂದಿದ್ದಾರೆ?'' ಅಡಿಗೆಮನೆಯಿಂದ ಜೂನ್ ಮಾರ್ಟಿನೆಸ್‌ನ ಹೆಂಡತಿ ಕಾರ್ಮೆನ್‌ಳ ಧ್ವನಿ. ಅವನು ಸುಮ್ಮನಿದ್ದ. ಹೊರಗಡೆ ಮರದ ದಿಮ್ಮಿಯ ಮೇಲೆ ಅರಿವಾಲೊ ಇನ್ನೂ ಹಾಗೇ ಕುಕ್ಕರಿಸಿದ್ದಾನೆ. 'ನೋಡಿ, ಮತ್ತೆ ಎಚ್ಚರಿಕೆ ಕೊಡುತ್ತಿದ್ದೇನೆ... ಕೂಡಲೇ ಇಲ್ಲಿಂದ ಹೊರಟುಹೋಗಿ...'

''ಯಾರು ಬಂದಿರೋದು..?'' ಎನ್ನುತ್ತಾ ಕಾರ್ಮೆನ್ ಹೊರಕ್ಕೆ ಬಂದಳು. ಅವಳ ಕಂಕುಳಲ್ಲಿ ೬-೭ ತಿಂಗಳಿನ ಮಗು...

---

ಜೂನ್ ಮಾರ್ಟಿನೆಸ್‌ಗೆ ಈಗ ವಾಸ್ತವಿಕ ಪರಿಸ್ಥಿತಿ ಚೆನ್ನಾಗಿ ಅರಿವಾಗುತ್ತಿದೆ. ಸೈಮಾನ್ ಅರಿವಾಲೊನ ಮಗ ಅವತ್ತು ಬಂದು ಬೆದರಿಕೆ ಹಾಕಿದುದು ಸತ್ಯ ಎನಿಸುತ್ತಿದೆ. ಅವನ ತಲೆತುಂಬಾ ನೋವು, ಗೊಂದಲ, ಅಸ್ಪಷ್ಟ ಭಯ, ಕೋಪ ಎಲ್ಲವೂ ಸೇರಿ ಗಲಿಬಿಲಿಗೊಂಡು ಅಸಹಾಯಕನಾಗಿದ್ದಾನೆ. ತನ್ನ ಆಪ್ತ ಸ್ನೇಹಿತನ ಮಗ – ಈ ಅರಿವಾಲೊ ಏಕೆ ಇಷ್ಟು ದುಷ್ಟನಾದ? ತಾನು ಎತ್ತಿ ಆಡಿಸಿ ಪ್ರೀತಿಯಿಂದ ಕಾಣುತ್ತಿದ್ದ ಹುಡುಗ ಈಗ ತನ್ನ ಬದ್ಧ ಶತ್ರುವಾಗಿದ್ದಾನೆ! ಯೋಚನೆ ಮಾಡಿದಷ್ಟೂ ತಾನು ಅವ್ಯಕ್ತ ಅಪಾಯದ ಅಂಚಿಗೆ ಜಾರುತ್ತಿರುವೆನೇ?... ತಿಳಿಯದು!

---

**ಎಚ್. ಕೆ. ರಾಮಚಂದ್ರಮೂರ್ತಿ**

ಅರಿವಾಲೊ ತನ್ನ ಕರ್ತವ್ಯ ಮುಗಿಯಿತೋ ಎನ್ನುವ ಹಾಗೆ ಎದ್ದು ನಿಂತು ಕೈ ಕೊಡವಿದ. ಕಾರ್ಮೆನ್‌ಳನ್ನು ನೋಡಿ, ''ನಮಸ್ಕಾರ, ಚಿಕ್ಕಮ್ಮ... ಚೆನ್ನಾಗಿದ್ದೀರಾ ?'' ಎಂದ. ಕಾರ್ಮೆನ್‌ಳ ಸೊಂಟದಲ್ಲಿದ್ದ ಮಗು ಅವಳ ಕೂದಲು ಎಳೆದು 'ಗೊಜ ಗೊಜ' ಎನ್ನುತ್ತಿತ್ತು.

ಅರಿವಾಲೊಗೆ ಕರುಳು ಚುರುಕ್ ಎಂದಿತು... ಕಸಿವಿಸಿಯಿಂದ, ''ಸರಿ... ನಾನು ಇನ್ನು ಬರ್ತೇನೆ'' ಎಂದು ಅಲ್ಲಿಂದ ಕಾಲ್ತೆಗೆಯಲು ಸಿದ್ಧನಾದ. ಕಾರ್ಮೆನ್ ಮೌನದಿಂದ ಗಂಡನತ್ತ ಪ್ರಶ್ನಾರ್ಥಕವಾಗಿ ನೋಡಿದಳು... ಅರಿವಾಲೊ ಕೊಳಕು ಟೋಪಿಯನ್ನು ಸರಿಮಾಡಿಕೊಳ್ಳುತ್ತಾ ಮನೆಯ ಗೇಟಿನತ್ತ ಹೊರಟ. ಎಂದೂ ಎಣ್ಣೆಕಾಣದ ಗೇಟು 'ಕಿರ್‍ರ್ರೋ' ಎಂದಾಗ ಅವನು ಹೊರಕ್ಕೆ ನಡೆದಿದ್ದ.

ಈಗ ಜೂನ್ ಮಾರ್ಟಿನೆಸ್ ಗಲಿಬಿಲಿಯಲ್ಲಿದ್ದಾನೆ. ಅವನಿಗೆ ಏನೊಂದೂ ಅರ್ಥ ವಾಗುತ್ತಿಲ್ಲ. ತಾನು-ತನ್ನ ಸಂಸಾರ ಆ ತನ್ನ ಹೊಲವನ್ನು ಬಿಟ್ಟು ಹೊರಟು ಹೋಗಬೇಕಂತೆ ! ಯಾಕೆ ? ಏನು ? ಅವನಿಗೇನೂ ತಿಳಿಯದು. ಅರಿವಾಲೊ ಸುಮಾರು ೧ ಗಂಟೆ ಕಾಲ ಅವನಿಗೆ ಏನೇನೋ ವಿವರಣೆ ಕೊಟ್ಟು ಸಮಜಾಯಿಷಿ ಮಾಡಲೆತ್ನಿಸಿ ಸೋತಿದ್ದ... ಅವನ ವಿವರಣೆಗಳೂ ಸಹ ಗೊಂದಲಮಯವಾಗಿ ಗೋಜಲು ಗೋಜಲಾಗಿದ್ದವು.

ಸರ್ಕಾರ, ಪೊಲೀಸರು, ದೇಶದ ರಾಜಕೀಯದ ಹೊಲಸು ಒಂದೂ ಅವನಿಗೆ ತಿಳಿಯದು. ತನ್ನ ಆಪ್ತ ಸ್ನೇಹಿತನ ಮಗ, ಈ ಕೇಡಿಗ ಅರಿವಾಲೋ ಪೊಲೀಸರ ಜತೆ ಶಾಮೀಲಾಗಿದ್ದಾನೆಂಬುದು ಅವನಿಗೆ ತಿಳಿದಿತ್ತು... ಸರ್ಕಾರದ ಹೊಲಸು ದಬ್ಬಾಳಿಕೆಯ ಚಟುವಟಿಕೆಗಳಲ್ಲಿ ಇವನದೂ ಸಹಕಾರವಿತ್ತು...

''ನೀಚ ಬಡ್ಡಿಮಗ... ನಾವು ಈ ಕ್ಷಣ ಈ ಜಾಗ ಖಾಲಿ ಮಾಡಬೇಕಂತೆ... ಇದು ಇವರಪ್ಪನ ಆಸ್ತಿಯೇನಲ್ಲ... ಹೊರಟುಹೋಗದಿದ್ದರೆ ಪೊಲೀಸ್ ಮತ್ತು ಸರ್ಕಾರಿ ಏಜಂಟರುಗಳು ಬಂದು ನಮ್ಮನ್ನ ಆಚೆಗೆ ದಬ್ಬುತ್ತಾರಂತೆ !!

''ಅವರು ನಮ್ಮನ್ನ ಕೊಂದರೂ ಚಿಂತೆಯಿಲ್ಲ... ನಾನು ಇಲ್ಲಿಂದ ಕದಲೋದಿಲ್ಲ... ತಿಳಿಯಲಿ !''

''ಹೌದು... ನಾನು ಅದನ್ನೇ ಹೇಳಿದೆ ಅವನಿಗೆ...'' ಕಾರ್ಮೆನ್ ದನಿಗೂಡಿಸಿದಳು. ಮಾರ್ಟಿನೆಸ್‌ನ ಮುಖ ವೇದನೆಯಿಂದ ತುಂಬಿ ಗಂಟಲು ಕಟ್ಟಿತ್ತು.

ಕಾರ್ಮೆನ್ ಮಗುವನ್ನೆತ್ತಿಕೊಂಡು ಒಳಕ್ಕೆ ನಡೆದಳು... ಮಾರ್ಟಿನೆಸ್ ಕಿಂಕರ್ತವ್ಯ ವಿಮೂಢನಾಗಿ ಮನೆಯ ಗೇಟಿನ ಬಳಿ ಮರದಂತೆ ನಿಂತಿದ್ದ.

ಅದು ಮುಖ್ಯವಾಗಿ ಅತ್ಯಂತ ರಿಕ್ತ ಸ್ಥಿತಿಯ, ಕೇವಲ ಬಡಬಗ್ಗರೇ ವಾಸಿಸುವ ಪ್ರದೇಶ - ಅದರ ತುಂಬಾ ಜೋಪಡಿಗಳು, ತಗಡಿನ ಷೆಡ್ಡುಗಳು; ಮಣ್ಣಿನ ಗೋಡೆಯ ಹೆಂಚಿನ ಮನೆಗಳು ತೀರಾ ವಿರಳ. ಸರ್ಕಾರಕ್ಕಾದರೂ ಬಡವ ಮಾರ್ಟಿನೆಸ್‌ನ ಈ ಮನೆ - ಹೊಲ ಏಕಾದರೂ ಬೇಕಾಗಿದೆಯೋ ಅವನಿಗೆ ತಿಳಿಯದು... ಒಂದು ಎಕರೆಯಷ್ಟು ಭೂಮಿಯಲ್ಲಿ ಒಂದಿಷ್ಟು ಆಲೂಗಡ್ಡೆ ಗಿಡಗಳು, ಮುಸುಕಿನ ಜೋಳದ ನಾಲ್ಕೆಂಟು ಸಾಲುಗಳು, ಸ್ವಲ್ಪ ಭಾಗದಲ್ಲಿ ತರಕಾರಿ ಗಿಡಬಳ್ಳಿಗಳು... ಅದನ್ನೇ ಅವನು ಅಸಾಧ್ಯ ಮೆಹನತ್ತಿನಿಂದ ಉತ್ತುಬಿತ್ತು, ಗೊಬ್ಬರ ಗೋಡು ತುಂಬಿಸಿ ತನ್ನ ಸಂಸಾರಕ್ಕಾಗುವಷ್ಟು ಆಹಾರ ಧಾನ್ಯ ಬೆಳೆಸಿದ್ದ...

ಅವನ ಪುಣ್ಯವಶಾತ್ ಅನತಿದೂರದಲ್ಲಿ ಸಣ್ಣಗೆ ಹರಿಯುವ ಝರಿ ಅವನಿಗೆ ಬೇಕಾಗುವಷ್ಟು ನೀರು ಒದಗಿಸುತ್ತಿತ್ತು. ಹಳೆಯ ಪೈಪುಗಳನ್ನು ಜೋಡಿಸಿ ಮನೆಯವರೆಗೂ ನೀರು ಬರುಂತೆ ಅನುಕೂಲ ಮಾಡಿಕೊಂಡಿದ್ದ. ಮನೆ-ಹೊಲದ ನಿರ್ವಹಣೆಗೆ ಅವನು ಮಾಡಿಕೊಂಡಿದ್ದ ಸಾಲ ಮಾತ್ರ ಇನ್ನೂ ಹಾಗೆಯೇ ಉಳಿದಿತ್ತು.

ಈಗ ಒಮ್ಮೆಲೇ ಸರ್ಕಾರದ ವತಿಯಿಂದ ಅವನನ್ನೂ ಅವನ ಸಂಸಾರವನ್ನೂ ತುರ್ತಾಗಿ ಅಲ್ಲಿಂದ ಎತ್ತಂಗಡಿ ಮಾಡುವ ಒತ್ತಾಯ ಬಂದಿತ್ತು. ದಿನದಿನಕ್ಕೂ ಪರಿಸ್ಥಿತಿ ಗಂಭೀರವಾಗುತ್ತಿತ್ತು. ಸಣ್ಣ ಪುಟ್ಟ ಅಧಿಕಾರಿಗಳು ಆಗಾಗ ಬಡ ಕುಟುಂಬಗಳ ಮೇಲೆ ಎರಗಿ ಹಿಂಸೆ ಮಾಡುತ್ತಿದ್ದರು.

ಎಷ್ಟು ಯೋಚಿಸಿದರೂ ಜೂನ್ ಮಾರ್ಟಿನೆಸ್‌ಗೆ ಈ ಒಗಟು ಬಿಡಿಸಲು ಸಾಧ್ಯ ವಾಗುತ್ತಿಲ್ಲ. ಅಧಿಕಾರಿವರ್ಗಕ್ಕೆ ತನ್ನಂಥ ಬಡಪಾಯಿ ಮೇಲೆ ಏಕಿಷ್ಟು ಉಗ್ರಕೋಪ, ದ್ವೇಷ ? ಎಲ್ಲರಂತೆ ಅವನೂ ಹೋಗಿ ಚುನಾವಣೆ ಸಮಯದಲ್ಲಿ ಮತ ಚಲಾಯಿಸಿ ಬಂದಿದ್ದ... ಆದರೆ... ಅವನು ಪ್ರಗತಿಪರ (ವಾಮ) ಪಕ್ಷದ ಉಮೇದುವಾರನಿಗೆ ಮತಹಾಕಿದ್ದ, ನಿಜ. ಆದರೆ ಅದು ಕೇವಲ ಅವನಿಗೆ ಮಾತ್ರ ಗೊತ್ತಿದ್ದ ರಹಸ್ಯ... ಅದು

ಬಯಲಾದುದಾದರೂ ಹೇಗೆ ? ಇತ್ಯಾದಿ ಇತ್ಯಾದಿ ಎಷ್ಟು ತಲೆ ಕೆರೆದುಕೊಂಡರೂ ಬಗೆಹರಿಯಲಿಲ್ಲ – ಆ ಬಗ್ಗೆ ಅರಿವಾಲೊ ಸೂಚ್ಯವಾಗಿ ಹೇಳಿದನೇ ವಿನಾ ನೇರವಾಗಿ ರಾಜಕೀಯದ ಸುದ್ದಿ ಎತ್ತಿರಲಿಲ್ಲ.

ಇತ್ತೀಚೆಗೆ ಆ ಪ್ರದೇಶದಲ್ಲಿ ಪೊಲೀಸರ ಪುಂಡಾಟಿಕೆ ವ್ಯಾಪಕವಾಗಿ ಹರಡುತ್ತಿದ್ದು, ಕೆಲವು ಪ್ಯಾದೆಗಳು ಕಂಕುಳಲ್ಲಿ ಲಾಠಿ ಮತ್ತು ಅದರ ಜತೆ ಚರ್ಮದ ಬಾರುಕೋಲನ್ನೂ ಹಿಡಿದು ಅಡ್ಡಾಡುತ್ತಿದ್ದಾರೆ!

ಇತ್ತೀಚಿನ ಘಟನೆಯೊಂದು ಅವನನ್ನು ಅಧೀರನನ್ನಾಗಿಸುತ್ತಿದೆ. ಎಂದಿನಂತೆ ಜೂನ್ ಕಿರಾಣಿ ಅಂಗಡಿಗೆ ಎಣ್ಣೆತರಲು ಹೋದಾಗ ಅಂಗಡಿ ಯಜಮಾನ ಲಿನಾರಿಸ್ ಖಡಾಖಂಡಿತವಾಗಿ ''ಎಣ್ಣೆ ಸ್ಟಾಕ್ ಇಲ್ಲ ಕಣಯ್ಯ'' ಅಂದ. ಅದು ಸುಳ್ಳು. ದೊಡ್ಡ ಡ್ರಮ್‌ನಿಂದ ಎಣ್ಣೆಯನ್ನು ಸೀಸೆಗಳಿಗೆ ಬಗ್ಗಿಸಿ ಬಾಕಿ ಗಿರಾಕಿಗಳಿಗೆ ಕೊಡುತ್ತಿದ್ದ... ಜೂನ್‌ಗೆ ವಿಪರೀತ ಸಿಟ್ಟುಬಂತು – ಅದಕ್ಕಿಂತ ಹೆಚ್ಚಾಗಿ ಗಾಬರಿ ಆಯಿತು. ಇವ ಏಕೆ ಹೀಗೆ ಮಾಡುತ್ತಿದ್ದಾನೆ ? ತಾನೇನೂ ಸಾಲ ಕೇಳುತ್ತಿಲ್ಲ – ನಗದು ಹಣ ಕೊಟ್ಟು ವ್ಯಾಪಾರ ಮಾಡಲು ಬಂದಿದ್ದಾನೆ... ಆದರೆ ತನಗೆ ''ಎಣ್ಣೆ ಇಲ್ಲ'' ಅನ್ನುತ್ತಿದ್ದಾನಲ್ಲಾ???




ಜೂನ್ ಮೌನವಾಗಿ ಹಿಂತಿರುಗಿದ. ಯಾಕೆಂದರೆ ಅಂಗಡಿಯವ ಮುಖ ಗಂಟಿಕ್ಕಿಕೊಂಡು ಇವನತ್ತ ತಿರುಗಿ ಸಹ ನೋಡದೆ ಒರಟಾಗಿ ಅವನನ್ನು ತೊಲಗಿಸಿದ್ದ. ಮಾರ್ಕೆಟ್ ಸುತ್ತಲೂ ಪೊಲೀಸ್ ಪ್ಯಾದೆಗಳು ಲಾಠಿ ಹಿಡಿದು ಅಡ್ಡಾಡುತ್ತಿದ್ದರು. ರಸ್ತೆಯಲ್ಲಿ ಜನರ ಸಂಚಾರ ತೀರಾ ವಿರಳವಾಗಿದೆ. ಜೂನ್‌ಗೆ ಮತ್ತಷ್ಟು ಭಯವಾಯಿತು.

ಏನಾಗುತ್ತಿದೆ ? ತಿಳಿಯದು. ಆದರೆ ಅವನಿಗೆ ಮನೆಗೆ ಬೇಕಾದ ಕೆಲ ವಸ್ತುಗಳು ಅಗತ್ಯವಾಗಿ ಬೇಕಾಗಿದ್ದವು... ಮಾರ್ಕೆಟ್ ಒಳಗಿನ ದೊಡ್ಡ ಅಂಗಡಿಗೆ ಹೋದ. ಅಂಗಡಿಯಲ್ಲಿದ್ದ ಬೆನವ್ಯೆಡಿಸ್ ಇವನನ್ನು ನೋಡಿ ಮುಗುಳ್ನಗೆ ಸೂಚಿಸಿದ. ಜೂನ್‌ಗೆ ಸ್ವಲ್ಪ ಧೈರ್ಯ ಬಂದಿತು. ಬೆನವ್ಯೆಡಿಸ್, ''ಮನೆಯಿಂದ ನೀನು ಇಲ್ಲಿಗೆ ಬರುವಾಗ ಏನೂ ತೊಂದರೆ ಆಗಲಿಲ್ಲವಾ ?'' ಎಂದ. ಜೂನ್ ಏನೋ ಹೇಳಲು ಹೊರಟಾಗ ಒಬ್ಬ ಪೊಲೀಸ್ ಪ್ಯಾದೆ ಹತ್ತಿರದಲ್ಲೇ ಸುಳಿದಾಡುತ್ತ ಬಂದ. ಬೆನವ್ಯೆಡಿಸ್ ಕಣ್ಸನ್ನೆ ಮಾಡಿ ''ಸುಮ್ಮನಿರು'' ಎಂದು ಸೂಚಿಸಿದ. ಸಮವಸ್ತ್ರ ಧರಿಸಿದ್ದ ಅರಿವಾಲೊ ಪೊಲೀಸಿನವನ ಹಿಂದೆಯೇ ಬಂದ.

ಪೊಲೀಸ್ ಲಾಠಿಯಿಂದ ಅಂಗಡಿಯ ಕೌಂಟರ್ ಮೇಲೆ ಬಡಿದು 'ಹೂಂ'ಕಾರ ಮಾಡಿದ. ಬೆನವ್ಯೆಡಿಸ್‌ನ ಮೋರೆ ಕಪ್ಪಿಟ್ಟಿತು. ''ಏನಯ್ಯಾ ಯಜಮಾನ – ಏನು ನಡೀತಿದೆ... ಹಾಂ ?'' ಎಂದು ಬೆದರಿಸುವ ಧ್ವನಿಯಲ್ಲಿ ಕೇಳಿದ.

ಬೆನವ್ಯೆಡಿಸ್, ಬೇಗಬೇಗನೆ, ಜೂನ್, ವ್ಯಾಪಾರಮಾಡಿದ್ದ ಪದಾರ್ಥಗಳನ್ನು ಪ್ಯಾಕ್ ಮಾಡಿದ, ಅರಿವಾಲೊಗೆ ಜೂನ್ ಯಾರೆಂದು ಗೊತ್ತಿದ್ದರೂ ಏನೂ ತಿಳಿಯದವನಂತಿದ್ದ. ಪೊಲೀಸಿನವ ಜೂನ್‌ನತ್ತ ತಿರುಗಿ, ''ಓಹೋ... ನೀನೋ ? ಸರ್ಕಾರದ ವಿರುದ್ಧ ದಂಗೆ ಏಳುತ್ತಿರೋರ ಜತೆ ನೀನೂ ಸೇರಿದ್ದೀಯೋ ? ಬುರುಡೆ ಒಡೆದು ಬಿಡ್ತೀನಿ ತಿಳೀತಾ ? ಹುಷಾರ್'' – ಎಂದಾಗ ಜೂನ್‌ನ ಎದೆಬಡಿತ ಹೆಚ್ಚಾಗಿ ಅವನ ಮುಖದಲ್ಲಿ ಬೆವರು ಧಾರಾಕಾರವಾಗಿ ಹರಿಯಿತು... ಪೊಲೀಸಿನವನ ಕೆನ್ನೆಗೆ ಬಲವಾಗಿ ಅಪ್ಪಳಿಸಬೇಕೆನಿಸಿದರೂ ಉಪಾಯವಿಲ್ಲದೆ ಸುಮ್ಮನಿದ್ದ...

ಅರಿವಾಲೊ ಪೊಲೀಸಿನವನ ಹೆಗಲು ಮುಟ್ಟಿ ''ಹೌದು... ಇವನೂ ಆ ದಂಗೆಕೋರರ ಪಟಾಲಮ್‌ಗೆ ಸೇರಿದವನೇ, ಇಲ್ಲೆ ಸಮೀಪದಲ್ಲಿದೆ ಇವನ ಮನೆ...'' ಅಂದ.

ಜೂನ್ ಕಲ್ಲುಕಂಬದಂತೆ ನಿಂತಿದ್ದ.

ಪೊಲೀಸಿನವನು ಚಾಟಿಯನ್ನು 'ಸುಯ್' ಎಂದು ಬೀಸಿ ತನ್ನ ಖಾಕಿ ಷರಾಯಿಗೆ ಬಡಿದುಕೊಂಡು, ''ಹಾಂ... ಹಾಂ... ಹೌದಾ ?'' ಎಂದು ಅಬ್ಬರಿಸಿದ. ಅರಿವಾಲೊ, ''ಹಾಗೇನಿಲ್ಲ... ಇವನು ಪಾಪದವನು... ಇವನು ಯಾವ ಕ್ರಾಂತಿ-ದಂಗೆಗೂ ಸೇರಿಲ್ಲ... ಛೆ ಛೆ'' ಎಂದ.

''ಇರಲಿ, ಇರಲಿ... ಆದರೆ ಈ ಬಡ್ಡಿ ಮಕ್ಕಳೆಲ್ಲಾ... ಒಳಗೇ ಪಿತೂರಿ ನಡೆಸ್ತಾರೆ... ಹುಷಾರಾಗಿರಬೇಕು ನಾವು!'' ಎಂದು ಬೆನವ್ಯೆಡಿಸ್ ಕಡೆ ತಿರುಗಿ ''ನೋಡಯ್ಯಾ... ನಿನ್ನ ಅಂಗಡಿ ತಾವ ಇಂಥ ಕಳ್ಳರು ಬರಕೂಡದು... ನೀನು ಇಂಥವರಿಗೆಲ್ಲಾ ಅವಕಾಶ ಕೊಡಕೂಡದು... ಇರಲಿ... ಬರ್ತೀವಿ ನಾವು'' ಎಂದ.

ಇಬ್ಬರೂ ಅಲ್ಲಿಂದ ಕಾಲ್ತೆಗೆದರು.

ಜೂನ್ ಮಾರ್ಟಿನೆಸ್‌ಗೆ ಈಗ ವಾಸ್ತವಿಕ ಪರಿಸ್ಥಿತಿ ಚೆನ್ನಾಗಿ ಅರಿವಾಗುತ್ತಿದೆ. ಸೈಮಾನ್ ಅರಿವಾಲೊನ ಮಗ ಅವತ್ತು ಬಂದು ಬೆದರಿಕೆ ಹಾಕಿದುದು ಸತ್ಯ ಎನಿಸುತ್ತಿದೆ. ಅವನ ತಲೆತುಂಬಾ ನೋವು, ಗೊಂದಲ, ಅಸ್ಪಷ್ಟ ಭಯ, ಕೋಪ ಎಲ್ಲವೂ ಸೇರಿ ಗಲಿಬಿಲಿಗೊಂಡು ಅಸಹಾಯಕನಾಗಿದ್ದಾನೆ. ತನ್ನ ಆಪ್ತ ಸ್ನೇಹಿತನ ಮಗ – ಈ ಅರಿವಾಲೊ ಏಕೆ ಇಷ್ಟು ದುಷ್ಟನಾದ ? ತಾನು ಎತ್ತಿ ಆಡಿಸಿ ಪ್ರೀತಿಯಿಂದ ಕಾಣುತ್ತಿದ್ದ ಹುಡುಗ ಈಗ ತನ್ನ ಬದ್ಧ ಶತ್ರುವಾಗಿದ್ದಾನೆ! ಯೋಚನೆ ಮಾಡಿದಷ್ಟೂ ತಾನು ಅವ್ಯಕ್ತ ಅಪಾಯದ ಅಂಚಿಗೆ ಜಾರುತ್ತಿರುವೆನೇ ?... ತಿಳಿಯದು!

ಗುಂಡಿನ ಶಬ್ದ ಕೇಳಿ ಕಾರ್ಮೆನ್‌ಳಿಗೆ ಎಚ್ಚರವಾಯಿತು. ಮಗು ಎದ್ದು ಅಳುತ್ತಿದೆ... ಜೂನ್ ಎದ್ದು ಹೊರಕ್ಕೆ ಬಂದ... ಬೆಳಕು ಹರಿಯುತ್ತಿದೆ... ಮತ್ತೆ ಮತ್ತೆ ಗುಂಡಿನ ಶಬ್ದ ಅನುರಣಿಸುತ್ತಿದೆ, ಹತ್ತಿರ, ಹತ್ತಿರಕ್ಕೆ ಬರುತ್ತಿದೆ... ಬೆಳ್ಳಂ ಬೆಳಕು – ಆಕಾಶ ನಿರ್ಮಲವಾಗಿದೆ... ಇವತ್ತು ಹವಾ ತುಂಬಾ ಸೊಗಸಾಗಿದೆ. ಪರಿಸ್ಥಿತಿಯ ಅರಿವಿಲ್ಲದೆ ಜೂನ್ ಆಗಸವನ್ನು ಉಲ್ಲಾಸದಿಂದ ದಿಟ್ಟಿಸಿ ನೋಡುತ್ತಿದ್ದಾನೆ...

ಗೇಟು 'ಕಿರ್ರ್' ಎಂದಿತು. ಇಬ್ಬರು ಆಗಂತುಕರು ಒಳಕ್ಕೆ ಬಂದರು. ಅವರು ಯಾರೆಂಬುದು ಜೂನ್‌ಗೆ ತಕ್ಷಣ ಗೊತ್ತಾಯಿತು. ಒಬ್ಬ ಅರಿವಾಲೊ, ಇನ್ನೊಬ್ಬ ಅವತ್ತು ಬೆನವ್ಯೆಡಿಸ್ ಸ್ಟೋರ್ಸ್ ಬಳಿ ಚಾಟಿ ಹಿಡಿದು ನಿಂತಿದ್ದ ಪೊಲೀಸ್ ಪ್ಯಾದೆ... ಹಾಗಾದರೆ ಅರಿವಾಲೊನ 'ವಾರ್ನಿಂಗ್' ನಿಜವಾಗುತ್ತಿದೆ! ಅವನು ಬಂದುಹೋಗಿ ೧೨ ದಿನಗಳಾಗಿದ್ದವು. ಎಲ್ಲವೂ ಅವನು ಹೇಳಿದಂತೆ ನಡೆಯುತ್ತಿದೆ! ''ಇನ್ನೊಂದು ವಾರದಲ್ಲಿ ನೀನು ಜಾಗ ಖಾಲಿ ಮಾಡಬೇಕು... ಇಲ್ಲದಿದ್ದರೆ ನಿನ್ನ ಗತಿ... ತಿಳೀತಾ ?'' ಈಗ ಈ ಹಾಳಾದವ ಪೊಲೀಸರನ್ನು ಕಟ್ಟಿಕೊಂಡು ಬಂದಿದ್ದಾನೆ... ಇನ್ನೇನು ಗತಿ ?




'ಹೊಸತು' ಸಮಾಲೋಚಕ ಮಂಡಲಿಯ ಸದಸ್ಯರು ಹಾಗೂ 'ಕರ್ನಾಟಕ ಕಲಾದರ್ಶನ' ಕೃತಿಯ ಸಂಪಾದಕರಲ್ಲೊಬ್ಬರೂ ಆದ ಡಾ॥ ವಿಜಯಾ ಅವರನ್ನು ಬೆಂಗಳೂರಿನಲ್ಲಿ ಇತ್ತೀಚೆಗೆ ಲೋಕ ಶಿಕ್ಷಣ ಟ್ರಸ್ಟ್‌ನ ವತಿಯಿಂದ ದಿ॥ ಹಾರನಹಳ್ಳಿ ರಾಮಸ್ವಾಮಿ ಲೋಕಶಿಕ್ಷಣ ಸಮಾಜ ಸೇವಾ ಪ್ರಶಸ್ತಿ ನೀಡಿ ಸನ್ಮಾನಿಸಲಾಯಿತು. ಕರ್ನಾಟಕದ ರಾಜ್ಯಪಾಲರಾದ ಮಾನ್ಯ ಶ್ರೀ ಹಂಸರಾಜ್ ಭಾರದ್ವಾಜ್ ಪ್ರಶಸ್ತಿ ಪ್ರದಾನ ಮಾಡಿದರು. ಮುಖ್ಯಮಂತ್ರಿ ಶ್ರೀ ಯಡಿಯೂರಪ್ಪನವರು ಅಧ್ಯಕ್ಷತೆ ವಹಿಸಿದ್ದರು, ಸಮಾರಂಭದಲ್ಲಿ ಅಪಾರ ಸಂಖ್ಯೆಯ ಅಭಿಮಾನಿಗಳು ಉಪಸ್ಥಿತರಿದ್ದರು.

ಪೊಲೀಸಿನವ ಇನ್ನೊಮ್ಮೆ ಗಾಳಿಯಲ್ಲಿ ಗುಂಡು ಹಾರಿಸಿದ... ಜೂನ್ ಬಳಿಗೆ ಬಂದು ''ಹೇಗಿದೆ ಹೊಡೆತ ?''... ಹುಬ್ಬು ಹಾರಿಸುತ್ತಾ, ''ಲವಡಿ ಮಗನೇ, ನಾಳೆ ಇಷ್ಟು ಹೊತ್ತಿಗೆ ನೀನು ಇಲ್ಲಿಂದ ತೊಲಗದಿದ್ದರೆ ಇನ್ನೂ ಗುಂಡಿನ ಶಬ್ದ ಕೇಳುವೆಯಂತೆ !'' ಮತ್ತೆ ಪಿಸ್ತೂಲನ್ನು ಗುರಿಯಿಟ್ಟು ಸೊಂಪಾಗಿ ಬೆಳೆದ ಜೋಳದ ಗಿಡಗಳತ್ತ ಹೊಡೆದ. ಜೂನ್-ಕಾರ್ಮೆನ್ ಒಳಗಿನಿಂದ ಇಬ್ಬರೂ ನಡುಗುತ್ತಾ ಓಡಿಬಂದರು...

''ನೋಡಿ... ನಾವು ನಿಮಗೆ ಸಾಕಷ್ಟು ಎಚ್ಚರಿಕೆ ಕೊಟ್ಟಿದ್ದೇವೆ... ಬೇಗ ಇಲ್ಲಿಂದ ತೊಲಗಿ ಹೋಗಿ...''

ಪೊಲೀಸಿನವ ಪಿಸ್ತೂಲನ್ನು ಸೊಂಟಕ್ಕೆ ಸೇರಿಸಿ ಅರಿವಾಲೊ ಕೈ ಹಿಡಿದುಕೊಂಡು ಹೊರಟು ಹೋದ. ಪೊಲೀಸಿನವನು ಕುಡಿದಿದ್ದ ಬ್ರಾಂಡಿ ವಾಸನೆ 'ಗಬೋ' ಎನ್ನುತ್ತಿತ್ತು.

ಎಲ್ಲರೂ ಅವರವರ ಕರ್ತವ್ಯ ನಿರ್ವಹಿಸಿದ್ದರು. ಅರಿವಾಲೊ, ಸರ್ಕಾರಿ ಅಧಿಕಾರಿಗಳು, ಪೊಲೀಸಿನವರು, ಜೂನ್ ಮಾರ್ಟಿನೆಸ್, ಕಾರ್ಮೆನ್ ಮತ್ತು ಅವರ ಸಣ್ಣ ಮಗು. ಮನೆ ಹೊತ್ತಿ ಉರಿಯುತ್ತಿತ್ತು, ಹಳೆಯ ಮರದ ಛಾವಣಿ, ಒಣಗಿದ ಸೌದೆರಾಶಿ, ಹಳೆಯ ಪೀಠೋಪಕರಣಗಳು, ಬೂದಿ ಹಾರುತ್ತಿತ್ತು. ಎರಡು... ಮೂರು ಗಂಟೆ ಬೆಂಕಿ ಉರಿದೇ ಉರಿಯಿತು. ಗಾಳಿ ಜೋರಾಗಿ ಬೀಸಿಬಂತು. ಪೊಲೀಸ್ ಪ್ಯಾದೆ, ಅರಿವಾಲೊ, ಮತ್ತಿಬ್ಬರು ಅರಿವಾಲೊನ ದೋಸ್ತಿಗಳು ಎಲ್ಲರೂ ಬಂದರು. ಜೂನ್ ಮಾರ್ಟಿನೆಸ್ ಮನೆ ಖಾಲಿ ಮಾಡಿ ಅಲ್ಲಿಂದ ಹೋಗಿದ್ದನೋ ಅಥವಾ ಪ್ರತಿಭಟಿಸುತ್ತಿರುವನೋ ಎಂಬುದನ್ನು ಪರೀಕ್ಷಿಸುವುದು ಅವರ ಉದ್ದೇಶ ಆಯಿತು. ಅವರು ಊರಿಗೆ ಹಿಂತಿರುಗಿ ಲಿನಾರಿಸ್‌ನ ಕಿರಾಣಿ ಅಂಗಡಿ ಬಳಿ ಬಂದರು. ಊರಿನ ಮೇಯರ್ ಅಲ್ಲೇ ನಿಂತಿದ್ದು, ಕಾಳಿನ ಮೂಟೆಗಳ ಮೇಲೆ ಒರಗಿ ಆಕಳಿಸುತ್ತಿದ್ದಾನೆ.

''ಏನು ಹೇಗಾಯಿತು... ಕೆಲಸ, ಕಾರ್ಯ ?''

''ಮಹಾಸ್ವಾಮಿ, ಎಲ್ಲವೂ ಸಮರ್ಪಕವಾಗಿ ನೆರವೇರಿತು'' ಅರಿವಾಲೊ ಉತ್ತರಿಸಿದ.

''ಮಾರ್ಟಿನೆಸ್ ಮನೆ ಖಾಲಿ ಮಾಡಿ ಹೋಗಿದ್ದನಾ ?''

''ಇಲ್ಲ'' ಅಂದ ಪೊಲೀಸ್‌ನವ.

''ದರಿದ್ರ ಸೂಳೆಮಗ - ಮೊಂಡ ಶುದ್ಧ ಮೊಂಡ... ಬಾಗಿಲಿಗೆ ಒಳಗಿನಿಂದ ಬೀಗಹಾಕಿಕೊಂಡು ಮನೆಯೊಳಗಿನಿಂದ ಯಾರೂ ಈಚೆ ಬರಲೇ ಇಲ್ಲ... ಆದರೆ ನಮಗೆ ಇನ್ನು ಕಾಯುವಷ್ಟು 'ಟೈಮ್' ಇರಲಿಲ್ಲ...''

ಡ್ರಮ್‌ನಿಂದ ಎಣ್ಣೆ 'ತೊಟಕ್, ತೊಟಕ್' ಎಂದು ಲಾಲಕಿ ಒಳಕ್ಕೆ ಬಿದ್ದು ಅಲ್ಲಿಂದ ಬಾಟ್ಲಿಗೆ ಬೀಳ್ತಾ ಇತ್ತು...

*(ಪ್ರೇರಣೆ : ಸ್ಪೇನಿಷ್ ಕಥೆಯೊಂದರ ನೆನಪು)*




**ಎಚ್. ಕೆ. ರಾಮಚಂದ್ರಮೂರ್ತಿ**
ನಂ. ೧೦೩, ಶ್ರಾವಂತಿ ಪ್ಯಾಲೇಸ್
ಸಿ. ಆರ್. ಲೇಔಟ್, ೩ನೆಯ ಕ್ರಾಸ್
ಜೆ. ಪಿ. ನಗರ, ೧ನೇ ಫೇಸ್
ಬೆಂಗಳೂರು - ೫೬೦ ೦೭೮


# ಆನಂದರಾಮ ಉಡುಪರಿಗೆ ನಮನ




**'ಹೊ**ಸತು' ಆರಂಭವಾದಾಗಿನಿಂದ ಅದರ ಒಬ್ಬ ವಿಮರ್ಶಾತ್ಮಕ ಓದುಗರಾಗಿ ಆಗಾಗ್ಗೆ ಸಲಹೆಗಳನ್ನು ನೀಡುತ್ತಿದ್ದ ಹಿರಿಯ ಆತ್ಮೀಯ ಸ್ನೇಹಿತರಾಗಿದ್ದ ವಿದ್ವಾನ್ ಆನಂದರಾಮ ಉಡುಪ ಅವರು ತಮ್ಮ ೮೨ನೆಯ ವಯಸ್ಸಿನಲ್ಲಿ ಡಿಸೆಂಬರ್ ೧೩ರಂದು ಬೆಂಗಳೂರಿನಲ್ಲಿ ನಿಧನರಾಗಿದ್ದಾರೆ. ಅವರನ್ನು ಸಂದರ್ಶಿಸಿ ಸಾಕಷ್ಟು ಸಮಗ್ರವಾದ ಸಂದರ್ಶನ ಲೇಖನವನ್ನು 'ಹೊಸತು' ಪ್ರಕಟಿಸಿತ್ತು (ಮೇ, ೨೦೦೭). ಶಾಸ್ತ್ರಕೋವಿದರ ಪ್ರಕಾರ ಕರ್ನಾಟಕ ಸಂಗೀತದ ಕ್ಷೇತ್ರದಲ್ಲಿ ಅವರ ಕೊಡುಗೆ ಮಹತ್ತರವಾದದ್ದು.

'ಅನನ್ಯ' ಪ್ರಕಟಿಸುವ ''ಅಭಿವ್ಯಕ್ತಿ'' ಮಾಸಿಕದಲ್ಲಿ ತಪ್ಪದೆ ವಿದ್ವತ್ಪೂರ್ಣ ಪ್ರಬಂಧಗಳನ್ನು ಬರೆದು ಅನೇಕ ಕೃತಿಗಳ ಸ್ವರಪ್ರಸ್ತಾರವನ್ನು ಪರಿಚಯಿಸುತ್ತಿದ್ದ ಉಡುಪರು ಸ್ವತಃ ಹಾಡಬಲ್ಲವರಾಗಿದ್ದರು. ಆದರೆ ಅವರು ಕಚೇರಿ ನಡೆಸಿಕೊಟ್ಟದ್ದನ್ನು ನಾನೆಂದೂ ಕಂಡಿಲ್ಲ. ಬೆಂಗಳೂರಿನಲ್ಲಿ ಸಂಜಯನಗರದ ಬಳಿ ಅವರ ಮನೆ. ಅಂಚೆ ಇಲಾಖೆಯಲ್ಲಿ ಸುಮಾರು ೩೫ ವರ್ಷ ಸೇವೆ ಸಲ್ಲಿಸಿದ್ದ ಶ್ರೀಯುತರು ನಮ್ರತೆಗೆ ಮತ್ತು ಸ್ನೇಹಪರತೆಗೆ ಹೆಸರಾದವರು. ನಾನು ಅವರ ಮನೆಯ ಹತ್ತಿರದಲ್ಲೇ ಆರ್.ಎಂ.ಎಸ್. ಬಡಾವಣೆಯಲ್ಲಿ ಹತ್ತು ವರ್ಷ ವಾಸವಿದ್ದಾಗ ಅವರನ್ನು ಆಗಾಗ್ಗೆ ಸಂಧಿಸುವುದು, ಅವರ ಆಪ್ತತೆಯನ್ನು ಅನುಭವಿಸುವುದು, ಸದಾ ಹರ್ಷದ ಸಂಗತಿಯಾಗಿರುತ್ತಿತ್ತು. ಆಗ್ಗೆ ರವೀಂದ್ರನಾಥ ಟ್ಯಾಗೋರ್ ನಗರದ ಸಂಗೀತ ಸಭಾದ ಕಾರ್ಯಕ್ರಮ ಗಳಿಗೆ ನಾವಿಬ್ಬರೂ ಹೋಗುತ್ತಿದ್ದುದುಂಟು. ಮೊದಲಿಗೆ ಕಬೀರ ಆಶ್ರಮದಲ್ಲಿ, ನಂತರ ಆದರ್ಶ ಕಾಲೇಜು ಆವರಣದಲ್ಲಿ ಕಚೇರಿಗಳು. ಮಾನ್ಯ ಉಡುಪರು ಎಂದೂ ತಪ್ಪಿಸಿಕೊಂಡವರಲ್ಲ. ನನ್ನ ದ್ವಿಚಕ್ರವಾಹನದ ಮೇಲೆ ಕುಳಿತು ಇಬ್ಬರೂ ಹಿಂದಿರುಗುತ್ತಿದ್ದೆವು. ಉಡುಪರ ಸಂಗೀತಜ್ಞಾನ ಬಹಳ ಆಳವಾದದ್ದೆಂದು ನನಗಾಗ ತಿಳಿದಿರಲಿಲ್ಲ, ತಿಳಿಸುವ ಗೋಜಿಗೆ ಅವರೆಂದೂ ಹೋಗಲಿಲ್ಲ. ನಂತರದ ವರ್ಷಗಳಲ್ಲಿ ಅನನ್ಯ ಸಭಾಂಗಣದಲ್ಲಿ ಅವರು ಸದಾ ಕಾಣಿಸಿಕೊಳ್ಳುತ್ತಿದ್ದರು. ಸಂಗೀತಶಾಸ್ತ್ರದಲ್ಲಿ ಅವರ ಪಾಂಡಿತ್ಯ ಎಷ್ಟು ಗಹನವಾದುದೆಂದು ಅಲ್ಲಿ ನನಗೆ ಗೊತ್ತಾದದ್ದು. ಶ್ರೇಷ್ಠ ಸಂಗೀತಗಾರರನೇಕರು ಇವರಲ್ಲಿ ಶಾಸ್ತ್ರ ವಿಷಯಗಳನ್ನು ಕೇಳಿ ತಿಳಿದುಕೊಳ್ಳುತ್ತಿದ್ದುದುಂಟು. ಅವರು ಪ್ರಕಟಿಸಿರುವ ಗ್ರಂಥಗಳು ಅಮೂಲ್ಯವಾದುವೆಂದು ಸಂಗೀತಜ್ಞರು ಪ್ರಶಂಸಿಸಿದ್ದಾರೆ. ''ಶ್ಯಾಮಕೃಷ್ಣ ನಾದ ವೈಭವ'' ಮತ್ತು ''ಶ್ರೀರಾಮಭಕ್ತಿ ಸಾಮ್ರಾಜ್ಯ'' ಎಂಬೆರಡು ಸೊಗಸಾದ ಗ್ರಂಥಗಳ ಸಂಪಾದಕರು ಉಡುಪರು. ಅವಲ್ಲದೆ ಬೇರೆ ಹತ್ತಾರು ಕೃತಿಗಳನ್ನು ಅವರು ರಚಿಸಿದ್ದಾರೆ. ಕೆಲವು 'ಅನನ್ಯ' ಪ್ರಕಾಶನದಲ್ಲಿ ಲಭ್ಯ. ಅವರ ಪ್ರಕಟಣೆಗಳ ವೈಶಿಷ್ಟ್ಯವೇನೆಂದರೆ ಅವು ಅವರ ಹಸ್ತಾಕ್ಷರದಲ್ಲಿರುತ್ತವೆ. ಅಷ್ಟು ಅಂದವಾದ ಅಸ್ಖಲಿತ ಬರವಣಿಗೆ ಅವರದು. ಹಲವು ಭಾಷೆಗಳಲ್ಲಿ ಪರಿಣತಿ ಹೊಂದಿದ್ದ ಉಡುಪರು ತ್ಯಾಗರಾಜ, ಶ್ಯಾಮಾಶಾಸ್ತ್ರಿ, ಅಣ್ಣಮಾಚಾರ್ಯ ಮುಂತಾದವರ ಕೃತಿಗಳ ಭಾವಾರ್ಥವನ್ನು ವಿಶದಪಡಿಸಿ ಅವುಗಳ ಶಾಸ್ತ್ರ ವಿಷಯಗಳನ್ನು ಆಮೂಲಾಗ್ರವಾಗಿ ವಿವರಿಸಿದ್ದಾರೆ.

ಅಪಾರ ವಿದ್ವತ್ತು, ಅಸಾಧಾರಣ ವಿನಯ, ಅಪ್ರತಿಮ ಸ್ನೇಹಪರತೆ, ಮುಂತಾದ ಗುಣಗಳಿದ್ದ ಸಂಪನ್ನರು ಈಗ ನಮ್ಮನ್ನಗಲಿದ್ದಾರೆ. ಅವರಿಗೆ 'ಹೊಸತು' ಗೌರವವನ್ನು ಸೂಚಿಸುತ್ತದೆ, ಅವರ ನಿಧನಕ್ಕೆ ಸಂತಾಪ ವ್ಯಕ್ತಪಡಿಸುತ್ತದೆ.

— ಜಿ. ಆರ್.

ಹೊಸ ಓದು



### ಚಕ್ರವರ್ತಿಯ ಬಟ್ಟೆಗಳು

ಡಾ|| ಎಚ್. ಎಸ್. ರಾಘವೇಂದ್ರ ರಾವ್

**ಪುಟ :** x + ೧೪೭

**ಬೆಲೆ : ರೂ. ೯೫**

**ಚಾಣಕ್ಯ ಪ್ರಕಾಶನ,** ಮಾಳಘಾನ ಬಿಲ್ಡಿಂಗ್, ಮೀನಾಕ್ಷಿ ಚೌಕ ವಿಜಾಪುರ - ೫೮೬ ೧೦೧

ಉತ್ತಮ ಕಥೆಗಳು ನಮ್ಮ ಒಳಗಣ್ಣನ್ನು ತೆರೆಸುತ್ತವೆ. ಉತ್ತಮ ವಿಮರ್ಶೆಗಳು ನಮ್ಮನ್ನು ತಿದ್ದಿಕೊಳ್ಳಲು ಅವಕಾಶ ನೀಡುತ್ತವೆ. ಉತ್ತಮ ನಡವಳಿಕೆಯನ್ನು ರೂಢಿಸಿಕೊಳ್ಳಬೇಕು, ಸರ್ವಶ್ರೇಷ್ಠನಾಗಲು ಪ್ರಯತ್ನಿಸಬೇಕು. ಹೀಗೆ ಸಾಗುತ್ತದೆ ನಮಗೆಲ್ಲ ನೀಡುವ ಹಿತವಚನ ಮತ್ತು ಹಿತೋಪದೇಶ. ಇವೆಲ್ಲ ನಿಜವಾದರೂ, ಉತ್ತಮವಾದುದು ಯಾವುದು, ಅದು ಎಲ್ಲಿದೆ ಮತ್ತು ಅದು ಉತ್ತಮವೆಂಬುದಕ್ಕೆ ಮಾನದಂಡವಾವುದು ಎಂದು ಪ್ರಶ್ನಿಸಿದರೆ ಉತ್ತರಗಳು ವಿವಿಧ ಬಗೆಯಲ್ಲಿರುತ್ತವೆ. ಒಬ್ಬರಿಗೆ ಉತ್ತಮವಾದುದು ಇನ್ನೊಬ್ಬರಿಗೆ ಕನಿಷ್ಠವಾಗಿದ್ದು ಒಮ್ಮತ ಸಾಧ್ಯವಾಗುವುದಿಲ್ಲ. ಜಗತ್ತನ್ನು ನೋಡುವ ದೃಷ್ಟಿಕೋನ ಇಂದು ಬದಲಾಗಿದ್ದು, ವಿದ್ಯಾವಂತನೆಂದರೆ ವಿಶ್ವವಿದ್ಯಾಲಯದ ಉನ್ನತ ಡಿಗ್ರಿ ಪಡೆದವನು ಮತ್ತು ಬುದ್ಧಿವಂತನೆಂದರೆ ಹಣ-ಸಂಪತ್ತು-ಅಧಿಕಾರ ಗಳಿಸಿದವನು ಎಂದು ವ್ಯಾಖ್ಯಾನಿಸುವ ಮಂದಿ ಹೆಚ್ಚಾಗಿದ್ದಾರೆ. ಅದೆಲ್ಲ ಶುದ್ಧ ಸುಳ್ಳು ಮತ್ತು ಅದನ್ನೂ ಮೀರಿದ ಸತ್ಯವೊಂದಿದೆಯೆಂದು ಎಲ್ಲರೂ ಬಲ್ಲರು. ಆಚಾರ-ವಿಚಾರಗಳಲ್ಲಿ ಒಳ್ಳೆಯದೆಂದು ಭ್ರಮಿಸಲಾದ ಎಲ್ಲವನ್ನೂ ತನ್ನದಾಗಿಸಿಕೊಂಡು ಅಂತರಂಗದಲ್ಲಿ ಅತೃಪ್ತ-ಅಸುಖಿಯಾಗಿ ಮನುಷ್ಯ ಜೀವಿಸುತ್ತಿದ್ದಾನೆ. ತನಗಾಗಿ ತಾನು ಜೀವಿಸದೆ ಬಾಹ್ಯಾಡಂಬರದ ತೋರಿಕೆಗಾಗಿ ಇತರರನ್ನು ಮೆಚ್ಚಿಸುತ್ತ ತಾನು ಒಳಗೊಳಗೇ ಶೂನ್ಯನಾಗುತ್ತಿದ್ದಾನೆ. ಇಂತಹ ನಮ್ಮ ಕಾಲದ ಸಾಮಾಜಿಕ ಪಲ್ಲಟಗಳನ್ನು ಇಲ್ಲಿನ ಲೇಖನಗಳು ಪ್ರತಿಬಿಂಬಿಸುತ್ತ ಮುಖವಾಡದೊಳಗಿನ ನಿಜವನ್ನು ತೋರಿಸುತ್ತವೆ.

### ನಕಲ್ ವರಸೆ (ಕಥೆಗಳು)

ಕೆ. ಸತ್ಯನಾರಾಯಣ

**ಪುಟ : ೧೬೦** **ಬೆಲೆ : ರೂ. ೧೧೫**

**ಅಕ್ಷರ ಪ್ರಕಾಶನ,** ಹೆಗ್ಗೋಡು - ೫೭೭ ೪೧೭, ಸಾಗರ, ಶಿವಮೊಗ್ಗ ಜಿಲ್ಲೆ.



ಆಧುನಿಕ ಕಾಲದ ಪ್ರತಿಯೊಂದು ಮನೆ-ಸಂಸಾರಗಳಲ್ಲಿಯೂ ನಡೆಯುತ್ತಿರುವ, ಮುಂದೆಯೂ ನಡೆಯುತ್ತಲೇ ಇರುವ ಕಥೆಗಳಿವು. ಒಂದು ಕಥೆಗೆ ಪೂರ್ಣವಿರಾಮ ಇಡುತ್ತಿದ್ದಂತೆಯೇ ಮತ್ತೊಂದು ಕಥೆಯ ಮೊದಲ ವಾಕ್ಯ ಪ್ರಾರಂಭ. ಇವು ನಮ್ಮೆಲ್ಲರ ಕಥೆಗಳು ಅಥವಾ ಈ ಕಥೆಗಳಲ್ಲೇ ನಾವಿದ್ದೇವೆ ಎಂದರೂ ಸರಿಯೆ. ಬದುಕಿನ ಒಂದು ಮಗ್ಗುಲಿಗೆ ಒಂದು ಬಣ್ಣವಿದ್ದರೆ ಇನ್ನೊಂದಕ್ಕೆ ಬೇರಾವುದೋ ಬಣ್ಣ. ಕೆಲವು ನಮಗೆ ಇಷ್ಟವಾಗುವ ಬಣ್ಣಗಳಾದರೆ ಇನ್ನು ಕೆಲವು ಇತರರು ಇಷ್ಟಪಡುವಂಥವು. ಕಥೆಗಳು ಮೇಲ್ನೋಟಕ್ಕೆ ವರ್ಣರಂಜಿತ, ರಕ್ತರಂಜಿತ ಇನ್ನೂ ಏನೇನೋ ಆಗಿರುವಂತೆ ಈಗಾಗಲೇ ನಾವು ನಮಗೆ ಗೊತ್ತೇ ಇಲ್ಲದೆ ಅನುಭವಿಸುತ್ತಿರುವ ಸೂಕ್ಷ್ಮ ಹಿಂಸಾ-ಕ್ರೌರ್ಯ ಪ್ರವೃತ್ತಿಯ ಪರಿಚಯವನ್ನೂ ಮಾಡಿಕೊಡುತ್ತವೆ. ಜೊತೆಯಲ್ಲೇ ಮನುಷ್ಯನ ಗುಣಸ್ವಭಾವಗಳ ಪರಿಚಯವೂ ಧಾರಾಳವಾಗಿ ಪಾತ್ರಗಳ ಮೂಲಕ ಸಿಗುತ್ತದೆ. ವೈವಿಧ್ಯಮಯ ಬದುಕಿಂದಮೇಲೆ ವಿವಿಧ ಪಾತ್ರ ಚಿತ್ರಣಗಳು. ವಿದೇಶಿ ಫೋರ್ಡ್ ಕಂಪೆನಿಯಲ್ಲಿ ಕೆಲಸ ಮಾಡುವ ಈ ದೇಶದ ನೌಕರನ ಪಾಡು ಕಥೆಯೊಂದರಲ್ಲಿ ಸಮರ್ಥವಾಗಿ ಬಂದಿದೆ. ಲೇಖಕ ಸತ್ಯನಾರಾಯಣರು ಈಗಾಗಲೇ ಸಣ್ಣ ಕಥೆ, ಕಾದಂಬರಿ, ಪ್ರಬಂಧ, ವಿಮರ್ಶೆ, ಪ್ರವಾಸ ಕಥನಗಳಿಂದ ಸುಮಾರು ಇಪ್ಪತ್ತು ವರ್ಷಗಳಿಂದಲೂ ಓದುಗರಿಗೆ ಪರಿಚಿತರು.



### ರಾಗ ವೈಭವ

ವಾಸುದೇವ ಮೂರ್ತಿ, ಕನ್ನಡಕ್ಕೆ : ಲಲಿತಾ ಶಾಸ್ತ್ರಿ, ಸಾವಿತ್ರಿ ಭಾಸ್ಕರ್

**ಪುಟ : xx + ೧೦೮** **ಬೆಲೆ : ರೂ. ೧೫೦**

**ಅನಂತ ಪ್ರಕಾಶನ,** # ೧೧೮೯/೧, ವಿಷ್ಣುವರ್ಧನ ರಸ್ತೆ ಚಾಮರಾಜಪುರಂ, ಮೈಸೂರು - ೫೭೦ ೦೦೪

ರಾಗಗಳೊಂದಿಗೆ ಸಂವಾದ! ಹೌದು, ಈ ಕೃತಿಯ ಮೂಲ ಲೇಖಕ, ಸಂಗೀತಗಾರ ವಾಸುದೇವ ಮೂರ್ತಿ ಇಲ್ಲಿ ರಾಗಗಳನ್ನು ಪರಿಚಯಿಸುವುದಲ್ಲ. ಬದಲಾಗಿ, ತನ್ನನ್ನು ಕಾಣಬಂದ ಈ ಸಾಧಕನಿಗೆ ಸ್ವತಃ ರಾಗಗಳೇ ತನ್ನ ಸ್ವಭಾವ, ಆಳ, ಗುಟ್ಟುಗಳನ್ನು ಬಿಟ್ಟುಕೊಟ್ಟು ನೀ ಸಾಧಿಸಬಲ್ಲೆಯಾ ಎಂದು ಕೇಳುತ್ತಿವೆ. ಸಂಗೀತದಲ್ಲಿ ರಾಗವೇ ಜೀವಾಳ. ಸಪ್ತಸ್ವರಗಳ ನಡುವಿನ ಸ್ವರಸಂಚಾರದ ಅಂತರಗಳು ಕೂದಲೆಳೆಯಷ್ಟು ಸೂಕ್ಷ್ಮ. ಗುಣ-ಸ್ವಭಾವಗಳಿಗನುಗುಣವಾಗಿ ದಿನದ ಇಂಥದೇ ಘಳಿಗೆಯಲ್ಲಿ ಮಾತ್ರ ಕೆಲವು ರಾಗಗಳನ್ನು ಹಾಡಬೇಕೆಂಬ ನಿಯಮವಿದೆ. ಒಂದೊಂದು ರಾಗವೂ ತನ್ನ ಮನೋಭಿತ್ತಿಯಲ್ಲಿ ಕಾಣಿಸಿಕೊಂಡು, ಮನಸ್ಸಿನ ನೆಲೆಗೆ ಮಾತ್ರ ದಕ್ಕುವಂಥ ರಾಗಗಳ ಶುದ್ಧಾತಿಶುದ್ಧ ಸಂಚಾರದ ಝಲಕ್‌ಅನ್ನು ಮಿಂಚಿಸಿ ಮಾತಿಗೂ ಮೀರಿದ ಅನುಭವವನ್ನು ನೀಡಿದ್ದು ವಿಶೇಷ ಅನುಭವ – ವರ್ಣಿಸಲಸದಳ ಎನ್ನುತ್ತಾರೆ ಲೇಖಕರು. ಸಾಧಕನು ಛಲ-ದರ್ಪಗಳಿಂದ ಬೆನ್ನಟ್ಟಿ ರಾಗಗಳನ್ನು ವಶಪಡಿಸಿಕೊಳ್ಳಲು ಆಗುವುದಿಲ್ಲ. ವಿನೀತ ಭಾವದಿಂದ ಪ್ರಾರ್ಥಿಸಿ, ಅವು ತಾವಾಗಿ ಮೈದೋರಿ ಒಲಿದು ಬಂದಾಗ, ನಾವದನ್ನು ಗುರುತಿಸಿದಾಗ ಮಾತ್ರ ರಾಗದ ಸ್ಪಷ್ಟ ಚಿತ್ರಣ ಮೂಡುತ್ತದೆ. ಅಂತಹ ಕಲ್ಪನಾ ಚಿತ್ರಗಳೂ ತುಂಬ ಸುಂದರವಾಗಿ ಚಿತ್ರಿಸಲ್ಪಟ್ಟು ಇಲ್ಲಿ ಅಳವಡಿಸಲಾಗಿವೆ. ಸಪ್ತಸ್ವರಗಳು ರಾಗಗಳಾಗಿ ವಿಜೃಂಭಿಸುವುದನ್ನೂ, ತಾಳಗಳ ಪರಿಧಿಯೊಳಗೆ ಅವು ಕುಣಿದಾಡುವುದನ್ನೂ ಈ ಪುಸ್ತಕ ನಿರೂಪಿಸುತ್ತದೆ.

### ಮನದ ಸೂತಕ ಹಿಂಗಿದೊಡೆ

ಡಾ|| ಮೀನಾಕ್ಷಿ ಬಾಳಿ

**ಪುಟ : 102 + ೪**

**ಬೆಲೆ : ರೂ. ೬೦**

**ಚಿಂತನ ಪುಸ್ತಕ,** # ೧೮೬೩, ೩೮ನೇ ಅಡ್ಡರಸ್ತೆ, ೧೧ನೇ ಮುಖ್ಯರಸ್ತೆ, ೪ನೇ 'ಟಿ' ಬ್ಲಾಕ್, ಜಯನಗರ, ಬೆಂಗಳೂರು - ೫೬೦ ೦೧೧



ಇವು ಸ್ತ್ರೀ ಪರವಾಗಿರುವ ಚಿಂತನಶೀಲ ಬರಹಗಳು. ಸಮಾಜ ವ್ಯವಸ್ಥೆಯಿನ್ನೂ ರೂಪುಗೊಂಡಿರದ ಅತಿ ಪ್ರಾಚೀನ ಕಾಲದಲ್ಲಿ ಹೆಣ್ಣು ಮತ್ತು ಗಂಡು ಪರಸ್ಪರ ಯಾವುದೇ ಮೇಲು-ಕೀಳರಿಮೆಗಳಿಲ್ಲದೆ ಜೊತೆಯಾಗಿ ಜೀವಿಸುತ್ತಿದ್ದ ಕಾಲವೊಂದಿದ್ದುದು ಸುಳ್ಳಾಗಿರಲಿಲ್ಲ. ಮುಂದೆ ನಿಧಾನವಾಗಿ ಭೂಮಿಯ ಮೇಲೆ ಮನುಷ್ಯನ ನಡವಳಿಕೆಗಳು ಬದಲಾಗಿ, ವೈವಾಹಿಕ ಸಂಬಂಧಗಳು ಬೆಳೆದು ಬಂದು ಹೆಣ್ಣನ್ನು ತನ್ನ ಸಂಪತ್ತಿನ ಭಾಗವಾಗಿ ಸ್ವೀಕರಿಸತೊಡಗಿದಾಗ ತಂತಾನೇ ರಕ್ಷಣೆಯ ಹೆಸರಿನಲ್ಲಿ ಪುರುಷ ಅವಳನ್ನು ಬಂಧಿಯಾಗಿಸಿದ. ಪುರಾಣ ಕಾಲದಿಂದಲೂ ಸ್ತ್ರೀಯ ಸ್ಥಾನಮಾನ, ಆಕೆಯನ್ನು ಪುರುಷರು ನಡೆಸಿಕೊಂಡ ಬಗ್ಗೆ ಉಲ್ಲೇಖಗಳನ್ನೊಳಗೊಂಡ ವಿವರಗಳು ಇಲ್ಲಿವೆ. ರಾಜರುಗಳಾಗಿ ಪುರುಷರು ವಿಜೃಂಭಿಸತೊಡಗಿದಾಗ ಹೆಣ್ಣು, ಹೊನ್ನು, ಮಣ್ಣು ಮೂರೂ ಪುರುಷ ಸುಪರ್ದಿಗೆ ಬಂದುವು. ಇಂತಹ ಚಾರಿತ್ರಿಕ ಹಿನ್ನೆಲೆಯಿರಿಸಿಕೊಂಡು, ಮಹಿಳೆ ಪ್ರತಿಭಟನೆಯ ದಾರಿ ಕ್ರಮಿಸತೊಡಗಿ, ಅವಳ ಸಂಘರ್ಷದ ಚಿತ್ರಣವೂ ಇಲ್ಲಿ ಮೂಡಿದೆ. ಆದರೂ ಸ್ವತಃ ಹೋರಾಟಗಾರ್ತಿಯಾಗಿ, ಸಾಕಷ್ಟು ಸವಾಲುಗಳನ್ನು ನೇರವಾಗಿ ಎದುರಿಸಿದ ಅನುಭವಿಯಾಗಿ, ಪ್ರಾಧ್ಯಾಪಕಿಯಾಗಿ, ಲೇಖಕಿಯಾಗಿ ತನ್ನೆದುರಿನ ಮಹಿಳೆಯ ದನಿಯನ್ನೂ ಇನ್ನಷ್ಟು ಕಟ್ಟಿಕೊಡಬಹುದಿತ್ತು. ಈ ಕೊರತೆಯನ್ನು ಅವರ ಮುಂದಿನ ಲೇಖನಗಳಲ್ಲಿ ನೀಗಿಸುತ್ತಾರೆಂದು ಆಶಿಸೋಣ. ಬ್ರಿಟಿಷರು ಭಾರತಕ್ಕೆ ಬಂದು ಸ್ತ್ರೀ ವಿದ್ಯಾಭ್ಯಾಸಕ್ಕೆ ಚಾಲನೆ ನೀಡಿದ ನಂತರದ ಭಾರತದ ಸ್ತ್ರೀಯರ ಜೀವನ ಚಹರೆಯೇ ಬದಲಾಯಿತೆನ್ನಬಹುದು. ಇಂಥ ಬದಲಾವಣೆಯ ಪರ್ವಕಾಲದಲ್ಲಿರುವ ನಾವು ನಮ್ಮ ಪೂರ್ವೇತಿಹಾಸವನ್ನು ಇಲ್ಲಿ ಕಾಣಬಹುದು.

**ದೃಶ್ಯಾನುಭವ** (ದೃಶ್ಯಕಲೆಯ ಕುರಿತಾದ ಸಂಶೋಧನಾತ್ಮಕ ಲೇಖನಗಳು)
*ಡಾ|| ಮೋಹನರಾವ ಬಿ. ಪಂಚಾಳ*
**ಪುಟ : ೮೦** **ಬೆಲೆ : ರೂ. ೧೦೦**
**ಅನ್ನಪೂರ್ಣ ಪ್ರಕಾಶನ,** ಮು : ನಂದಗಾವ್ - ೫೮೫ ೩೨೯,
ಹುಮ್ನಾಬಾದ್ ತಾಲ್ಲೂಕು, ಬೀದರ್ ಜಿಲ್ಲೆ

ಈ ಪುಸ್ತಕದ ಲೇಖಕರು ದೃಶ್ಯಕಲೆಯ ಬಗ್ಗೆ ಸಾಕಷ್ಟು ತಿಳಿದುಕೊಂಡಿದ್ದು, ಸಂಶೋಧನಾ ಲೇಖನಗಳನ್ನು ಬರೆದಿದ್ದಾರೆ. ಅನೇಕ ವಿಚಾರ ಸಂಕಿರಣಗಳಲ್ಲಿ ಭಾಗವಹಿಸಿ ವಿಶೇಷ ಉಪನ್ಯಾಸಗಳನ್ನು ನೀಡಿದ್ದಾರೆ. ಹೆಸರಾಂತ ಚಿತ್ರಕಲಾವಿದ ಎಸ್. ಎಂ. ಪಂಡಿತರ ಕುರಿತು ಸಂಶೋಧನೆ ಮಾಡಿ ಪಿಎಚ್.ಡಿ. ಪದವಿಯನ್ನು ಗಳಿಸಿದ್ದಾರೆ. ಬಿದರಿ ಕರಕುಶಲ ಕಲೆ, ಶೀಗಿ ಚಿತ್ರಶಿಲ್ಪಕಲೆ, ರೇಖಾಚಿತ್ರಗಳ ಬಗ್ಗೆ ವಿವರಣಾತ್ಮಕ ಲೇಖನಗಳಿವೆ.



ವಿಶ್ವವಿಖ್ಯಾತ ಪಿಕಾಸೊ, ಎಸ್. ಎಂ. ಪಂಡಿತರ ಕಲಾಕೃತಿಗಳ ಬಗ್ಗೆ ಕೆಲವು ಮಾಹಿತಿಗಳಿದ್ದು ಅವರ ಸಂಕ್ಷಿಪ್ತ ಪರಿಚಯವೂ ಇಲ್ಲಿದೆ. ಕೆಲವೊಮ್ಮೆ ಮಾತಿನಲ್ಲಿ ಕೂಡ ಬಣ್ಣಿಸಲಾಗದ ಅಭಿವ್ಯಕ್ತಿಯನ್ನು ಚಿತ್ರಕಲೆಯ ಮೂಲಕ ತಿಳಿಸಿಕೊಟ್ಟ ಕಲಾವಿದರಿದ್ದಾರೆ. ಘಟಿಸಿದ ಕೆಲವು ಪ್ರಸಂಗಗಳನ್ನು ಜೀವಂತವಾಗಿರಿಸುವ ಉದ್ದೇಶದಿಂದ ಚಿತ್ರಕಲೆ-ಶಿಲ್ಪಕಲೆಗಳ ಉಗಮವಾಗಿದ್ದಿರಬಹುದು. ಚಿತ್ರ-ಶಿಲ್ಪದ ಮೂಲಕ ಪರಸ್ಪರ ಸಂವಹನ ಸಾಧ್ಯ. ಮುಂದೆ ಬೆಳವಣಿಗೆಯಾಗಿ ಕಲಾವಿದನ ಕಲ್ಪನೆ-ಪ್ರತಿಭೆಯಿಂದಾಗಿ ವಿವಿಧ ಅಭಿವ್ಯಕ್ತಿಗಳು ಮೂಡಿಬಂದಿರಲು ಸಾಧ್ಯ. ಚಿತ್ರಗಳಲ್ಲಿ ಕುಂಚದ ಬಳಕೆ, ಪೆನ್ಸಿಲ್‌ಗಳಿಂದ ರೇಖಾಚಿತ್ರ ರಚನೆ, ತೈಲವರ್ಣಚಿತ್ರ, ಕಪ್ಪು ಬಿಳುಪು ವರ್ಣ ಸಂಯೋಜನೆ ಇವನ್ನು ಕಲಾವಿದ ಹೇಗೆ ಮಾಡುತ್ತಾನೆಂಬ ಮಾಹಿತಿಯೂ ಇದೆ.

**ಸಾಧನೆಯ ಸಮುಚ್ಚಯ ಎಲ್. ಶಿವಲಿಂಗಪ್ಪ**
*ಡಾ|| ಎಸ್. ಸಿ. ಪಾಟೀಲ*
**ಪುಟ : vi + ೭೮ + ೮** **ಬೆಲೆ : ರೂ. ೧೦೦**
**ರಾಷ್ಟ್ರೀಯ ದೃಶ್ಯ ಕಲಾ ಅಕಾಡೆಮಿ,** 'ಚಿತ್ರಾಕ್ಷಿ', ಮನೆ. ನಂ. ೯,
ತುಂಗಭದ್ರಾ ಹೌಸಿಂಗ್ ಕಾಲೋನಿ, ೨ನೇ ಅಡ್ಡರಸ್ತೆ,
ಶ್ರೀನಗರ ಕ್ರಾಸ್, ಧಾರವಾಡ - ೫೮೦ ೦೦೭



ಎಲ್. ಶಿವಲಿಂಗಪ್ಪ ಬಹುಶ್ರಮದಿಂದ ಚಿತ್ರಕಲೆ ಮತ್ತು ಶಿಲ್ಪಕಲೆಯನ್ನು ಅಭ್ಯಾಸಮಾಡಿದ್ದು ಎಲೆಮರೆಯ ಕಾಯಿಯಂತೆಯೇ ಉಳಿದಿದ್ದಾರೆ. ಅವರ ಕೆಲವು ಸಾಧನೆಗಳನ್ನು ಪರಿಚಯಿಸುವ ಈ ಪುಸ್ತಕವು ಇವರು ಬಿ.ಇ.ಎಂ.ಎಲ್. ಸಂಸ್ಥೆಯಲ್ಲಿದ್ದು ನಾಗರಿಕರಿಗಾಗಿ ಮಾಡಿದ್ದ ಸಮಾಜಮುಖಿ ಹೋರಾಟಗಳನ್ನೂ ತಿಳಿಸುತ್ತದೆ. ವಚನ ಸಾಹಿತ್ಯವನ್ನಾಯ್ದು ಅಲ್ಲಿಯ ವಚನಗಳ ಸಂದರ್ಭಗಳಿಗೆ ತಕ್ಕಂತೆ ಚಿತ್ರರಚನೆಯನ್ನು ಇವರು ಮಾಡಿದ್ದಾರೆ. ಸಿಂಗಾಪುರ, ನ್ಯೂಜಿಲೆಂಡ್, ಆಸ್ಟ್ರೇಲಿಯಾಗಳಲ್ಲಿ ಪ್ರವಾಸ ಮಾಡಿ ಅಲ್ಲಿನ ಕಲಾಗ್ಯಾಲರಿಗಳನ್ನು ಸಂದರ್ಶಿಸಿ ಜಗತ್ತಿನ ವೈವಿಧ್ಯಮಯ ಕಲಾಶೈಲಿಗಳ ಬಗ್ಗೆ ಮಾಹಿತಿ ತಿಳಿದುಕೊಂಡಿದ್ದಾರೆ. ಮೈಸೂರಿನ ರಾಮಾನುಜ ರಸ್ತೆಯಲ್ಲಿ ಕಲಾ ಗ್ಯಾಲರಿಯೊಂದನ್ನು ಸ್ಥಾಪಿಸಿದ್ದು ಮಾತ್ರವಲ್ಲದೆ ಇತರ ಕಲಾವಿದರನ್ನು ಗೌರವಿಸುವ ಉದ್ದೇಶದಿಂದ "ಶಿವ ಕಲಾ ಪ್ರಶಸ್ತಿ"ಯನ್ನು ನೀಡಲು ಈ ವರ್ಷದಿಂದ (೨೦೧೦) ಪ್ರಾರಂಭಿಸಿದ್ದಾರೆ. ಪತ್ರಿಕೆಗಳಿಗೂ ಲೇಖನಗಳನ್ನು ಬರೆಯುತ್ತಿದ್ದು, ಅನೇಕ ಪುಸ್ತಕಗಳನ್ನೂ ಬರೆದು ಪ್ರಕಾಶಿಸಿದ್ದಾರೆ. ಮರಳಚ್ಚಿನ ಶಿಲ್ಪ, ಸಿಂಪರಣೆ ಚಿತ್ರ, ವರ್ಣಚಿತ್ರಗಳು, ರೇಖಾಚಿತ್ರಗಳು ಹೀಗೆ ಬಹುಮುಖಿ ಪ್ರತಿಭೆ ಇವರಲ್ಲಿದೆ. ಬಹುಕಾಲ ಬೆಂಗಳೂರಿನ ಆಚಾರ್ಯ ಚಿತ್ರಕಲಾ ಭವನವನ್ನು ಮುನ್ನಡೆಸಿದ ಕೀರ್ತಿ ಇವರದು.

**– ಇಂದಿರಾಕುಮಾರಿ**

೩೪/೧೧, ೨ನೇ ಕ್ರಾಸ್, ಬಾಂಬೆ ಡೈಯಿಂಗ್ ಸಮೀಪ, ಯಶವಂತಪುರ, ಬೆಂಗಳೂರು - ೨೨

# ನಮ್ಮ ಹೋರಾಟ

ಇದು ನಮ್ಮ ಘೋಷಣೆ !
ನಾವಿಂದು
ತಾಯಿನಾಡೇ ಮರೆತ ಪ್ರತಿಭಟನಾ ವೀರರು.

ಓ ದೇಶವಾಸಿಗಳೇ
ಓ ಪ್ರಪಂಚದ ರಾಷ್ಟ್ರಗಳ ಸರಕಾರಗಳೇ !
ಅಕ್ಕ ತಂಗಿಯರೇ
ಅಣ್ಣ ತಮ್ಮಂದಿರೇ

ನಮ್ಮ ನುಡಿಯ ಹೂವಿಗೆ ಸಾವಿಲ್ಲ
ಮುಖವಾಡದ ಈ ಮೊಗವು ಪಡೆದ ಹೆಸರು ನಾಶವಾದೀತು
ಆದರೆ
ನಮ್ಮ ಹೃದಯದಾಳದಿಂದ, ಇತಿಹಾಸದ ಪಳೆಯುಳಿಕೆಗಳಿಂದ
ಧರಣಿದೇವಿಯ ಆರ್ತನಾದದಂತೆ ಮಿಂಟಿದ ಮಾತಿಗೆ
ಎಂದೆಂದೂ ಸಾವಿಲ್ಲ

ನಾವು ಹೋರಾಡುತ್ತಿರುವುದು ತುತ್ತು ಅನ್ನಕ್ಕಾಗಿ !
ನಮ್ಮ ಕಂದಮ್ಮಗಳಿಗಾಗಿ !
ದುಷ್ಟ ಸರಕಾರಗಳು ನಮಗೆ ನೀಡಿದ್ದು ಕೇವಲ ಕಾಗದ ಮತ್ತು
ಮಸಿ !




ಗುರುಮೂರ್ತಿ ಪೆಂಡಕೂರು
ಅಧ್ಯಕ್ಷರು, ಕರ್ನಾಟಕ ಜಾನಪದ ಪರಿಷತ್ತು (ಬಳ್ಳಾರಿ ಜಿಲ್ಲಾ ಸಮಿತಿ)
'ಸಪ್ತಗಿರಿ', ನೇತಾಜಿ ರಸ್ತೆ, ರಾಮನಗರ
ಹಗರಿಬೊಮ್ಮನಹಳ್ಳಿ - ೫೮೩ ೨೧೨, ಬಳ್ಳಾರಿ ಜಿಲ್ಲೆ


ನಮ್ಮ ತಲೆಯ ಮೇಲೊಂದು ಸೂರಿಗಾಗಿ
ನಮ್ಮ ಹೋರಾಟ !
ಆದರೆ ಭ್ರಷ್ಟ ಸರಕಾರವು ನಮ್ಮ ಮನೆಗಳನ್ನು ಮತ್ತು
ನಮ್ಮ ಸರ್ವಸ್ವವನ್ನು ನಾಶಮಾಡುತ್ತಿದೆ.

ನಮ್ಮ ಹೋರಾಟ ಅರಿವಿಗಾಗಿ !
ಆದರೀ ಸರಕಾರ ಅಜ್ಞಾನವನ್ನು ಅವಮಾನವನ್ನು
ನೀಡುತ್ತಿದೆ
ನೆಲಕ್ಕಾಗಿ ನಮ್ಮ ಹೋರಾಟ
ಆದರೀ ಸರಕಾರವು ನಮಗೆ ಮಸಣದ ಕಣಗಳನ್ನು
ನೀಡುತ್ತಿದೆ
ಮಾನಕ್ಕಾಗಿ ಮತ್ತು ಮಜೂರಿಗಾಗಿ ನಮ್ಮ ಹೋರಾಟ.
ಆದರೀ ಸರಕಾರ ನಮ್ಮ ದೇಹಗಳನ್ನು ಮಾನಾಪಮಾನಗಳನ್ನು
ಹರಾಜು ಹಾಕುತ್ತಿದೆ

ನಾವು ಬದುಕಲು ಸೆಣಸುತ್ತಿದ್ದೇವೆ
ಆದರೀ ಸರಕಾರವು ಮರಣದ ದೇಣಿಗೆ ನೀಡುತ್ತಿದೆ.
ನಮ್ಮ ಹೋರಾಟ
ಮಾನಕ್ಕಾಗಿ ಸ್ವತಂತ್ರ ಪ್ರಭುತ್ವಕ್ಕಾಗಿ, ಆದರೀ ಸರಕಾರ
ಅರಿಯದ ಕಾನೂನುಗಳನ್ನು ಹೇರುತ್ತಿದೆ
ನಮ್ಮ ಹೋರಾಟ ಅಭಿವ್ಯಕ್ತಿ ಸ್ವಾತಂತ್ರ್ಯಕ್ಕಾಗಿ
ಬದುಕಿಗಾಗಿ, ಆದರೀ ಸರಕಾರ
ಸೆರೆಮನೆಗಳನ್ನು, ಗೋರಿಗಳನ್ನು ನಿರ್ಮಿಸುತ್ತಿದೆ.

ನಮಗೆ ನ್ಯಾಯ ಬೇಕು
ಆದರೆ ಕೇವಲ ಅಪರಾಧಿಗಳು ಮತ್ತು ಕೊಲೆಗಾರರೇ
ಸರಕಾರವಾಗಿದ್ದಾರೆ

ನಮಗೆ ಇತಿಹಾಸ, ಪರಂಪರೆ ಬೇಕು
ಆದರೆ ಆಳುವವರಿಗೆ ಅದನ್ನು ನಾಶಮಾಡುವಾಸೆ
ನಮಗೊಂದು ನಾಡು ಬೇಕು
ಆದರೆ ಆಳುವವರು ಸಮರವನ್ನು, ಸರ್ವನಾಶವನ್ನು
ಸಾರುತ್ತಾರೆ.
ಮನೆ, ಭೂಮಿ, ಕೆಲಸ, ಅನ್ನ, ಓದು, ಸ್ವಾತಂತ್ರ್ಯ
ನ್ಯಾಯ ಮತ್ತು ಶಾಂತಿ ನಮಗೆ ಬೇಕು
೫೦೦ ವರುಷಗಳ ಕತ್ತಲ ರಾಜ್ಯದಲ್ಲಿ ನಾವು ಇವಕ್ಕಾಗಿ
ಹೋರಾಡುತ್ತಿದ್ದೇವೆ.
ಇಂದೂ ಇದೇ ನಮ್ಮ ರಣಕಹಳೆ !

(ಮೆಕ್ಸಿಕೋ ದೇಶದ ಜ಼ಪಾಟಿಸ್ಟ್ ಕ್ರಾಂತಿಕಾರಿಗಳ ಘೋಷಣೆಯ ಅನುವಾದ : ಜನವರಿ ೧, ೧೯೯೬)

ಜಿ. ಎಸ್. ಉಬರಡ್ಕ

**ಕ**ರ್ನಾಟಕದಲ್ಲಿ ಇಂದು ಹವ್ಯಾಸಿ ನಾಟಕ ತಂಡಗಳು ಗಣನೀಯವಾಗಿ ಹೆಚ್ಚಿವೆ. ಇವು ನಗರ ಪ್ರದೇಶಗಳಿಗಷ್ಟೇ ಸೀಮಿತವಾಗಿ ಉಳಿಯದೆ ಗ್ರಾಮೀಣ ಪ್ರದೇಶಗಳಿಗೆ ಕೂಡ ವಿಸ್ತರಿಸಿಕೊಂಡಿವೆ. ಪ್ರೇಕ್ಷಕ ಸಮೂಹದಲ್ಲಿ ನಾಟಕ ವೀಕ್ಷಿಸುವ ದೃಷ್ಟಿಯೂ ಬದಲಾಗಿದೆ. ರಂಗವಿಕೇಂದ್ರೀಕರಣ ಎಂಬುದು ಹೊಸ ದೃಷ್ಟಿಗೆ, ಹೊಸ ಸೃಷ್ಟಿಗೆ ಕಾರಣವಾಗಿದ್ದರೆ, ಈ ಎಲ್ಲ ಬದಲಾದ ವಿದ್ಯಮಾನಗಳ ಹಿಂದೆ 'ನೀನಾಸಂ' ತಿರುಗಾಟದ ದಟ್ಟ ಪ್ರಭಾವವಿದೆ ಎಂಬುದನ್ನು ಯಾರೂ ಅಲ್ಲಗಳೆಯುವಂತಿಲ್ಲ. ಈ ಹಿನ್ನೆಲೆಯಲ್ಲಿ ಹಾಸನ ಜಿಲ್ಲೆಯ ಸಕಲೇಶಪುರ ತಾಲ್ಲೂಕಿನ 'ಬೆಳ್ಳೇಕೆರೆ' ಎಂಬಲ್ಲಿ ೧೯೮೮ರ ಅಕ್ಟೋಬರ್ ೨ರ ಗಾಂಧಿ ಜಯಂತಿಯ ಆಚರಣೆಯೊಂದಿಗೆ ಹುಟ್ಟಿಕೊಂಡ ಒಂದು ಸಾಂಸ್ಕೃತಿಕ ಸಂಘಟನೆ 'ಜೈ ಕರ್ನಾಟಕ ಸಂಘ – ಬೆಳ್ಳೇಕೆರೆ'.

ಸಕಲೇಶಪುರದ ಆನೆಮಹಲ್‌ನಿಂದ ಮೂಡಿಗೆರೆಯತ್ತ ಸಾಗುವ ರಸ್ತೆಯ ಬಲ ಪಾರ್ಶ್ವದಲ್ಲಿ ಅಗಲಟ್ಟಿ ಎಂಬ ಗ್ರಾಮದಲ್ಲಿದೆ ಈ ಬೆಳ್ಳೇಕೆರೆ. ಅಗಲಟ್ಟಿಯ ಸಮೀಪದಲ್ಲಿ ಕ್ಯಾಮನಹಳ್ಳಿ, ರಕ್ಷಿದಿ, ಮಾವಿನಕೂಲು, ಗಾನದಹೊಳೆ ಮುಂತಾದ ಗ್ರಾಮ ಸಮುಚ್ಚಯಗಳಿದ್ದು, ಇವೆಲ್ಲ ಗಡಿಗುರುತುಗಳನ್ನು ಮೀರಿ, ಭಾವನಾತ್ಮಕವಾಗಿ ಬೆಳ್ಳೇಕೆರೆಯೊಂದಿಗೆ ಬೆಸೆದುಕೊಂಡಿವೆ.

ಅಗಲಟ್ಟಿಯಲ್ಲಿ ಮೂಡಿಗೆರೆ ರಸ್ತೆಯ ಪಕ್ಕದಲ್ಲಿ ಬೆಳ್ಳೇಕೆರೆಗೆ ಅಂಟಿಕೊಂಡಿರುವ ಜಾಗದಲ್ಲಿ ಒಂದು ಸರಕಾರಿ ಹಿರಿಯ ಪ್ರಾಥಮಿಕ ಶಾಲೆಯಿದೆ. ಈ ಶಾಲೆಯನ್ನು ಇಲ್ಲಿ 'ರಕ್ಷಿದಿ' ಶಾಲೆಯೆಂದೇ ಕರೆಯುವುದು ವಾಡಿಕೆ. ಈ ಶಾಲೆಯ ಅಂಗಳದ ಬದಿಯಲ್ಲೇ 'ಪ್ರಕೃತಿ ರಂಗಮಂಚ' ಎಂಬ ಹೆಸರಿನ ರಂಗಭೂಮಿಯಿದೆ. ಜೈ ಕರ್ನಾಟಕ ಸಂಘದ ರಂಗಚಟುವಟಿಕೆ, ನಾಟಕ ಪ್ರದರ್ಶನ, ಸಂಸ್ಕೃತಿ ಶಿಬಿರ, ವಿಚಾರಗೋಷ್ಠಿ ಮುಂತಾದವುಗಳಿಗೆ ಈ ಶಾಲೆ ಮತ್ತು ಶಾಲಾ ವಠಾರವೇ ಮೊದಲಿಗೆ ಕೇಂದ್ರಸ್ಥಾನವಾಗಿತ್ತು. ಈ ಶಾಲೆಯ ಸಮೀಪದಲ್ಲೇ ಸ್ವಂತ ಜಮೀನು ಹೊಂದಿರುವ ಜೈ ಕರ್ನಾಟಕ ಸಂಘ, ಸಾಹಿತಿ ಪೂರ್ಣಚಂದ್ರ ತೇಜಸ್ವಿಯವರ ನೆನಪಿನ ರಂಗಮಂದಿರ ಸಂಕೀರ್ಣವನ್ನು ಪ್ರಕೃತ ನಿರ್ಮಿಸಲು ತೊಡಗಿದ್ದು, ಅದರ ಮುಕ್ಕಾಲು ಭಾಗ ಕೆಲಸ ಈಗಾಗಲೆ ಮುಗಿದಿದೆ. ಇದೊಂದು ಪೂರ್ಣ ಪ್ರಮಾಣದ ರಂಗಮಂದಿರವಾಗಲು ಇನ್ನೂ ಕೆಲವು ಕಾಲ ಬೇಕಾಗಬಹುದೆನ್ನುತ್ತಾರೆ, ಸಂಘದ ಸ್ಥಾಪಕ ಸದಸ್ಯ, ನಿರ್ದೇಶಕ, ನಟ, ನಾಟಕಕಾರ – ಇವೆಲ್ಲವೂ ಆಗಿರುವ ರಂಗಕರ್ಮಿ ಪ್ರಸಾದ್ ರಕ್ಷಿದಿ. ಈ ರಂಗ ಮಂದಿರದ ಪಕ್ಕದಲ್ಲಿ ಅತಿಥಿಗೃಹವೊಂದು ನಿರ್ಮಾಣಗೊಂಡಿದೆ. ರಂಗಮಂದಿರ ಸಂಕೀರ್ಣದಲ್ಲಿ ವಾಚನಾಲಯ, ಗ್ರಂಥಭಂಡಾರ ಮುಂತಾದವುಗಳನ್ನು ನೆಲೆಗೊಳಿಸುವ ಯೋಜನೆ ಜೈ ಕರ್ನಾಟಕ ಸಂಘದ ಬಹುಕಾಲದ ಕನಸು.

ಜೈ ಕರ್ನಾಟಕ ಸಂಘದ ಮೊದಲ ರಂಗತರಬೇತಿ ಶಿಬಿರ, ಸಾಹಿತಿ ತೇಜಸ್ವಿಯ

# ಗ್ರಾಮೀಣ ರಂಗಚಳವಳಿಗೆ ಒಂದು ಮಾದರಿ ಬೆಳ್ಳೇಕೆರೆ



'ಸಾಣೆಭಟ್ಟನ ಸ್ವರ್ಗದ ಕನಸು' ನಾಟಕದ ಒಂದು ದೃಶ್ಯ

ವರಿಂದ 'ಪ್ರಕೃತಿ ರಂಗಮಂಚ'ದಲ್ಲಿ ೧೯೮೮ರ ನವೆಂಬರ್ ತಿಂಗಳ ಒಂದರಂದು ಕರ್ನಾಟಕ ರಾಜ್ಯೋತ್ಸವದ ದಿನ ಉದ್ಘಾಟಿಸಲ್ಪಟ್ಟಿತು. ಇದೇ ಸಂದರ್ಭದಲ್ಲಿ ತೇಜಸ್ವಿಯವರ 'ತಬರನ ಕತೆ'ಗೆ ರಾಷ್ಟ್ರೀಯ ಚಲನಚಿತ್ರ ಕಥಾ ಪ್ರಶಸ್ತಿ ಪ್ರಕಟಗೊಂಡಿತ್ತು. ಈ ಪ್ರಶಸ್ತಿ ಸ್ವೀಕಾರಕ್ಕೆ ಅವರು ದೆಹಲಿಗೆ ತೆರಳಿರಬಹುದೆಂದು ಭಾವಿಸಿದ ಮಂದಿಗೆ, ಅಚ್ಚರಿ-ಸಂತೋಷ ಎರಡನ್ನೂ ಉಂಟುಮಾಡುವಂತೆ ಅವರು ಬೆಳ್ಳೇಕೆರೆಗೇ ಬಂದುಬಿಟ್ಟಿದ್ದರು.

ತೇಜಸ್ವಿಯವರು ಉದ್ಘಾಟಿಸಿದ ಈ ರಂಗತರಬೇತಿ ಶಿಬಿರವನ್ನು ನಡೆಸಿಕೊಟ್ಟವರು ನೀನಾಸಂ ಪದವೀಧರರಾಗಿ, ನೀನಾಸಂ ತಿರುಗಾಟದಲ್ಲಿ ಮೂರು ವರ್ಷಗಳ ಕಾಲ ನಟರಾಗಿದ್ದ ಮಂಡ್ಯ ರಮೇಶ್ ಮತ್ತು ಕೃಷ್ಣಕುಮಾರ್ ನಾರ್ಣಕಜೆ. ಜೈ ಕರ್ನಾಟಕ ಸಂಘದ ಮೊದಲ ರಂಗತರಬೇತಿ ಶಿಬಿರಕ್ಕೆ ಈ ಇಬ್ಬರು ಗೆಳೆಯರು ಆಯ್ದುಕೊಂಡ ನಾಟಕ - ಬಂಕಾಪುರದ ಬಯಲಾಟ. ಈ ರಂಗಕೃತಿಯನ್ನು ಮಣಿ ಮಧುಕರ ಅವರ ಹಿಂದಿ ನಾಟಕದಿಂದ ರೂಪಾಂತರಿಸಿದವರು, ಪ್ರಕೃತ ಕರ್ನಾಟಕ ನಾಟಕ ಅಕಾಡೆಮಿಯ ಸದಸ್ಯರಾಗಿರುವ ಡಾ|| ಎಚ್. ಎಂ. ಕುಮಾರಸ್ವಾಮಿ.

ಬಂಕಾಪುರದ ಬಯಲಾಟದ ಈ ರಂಗಶಿಬಿರಕ್ಕೆ ರಕ್ಷಿದಿ, ಪೂರ್ಣಿಮಾ ಹಾಗೂ ಸುತ್ತಮುತ್ತಲಿನ ಕಾಫಿ ಎಸ್ಟೇಟುಗಳಲ್ಲಿ ದುಡಿಯುತ್ತಿದ್ದ ಕೂಲಿ ಕಾರ್ಮಿಕರನ್ನು, ಗಾರೆ ಕೆಲಸದವರನ್ನು, ಬಡಗಿ, ದರ್ಜಿ, ಕ್ಷೌರಿಕ ಮುಂತಾದ ವೃತ್ತಿಗಳ ದುಡಿಮೆಗಾರರನ್ನು ಆಯ್ಕೆಮಾಡಲಾಗಿತ್ತು. ಇವರಲ್ಲಿ ಬಹುಮಂದಿ ಅನಕ್ಷರಸ್ಥರೇ ಆಗಿದ್ದರು. ಇಂಥವರನ್ನು ಸಂಘಟಿಸುವಲ್ಲಿ ಜೈ ಕರ್ನಾಟಕ ಸಂಘದ ಸದಸ್ಯರು ಪಟ್ಟ ಶ್ರಮ ಅಪರಿಮಿತ.

ಜೈ ಕರ್ನಾಟಕ ಸಂಘದ ಆಶ್ರಯದಲ್ಲಿ ನೀನಾಸಂ ತಿರುಗಾಟದ ನಾಟಕಗಳು ಬೆಳ್ಳೇಕೆರೆಯಲ್ಲಿ ಪ್ರದರ್ಶಿಸಲ್ಪಟ್ಟಿವೆಯಲ್ಲದೆ ಈಗಲೂ ಪ್ರದರ್ಶನಗೊಳ್ಳುತ್ತಿವೆ. ರಾಜ್ಯದ ಅನೇಕ ರಂಗತಂಡಗಳು ಇಲ್ಲಿ ನಾಟಕಗಳನ್ನು ಪ್ರದರ್ಶಿಸಿವೆ. ಇವುಗಳಲ್ಲಿ ಸೃಷ್ಟಿ ಕೊಡಗು ರಂಗ, ರಂಗಾಯಣ, ಪ್ರಯೋಗ ರಂಗ, ಕಿನ್ನರ ಮೇಳ ಪ್ರಮುಖವಾದವುಗಳು. ಈ ಸಂಘ ಅನೇಕ ರಂಗಶಿಬಿರಗಳನ್ನು ಏರ್ಪಡಿಸಿದೆ. ಮಂಡ್ಯ ರಮೇಶ್, ಕೃಷ್ಣಕುಮಾರ್ ನಾರ್ಣಕಜೆ, ಧ್ರುವರಾಜ ದೇಶಪಾಂಡೆ, ವಿನೋದ್ ಅಂಬೇಕರ್, ಹುಲುಗಪ್ಪ ಕಟ್ಟೀಮನಿ, ಮೂರ್ತಿ ದೇರಾಜೆ, ರತ್ನ ತಿಪಟೂರು ಮೊದಲಾದ ರಂಗಕರ್ಮಿಗಳು ಇಂಥ ಶಿಬಿರಗಳನ್ನು ನಡೆಸಿಕೊಟ್ಟವರು. ಈ ಸಂಘಕ್ಕೆ ಭೇಟಿ ನೀಡಿದವರಲ್ಲಿ ರಂಗಾಯಣದ ನಿರ್ದೇಶಕರಾಗಿದ್ದ ನಾಟಕಕಾರ ಪ್ರಸನ್ನ, ಕರ್ನಾಟಕ ನಾಟಕ ಅಕಾಡೆಮಿಯ ಅಧ್ಯಕ್ಷರಾಗಿದ್ದ ಆರ್. ನಾಗೇಶ್ ಮತ್ತು ಶ್ರೀನಿವಾಸ್ ಜಿ. ಕಪ್ಪಣ್ಣ, ರಂಗಕರ್ಮಿಗಳಾದ ಎಚ್. ಜಿ. ಸೋಮಶೇಖರ ರಾವ್ ಮತ್ತು ಎಚ್. ವಿ. ವೆಂಕಟಸುಬ್ಬಯ್ಯ ಪ್ರಮುಖರು.

ಜೈ ಕರ್ನಾಟಕ ಸಂಘದ ಕೆಲವು ಸದಸ್ಯರು ನೀನಾಸಂನಲ್ಲಿ ತರಬೇತಿ ಪಡೆದವರು. ೧೯೯೩ರಲ್ಲಿ ಧ್ರುವರಾಜ ದೇಶಪಾಂಡೆಯವರ ನಿರ್ದೇಶನದಲ್ಲಿ ಒಂದು ವಿಶೇಷ ರಂಗಶಿಬಿರ ರಕ್ಷಿದಿಯ ಶಾಲೆಯಲ್ಲಿ ನಡೆಯಿತು. ಶಾಲಾ ಶಿಕ್ಷಕರಿಗಾಗಿ ಆಯೋಜಿಸಿದ್ದ ಈ ಶಿಬಿರದಲ್ಲಿ ಶಿಕ್ಷಕರಾಗಿ ಹೆಚ್ಚಿನ ಸಾಧನೆ ಮಾಡಿದ್ದ ಅನೇಕ ಶಿಕ್ಷಕರು ಭಾಗವಹಿಸಿದ್ದರು. ಈ ಶಿಬಿರದ ಶಿಬಿರಾರ್ಥಿಗಳಿಂದ ರೂಪುಗೊಂಡ 'ಕರುಣಾಳು ಬಾ ಬೆಳಕೆ' ನಾಟಕ ಅನೇಕ ಕಡೆಗಳಲ್ಲಿ ಪ್ರದರ್ಶಿಸಲ್ಪಟ್ಟಿತು.

ಹಾಸನ ಜಿಲ್ಲೆಯಲ್ಲಿ ಸರಕಾರಿ ಸಾಕ್ಷರತಾ ಆಂದೋಲನ ಪ್ರಾರಂಭವಾಗುವುದಕ್ಕೆ ಮೊದಲೇ ಜೈ ಕರ್ನಾಟಕ ಸಂಘ, ಪ್ರಸಾದ್ ರಕ್ಷಿದಿ ರಚಿಸಿ, ನಿರ್ದೇಶಿಸಿದ 'ಭೀಮಣ್ಣನ ಕಥಾಪ್ರಸಂಗ' ಎಂಬ ಬೀದಿ ನಾಟಕವನ್ನು ಪ್ರದರ್ಶಿಸುವುದರ ಮೂಲಕ ಸಾಕ್ಷರತಾ ಜಾಥಾವನ್ನು ನಡೆಸಿತು. 'ಭೀಮಣ್ಣನ ಕಥಾ ಪ್ರಸಂಗ' ಹಾಸನ ಆಕಾಶವಾಣಿಯಲ್ಲಿ ಪ್ರಸಾರಗೊಂಡು ಉತ್ತಮ ಸಾಕ್ಷರತಾ ನಾಟಕವೆಂದು ಮನ್ನಣೆ ಪಡೆಯಿತು.

೧೯೯೩ರಲ್ಲಿ ಕರ್ನಾಟಕ ನಾಟಕ ಅಕಾಡೆಮಿಯಿಂದ ನಡೆದ ಗ್ರಾಮೀಣ ರಂಗೋತ್ಸವದಲ್ಲಿ ಪ್ರಸಾದ್ ರಕ್ಷಿದಿ ರಚಿಸಿ, ನಿರ್ದೇಶಿಸಿದ 'ಮಾಯಾಮೃಗ' ನಾಟಕ, ವಿಭಾಗ ಮಟ್ಟದಲ್ಲಿ ಪ್ರಥಮಸ್ಥಾನ ಪಡೆದು, ಗುಲಬರ್ಗಾದಲ್ಲಿ ನಡೆದ ರಾಜ್ಯಮಟ್ಟದ

ಉತ್ಸವದಲ್ಲೂ ಪ್ರಥಮ ಸ್ಥಾನ ಪಡೆಯಿತು. ಇವುಗಳಿಂದಾಗಿ ಜೈ ಕರ್ನಾಟಕ ಸಂಘ ವಿಶೇಷ ಗೌರವಕ್ಕೆ ಪಾತ್ರವಾಯಿತು. ಸಂಘವು ಪ್ರದರ್ಶಿಸಿದ ಇತರ ಕೆಲವು ಪ್ರಮುಖ ನಾಟಕಗಳಲ್ಲಿ – ಧ್ರುವರಾಜ ದೇಶಪಾಂಡೆ ರಚಿಸಿ, ನಿರ್ದೇಶಿಸಿದ 'ಕಣಿವೆ ಕೆಳಗಿನ ಕ್ರಾಂತಿ', ಪ್ರಸಾದ್ ರಕ್ಷಿದಿ ರಚಿಸಿ, ನಿರ್ದೇಶಿಸಿದ 'ಇಂಡಿಯಾ – ೧೯೯೧', ಪ್ರಸಾದ್ ರಕ್ಷಿದಿ ನಿರ್ದೇಶನದ ಪರ್ವತವಾಣಿಯವರ 'ಹಣಹದ್ದು' ನಾಟಕ, ಮೊಲಿಯೇರ್‌ನ 'ಬೂರ್ಜ್ವಾ ಜಂಟಲ್‌ಮನ್'ನ ರಂಗರೂಪ 'ಪ್ಲಾಂಟರ್ ಪರಮೇಶಿ' ನಾಟಕಗಳನ್ನು ವಿಶೇಷವಾಗಿ ಹೆಸರಿಸಬಹುದು.

೨೦೦೨ರಲ್ಲಿ ಜೈ ಕರ್ನಾಟಕ ಸಂಘ, ರಂಗಾಯಣದ ಸಹಯೋಗದೊಂದಿಗೆ ನಟ, ನಾಟಕಕಾರ ರಾಮನಾಥ್ ರವರ 'ಅರಹಂತ' ನಾಟಕವನ್ನು ಹುಲುಗಪ್ಪ ಕಟ್ಟೀಮನಿ ಯವರ ನಿರ್ದೇಶನದಲ್ಲಿ ಸಕಲೇಶಪುರ, ಸುಳ್ಯ ಹಾಗೂ ಕರ್ನಾಟಕದ ಅನೇಕ ಊರುಗಳಲ್ಲಿ ಪ್ರದರ್ಶಿಸಿ ಜನಮೆಚ್ಚುಗೆ ಪಡೆಯಿತು.

೨೦೦೩ರಲ್ಲಿ ಜೈ ಕರ್ನಾಟಕ ಸಂಘ, ಬೆಳ್ಳೇಕೆರೆಯ ರಂಗಚಟುವಟಿಕೆಗಳ ಬೆಳ್ಳಿ ಹಬ್ಬವನ್ನು ಕರ್ನಾಟಕ ನಾಟಕ ಅಕಾಡೆಮಿಯ ಸಹಕಾರದೊಂದಿಗೆ ಗ್ರಾಮೀಣ ರಂಗೋತ್ಸವವಾಗಿ ಆಚರಿಸಿತು. ಆಗ ಬೆಂಗಳೂರು, ಉಡುಪಿ ಹಾಗೂ ಕರ್ನಾಟಕದ ಇತರ ಊರುಗಳಿಂದ ಬಂದ ರಂಗತಂಡಗಳಿಂದ ಮತ್ತು ಜೈ ಕರ್ನಾಟಕ ಸಂಘದ ನಾಟಕ ತಂಡದಿಂದ ಬೆಳ್ಳೇಕೆರೆಯಲ್ಲಿ ನಾಟಕ ಪ್ರದರ್ಶನಗಳು ನಡೆದವು. ಮಕ್ಕಳಿಗಾಗಿ ರಂಗಶಿಬಿರ ಗಳನ್ನು ನಡೆಸಿದ ಜೈ ಕರ್ನಾಟಕ ಸಂಘ, ಈ ನಾಟಕೋತ್ಸವದಲ್ಲಿ ಪ್ರಸಾದ್ ರಕ್ಷಿದಿ ರಚಿಸಿ, ನಿರ್ದೇಶಿಸಿದ 'ಮೂರ್ಕಣ್ಣು ಗುಡ್ಡ', ರಂಗಕರ್ಮಿ ಮೂರ್ತಿ ದೇರಾಜೆ ರೂಪಿಸಿ, ನಿರ್ದೇಶಿಸಿದ 'ಮತ್ತೆ ಹುಣ್ಣಿಮೆ ಬಂತು', ರಂಗಕರ್ಮಿ ರತ್ನ ತಿಪಟೂರು ನಿರ್ದೇಶಿಸಿದ 'ಸಿಂಗ ಸಿಂಗಿ ಸಂಸಾರ' – ಇತ್ಯಾದಿ ಮಕ್ಕಳ ನಾಟಕಗಳನ್ನು ಪ್ರದರ್ಶಿಸಿತು. ಈ ಪ್ರದರ್ಶನಗಳಿಗೆ ಮಲೆನಾಡಿನ ಜನವರಿ ತಿಂಗಳ ಚಳಿಯನ್ನೂ ಲೆಕ್ಕಿಸದೆ ಮೂರರಿಂದ ನಾಲ್ಕು ಸಾವಿರ ಪ್ರೇಕ್ಷಕರು ಬಂದುದೊಂದು ಚಿರಸ್ಮರಣೀಯ ದಾಖಲೆಯಾಗಿಬಿಟ್ಟಿತು.

೨೦೦೪ರಲ್ಲಿ ಜೈ ಕರ್ನಾಟಕ ಸಂಘ, ಕುವೆಂಪು ಶತಮಾನೋತ್ಸವ ಕಾರ್ಯಕ್ರಮಕ್ಕೆ ಕುವೆಂಪುರವರ 'ಧನ್ವಂತರಿ ಚಿಕಿತ್ಸೆ' ಎಂಬ ಸಣ್ಣ ಕತೆಯನ್ನು ರಂಗಕ್ಕೆ ಅಳವಡಿಸಿ, ೨೦೦೫ರವರೆಗೂ ಹಲವು ಪ್ರದರ್ಶನ ಗಳನ್ನು ನೀಡಿತು. ಈ ಕತೆಯ ರಂಗರೂಪ ಮತ್ತು ನಿರ್ದೇಶನ ಪ್ರಸಾದ್ ರಕ್ಷಿದಿ ಅವರದು.

೨೦೦೬ರಲ್ಲಿ ಜೈ ಕರ್ನಾಟಕ ಸಂಘ, ತನ್ನ ಇಪ್ಪತ್ತೆಂಟನೆಯ ವರ್ಷದಲ್ಲಿ ಕೆ. ವಿ. ಸುಬ್ಬಣ್ಣನವರ ನೆನಪಿನ ನಾಟಕೋತ್ಸವವನ್ನು ಅತ್ಯಂತ ವಿಜೃಂಭಣೆ ಯಿಂದ ಅರ್ಥಪೂರ್ಣವಾಗಿ ಆಚರಿಸಿತು. ೨೦೦೭ರ ಜನವರಿಯಲ್ಲಿ ಚಿತ್ರಕಲಾ ಉತ್ಸವದೊಂದಿಗೆ ಮೂರ್ತಿ ದೇರಾಜೆಯವರ ಮಕ್ಕಳ ನಾಟಕ 'ಹುಣ್ಣಿಮೆ ಅಜ್ಜ ಬಂದ' ಮತ್ತು ಪ್ರಸಾದ್ ರಕ್ಷಿದಿಯವರ 'ಚಂದ್ರ ಮಂಡಲ' ನಾಟಕವನ್ನು ಪ್ರದರ್ಶಿಸಿತು.

# ನಡೆದಿರುವುದು ಹೀಗೆ

ನೋಟವಿದ್ದರೆ ಕಣ್ಣು ತುಂಬಿ
ಮನಸು ಇದ್ದರೆ ಮಾತನಾಡಿ
ಹೃದಯವಿದ್ದರೆ ಹಾಡು ಹಾಡಿ
ಇಲ್ಲವಾದರೆ ದಿವ್ಯ ಮೌನಿ

ದಿವಿನಾಗಿ ದಿಕ್ಕಗಲ
ಜೀವಿ ಜೀವಕ್ಕೆ ದಿಕ್ಕಾಗಿ
ಬಿಟ್ಟಷ್ಟು ಬೆಳೆಯುತ್ತ
ಬೆಳೆದಷ್ಟು ಈಯುತ್ತ

ಜೀವನಕೆ ಸಂಜೀವನ
ತಾನಾದ ಮರಭೂಮಿ
ಚಿತ್ತಾಪಹಾರಿ
ಇಳೆಗೆ ವರಲಕ್ಷ್ಮಿ

ಇಂತಿಪ್ಪ ದೇಶದಲಿ
ರಂಪ ಕಾಡಿಗೆ ಬಂತು
ರಂಪ ಕಾಡನಾಳಿತು
ರಂಪ ಕಾಡಿನ ಬದುಕು

ರಂಪದ ಸಾಮ್ರಾಜ್ಯದಲ್ಲಿ
ದೋಟಿ ಅಪರಾಧಿ
ಆದಿಮರೇ ಕುತ್ತು
ಫರಮಾನು, ಹೊರದಬ್ಬಿ

ರಂಪ ಅಡವಿಯಲಿ
ಭಾಷಣ ಬಯಲು ಸೀಮೆಯಲಿ
ಮರ ಬೆಳೆಸಿ ಕಾಡುಳಿಸಿ
ವಿಂಧ್ಯಾಟವಿ ನಾಡ ಸಿರಿ



ಶಬ್ದ, ಶಬ್ದಮಾಲಿನ್ಯ
ತಡೆಯಿರೆನ್ನಲು ಹಚ್ಚಿದೆ
ಗಂಟೆಗಟ್ಟಲೆ ಮೈಕು
ಅಬ್ಬರಿಕೆಯಲ್ಲಿ ಪ್ರಚಾರ

ಕಾಡುಳಿಸಿ ಕಾಡುಳಿಸಿ
ಕಡಿದ ಕಾಡನು ಬೆಳೆಸಿ
ಮನೆಗೊಂದು ಮರ
ಊರಿಗೊಂದು ವನ

ವೇದಿಕೆಯ ಮಾತು
ವೇದಿಕೆಗಳ ಮಾತುಗಳು
ಕುರ್ಚಿ ಮೇಜುಗಳೊಡನೆ
ಲಾರಿಯೊಂದಿಗೇ ಬುರ್ರು

ಮರದಂತೆ ಮೌನಿ ತಿಮ್ಮಕ್ಕತಾಯಿ
ನಡುಗು ಕೈಯಲ್ಲಿ ಕೊಡೆ ಹಿಡಿದು
ಬಿಸಿಲಲ್ಲೆ ಹೊರಟಿದ್ದಾಳೆ ಬೇಸಿಗೆ,
ಎಷ್ಟು ದಿನ ಬಂದೀತು ಕುಂಟೆನೀರು

ಮಳೆದೇವಿ ಕೊಡು ತಾಯಿ
ಒಂದೆರಡು ಹದ ಮಳೆ
ಬೇಸಗೆ ಕಳೆವರೆಗೆ
ಬತ್ತದಿರಲಿ ಗಂಗೆ

ಮರವಿರುವ ಮನಗಳ
ಪುಣ್ಯಾತ್ಮರಿಂದಲೆ ಮಳೆ ಬೆಳೆ
ಎಂಬ ಮಾತದು ದಿಟವೆಂಬಂತೆ
ಒಂದಲ್ಲದಿದ್ದರು ಇನ್ನೊಂದು ಮಳೆ
ಇದಲ್ಲದಿದ್ದರು ಇನ್ನೊಂದು ಬೆಳೆ.

ಸ. ರಘುನಾಥ
ರಾಮಕೃಷ್ಣ ಬಡಾವಣೆ, ಶ್ರೀನಿವಾಸಪುರ - ೫೬೩ ೧೩೫, ಕೋಲಾರ ಜಿಲ್ಲೆ




ಜೈ ಕರ್ನಾಟಕ ಸಂಘ ತನ್ನ ಬಹುಪಾಲು ಚಟುವಟಿಕೆಗಳನ್ನು ಇತ್ತೀಚೆಗೆ ಪೂರ್ಣಚಂದ್ರ ತೇಜಸ್ವಿ ರಂಗಮಂದಿರ ಸಂಕೀರ್ಣಕ್ಕೆ ವರ್ಗಾಯಿಸಿದೆ. ೨೦೦೯ರ ನವೆಂಬರ್ ೨೮-೨೯ ದಿನಗಳಲ್ಲಿ ಇಲ್ಲಿ ನಡೆದ ಕಥಾ ಕಮ್ಮಟ ನಡೆಸಿಕೊಡಲು ಸಾಹಿತಿಗಳ ದಂಡೇ ಇಲ್ಲಿಗೆ ಆಗಮಿಸಿದ್ದಿತು.

೨೦೦೯ರ ಡಿಸೆಂಬರ್ ತಿಂಗಳಲ್ಲಿ ಜೈ ಕರ್ನಾಟಕ ಸಂಘ 'ಪೂರ್ಣಚಂದ್ರ ತೇಜಸ್ವಿ ರಂಗಮಂದಿರ' ಸಂಕೀರ್ಣದಲ್ಲಿ ಏರ್ಪಡಿಸಿದ ಒಂದು ವಿಶೇಷ ಕಾರ್ಯಕ್ರಮ - ಪರಿಸರ ಜಾಗೃತಿ ಸಮಾವೇಶ. ಹಸಿರು ಸಂತನೆಂದೇ ಖ್ಯಾತರಾಗಿರುವ 'ಚಿಪ್ಕೋ' ಚಳವಳಿಯ ನೇತಾರ, ಪ್ರತಿಷ್ಠಿತ ಪದ್ಮವಿಭೂಷಣ ಪ್ರಶಸ್ತಿ ವಿಜೇತ ಸುಂದರಲಾಲ್ ಬಹುಗುಣ ತಮ್ಮ ಪರಿವಾರದೊಂದಿಗೆ ಆಗಮಿಸಿ, ಸಂಘ ಆಯೋಜಿಸಿದ 'ಪ್ರಕೃತಿ ಪರಿಸರ ಯಾತ್ರೆ'ಯನ್ನು ಉದ್ಘಾಟಿಸಿದರು. ಉದ್ಘಾಟನೆಯ ಸಂದರ್ಭದಲ್ಲಿ ಬಹುಗುಣರು ಮುಖ್ಯವಾಗಿ ಆಡಿದ್ದಿಷ್ಟೆ – ''ನಾಟಕ ಎಷ್ಟು ಪರಿಣಾಮಕಾರಿ ಎಂದರೆ, ಅದು ಕಿವಿ, ಕಣ್ಣು ಎರಡನ್ನೂ ತೆರೆಸುತ್ತದೆ. ಆದರೆ ಭಾಷಣ ಕಿವಿಗೆ ಮಾತ್ರ. ಪರಿಸರ ಜಾಗೃತಿಗೆ ನಾಟಕವನ್ನು ಮಾಧ್ಯಮವಾಗಿ ಬಳಸಿಕೊಂಡರೆ, ಅದು ಹೆಚ್ಚು ಪರಿಣಾಮಕಾರಿ.''

ಬೆಳ್ಳೇಕೆರೆಯಲ್ಲಿ ನಿತ್ಯ ಬೆಳ್ಳಕ್ಕಿಗಳು ನಲಿಯುತ್ತಿರುವಂತೆ ನಾಟಕಗಳಿಗೆ ಇಲ್ಲಿ ರೆಕ್ಕೆಗಳು ಮೂಡಿವೆ. ಇಲ್ಲಿನ ಇಡೀ ಪ್ರದೇಶದಲ್ಲಿ ನಾಟಕವೇ ಬದುಕಿನ ಉಸಿರಾಗಿದೆ. ನಾಟಕಗಳ ಮುಖಾಂತರ ಅಕ್ಷರ ಕ್ರಾಂತಿ, ಸಾಹಿತ್ಯ-ಕಲೆಗಳ ಬಗೆಗಿನ ಚಿಂತನೆ, ರಾಜಕೀಯ ಜಾಗೃತಿ, ಪರಿಸರ ರಕ್ಷಣೆ ಮುಂತಾದವುಗಳಿಗೆಲ್ಲ ಇಲ್ಲಿ ನೆಲೆ, ಬೆಲೆ ಎರಡೂ ಪ್ರಾಪ್ತವಾಗಿವೆ.


**ಜಿ. ಎಸ್. ಉಬರಡ್ಕ**

'ಕಾರ್ತಿಕ', ನಾರ್ಣಕಜೆ, ಅಂಚೆ : ದೊಡ್ಡತೋಟ - ೫೭೪ ೨೪೮

ಸುಳ್ಯ ತಾಲ್ಲೂಕು, ದಕ್ಷಿಣ ಕನ್ನಡ ಜಿಲ್ಲೆ

# ಮಕ್ಕಳಿಗೆ ರಾಜನೀತಿ ಪಾಠ: ದೊಡ್ಡದಕ್ಕೆ ಬೆಲೆ – ಚಿಕ್ಕದು ಇನ್ನೂ ಚಿಕ್ಕದಾಗುವುದು



ಎಂ. ಟಿ. ಲಾಲ್

ದೊಡ್ಡದು, ಅಗಾಧವಾದ್ದು, ಬೃಹತ್ತಾದ್ದು: ಇವುಗಳ ವ್ಯಾಮೋಹ ಮತ್ತು ಆಕರ್ಷಣೆ ಬೃಹತ್ತಾಗಿದೆ. ಆದ್ದರಿಂದ ಅದಕ್ಕೆ ತೆರುವ ಬೆಲೆಯ ಅಗಾಧತೆ ಮಸುಕಾಗುತ್ತಿದೆ. ಅಗಾಧಕ್ಕೆ ವ್ಯತಿರಿಕ್ತವಾಗಿ ಚಿಕ್ಕದೂ ಇರುತ್ತದೆ. ಆದರೆ ಅಗಾಧವು ಅಗಾಧವಾಗುವಾಗ ಚಿಕ್ಕದನ್ನು ಇನ್ನೂ ಚಿಕ್ಕದನ್ನಾಗಿಸುತ್ತಿರುತ್ತದೆ. ಮಕ್ಕಳಿಗೆ ಇದು ಗೊತ್ತಾಗಬೇಕು. ಆದರೆ ಗೊತ್ತಾಗುವುದು ಹೇಗೆ ?



ಶಾಲೆಗೆ ಹೋಗುವ ಮಗು ಸಹ ತಿಳಿದಿರಬೇಕಾದ ಕೆಲವು ಅಂಕಿ-ಸಂಖ್ಯೆಗಳಿವೆ. ಉದಾಹರಣೆಗೆ, ಬೆಂಗಳೂರು ನಗರದಲ್ಲಿ ಈಗ ಐದು ವರ್ಷಗಳ ಹಿಂದೆ (೨೦೦೫ರಲ್ಲಿ) ತಲಾ ಮಾಸಿಕ ವೆಚ್ಚ ೧೫,೫೦೦ ರೂಪಾಯಿಗಳಾಗಿದ್ದಿತು. ಅದೇ, ಇಡೀ ದೇಶದ ವಾರ್ಷಿಕ ಆದಾಯ ತಲಾ ೧೫,೫೦೦ ಇದ್ದಿತು. ಅಂದರೆ, ಬೆಂಗಳೂರಿನ ಒಬ್ಬ ನಿವಾಸಿಯು ದೇಶದ ಸರಾಸರಿ ಆದಾಯಕ್ಕಿಂತಲೂ ಹನ್ನೆರಡು ಪಟ್ಟು ಜಾಸ್ತಿ ಹಣವನ್ನು ವೆಚ್ಚ ಮಾಡುತ್ತಿದ್ದ(ಳು). ಭಾರತದಲ್ಲಿ ಬೆಂಗಳೂರೆಂದರೆ ಅತಿ ಹೆಚ್ಚು ದುಬಾರಿ ನಗರ. ಕೊಲ್ಕತ್ತಾದ ಮಾಸಿಕ ವೆಚ್ಚ ೭೦೦೦ರೂ. ಮಾತ್ರ; ಅಂದರೆ ಬೆಂಗಳೂರಿನ ಅರ್ಧದಕ್ಕಿಂತ ಕಡಿಮೆ. ಮುಂಬೈ, ದೆಹಲಿ, ಚೆನ್ನೈ ಮತ್ತು ಹೈದರಾಬಾದುಗಳಲ್ಲಿ ಮಾಸಿಕ ವೆಚ್ಚ ೧೧,೦೦೦ರೂ.ಗಳಿಂದ ೯,೦೦೦ ರೂ.ಗಳವರೆಗೆ ಇರುತ್ತಿತ್ತು.

ಇದನ್ನು ತಿಳಿದ ಬೆಂಗಳೂರಿನ ಒಂದು ಶಾಲೆಯ ಮಗು ಕೇಳಬೇಕಾದ ಪ್ರಶ್ನೆ ಏನು? ''೧೫,೫೦೦ ರೂಪಾಯಿಯೆಂದರೆ ದೊಡ್ಡ ಮೊತ್ತ. ಅಷ್ಟನ್ನು ವೆಚ್ಚ ಮಾಡುವವರು ಯಾರು ? ಒಬ್ಬ ಸಾಮಾನ್ಯ ಕೆಲಸಗಾರನ ಮಗುವಿನ ತಂದೆ ಬೆಂಗಳೂರಿನಲ್ಲಿ ಅಷ್ಟೊಂದು ವೆಚ್ಚ ಮಾಡಲು ಅವನಿಗೆ ಹಣ ಎಲ್ಲಿಂದ ಬರುತ್ತದೆ ? ಎಷ್ಟೋ ತಂದೆ-ತಾಯಿಯರು ತಿಂಗಳಿಗೆ ಐನೂರು ಅಥವಾ ಸಾವಿರ ರೂಪಾಯಿ ಖರ್ಚು ಮಾಡಿದರೆ ಅದೃಷ್ಟ ಎನ್ನುತ್ತಾರಲ್ಲ! ಅದರಲ್ಲಿ ಸ್ವತಃ ಮಗುವಿನ ಪಾಲಿಗೆಷ್ಟು ಬಂದಿರಬಹುದು ? ಆದರೆ ಬೆಂಗಳೂರಿನ ಸರಾಸರಿ ವೆಚ್ಚ ೧೫, ೫೦೦ ರೂಪಾಯಿ ! ಹಾಗಿದ್ದರೆ ಮಿಕ್ಕ ಅಷ್ಟೊಂದು ಹಣ ಎಲ್ಲಿ ಹೋಯಿತು, ಯಾರು ವೆಚ್ಚ ಮಾಡಿದರು ?'' (ಬೆಲೆಗಳು ಹೆಚ್ಚುತ್ತಿರುವ ಇಂದಿನ ದಿನಗಳಲ್ಲಿ ೨೦೦೫ರ ೧೫,೫೦೦ರೂಪಾಯಿ ಏನಿಲ್ಲವೆಂದರೂ ೨೨,೦೦೦ ಅಥವಾ ೨೫,೦೦೦ ಇರಬಹುದು).



ದೊಡ್ಡ ನಗರಗಳು ದೇಶದ ರೊಟ್ಟಿಯ ಇಷ್ಟು ದೊಡ್ಡ ಭಾಗವನ್ನು ಕಿತ್ತುಕೊಂಡುಬಿಟ್ಟಿದ್ದರೆ ಹಳ್ಳಿಗಳಲ್ಲಿರುವ ಮಗುವಿಗೆ ಸಿಗುವುದೇನು ? ಆದರೆ ಆ ಮಕ್ಕಳು ದೇಶದ ದೊಡ್ಡ ಸಂಖ್ಯೆ; ಏಕೆಂದರೆ ಹಳ್ಳಿಗಳ ಜನಸಂಖ್ಯೆ ದೇಶದ ಜನಸಂಖ್ಯೆಯ ಶೇಕಡ ೭೨.

ಮೊನ್ನೆ ಮೊನ್ನೆ (೨೦೧೦ರ ನವೆಂಬರ್ ೨೯) ಅಮೆರಿಕಾದ ''ನ್ಯೂಸ್‌ವೀಕ್'' ಎಂಬ ನಿಯತಕಾಲಿಕವು ಒಂದು ಲೇಖನ ಪ್ರಕಟಿಸಿತ್ತು. ಅದರ ಪ್ರಕಾರ ನ್ಯೂಯಾರ್ಕ್ ನಗರದ ವ್ಯಕ್ತಿಗಳ ಸರಾಸರಿ ಮಾಸಿಕ ವೆಚ್ಚವು ಸುಮಾರು ಐದು ಲಕ್ಷ ಜನಸಂಖ್ಯೆ ಇರಬಹುದಾದ ಚಿಕ್ಕ ನಗರಗಳಲ್ಲಿನ ವ್ಯಕ್ತಿಗಳ ಸರಾಸರಿ ಮಾಸಿಕ ವೆಚ್ಚಕ್ಕಿಂತಲೂ ಮೂರರಷ್ಟು ಜಾಸ್ತಿ. ಹೀಗಿರಲು





ಸಾಧ್ಯವೆ ಎಂಬ ಅನುಮಾನ ಬಂದು ಅಮೆರಿಕಾದ ಒಂದು ಚಿಕ್ಕ ನಗರದಲ್ಲಿ ವಾಸಿಸುತ್ತಿರುವ ಒಬ್ಬ ಭಾರತೀಯ ಪ್ರಾಧ್ಯಾಪಕನ ಬಳಿ ಅದನ್ನು ವಿಚಾರಿಸಿದೆ. ಅವರು ಹೇಳಿದ್ದೇನು ಗೊತ್ತೇ? ''ಒಂದು ಚಿಕ್ಕ ನಗರದಲ್ಲಿ ವಾಸಿಸುವವರ ವೆಚ್ಚಕ್ಕಿಂತಲೂ ದೊಡ್ಡ ನಗರಗಳ ನಿವಾಸಿಗಳು ಶೇಕಡ ೫೦ ಅಥವಾ ೬೦ರಷ್ಟು ಹೆಚ್ಚು ಹಣ ಖರ್ಚು ಮಾಡಬೇಕಾಗುತ್ತದೆ'' ಎಂದು. ಓಹೋ, ಹಾಗಾದರೆ ಈ ಚಿಕ್ಕ-ದೊಡ್ಡ ಎಂಬುದರ ಸಮಾಚಾರ ಪ್ರಪಂಚದಲ್ಲೆಲ್ಲಾ ಹೆಚ್ಚು ಕಡಿಮೆ ಒಂದೇ ಆಗಿದೆ! ಚಿಕ್ಕ ಪಟ್ಟಣದಲ್ಲಿ ದೊರೆಯುವಷ್ಟೇ ಸೌಲಭ್ಯಗಳನ್ನು ಪಡೆಯಲು ದೊಡ್ಡ ನಗರಗಳಲ್ಲಿ ಸಾಕಷ್ಟು ಹೆಚ್ಚು ಹಣ ಬೇಕಾಗುತ್ತದೆ. ಮನೆ ಬಾಡಿಗೆ, ಸಾರಿಗೆ, ಆಹಾರ ಸಾಮಗ್ರಿಗಳ ಬೆಲೆ, ಹೋಟೆಲ್ ತಿಂಡಿಗಳ ದರ, ಮನರಂಜನೆ (ಏನಾದರೂ ಇದ್ದರೆ), ಎಲ್ಲಾ ಹೆಚ್ಚು ಬೆಲೆಯವು.

ಇದೇಕೆ ಹೀಗೆ? ದೊಡ್ಡ ನಗರಗಳಲ್ಲಿ ಜೀವನ ಸಾಗಿಸಲು ವೆಚ್ಚ ಏಕೆ ಜಾಸ್ತಿ? ಎಲ್ಲದರ ಬೆಲೆಯೂ ಅಲ್ಲಿ ಹೆಚ್ಚಾಗುವುದೇಕೆ? ಎಲ್ಲದಕ್ಕೂ ಪರಿಣತರಿರುತ್ತಾರಲ್ಲ, ಅವರನ್ನೇ ಕೇಳಿನೋಡೋಣ. ಆರ್ಥಿಕ ತಜ್ಞರು ಹೇಳುತ್ತಾರೆ, ''ನೋಡಿ, ಚಿಕ್ಕ ಊರುಗಳಲ್ಲಿರುವುದಕ್ಕಿಂತ ದೊಡ್ಡ ಊರುಗಳಲ್ಲಿ ಭೂಮಿಯ ಬೆಲೆ ಜಾಸ್ತಿ. ಕೆಲವೇಳೆ ಅದು ನೂರುಪಟ್ಟು ಹೆಚ್ಚು ಎನ್ನಬಹುದು. ಆದ್ದರಿಂದ ಮನೆಯ ಬೆಲೆ ಅಥವಾ ಬಾಡಿಗೆ ಜಾಸ್ತಿ. ಅಮೆರಿಕಾದಲ್ಲಾದರೆ, ದೊಡ್ಡ ಊರಿನಲ್ಲಿ ಚಿಕ್ಕ ಊರಿನದಕ್ಕಿಂತ ಹತ್ತು ಪಟ್ಟು ಜಾಸ್ತಿ. ಇನ್ನು ಸಾರಿಗೆ ವೆಚ್ಚ. ಸಣ್ಣ ಪಟ್ಟಣದಲ್ಲಿ ಬೈಸಿಕಲ್ ಹತ್ತಿ ಬೇಕಿದ್ದೆಡೆಗೆ ಹೋಗಬಹುದು. ಹೆಚ್ಚೆಂದರೆ ಆಟೋರಿಕ್ಷಾ ಬೇಕಾಗಬಹುದು. ದೊಡ್ಡ ನಗರಗಳಲ್ಲಿ ಸಾರಿಗೆ ಬಾಬ್ತು ವೆಚ್ಚ ವ್ಯಕ್ತಿಯ ಆದಾಯದ ಬಹು ಭಾಗವನ್ನು ನುಂಗಿಬಿಡುತ್ತದೆ. ಈ ಸಂಬಂಧದಲ್ಲಿ ನಾವು ಮರೆಯಬಾರದ ಅಂಶವೇನೆಂದರೆ ದೊಡ್ಡ ನಗರಗಳಲ್ಲಿ ಎಲ್ಲವನ್ನೂ ದೊಡ್ಡ ಪ್ರಮಾಣದಲ್ಲಿ ಮಾಡುತ್ತಾರೆ ಎಂಬುದು. ದೊಡ್ಡ ಕಾರುಗಳು, ದೊಡ್ಡ ಅಂಗಡಿಗಳು, ದೊಡ್ಡ ರಸ್ತೆಗಳು, ದೊಡ್ಡ ಫ್ಲೈ ಓವರ್‌ಗಳು, ದೊಡ್ಡ ಶಾಲೆಗಳು, ದೊಡ್ಡ ಆಸ್ಪತ್ರೆಗಳು, ಮೂರು-ನಾಲ್ಕು ಸಿನಿಮಾ ಮಂದಿರಗಳಿರುವ ದೊಡ್ಡ ಕಾಂಪ್ಲೆಕ್ಸ್‌ಗಳು, ದೊಡ್ಡ ಹೇರ್ ಕಟಿಂಗ್ ಸಲೂನ್‌ಗಳು - ಬ್ಯೂಟಿ ಪಾರ್ಲರ್‌ಗಳು ಹೀಗೆ ಎಲ್ಲಾ ದೊಡ್ಡವೇ. ಚಿಕ್ಕವನ್ನು ಅವು ಕ್ರಮೇಣ ಹೊಸಕಿಹಾಕಿಬಿಡುತ್ತವೆ. ಎಲ್ಲರೂ ದೊಡ್ಡವನ್ನೇ ಬಳಸಲಾಗುವುದಿಲ್ಲ. ಆದ್ದರಿಂದ ಚಿಕ್ಕವೂ ಕೆಲವಿರುತ್ತವೆ. ದೊಡ್ಡವು ಇವೆಯಲ್ಲ, ಅವುಗಳಲ್ಲಿ ಗ್ರಾಹಕರು ದೊಡ್ಡವರೇ ಆಗಬೇಕಲ್ಲ. ಆ ಸೌಲಭ್ಯ, ಝಗಮಗಿಸುವ ಮೋಹಕ ದೀಪಗಳು, ಬೇರೆ ಆಕರ್ಷಣೆಗಳು, ಎಲ್ಲಾ ನಗರದ ಶೇಕಡ ಹತ್ತರಷ್ಟು ಮಂದಿಗೆ ಮೀಸಲು. ನಗರ ಇನ್ನೂ ದೊಡ್ಡದಾದಾಗ ಇನ್ನೂ ಹೆಚ್ಚು ಅಲಂಕಾರ, ಇನ್ನೂ ಹೆಚ್ಚು ಬೆಲೆ. ಹವಾ ನಿಯಂತ್ರಣವನ್ನು ಅಳವಡಿಸುತ್ತಾರಲ್ಲ, ಆಗ ಕಟ್ಟಡದ ನಿಭಾವಣೆಗೆ ಶೇಕಡ ೨೫ರಷ್ಟು ಹೆಚ್ಚಿನ ಖರ್ಚು ಬೀಳುತ್ತದೆ.

ಇವನ್ನೆಲ್ಲಾ ಅನುಭೋಗಿಸುವ ದೊಡ್ಡ ಜನ ಯಾರು? ದೊಡ್ಡ ನಗರಗಳಲ್ಲಿ ಆದಾಯದ ಮುಖ್ಯ ಮೂಲವೆಂದರೆ ಆಸ್ತಿ. ಹಳ್ಳಿಯ ರೈತರೊಬ್ಬರ ಭೂಮಿಯ ಬೆಲೆ ಚದರ ಮೀಟರಿಗೆ ೨೦ ರೂಪಾಯಿ; ಆದರೆ ದೊಡ್ಡ ನಗರದಲ್ಲಿ ಅದಕ್ಕೆ ಎರಡು ಲಕ್ಷ ಬೇಕಾದರೂ ಆಗಬಹುದು. ಆದ್ದರಿಂದ ನಗರಗಳ ಹತ್ತಿರದ ರೈತರ ಜಮೀನನ್ನು ಸೆಳೆದುಕೊಳ್ಳುತ್ತಾ ಹೋಗುತ್ತಾರೆ. ಕಟ್ಟಡ ನಿರ್ಮಾಣದಲ್ಲಿ ತೊಡಗುವ ಮಂದಿ ಸಾವಿರಾರು ಕೋಟಿ ರೂಪಾಯಿಗಳ ವಹಿವಾಟು ನಡೆಸುತ್ತಾರೆ. ಅವರು ಕಟ್ಟಿದ ಭವ್ಯ ಮನೆಗಳನ್ನು ಕೊಳ್ಳುವವರು ಶ್ರೀಮಂತರೇ ಆಗಿರಬೇಕಲ್ಲ! ಈ ಪ್ರಕ್ರಿಯೆ ಸರಳವಾದ್ದು: ನೀವು ನೀಡುವ ಸೇವೆಗೆ ಶುಲ್ಕವನ್ನು ದುಬಾರಿ ಮಾಡುತ್ತೀರಿ, ಅಷ್ಟೆ. ವೈದ್ಯರು, ಶಾಲೆಗಳು, ಆಸ್ಪತ್ರೆಗಳು, ಅಂಗಡಿಗಳು, ಸಿನಿಮಾ ಮಂದಿರಗಳು, ಹೋಟೆಲುಗಳು, ಆಯುಷ್ಕರ್ಮ ಶಾಲೆಗಳು ಹೀಗೆ ಪ್ರತಿಯೊಂದು ಕ್ಷೇತ್ರದವರೂ ತಮ್ಮ ಸೇವೆಗೆ ಶುಲ್ಕವನ್ನು ಹೆಚ್ಚಿಸುತ್ತಾರೆ. ಅದೇ ಸೇವೆಗೆ ಸಣ್ಣ ಊರಿನಲ್ಲಿ ತಗಲುವ ವೆಚ್ಚ ಅಷ್ಟು ಜಾಸ್ತಿ ಇರುವುದಿಲ್ಲ. ನಗರದಲ್ಲಿ ಅದೇ ಮೊಬಲಗಿಗೆ ಸೇವೆ ನೀಡಹೊರಟರೆ ಅದನ್ನು ನೀಡುವವರು ಮನೆ, ಕಾರು, ಸ್ಕೂಟರು, ಶಿಕ್ಷಣ, ವೈದ್ಯಕೀಯ ಇತ್ಯಾದಿ ಸೌಲಭ್ಯ ಪಡೆಯುವುದಾದರೂ ಹೇಗೆ!

ಅಂದರೆ ಇವರೆಲ್ಲಾ ಅವರು ನೀಡುವ ಸೇವೆಗೆ ಪರಸ್ಪರರಲ್ಲಿ ಹೆಚ್ಚಿನ ಶುಲ್ಕ ವಿಧಿಸುತ್ತಿರಬೇಕು. ಅಂಗಡಿಯ ಮಾಲಿಕ ಬೆಲೆ ಹೆಚ್ಚಿಸುವಾಗ ಅಂಗಡಿಗೆ ಕೊಡಬೇಕಾದ ಹೆಚ್ಚಿನ ಬಾಡಿಗೆಯನ್ನು ಕಾರಣವಾಗಿ ತೋರಿಸುತ್ತಾನೆ. ಅದರ ಅಚ್ಚುಕಟ್ಟುತನ, ಆಕರ್ಷಣೆ

ಇತ್ಯಾದಿಗಳ ಖರ್ಚು ಸೇರುತ್ತದೆ. ಅಲ್ಲಿಯ ನೌಕರರ ವೇತನವೂ ಸ್ವಲ್ಪ ಹೆಚ್ಚೇ ಇರಬೇಕು, ಇಲ್ಲದಿದ್ದರೆ ಅವರೇಕೆ ಕೆಲಸಕ್ಕೆ ಬರುತ್ತಾರೆ? ಅವರೂ ಜೀವನ ಭರಿಸಬೇಕು, ಅದಕ್ಕೆ ಹೆಚ್ಚಿನ ಹಣದ ಅಗತ್ಯವಿರುತ್ತದೆ. ಹಾಗೆಯೇ ಶಾಲಾ ಶುಲ್ಕ ಕೂಡ. ಕೆಲವು ಶಾಲೆಗಳಲ್ಲಿ ಅದು ಐದಂಕಿಗಳ ಮೊತ್ತವಾಗಿಬಿಡುತ್ತದೆ. ಆಸ್ಪತ್ರೆಗಳಲ್ಲಿ ಸೇವಾಶುಲ್ಕಕ್ಕೆ ಗರಿಷ್ಠ ಮಿತಿ ಎಂಬುದಿರುವುದಿಲ್ಲ. ಮನರಂಜನೆಯ ಬಾಬ್ತುಗಳಲ್ಲೂ ಅಷ್ಟೆ. ಕೆಲವು ಹೋಟೆಲುಗಳಲ್ಲಿ ಒಬ್ಬರ ಒಪ್ಪತ್ತಿನ ಊಟಕ್ಕೆ ಐನೂರರಿಂದ ಹತ್ತುಸಾವಿರ ರೂಪಾಯಿಗಳು. ಅಂತಹ ಜಾಹಿರಾತುಗಳನ್ನು ಪತ್ರಿಕೆಗಳಲ್ಲಿ ನೋಡುತ್ತಿರುತ್ತೇವೆ.

ಇಂತಹ ಹಿನ್ನೆಲೆಯಲ್ಲಿ ಆಗಾಗ್ಗೆ 'ಖ್ಯಾತ ಧೀಮಂತ' ವ್ಯಕ್ತಿಗಳ ವರ್ಗವೊಂದು ಪ್ರತಿಯೊಂದು ಕ್ಷೇತ್ರದಲ್ಲೂ ಹುಟ್ಟಿಕೊಳ್ಳುತ್ತದೆ. ಆ ವರ್ಗದವರು ಇತರರಿಗಿಂತ ಹೆಚ್ಚು ಶ್ರೇಷ್ಠರು. ಶ್ರೇಷ್ಠತೆಯ ಮಾಪನ ಯಾವುದು? ಸುಖಭೋಗದ ವಸ್ತುಗಳನ್ನು ಪಡೆಯಲು ಅವರು ಇತರರಿಗಿಂತ ಹೆಚ್ಚು ಹಣ ಸುರಿಯಬಲ್ಲರು, ಎಂಬುದು. ಕಲಾವಿದರು, ಸಿನಿಮಾ ನಟರು, ವಿದ್ವಾಂಸರು, ಪ್ರಾಧ್ಯಾಪಕರು, ವಾಸ್ತುಶಿಲ್ಪಿಗಳು, ಸೌಂದರ್ಯವರ್ಧನೆಯಲ್ಲಿ ನೈಪುಣ್ಯ ಹೊಂದಿದವರು, ಸಲಹಾ ಪರಿಣತರು, ಹೀಗೆ ಬೇರೆಬೇರೆ ವೃತ್ತಿಗಳವರು ನೂರಾರು ಶ್ರೀಮಂತ ಬಣಗಳಾಗಿ ರೂಪುಗೊಳ್ಳುತ್ತಾರೆ. ಅವರೆಲ್ಲಾ ಒಂದಲ್ಲ ಒಂದರಲ್ಲಿ 'ಪರಿಣತರು'. ಅವರ ಪ್ರಮುಖ ಲಕ್ಷಣವಿರುವುದು ಅವರ ಅಪಾರ ಶ್ರೀಮಂತಿಕೆಯಲ್ಲಿ.

ಅವರು ಅಂತಹ ಅಸಾಧಾರಣ ಪರಿಣತರಾಗುವುದು ಕೂಡ ಒಂದು ರೋಚಕ ವಿದ್ಯಮಾನ. ಮಾಧ್ಯಮಗಳು ಅನೇಕ ವೇಳೆ ಅವರಿಗೆಲ್ಲಾ ವಿಶೇಷ ಪರಿಣತಿಯನ್ನು ಆರೋಪಿಸಿ ದೊಡ್ಡವರನ್ನಾಗಿಸಿಬಿಡುತ್ತವೆ. ಮಾಧ್ಯಮಗಳು ಸಹ ಬಲಶಾಲಿ ಕ್ಷೇತ್ರಕ್ಕೆ ಸೇರಿದವೇ ಆಗಿರುತ್ತವಲ್ಲ, ಆ ಕಾರಣದಿಂದಾಗಿ ನಗರ ದೊಡ್ಡದಾದಷ್ಟೂ ಮಾಧ್ಯಮಗಳೂ ಬಲಿಷ್ಠವಾಗುತ್ತವೆ. ಅವಕ್ಕಿಂತಲೂ ಬಲಿಷ್ಠರಾದವರೆಂದರೆ ಪಕ್ಕಾ ಮಧ್ಯವರ್ತಿಗಳು, ಯಾರ ಪರವಾಗಿ ಬೇಕಾದರೂ ಸದಭಿಪ್ರಾಯ ಮೂಡಿಸುವವರು, ಸರ್ಕಾರದ ಕಾಂಟ್ರಾಕ್ಟ್‌ಗಳನ್ನು ಕೊಡಿಸುವ ಲಾಬಿಯಿಸ್ಟ್‌ಗಳು. ನೇರವಾಗಿ ಜಾಹಿರಾತು ಮೂಲಕ ಇಲ್ಲವೆ ಪರದೆ ಹಿಂದೆ ನಿಂತು ಇವರೆಲ್ಲಾ ಮಾಧ್ಯಮಗಳನ್ನು ಹಿಡಿತದಲ್ಲಿ ಇರಿಸಿಕೊಂಡಿರುತ್ತಾರೆ.

ಈ ಎಲ್ಲ "ಯಶಸ್ವಿ" ಜನರ ವರ್ಗವು ತನ್ನನ್ನು ತಾನು ರಕ್ಷಿಸಿಕೊಳ್ಳಲು ಮತ್ತು ತನ್ನ ಪ್ರಭಾವವನ್ನು ಹೆಚ್ಚಿಸಿಕೊಳ್ಳಲು ಬಲವಾದ ವ್ಯವಸ್ಥೆಯೊಂದನ್ನು ನಿರ್ಮಿಸಿಕೊಳ್ಳುತ್ತದೆ. ಅದಕ್ಕೆ ಅಗತ್ಯವಾಗುವಂತಹ ಒಂದು ಸಿದ್ಧಾಂತವನ್ನು ಪ್ರಚುರಪಡಿಸಿ, ಅದೇ ಘನವಾದ ಚಿಂತನೆ ಮತ್ತು ಸಿದ್ಧಾಂತವೆಂದು ತೋರುವಂತೆ ಮಾಯಾಲೋಕವೊಂದನ್ನು ಸೃಷ್ಟಿಸಿಕೊಳ್ಳುತ್ತವೆ. ಇದೆಲ್ಲಾ ತನ್ನ ಸಂಪತ್ತನ್ನು ಹೆಚ್ಚಿಸಿಕೊಳ್ಳುವ ಸೂಕ್ಷ್ಮ ವಿಧಾನ. ಈ ವರ್ಗವು ಕಳೆದ ೬೦ ವರ್ಷಗಳಲ್ಲಿ, ಅಂದರೆ ಸ್ವಾತಂತ್ರ್ಯೋತ್ತರದಲ್ಲಿ, ಬಹುಶಃ ೬೦೦ ಪಟ್ಟು ತನ್ನ ಸಂಪತ್ತನ್ನು ಹೆಚ್ಚಿಸಿಕೊಂಡಿದೆ.

ಇದಕ್ಕೆಲ್ಲಾ ಹಣ ತೆರುವವರು ಯಾರು? ಉತ್ತರ ಸುಲಭವಿದೆ: ದೊಡ್ಡ ನಗರಗಳಲ್ಲಿರುವ ಇತರ ಶೇಕಡ



೯೦ ಮಂದಿ ಮತ್ತು ನಗರಗಳಾಚೆ ಚಿಕ್ಕ ಪಟ್ಟಣ ಮತ್ತು ಹಳ್ಳಿಗಳಲ್ಲಿರುವ ಕೋಟಿಗಟ್ಟಲೆ ಜನ.

ಶೇಕಡ ೧೦ರಷ್ಟಿರುವ ಉಚ್ಚವರ್ಗದ ಭೋಗ ಲಾಲಸೆಯನ್ನು ತೀರಿಸಲು ಇತರರೆಲ್ಲಾ ದುಡಿಯಬೇಕು. ಮತ್ತು ಕಡಿಮೆ ಕೂಲಿಗೆ ಹೆಚ್ಚು ಶ್ರಮ ನೀಡಬೇಕು. ನಮ್ಮ ಮಹಾನ್ ದೇಶದ ಪ್ರಜೆಗಳಾಗಿರುವ ಸೌಭಾಗ್ಯವನ್ನು ಪಡೆಯಲು ಅವರು ಎಷ್ಟೆಷ್ಟೋ ತ್ಯಾಗಗಳನ್ನು ಮಾಡಲು ಸಿದ್ಧರಾಗಬೇಕು, ಮುಂದಾಗಬೇಕು. ಅವರಿಗೆ ನೀಡಲಾಗುವ ಸಮಜಾಯಿಷಿ ಇಷ್ಟೆ: ನೋಡಿ, ಒಂದು ದೊಡ್ಡ ದೇಶ ಅಂದಮೇಲೆ ಕೆಲವು ದೊಡ್ಡ ನಗರಗಳಿರಲೇಬೇಕಲ್ಲವೆ? ಅಂತಹ ದೇಶದ ರಕ್ಷಣೆಗೆ ಒಂದು ದೊಡ್ಡ ಸೈನ್ಯ ಬೇಕು. ಆ ಸೈನ್ಯಕ್ಕೆ ಬೇರೆ ಕೆಲಸಗಳೂ ಇರುತ್ತವೆನ್ನಿ. ಉದಾಹರಣೆಗೆ, ಯಾವುದೋ ವಿಶಾಲ ಪ್ರದೇಶವೊಂದರ ಜನ ತಮಗೆ ಸ್ವಾತಂತ್ರ್ಯ, ಸ್ವಾಯತ್ತತೆ ಬೇಕೆನ್ನುತ್ತಾರೆ; ಅವರನ್ನು ಹತ್ತಿಕ್ಕಲು ಸೈನ್ಯ ಬೇಡವೆ? ಆಮೇಲೆ ನಮ್ಮ ದೊಡ್ಡ ವಿಮಾನ ನಿಲ್ದಾಣಗಳು, ದೊಡ್ಡ ಪರಮಾಣು ಅಸ್ತ್ರಗಳು ಎಲ್ಲಾ ಬೇಕು. ಅವಿಲ್ಲದಿದ್ದರೆ ದೊಡ್ಡ ನೆರೆರಾಷ್ಟ್ರಗಳ ದೊಡ್ಡ ನಗರಗಳ ಮೇಲೆ ಬಾಂಬು ಸುರಿಸಿ ಧ್ವಂಸ ಮಾಡುವುದು ಹೇಗೆ? ಆದ್ದರಿಂದ ಅಗಾಧ ಶಸ್ತ್ರಾಸ್ತ್ರಗಳು, ದೊಡ್ಡ ಕ್ಷಿಪಣಿಗಳು ಮತ್ತು ದೊಡ್ಡ ಉಪಗ್ರಹಗಳು ಅಗತ್ಯ. ಇವಕ್ಕೆ ಮತ್ತು ಇತರ ವೈಭವಗಳ ಸರಮಾಲೆಗೆ ಎಷ್ಟೊಂದು ಹಣ ಬೇಕು! ಅದನ್ನೆಲ್ಲಾ ನೀವಲ್ಲದೆ ಇನ್ಯಾರು ಭರಿಸಲು ಸಾಧ್ಯ?

ಅಂದರೆ, ಇವೆಲ್ಲಕ್ಕೂ ತಗಲುವ ಒಂದೊಂದು ಪೈಸಾ ಸಹ ಬಡವರ್ಗಗಳ ಜನರ ದುಡಿಮೆಯಿಂದ ಬರುವಂಥದು ಎಂದರ್ಥ.

ಇದಕ್ಕೆ ಪ್ರತಿಫಲ ರೂಪದಲ್ಲಿ ಬಡವರ್ಗಗಳು, ವಿಶೇಷತಃ ಬಡವರ್ಗಗಳವರ ಮಕ್ಕಳು-ಮರಿ, ಪಡೆಯುವುದೇನನ್ನು? ಇಲ್ಲೊಂದು ಸ್ವಾಭಾವಿಕ ಲಕ್ಷಣ ನಮ್ಮೆದುರು ಧುತ್ತೆಂದು ಬಂದು ನಿಲ್ಲುತ್ತದೆ: "ದೊಡ್ಡ" ಬಣದ ಅಗತ್ಯಗಳು ಹೆಚ್ಚಾಗಿ ಅದರ ಪಾಲು ಹೆಚ್ಚುತ್ತಿದ್ದಂತೆ ಚಿಕ್ಕ ಮನುಷ್ಯರ ಪಾಲು ಅದಕ್ಕೆ ಸಮನಾಗಿ ಕಡಿಮೆಯಾಗುತ್ತಾ ಹೋಗಬೇಕು. ಹಾಗಾಗುವಾಗ ಮೊದಲಿಗೆ ಯಾವ ಬಾಬ್ತು ಗಮನಕ್ಕೆ ಬರುತ್ತದೆಂದರೆ ಆಹಾರ, ಆರೋಗ್ಯ, ಶಿಕ್ಷಣ ಮತ್ತು ವಸತಿ. ಆ ವಸತಿ ಎಂಬುದು ಹಲವರಿಗೆ ಇಲ್ಲವೇ ಇಲ್ಲ ಅಥವಾ ಇದ್ದರೆ ಅದು ಕನಿಷ್ಠ ಮಟ್ಟದ ಮನೆಯ ರೂಪದಲ್ಲಿರುತ್ತದೆ. ಆಹಾರ ಪದಾರ್ಥಗಳ ಬೆಲೆ ಗಗನಕ್ಕೇರುತ್ತಿರುವ ಸನ್ನಿವೇಶದಲ್ಲಿ ಮೊದಲ ಹೊಡೆತ ಬೀಳುವುದು ಆಹಾರದ ಮೇಲೆ. ಬೇಳೆ, ಕಾಳು ಇವೆಲ್ಲ ಈಗಾಗಲೆ ಬಡಜನರಿಗೆ ದಕ್ಕುವ ಸ್ಥಿತಿಯನ್ನು ಮೀರಿ ನಿಂತಿವೆ. ಅವೆಷ್ಟು ಕುಟುಂಬಗಳು ದಿನಕ್ಕೆ ಒಂದು ಬಾರಿಯಾದರೂ ಸರಿಯಾಗಿ ಉಣ್ಣುವ ಭಾಗ್ಯ ಹೊಂದಿವೆಯೆಂಬುದನ್ನು ನೆನೆದರೆ ಹೃದಯ ಹಿಂಡುತ್ತದೆ, ಹತಾಶೆ ಆವರಿಸುತ್ತದೆ. ದೊಡ್ಡ ನಗರಗಳಲ್ಲಿ ವಾಸಿಸುವ ಬಡಜನರ ವೈದ್ಯಕೀಯ ಖರ್ಚುಗಳು ಹೆಚ್ಚುತ್ತಿರುವುದು ಆಹಾರದ ಅಭದ್ರತೆಯಿಂದ. ೧೯೯೩-೨೦೦೩ರ ಹತ್ತು ವರ್ಷಗಳಲ್ಲಿ ಅವರ ವೈದ್ಯಕೀಯ ವೆಚ್ಚ ಮೂರುಪಟ್ಟು ಹೆಚ್ಚಿದೆಯೆಂದು ಒಂದು ಅಧ್ಯಯನದ ವರದಿ ತಿಳಿಸಿದೆ. ಈಚಿನ ವರ್ಷಗಳಲ್ಲಿ ಅದಿನ್ನೂ ಹೆಚ್ಚಿರಬಹುದು, ಏಕೆಂದರೆ ವೈದ್ಯಕೀಯ ಸೇವೆ ಮತ್ತು ಔಷಧಿಗಳ ಬೆಲೆ ಮೊದಲಿಗಿಂತಲೂ ಬಹಳವೇ ಹೆಚ್ಚಾಗಿದೆ. ನಗರಗಳ ಮಾಲಿನ್ಯದಿಂದ ಆಘಾತವುಂಟಾಗುವುದು ಮೊದಲು ಬಡವರ್ಗಗಳ ಮೇಲೆ. ನೈರ್ಮಲ್ಯದ ಅಭಾವ, ಚರಂಡಿ-ಶೌಚಾಲಯಗಳ ದುಃಸ್ಥಿತಿ, ಒಳ್ಳೆಯ ಕುಡಿಯುವ ನೀರು ಇಲ್ಲದಿರುವುದು, ಸೊಳ್ಳೆ ಹಾಗೂ ವೈರಸ್‌ಗಳ ನಿಯಂತ್ರಣವಿಲ್ಲದಿರುವುದು, ಇವೆಲ್ಲದರ ಭೀಕರ ಪರಿಣಾಮ ಬಡವರ್ಗಗಳ ಮೇಲೆ ಅತಿ ವ್ಯಾಪಕವಾಗಿದೆ.

ದೊಡ್ಡದು, ದೊಡ್ಡದು ಎಂಬ ಹುಚ್ಚುಪ್ರವಾಹದಲ್ಲಿ ಮೊದಲಿಗೆ ಕೊಚ್ಚಿಹೋಗಿರುವುದು ಶಿಕ್ಷಣ ವ್ಯವಸ್ಥೆ. ಅದು "ಸೇವೆ" ಎಂಬರ್ಥವನ್ನು ಎಂದೋ ಕಳೆದುಕೊಂಡುಬಿಟ್ಟಿತು. ಈಗದು ಭಾರತದ ಅಗಾಧ ಉದ್ಯಮ. ತಂದೆ-ತಾಯಿಗಳು ಮಗುವಿನ ಶಿಕ್ಷಣಕ್ಕೆ ಎಷ್ಟು ಖರ್ಚು ಮಾಡಲು ಸಮರ್ಥರೋ ಅದನ್ನವಲಂಬಿಸಿ ಮಗುವು ಪಡೆಯುವ ಶಿಕ್ಷಣದ ಗುಣಮಟ್ಟ ನಿರ್ಧಾರವಾಗುತ್ತಿದೆ. ಇದು ಅತ್ಯಂತ ಖಂಡನೀಯ ಸನ್ನಿವೇಶ. ಹಿಂದೆಂದೂ

ಇಂತಹ ಕ್ರೂರ ಸನ್ನಿವೇಶವಿರಲಿಲ್ಲ. ಶಿಕ್ಷಣದ ವೆಚ್ಚದ ಬಹುಭಾಗವನ್ನು ಸರ್ಕಾರವೇ ಭರಿಸುವುದು ರೂಢಿಯಲ್ಲಿ ಇತ್ತು. ಇಂದು ಆ ಕ್ರಮವನ್ನು ಕಿತ್ತೊಗೆದಿದ್ದಾರೆ. ದೊಡ್ಡ ನಗರಗಳಲ್ಲಿ ಶೇಕಡ ೧೦ರಷ್ಟಿರುವ ಶ್ರೀಮಂತ ವರ್ಗದ ಮಕ್ಕಳು ಹೋಗುವ ಶಾಲಾ-ಕಾಲೇಜುಗಳು ಇಂದು ಪಂಚತಾರಾ ಹೋಟೆಲುಗಳಂತಿವೆ. ಯಾವ ವೈಭವ ಬೇಕಾದರೂ ಕೇಳಿ, ಅಲ್ಲಿ ಅದಿದೆ. ಅಲ್ಲಿಯ ವೆಚ್ಚಗಳ ಮಾದರಿ ದಂಗುಗೊಳಿಸುತ್ತದೆ. ''ಶೈಕ್ಷಣಿಕ'' ಪ್ರವಾಸದ ಹೆಸರಲ್ಲಿ ಮಕ್ಕಳನ್ನು ವಿದೇಶಗಳಿಗೆ ಕರೆದುಕೊಂಡು ಹೋಗುವುದೇನು, ವಾರಾಂತ್ಯದಲ್ಲಿ ರೆಸಾರ್ಟ್‌ಗಳಿಗೆ ಎಳೆದೊಯ್ಯುವುದೇನು, ಪೇಯಗಳು - ಕುಣಿತಗಳ ಪರಿಯೇನು, ಹುಟ್ಟುಹಬ್ಬಗಳ ದಾಂಧಲೆಯೇನು, ಅಂತಹ ಸಂದರ್ಭಗಳಲ್ಲಿ ನೀಡಲಾಗುವ ಉಡುಗೊರೆಗಳೇನು! ಈ ಉಡುಗೊರೆಗಳು ಏನಿಲ್ಲವೆಂದರೂ ಸಾವಿರ ರೂಪಾಯಿ ಬೆಲೆಯುಳ್ಳವು. ನಾವು ಯಾವ ದೇಶದಲ್ಲಿ ಇದ್ದೇವೆ, ನಮ್ಮಲ್ಲಿ ಬಡಜನರಿದ್ದಾರೆಯೇ, ಎಂಬ ಸಂದೇಹ ಮೂಡುತ್ತದೆ. ಈ ಶೇಕಡ ೧೦ರ ವರ್ಗದ ಶಾಲಾಮಕ್ಕಳಿಗೆಲ್ಲಾ ಕ್ಯಾಮೆರಾಗಳಿವೆ, ಮೊಬೈಲ್‌ಗಳಿವೆ, ಕಂಪ್ಯೂಟರ್‌ಗಳಿವೆ, ಇ-ಫೋನ್‌ಗಳಿವೆ, ಲಕ್ಷ ರೂಪಾಯಿ ಬೆಲೆಬಾಳುವಂತಹ ನೂರಾರು 'ಆಟ'ಗಳಿವೆ. ಅವರ ಉಡುಗೆ-ತೊಡುಗೆಗಳು, ಅವರ ಬಳಿ ಇರುವ ಸರಕುಗಳು, ಎಲ್ಲಾ ''ದೊಡ್ಡ ಕಂಪನಿ ಬ್ರಾಂಡ್''ಗಳವು. ಒಂದು ಸಾಮಾನ್ಯ ಹುಟ್ಟುಹಬ್ಬದ ಸಂಭ್ರಮಕ್ಕೆ ಆ ಮಕ್ಕಳು ವೆಚ್ಚಮಾಡುವ ಹಣವು ಒಂದು ಬಡಕುಟುಂಬದ ಮಗು ಒಂದನೇ ತರಗತಿಯಿಂದ ಪದವಿ ಪಡೆಯುವವರೆಗೆ ಮಾಡುವ ಒಟ್ಟು ವೆಚ್ಚಕ್ಕಿಂತ ಹೆಚ್ಚಿರಲು ಸಾಧ್ಯ. ಹರಕಲು ಚೆಡ್ಡಿ ತೊಟ್ಟು, ಹೊಟ್ಟೆಗೆ ಗಂಜಿ ಇಲ್ಲದೆ, ಶಾಲೆಗೆ ಹೋಗುವ ಮಕ್ಕಳೆಲ್ಲಿ ಈ ಶ್ರೀಮಂತ ಮಕ್ಕಳೆಲ್ಲಿ. ನಮ್ಮ ಶಿಕ್ಷಣ ವ್ಯವಸ್ಥೆಯಲ್ಲಿ ಇವರನ್ನು 'ಸಮಾನರು' ಎಂದು ಹೇಳಲಾಗುತ್ತಿದೆ! ಇದಕ್ಕಿಂತಲೂ ಹೆಚ್ಚಿನ ದೌರ್ಜನ್ಯ ಮತ್ತು ವಂಚನೆ ಬೇಕೆ ?

ಶ್ರೀಮಂತಿಕೆಯ ಈ ಹೊಸ ಪ್ರದರ್ಶನಕ್ಕೆ 'ಕೊಳ್ಳುಬಾಕತನ' ಎಂಬ ಹೆಸರಿದೆ. ಇದೊಂದು ಅತಿನೂತನ ಸಿದ್ಧಾಂತ. ಅದರ ಛಾಯೆಯಲ್ಲಿ ಬಂಡವಾಳಶಾಹಿ ಮತ್ತು ಸಮಾಜವಾದಿ ಕಲ್ಪನೆಗಳು ಹಳಸಿಹೋಗಿವೆ. ಇಡೀ ಪ್ರಪಂಚ ಅಂತಹ ಕೊಳ್ಳುಬಾಕತನದ ವಿಶಾಲ ಗುಂಡಿಯಾಗಿ ಹೋಗಿದೆ. ಅದರ ಆಘಾತಕ್ಕೆ ಸಿಲುಕಿ ನಲುಗಿಹೋಗಿರುವವರು ಮಾತ್ರ ''ಬಡರಾಷ್ಟ್ರಗಳು'' ಎನ್ನಲಾದ ರಾಷ್ಟ್ರಗಳ ಬಡಜನತೆ. ಇದು ಮಾನವಕುಲವನ್ನು ಎರಡು ವರ್ಗಗಳನ್ನಾಗಿ ವಿಭಜಿಸಿದೆ : ಒಂದು, ಕೊಳ್ಳುಬಾಕ ವರ್ಗ, ಇನ್ನೊಂದು, ದುಡಿಯುವ ವರ್ಗ. ಕೊಳ್ಳುಬಾಕ ವರ್ಗದ ಅಗತ್ಯಗಳು ಹೆಚ್ಚಾದಂತೆಲ್ಲಾ ದುಡಿಯುವ ವರ್ಗದ ಪಾಲಿಗೆ ಉಳಿಯುವ ಅಂತ ಕಡಿಮೆಗೊಳ್ಳುತ್ತಲೇ ಇರುತ್ತದೆ. ಹೀಗಾಗಿ, ಕೊಳ್ಳುಬಾಕ ವರ್ಗವು ಆಗಾಗ್ಗೆ ಬಿಸಾಡುವ ಚೂರುಪಾರಿನಿಂದ ದುಡಿಯುವ ವರ್ಗವು ದಿನ ನೂಕಬೇಕಾಗಿಬಂದಿದೆ.

ಇದರ ಒಂದು ಪರಿಣಾಮವೆಂದರೆ ದುಡಿಯುವ ವರ್ಗದ ಜನ ಹೇಗಾದರೂ ಮಾಡಿ ಕೊಳ್ಳುಬಾಕ ವರ್ಗಕ್ಕೆ ಸೇರಿಕೊಂಡುಬಿಡಬೇಕೆನ್ನುವ ಅಭೀಪ್ಸೆ, ತರಾತುರಿ, ಜಗ್ಗಾಟ. ಅದರಿಂದಾಗಿ ದುಡಿಯುವ ವರ್ಗದಲ್ಲೇ ಪೈಪೋಟಿ, ಕಿತ್ತಾಟ, ಅನೈಕ್ಯತೆ. ಅನೀತಿಯ ಕೃತ್ಯಗಳನ್ನು ಕಂಡು ದುಡಿಯುವ ವರ್ಗವು ನಿಸೂರಾಗಿ ಉಳಿಯುವುದು ಕೂಡ ಇಂಥದೇ ಕಾರಣದಿಂದ. ಇದೊಂದು ಹುಚ್ಚಾಟದ ಪಂದ್ಯ : ಅದರಲ್ಲಿ ಯಾವ ನಿಯಮಗಳೂ ಇಲ್ಲ, ಕಾನೂನು ಇಲ್ಲ, ಸರಿ-ತಪ್ಪುಗಳ ಗಣನೆ ಇಲ್ಲ, ಸಭ್ಯಾಸಭ್ಯತೆಯ ಪರಿವೆ ಇಲ್ಲ. ಇರುವುದೊಂದೇ ಗುರಿ : ಹೇಗಾದರೂ ಸರಿ, ಶ್ರೀಮಂತರಾಗಬೇಕು, ಎಂಬುದು. ನಿಮಗಿರುವುದೊಂದೇ ಆಯ್ಕೆ : ಇಲ್ಲ, ಈ ವರ್ಗಕ್ಕೆ ಸೇರಿ, ಇಲ್ಲವೆ ಇರುವ ವರ್ಗದಲ್ಲೇ ಉಳಿಯಿರಿ.

ಇಂದಿನ ಮಕ್ಕಳು ಆಲೋಚನೆ ಮಾಡಬೇಕಾದ್ದು ಈ ವಿಷಯಗಳನ್ನು. ಆಮೇಲೆ ಅವರೇ ಪರಿಹಾರಗಳನ್ನು ಕಂಡುಕೊಳ್ಳುತ್ತಾರೆ. ಉತ್ತರಗಳು ಅವರ ಹೃದಯಗಳಿಂದಲೇ ಹೊಮ್ಮಬೇಕು; ಏಕೆಂದರೆ, ಅವರ ಹಿರಿಯರು ಪರಿಹಾರ ಕ್ರಮಗಳ ಬಗ್ಗೆ ಯೋಚಿಸಿದ್ದಾರೆ, ಪ್ರಯತ್ನಿಸಿದ್ದಾರೆ ಮತ್ತು ಹಾಗೆ ಮಾಡುತ್ತಾ ಸಮಸ್ಯೆಯನ್ನು ಇನ್ನಷ್ಟು ಜಟಿಲಗೊಳಿಸಿದ್ದಾರೆ. ಗೋಜಲು ಬಿಡಿಸುವ ಕೆಲಸವನ್ನು ಇಂದಿನ ಮಕ್ಕಳೇ ಕೈಗೆತ್ತಿಕೊಳ್ಳಬೇಕಾದ ಅನಿವಾರ್ಯ ಪರಿಸ್ಥಿತಿ ಉದ್ಭವಿಸಿದೆ.


ಎಂ. ಬಿ. ಲಾಲ್
'ದಿ ಸ್ಟೇಟ್ಸ್‌ಮನ್' ಪತ್ರಿಕೆಯ ನಿವೃತ್ತ ಜಂಟಿ ಸಂಪಾದಕರು
ಡಿ-೨೦, ಪ್ರೆಸ್ ಎನ್‌ಕ್ಲೇವ್, ಸಾಕೇತ್, ನವದೆಹಲಿ - ೧೧೦ ೦೧೭

# ಕಿಟ್ಟಯ್ಯ ಶೆಟ್ಟಿಯ ಪಾಕೆಟ್ ಕ್ಯಾಲೆಂಡರ್

ಕೇಶವ ರೆಡ್ಡಿ ಹಂದ್ರಾಳ

ಸಾಲ ತೆಗೆದುಕೊಂಡವರ್‍ಯಾರೂ ಕಿಟ್ಟಯ್ಯ ಶೆಟ್ಟಿಗೆ ಕೈ ಕೊಡುತ್ತಿರಲಿಲ್ಲ. ಕೊಡುವ ಟೈಮು ಸ್ವಲ್ಪ ಹೆಚ್ಚು ಕಡಿಮೆಯಾಗುತ್ತಿತ್ತು, ಅಷ್ಟೆ. ಆಗಿನ ಕಾಲದಲ್ಲಿ ನಂಬಿಕೆಯೇ ಜನರ ಮಾನ ಮರ್ಯಾದೆಗಳಾಗಿರುತ್ತಿದ್ದವು. ಇಂಥ ಲೇವಾದೇವಿ ಮಾಡುತ್ತಿದ್ದ ಕಿಟ್ಟಯ್ಯ ಶೆಟ್ಟಿಗೆ ಮರೆವು ದೊಡ್ಡ ಶಾಪವಾಗಿತ್ತು. ಹಾಗಾಗಿ ಸಾಲಕೊಟ್ಟ ಕೂಡಲೇ ಪಾಕೆಟ್ ಕ್ಯಾಲೆಂಡರ್‌ನಲ್ಲಿ ತಾರೀಖು ಮತ್ತು ಕೊಟ್ಟ ಸಾಲದ ಮೊತ್ತವನ್ನು ಗುರುತು ಹಾಕಿಕೊಳ್ಳುತ್ತಿದ್ದ. ಹಾಗಾಗಿ ಕಿಟ್ಟಯ್ಯ ಶೆಟ್ಟಿಯ ಪಾಕೆಟ್ ಕ್ಯಾಲೆಂಡರ್ ಇನ್ನೂರು ಪೇಜಿನದಾಗಿರುತ್ತಿತ್ತು. ತುಮಕೂರಿಗೆ ಹೋದಾಗ ಮೂರ್‍ನಾಲ್ಕು ಅಂಗಡಿಗಳಲ್ಲಿ ಹುಡುಕಿ ಹುಡುಕಿ ಒಳ್ಳೆಯ ಪಾಕೆಟ್ ಕ್ಯಾಲೆಂಡರನ್ನೆ ಖರೀದಿಸುತ್ತಿದ್ದ. ಎಲ್ಲರೂ ಅಂಗಿಯ ಮೇಲಿನ ಜೇಬಿನಲ್ಲಿ ಕ್ಯಾಲೆಂಡರ್ ಇಟ್ಟುಕೊಳ್ಳುತ್ತಿದ್ದರೆ, ಕಿಟ್ಟಯ್ಯ ಶೆಟ್ಟಿ ಅದಕ್ಕಾಗಿ ಎಲ್ಲಾ ಅಂಗಿಗಳಿಗೂ ಒಳ ಜೇಬನ್ನು ಇರಿಸುತ್ತಿದ್ದ. ಒಳಜೇಬಿನಲ್ಲಿ ದುಡ್ಡು, ಪಾಕೆಟ್ ಕ್ಯಾಲೆಂಡರ್ ಮಾತ್ರ ಇಟ್ಟುಕೊಳ್ಳುತ್ತಿದ್ದ. ಬೇರೆಲ್ಲ ವಸ್ತುಗಳನ್ನು ಸೈಡ್ ಜೇಬಿನಲ್ಲೊ, ನಿಕ್ಕರ್ ಜೇಬಿನಲ್ಲೊ ಇಟ್ಟುಕೊಳ್ಳುತ್ತಿದ್ದ. ಕಿಟ್ಟಯ್ಯ ಶೆಟ್ಟಿಯ ಪಾಕೆಟ್ ಕ್ಯಾಲೆಂಡರಿನ ಮೇಲಿನ ಪ್ರೇಮವನ್ನು ಕಂಡು ಸ್ವತಃ ಕಟ್ಟಿಕೊಂಡ ಹೆಂಡತಿ ಸುಬ್ಬಲಕ್ಷ್ಮಮ್ಮನೇ ಬೆರಗುಪಡುತ್ತಿದ್ದಳು.

**ನಾ**ನು ಹುಟ್ಟಿ ಅರ್ಧ ಶತಮಾನದ ಮೇಲಾಗಿದ್ದರೂ ಇವೊತ್ತಿಗೂ ಗಣಿತಶಾಸ್ತ್ರ ನನಗೆ ಬಿಡಿಸಲಾಗದ ವಿಸ್ಮಯದ ಕಗ್ಗಂಟಾಗಿಯೇ ಕಾಡುತ್ತಿದೆ. ಈಗಿನ ಕಾಲದ ಕಂಪ್ಯೂಟರ್, ಕ್ಯಾಲುಕ್ಯುಲೇಟರ್, ಸೆಲ್‌ಫೋನ್ ಇತ್ಯಾದಿಗಳು ಲೆಕ್ಕಗಳನ್ನು ಮಾಡುವ ಪರಿಗೆ ದಿಗ್‌ಭ್ರಮೆ ಹುಟ್ಟುತ್ತದೆ. ಅಷ್ಟೇಕೆ, ನನ್ನ ಮಕ್ಕಳು ಗಣಿತದ ಲೆಕ್ಕಗಳನ್ನು ಬಿಡಿಸುವ ಕೌಶಲ್ಯವನ್ನು ಕಂಡು ಅಚ್ಚರಿಪಡುತ್ತೇನೆ. ಗಣಿತದಲ್ಲಿ ನೂರಕ್ಕೆ ನೂರು ಅಂಕಗಳನ್ನು ಗಳಿಸುವ ವಿದ್ಯಾರ್ಥಿಗಳನ್ನು ಕಂಡರಂತೂ ಸೋಜಿಗದಲ್ಲಿ ಮುಳುಗಿಹೋಗುತ್ತೇನೆ. ನನ್ನ ಹಳ್ಳಿಗಾಡಿನ ಬಾಲ್ಯದಲ್ಲಿ ಈ ಗಣಿತದಿಂದ ಸೃಷ್ಟಿಯಾಗುತ್ತಿದ್ದ ಕಿತಾಪತಿ, ಫಜೀತಿಗಳನ್ನು ನೆನಪಿಸಿಕೊಂಡರೆ ಒಂದು ರೀತಿಯ ಮಜವೂ, ರೋಮಾಂಚನವೂ ಉಂಟಾಗುತ್ತದೆ. ನಾನು ಪ್ರೈಮರಿ ಮತ್ತು ಮಿಡ್ಲ್‌ಸ್ಕೂಲುಗಳಲ್ಲಿ ಓದುತ್ತಿದ್ದಾಗ ಆಲ್‌ಜೀಬ್ರ, ಜಾಮಿಟ್ರಿಗಳಿರಲಿ, ಕೂಡಿ, ಕಳೆಯುವ ಲೆಕ್ಕಗಳು ಸಹ ಬರುತ್ತಿರಲಿಲ್ಲ. ಆಗಿನ ಕಾಲದಲ್ಲಿ ಸ್ಲೇಟುಗಳೊಂದಿಗೆ ಮಣಿಕಟ್ಟುಗಳು ಇರುತ್ತಿದ್ದವು. ಮೇಷ್ಟ್ರುಗಳು ಅವುಗಳ ಮೂಲಕ ಮಗ್ಗಿ ಮತ್ತು ಕೂಡಿ, ಕಳೆಯುವ ಲೆಕ್ಕಗಳನ್ನು ಹೇಳಿಕೊಡುತ್ತಿದ್ದದ್ದು ಕ್ಲಾಸಿನಲ್ಲಿನ ತೊಂಬತ್ತು ಪರ್ಸೆಂಟ್ ಮಾಸಿದ ಮುಸುಡಿಗಳ



ಮೆದುಳುಗಳಿಗೆ ಬಿಲ್‌ಕುಲ್ ಇಳಿಯುತ್ತಿರಲಿಲ್ಲ. ರಾತ್ರಿಯೆಲ್ಲ ನಿದ್ದೆಗೆಟ್ಟು ಮಗ್ಗಿಯನ್ನು ಗಟ್ಟಿಮಾಡಿಕೊಂಡು ಹೋದರೂ ಮಧ್ಯದಲ್ಲಿ ಮಗ್ಗಿ ಕೇಳಿದರೆ ಗಟ್ಟಿಮಾಡಿದ ಮಗ್ಗಿಯೆಲ್ಲ ಮರೆತು ಮಬ್ಬು ಕವಿದಂತಾಗಿಬಿಡುತ್ತಿತ್ತು.

ಚಿಕ್ಕವರಿಗಿರಲಿ, ನಮ್ಮ ಹಳ್ಳಿಗಾಡಿನಲ್ಲಿ ಲೆಕ್ಕಗಳೆಂದರೆ ದೊಡ್ಡವರಿಗೂ ತಲೆಬಿಸಿಯಾಗಿಬಿಡುತ್ತಿತ್ತು. ನನಗಿನ್ನೂ ಚೆನ್ನಾಗಿ ನೆನಪಿದೆ, ಬೆಲ್ಲ, ಕಡಲೆಕಾಯಿ ಮಾರಿದಾಗ ಬರುತ್ತಿದ್ದ ಹಣವನ್ನು ನಮ್ಮಪ್ಪ ನೂರು, ಐವತ್ತು, ಇಪ್ಪತ್ತು, ಹತ್ತು ರೂಪಾಯಿಗಳಂತೆ ಬೇರೆ ಬೇರೆಯಾಗಿ ವಿಂಗಡಿಸಿ ಮತ್ತೆ ಮತ್ತೆ ಎಣಿಸಿ ಕನ್‌ಫ್ಯೂಷನ್‌ಗೆ ಒಳಗಾಗುತ್ತಿದ್ದ. ನಾವು ಎಣಿಸಿ ಹೇಳಿದರೂ ಗೊಂದಲ ತಿಳಿಯಾಗುತ್ತಿರಲಿಲ್ಲ. ಲೆಕ್ಕ ಸರಿ ಬಂದು, ದುಡ್ಡನ್ನು ಪೆಟ್ಟಿಗೆಯಲ್ಲಿಡುವ ಪ್ರಕ್ರಿಯೆ ಒಂದು ದಿನ ಪೂರ್ತಿ ಹಿಡಿಸುತ್ತಿತ್ತು. ಊರಿನಲ್ಲಿ ಅನೇಕರು ಇಂಥ ಮಾರಾಟಗಳನ್ನು ಮಾಡಿದಾಗ ಸ್ಕೂಲಿನ ಮೇಷ್ಟ್ರುಗಳನ್ನೊ, ಪೂಜಾರಿ ವಾಸುದೇವಯ್ಯನವರನ್ನೊ ಇಲ್ಲ ಶ್ಯಾನುಭೋಗರನ್ನೊ ಕರೆದುಕೊಂಡು ಬಂದು, ಎದುರಿನಲ್ಲಿ ವ್ಯವಹಾರಗಳನ್ನು ಫೈಸಲ್ ಮಾಡಿಕೊಳ್ಳುತ್ತಿದ್ದರು.

ಅದಿರಲಿ, ಊರಿನಲ್ಲಿ ಅಷ್ಟಿಷ್ಟು ಅಕ್ಷರ ಬಲ್ಲವರು ಜೇಬುಗಳಲ್ಲಿ ಪಾಕೆಟ್ ಕ್ಯಾಲೆಂಡರ್‌ಗಳನ್ನು ಇಟ್ಟುಕೊಳ್ಳುತ್ತಿದ್ದರು. ಹಬ್ಬ ಹರಿದಿನ, ವಾರ ಹುಣ್ಣಿಮೆ, ಅಮಾವಾಸ್ಯೆಗಳನ್ನು ನೋಡಿಕೊಳ್ಳಲು, ಲೆಕ್ಕ ಅಡ್ರಸ್ಸುಗಳನ್ನು ಗುರುತು ಹಾಕಿಕೊಳ್ಳಲು ಇಂಥ ಕ್ಯಾಲೆಂಡರ್‌ಗಳನ್ನು ಇಟ್ಟುಕೊಳ್ಳುತ್ತಿದ್ದರು. ಮಧುಗಿರಿಗೋ, ಗೌರಿಬಿದನೂರಿಗೋ ಹೋದಾಗ ಭದ್ರಕಾಳಿಯ, ಶ್ರೀರಾಮಚಂದ್ರನ, ಆಂಜನೇಯನ ಭಾವಚಿತ್ರಗಳ ಮುಖಪುಟವಿರುತ್ತಿದ್ದ ಕ್ಯಾಲೆಂಡರ್‌ಗಳನ್ನು ಚೌಕಾಸಿ ಮಾಡಿ ಖರೀದಿಸುತ್ತಿದ್ದರು. ಕೆಲವರು ಒಂದೇ ಕ್ಯಾಲೆಂಡರ್‌ಅನ್ನು ಮೂರ್ನಾಲ್ಕು ವರ್ಷಗಳವರೆಗೂ ಜೋಪಾನವಾಗಿಟ್ಟುಕೊಳ್ಳುತ್ತಿದ್ದರು. ನಾಟಕದ ಡೈಲಾಗುಗಳನ್ನು ಬರೆದುಕೊಳ್ಳಲು ಸಹ ಪಾಕೆಟ್ ಕ್ಯಾಲೆಂಡರ್‌ಗಳನ್ನು ಬಳಸಿಕೊಳ್ಳುತ್ತಿದ್ದರು. ಸದಾ ಜೇಬಿನಲ್ಲೇ ಇರುತ್ತಿದ್ದುದರಿಂದ ಪಾಕೆಟ್ ಕ್ಯಾಲೆಂಡರ್‌ನ ಹಾಳೆಯ ತುದಿಗಳು ಸುರುಳಿಸುತ್ತಿಕೊಂಡಿರುತ್ತಿದ್ದವು. ಆದ್ದರಿಂದ ಬೆರಳಿಗೆ ಎಂಜಲನ್ನು ಅದ್ದಿಕೊಂಡು ಹುಷಾರಿನಿಂದ ಪೇಜುಗಳನ್ನು ಬಿಡಿಸುತ್ತಿದ್ದರು. ನಮ್ಮೂರಿನಲ್ಲಿ ಕಾಳಂಗಮ್ಮನೋರ ನಾಗಣ್ಣ, ಗುಲ್ಲೀರಣ್ಣ, ಬಡಗಿ ಪಾಪಣ್ಣ, ಚಿಕ್ಕರಾಮಪ್ಪ, ದೊಡ್ಡಯ್ಯ, ರಾಮಕೃಷ್ಣ ರೆಡ್ಡಿ, ಕೊಂಡಪ್ಪ, ಚನ್ನಕೃಷ್ಣಪ್ಪ ಮುಂತಾದವರು ತಪ್ಪದೆ ಪಾಕೆಟ್ ಕ್ಯಾಲೆಂಡರ್‌ಗಳನ್ನು ಇಡುತ್ತಿದ್ದರು. ನಮ್ಮಪ್ಪನನ್ನು ಯಾರಾದರೂ ಅಲ್ಲ ಸಂಜೀವ ರೆಡ್ಡಿ, ಯೀಪಾಟಿ ಬೇಸಾಯ ಇಟ್ಕಂಡಿದ್ದೀಯ ಜೇಬಲ್ಲೊಂದು ಪಾಕೆಟ್ ಕ್ಯಾಲೆಂಡ್ರನ ಇಟ್ಕಂಬದ್ರೆ ಯಂಗೆ..., ಎಂದು ಕೇಳಿದರೆ ನಮ್ಮಪ್ಪ ತನ್ನ ಬೋಳುತಲೆಯನ್ನು ಸವರಿಕೊಂಡು, ಮುಚ್ಕಳ್ರಲೇ ಸಾಕು, ಯಾವ್ ಲೇವಾದೇವಿ ಮಾಡಾನ ಅಂತ ಅದನ್ನು ಇಂಟ್ಕಂಬ್ಲಿ, ಹೋಗ್ಲಿ ಉಧ್ದಾರಕ್ಕಾದ್ರೂ ಕಟ್ಕಂಡ್ ತಿರ್ಗಾನ ಅಂದ್ರೆ, ನಾನು ಉದ್ಧಾರಾನೂ ಕಟ್ಕಂಡಿಲ್ಲ..., ಎಂದು ನಗುತ್ತಿದ್ದ. ಆಗ ನಮ್ಮಪ್ಪನ ಪರಮಾಪ್ತ ಗೆಳೆಯನಾಗಿದ್ದ ಚೆನ್ರಾಯಪ್ಪನೋರ ಕೇರಿಯ ಕೊಂಡಪ್ಪನು ಯಾಸಟ್ಗೆ ಸುಮ್ಕಿರು ಸಂಜೀವ್‌ರೆಡ್ಡಿ, ನೀನು ಪಾಕೆಟ್ ಕ್ಯಾಲೆಂಡ್ರುನ ಇಟ್ಕಂಬದ್ರೆ ಅಷ್ಟೆ ಒಂದೋಯ್ತು. ಮೊದ್ಲು ಬ್ಯಾಲೇವುಕ್ಕೆ ಹೋಗಿ ಒಂದು ಉಡ್ದಾರ ತಂದು ಸೊಂಟಕ್ಕೆ ಸುತ್ಕೊ. ಕತ್ತೆಗಿತ್ತೆ ಕೂಗಿದ್ರೆ ತೊಲ್ಡ್ ಗಿಲ್ಡ್ ಬಾತ್ಕಂಬಾತು... ಎಂದು ಪಕಪಕ ಹಲ್ಲುಗಿಂಜುತ್ತಿದ್ದ. ಕುರಿ ಕಾಯಲು ಹೋಗುತ್ತಿದ್ದವರೂ ಕೂಡ ಪಾಕೆಟ್ ಕ್ಯಾಲೆಂಡರ್ ಇಟ್ಟುಕೊಳ್ಳುತ್ತಿದ್ದರು. ಅದರಲ್ಲೂ ಬಜ್ಜೆರಂಗನಂತೂ ಎಲ್ಲರಿಗೂ ಕಾಣುವಂತೆ ಪಾಕೆಟ್ ಕ್ಯಾಲೆಂಡರನ್ನು ಜೇಬಿನಲ್ಲಿಟ್ಟುಕೊಂಡೇ ಕುರಿ ಕಾಯಲು ಹೋಗುತ್ತಿದ್ದ. ಒಮ್ಮೊಮ್ಮೆ ಎದುರು ಸಿಕ್ಕ ಸ್ಕೂಲು ಹುಡುಗರ ಕೈಗೆ ಪಾಕೆಟ್ ಕ್ಯಾಲೆಂಡರ್ ಕೊಟ್ಟು, ಅಪ್ಪಯ್ಯ, ಅಮಾಸೆ ಯಾವಾಗ ನೋಡು... ಅಪ್ಪಯ್ಯ, ದೊಡ್ಡಸಳ್ಳಿ ಹೂವಿನ್‌ತೇರು ಯಾವೊತ್ತು ಬೀಳ್ತದೆ ನೋಡು... ಎಂದು ಕೇಳುತ್ತಿದ್ದ. ಪಾಕೆಟ್ ಕ್ಯಾಲೆಂಡರಿನಲ್ಲಿನ ಸಣ್ಣಕ್ಷರಗಳನ್ನು ಕಂಡುಹಿಡಿಯಲು ಬರದ ಸ್ಕೂಲು ಹುಡುಗರು ಹೋಗತ್ತ ಬಜ್ಜೆರಂಗ, ನಿಂದೊಂದು ಪಂಚಾಯ್ತಿ ಯಾವಾಗ್ಲೂ, ಅದೇನೊ ನಂಗೊತ್ತಾಗಲ್ಲ... ಎಂದು ಪಾಕೆಟ್ ಕ್ಯಾಲೆಂಡರನ್ನು ಸ್ವಲ್ಪ ಹೊತ್ತು ತಿರುವಿಹಾಕಿ ಬಜ್ಜೆರಂಗನ ಕೈಗೆ ಕುಕ್ಕುತ್ತಿದ್ದರು. ಆಗ ಬಜ್ಜೆರಂಗ ನಖಶಿಖಾಂತ ನೋಡಿ, ಪಾಕೆಟ್ ಕ್ಯಾಲೆಂಡರ್‌ನ ನೋಡೋಕೆ ಬರ್ದಿದ್ ಮ್ಯಾಕೆ ಇಸ್ಕೂಲ್ಗೇನು ಶ್ಯಾಟ ತರ್ಯೋಕೆ ಹೋಗ್ತಿರಾ...? ಮುದ್ದೆತಿಂದು ಲದ್ದಿ ಇಕ್ಕೋಕ್ ಲಾಯಕ್ಕೋಗ್ರಿ ನೀವು... ಎಂದು ರೇಗಿ ಪಾಕೆಟ್ ಕ್ಯಾಲೆಂಡರನ್ನು ಜೇಬಿಗಿಳಿಸಿಕೊಂಡು ಹೋಗುತ್ತಿದ್ದ.




ನಮ್ಮೂರಲ್ಲಿ ಎಲ್ಲರಿಗಿಂತಲೂ ದೊಡ್ಡದಾದ, ನಾಜೂಕಾದ ಪಾಕೆಟ್ ಕ್ಯಾಲೆಂಡರ್ ಇಟ್ಟಿದ್ದದ್ದು ಕಿಟ್ಟಯ್ಯ ಶೆಟ್ಟಿ. ಊರಿನಲ್ಲಿ ಇದ್ದಿದ್ದು ಒಂದೇ ಶೆಟ್ಟರ ಮನೆ. ಅದು ನಾಗಶೆಟ್ಟರ ಊರ ಮುಂದಿನ ಮನೆ. ದೊಡ್ಡ ಕುಟುಂಬ. ನಾಗಶೆಟ್ಟರ ನಾಲ್ಕು ಮಕ್ಕಳಲ್ಲಿ ಇಬ್ಬರು ಓದಿ ಬೇರೆ ಊರಲ್ಲಿ ನೌಕರಿಯಲ್ಲಿದ್ದರೆ, ಇನ್ನೊಬ್ಬರು ಬಾಲ್ಯದಲ್ಲಿ ಅಂಗಡಿ ಇಟ್ಟುಕೊಂಡಿದ್ದರು. ಕಿಟ್ಟಯ್ಯ ಶೆಟ್ಟಿ ಆರನೇ ಕ್ಲಾಸಿಗೆ ಓದು ನಿಲ್ಲಿಸಿ ಬೇಸಾಯ ನೋಡಿಕೊಳ್ಳುತ್ತಿದ್ದ. ಕೃಷ್ಣಮೂರ್ತಿ ಎಂಬ ಆತನ ನಿಜನಾಮಧೇಯವನ್ನು ಊರಿನಲ್ಲಿ ಯಾರೂ ನೆನಪಿನಲ್ಲಿಟ್ಟುಕೊಂಡಿರಲಿಲ್ಲ. ಬೇಸಾಯದಲ್ಲಿ ನಿಸ್ಸೀಮನಾಗಿದ್ದ. ಎಂಟೆಕರೆ ದಿನ್ನೆ ಹೊಲದಲ್ಲಿ ಬಾವಿಯನ್ನು ತೋಡಿಸಿ ಪಂಪ್‌ಸೆಟ್ ಕೂಡ ಹಾಕಿಸಿದ್ದ. ರೇಷ್ಮೆಯನ್ನೂ ಮೇಯಿಸಿ ಸೈ ಎನಿಸಿಕೊಂಡಿದ್ದ. ಶೆಟ್ಟಿ ಆದರೂ ಒಕ್ಕಲಿಗರಿಗೆ ಸರಿಸಮಾನವಾಗಿ ಬೇಸಾಯ ಮಾಡ್ತಿದ್ದ. ಇಂಥ ಕಿಟ್ಟಯ್ಯ ಶೆಟ್ಟಿಗೆ ದುಡ್ಡಿನ ಲೇವಾದೇವಿಯ ಚಟವಿತ್ತು. ಊರಿನಲ್ಲಿ ಪ್ರತಿಯೊಬ್ಬರೂ ಒಂದಲ್ಲ ಒಂದು ಬಾಬ್ತಿಗೆ ಕಿಟ್ಟಯ್ಯ ಶೆಟ್ಟಿಯ ಹತ್ತಿರ ಒಂದಿಷ್ಟಾದರೂ ಸಾಲ ಮಾಡುತ್ತಿದ್ದರು. ''ಮಗುನ್ಗೆ ಫೀಜ್ ಕಟ್ಬೇಕು ಒಂದೈವತ್ ಕೊಡು ಕಿಟ್ಟಪ್ಪ ಕಡ್ಲೆಗಿಡ ಕಿತ್ತಾಗ ಬಡ್ಡಿ ಸಮೇತ ಕೊಡ್ತೀನಿ... ಊರಿಂದ ನಮ್ಮಮ್ಮಯ್ಯ ಬಂದವ್ಳೆ, ಸೀರೆ ಉಡ್ಸಿ ಕಳಿಸ್ಬೇಕು ಒಂದ್ನೂರು ಕೊಡು ಕಿಟ್ಟಪ್ಪ ಮುಂದಿನ ಸುಗ್ಗಿಗೆ ಕೊಡ್ತೀನಿ. ಬಡ್ಡಿಗೆ ಬೇಕಾದ್ರೆ ಗೊಬ್ರ ಹೊಡ್ಕೋ...'', ''ನಮ್ಮೋಳ್ಗೆ ಚಂದಾಗಿಲ್ದಂಗಾಗೈತೆ, ಮಧುಗಿರಿಗೆ ಕರ್ಕಂಡೋಗ್ಬೇಕು ಒಂದು ಹಸಿರು ನೋಟು ಕೊಡು ಕಿಟ್ಟಪ್ಪ, ಗದ್ದೆ ಕೊಯ್ದಾಗ ಬೇಕಾದ್ರೆ ಭತ್ತ ಅಳ್ಕಂಬಿವಂತೆ...'', ''ಕಬ್ಬಿನ ತೋಟಕ್ಕೆ ಲಾಗೋಡಾಕ್ಬೇಕು ಒಂದ್ಮೂನ್ನೂರು ಕೊಡು ಕಿಟ್ಟಯ್ಯ, ಆಲೆಮನೆ ಆಡ್ತಿದ್ದಂಗೆ ವಾಪಸ್ಸು ಮಾಡ್ತೀನಿ ಧರ್ಮುದ್ ಬಡ್ಡಿ ನಾನಿಲ್ಲ ಅಂಬಲ್ಲ...'' ಇತ್ಯಾದಿಯಾಗಿ ಜನ ಕಿಟ್ಟಯ್ಯ ಶೆಟ್ಟಿಯನ್ನು ಅಮರಿಕೊಳ್ಳುತ್ತಿದ್ದರು. ''ಹೇಳಿದ ಟೈಮ್‌ಗೆ ಕೊಡ್ಬೇಕು ... ಏನೋ ಪಡಿಪಾಟ್ಲು ಬಿದ್ದು ಅಡ್ಜಸ್ಟ್ ಮಾಡಿ ಕೊಡ್ತಿದ್ದೀನಿ. ಬಡ್ಡಿ ಗಿಡ್ಡಿ ಕೈ ಎತ್ಬಿಟ್ಟೀರಾ...'' ಎಂದು ಎಚ್ಚರಿಸಿ ಯಾರಿಗೂ ಇಲ್ಲವೆನ್ನದಂತೆ ಕಿಟ್ಟಯ್ಯ ಶೆಟ್ಟಿ ಸಾಲ ಕೊಡುತ್ತಿದ್ದ.

ಸಾಲ ತೆಗೆದುಕೊಂಡವರ್ಯಾರೂ ಕಿಟ್ಟಯ್ಯ ಶೆಟ್ಟಿಗೆ ಕೈ ಕೊಡುತ್ತಿರಲಿಲ್ಲ. ಕೊಡುವ ಟೈಮು ಸ್ವಲ್ಪ ಹೆಚ್ಚುಕಡಿಮೆ ಯಾಗುತ್ತಿತ್ತು, ಅಷ್ಟೆ. ಆಗಿನ ಕಾಲದಲ್ಲಿ ನಂಬಿಕೆಯೇ ಜನರ ಮಾನ ಮರ್ಯಾದೆಗಳಾಗಿರುತ್ತಿದ್ದವು. ಇಂಥ ಲೇವಾದೇವಿ ಮಾಡುತ್ತಿದ್ದ ಕಿಟ್ಟಯ್ಯ ಶೆಟ್ಟಿಗೆ ಮರೆವು ದೊಡ್ಡ ಶಾಪವಾಗಿತ್ತು. ಹಾಗಾಗಿ ಸಾಲಕೊಟ್ಟ ಕೂಡಲೇ ಪಾಕೆಟ್ ಕ್ಯಾಲೆಂಡರ್‌ನಲ್ಲಿ ತಾರೀಖು ಮತ್ತು ಕೊಟ್ಟ ಸಾಲದ ಮೊತ್ತವನ್ನು ಗುರುತು ಹಾಕಿಕೊಳ್ಳುತ್ತಿದ್ದ. ಹಾಗಾಗಿ ಕಿಟ್ಟಯ್ಯ ಶೆಟ್ಟಿಯ ಪಾಕೆಟ್ ಕ್ಯಾಲೆಂಡರ್ ಇನ್ನೂರು ಪೇಜಿನದಾಗಿರುತ್ತಿತ್ತು. ತುಮಕೂರಿಗೆ ಹೋದಾಗ ಮೂರ್ನಾಲ್ಕು ಅಂಗಡಿಗಳಲ್ಲಿ ಹುಡುಕಿ ಹುಡುಕಿ ಒಳ್ಳೆಯ ಪಾಕೆಟ್ ಕ್ಯಾಲೆಂಡರನ್ನೆ ಖರೀದಿಸುತ್ತಿದ್ದ. ಎಲ್ಲರೂ ಅಂಗಿಯ ಮೇಲಿನ ಜೇಬಿನಲ್ಲಿ ಕ್ಯಾಲೆಂಡರ್ ಇಟ್ಟುಕೊಳ್ಳುತ್ತಿದ್ದರೆ, ಕಿಟ್ಟಯ್ಯ ಶೆಟ್ಟಿ ಅದಕ್ಕಾಗಿ ಎಲ್ಲಾ ಅಂಗಿಗಳಿಗೂ ಒಳ ಜೇಬನ್ನು ಇರಿಸುತ್ತಿದ್ದ. ಒಳಜೇಬಿನಲ್ಲಿ ದುಡ್ಡು, ಪಾಕೆಟ್ ಕ್ಯಾಲೆಂಡರ್ ಮಾತ್ರ ಇಟ್ಟುಕೊಳ್ಳುತ್ತಿದ್ದ. ಬೇರೆಲ್ಲ ವಸ್ತುಗಳನ್ನು ಸೈಡ್ ಜೇಬಿನಲ್ಲೊ, ನಿಕ್ಕರ್ ಜೇಬಿನಲ್ಲೊ ಇಟ್ಟುಕೊಳ್ಳುತ್ತಿದ್ದ. ಕಿಟ್ಟಯ್ಯ ಶೆಟ್ಟಿಯ ಪಾಕೆಟ್ ಕ್ಯಾಲೆಂಡರಿನ ಮೇಲಿನ ಪ್ರೇಮವನ್ನು ಕಂಡು ಸ್ವತಃ ಕಟ್ಟಿಕೊಂಡ ಹೆಂಡತಿ ಸುಬ್ಬಲಕ್ಷ್ಮಮ್ಮನೇ ಬೆರಗು ಪಡುತ್ತಿದ್ದಳು. ''ಕಿಟ್ಟಯ್ಯ ಶೆಟ್ಟಿ ಪಾಕೆಟ್ ಕ್ಯಾಲೆಂಡ್ರನ ಹೆಂಡ್ತಿಗಿಂತ್ಲೂ ಭದ್ರವಾಗಿ ನೋಂಡ್ಕಂಬ್ತಾನೆ... ಊಟ ಬಿಟ್ರೂ ಬಿಡ್ತಾನೆ, ಕಿಟ್ಟಯ್ಯ ಶೆಟ್ಟಿ ಪಾಕೆಟ್ ಕ್ಯಾಲೆಂಡ್ರನ ಮಾತ್ರ ಬಿಡಲ್ಲ...'', ''ಥೆರಿಕೆ, ನಮ್ ಕಿಟ್ಟಯ್ಯ ಶೆಟ್ಟಿ ಪಾಕೆಟ್ ಕ್ಯಾಲೆಂಡ್ರ ಇಟ್ಟಂಗೆ ನಮ್ಮಿಡೀ ತಾಲ್ಲೂಕಿನಾಗೆ ಯಾವೋನು ಇಡಕ್ಕಾಗಲ್ಲ...'' ಇತ್ಯಾದಿಯಾಗಿ ಜನ ಮಾತನಾಡಿಕೊಳ್ಳುತ್ತಿದ್ದರು. ಸಾಲ ಹಿಂತಿರುಗಿಸುವಾಗ ಯಾರಾದರೂ ಜಪ್ಪ ಜಪ್ಪ

ಎಂದು ರಾಗ ತೆಗೆದರೆ ಕಿಟ್ಟಯ್ಯ ಶೆಟ್ಟಿ ಸರ‍್ರನೆ ಅಂಗಿಯ ಮೇಲಿನ ಎರಡು ಗುಂಡಿಗಳನ್ನು ಬಿಚ್ಚಿ ಜನಿವಾರ ಕಾಣುವಂತೆ ಒಳಜೇಬಿಗೆ ಕೈ ಹಾಕಿ ಪಾಕೆಟ್ ಕ್ಯಾಲೆಂಡರನ್ನು ತೆಗೆದು ರಾಗ ತೆಗೆದವರ ಮುಂದೆ ಅವರ ಹೆಸರು ಬರೆದ ಪೇಜನ್ನು ತೆರೆದಿಟ್ಟು, ''ಬೇಕಾದ್ರೆ ನೀವೆ ನೋಡ್ಕಳ್ರಿ, ಅವೊತ್ತು ನಿಮ್ಮೆದ್ರುಗೇ ಬರ್‍ಕಂಡಿದ್ದು. ನಾನು ಅಪದ್ದ ನುಡುದ್ರು ನನ್ ಪಾಕೆಟ್ ಕ್ಯಾಲೆಂಡ್ರು ಅಪದ್ದ ಹೇಳಲ್ಲ...'' ಎಂದು ಕೋರ್ಟಿನಲ್ಲಿ ಪ್ರಬಲವಾದ ಸಾಕ್ಷಿಯನ್ನು ಹಾಜರುಪಡಿಸಿದವರಂತೆ ಖುಷಿಪಡುತ್ತಿದ್ದ.

ಕಿಟ್ಟಯ್ಯ ಶೆಟ್ಟಿಯ ದೊಡ್ಡ ವೀಕ್‌ನೆಸ್ ಎಂದರೆ ಸಿಝರ್ ಸಿಗರೇಟು. ಶೆಟ್ಟರ ಮನೆಯ ಯಾವ ಗಂಡಸೂ ತುಟಿಗಳ ಮಧ್ಯೆ ಇರಲಿ ಬೆರಳುಗಳ ಮಧ್ಯೆ ಕೂಡ ಸಿಗರೇಟು, ಬೀಡಿ ಸಿಗಿಸಿಕೊಂಡವರಲ್ಲ. ಬೇಸಾಯಕ್ಕೆ ಇಳಿದ ಮೂರ‍್ನಾಲ್ಕು ವರ್ಷಗಳಲ್ಲೆ ಕಿಟ್ಟಯ್ಯ ಪ್ರಭು ಬೀಡಿ ಸೇದುವುದನ್ನು ಕಲಿತಿದ್ದ. ಈ ವ್ಯವಹಾರವನ್ನು ಕಿಟ್ಟಯ್ಯ ಅನೇಕ ವರ್ಷಗಳ ಕಾಲ ಬಹಳ ಸೀಕ್ರೇಟಾಗಿಯೇ ಇಟ್ಟಿದ್ದ. ಕರೆಂಟ್ ರೂಮಿನಲ್ಲೊ ಇಲ್ಲ ಯಾವುದಾದರೂ ಮರದ ಬುಡದಲ್ಲೊ ಪ್ಲಾಸ್ಟಿಕ್ ಪೇಪರ್‌ನಲ್ಲಿ ಬೀಡಿ ಬೆಂಕಿಪೊಟ್ಟಣವನ್ನು ಬಚ್ಚಿಡುತ್ತಿದ್ದ. ಕೆಲವೊಮ್ಮೆ ಬಾವಿಯ ಕಲ್ಲು ಕಟ್ಟಡದ ಸಂದಿಯಲ್ಲಿ ಬಚ್ಚಿಡುತ್ತಿದ್ದ. ಬೇಸಾಯದ ಉಸ್ತುವಾರಿ ಸಂಪೂರ್ಣವಾಗಿ ಕಿಟ್ಟಯ್ಯ ಶೆಟ್ಟಿಯದೇ ಆಗಿದ್ದರಿಂದ ತಂದೆ ನಾಗಶೆಟ್ಟಿ ಯಾವಾಗಲಾದರೊಮ್ಮೆ ಮಾತ್ರ ಹೊಲದ ಬಳಿ ಹೋಗುತ್ತಿದ್ದ. ಹಾಗಾಗಿ ಕಿಟ್ಟಯ್ಯ ಹೊಲದ ಬಳಿ ರಾಜಾರೋಷವಾಗಿ ಸಿಗರೇಟು ಎಳೆದು ತೊಟ್ಟಿ ನೀರಿನಲ್ಲಿ ಬಾಯಿ ಮುಕ್ಕಳಿಸಿ ಮನೆಗೆ ಬರುತ್ತಿದ್ದ. ಕಿಟ್ಟಯ್ಯ ಶೆಟ್ಟಿಯ ಈ ರಹಸ್ಯ ಕಾರ್ಯಾಚರಣೆ ಮನೆಯವರಿಗಿರಲಿ ಅಕ್ಕಪಕ್ಕದ ಹೊಲದವರಿಗೂ, ಹೊಲದಲ್ಲಿ ಕೆಲಸಕ್ಕೆ ಬರುತ್ತಿದ್ದ ಕೂಲಿಯಾಳುಗಳಿಗೂ ಪತ್ತೆಯಾಗುತ್ತಿರಲಿಲ್ಲ. ಆದರೆ ಕಿಟ್ಟಯ್ಯ ಶೆಟ್ಟಿಯ ಮದುವೆಯಾದ ಮಾರನೆ ದಿನ ಅಂದರೆ ಪ್ರಸ್ತದ ದಿನವೇ ಹೆಂಡತಿ ಸುಬ್ಬಲಕ್ಷ್ಮಮ್ಮನ ಕೈಗೆ ಸಿಕ್ಕಿಹಾಕಿಕೊಂಡಿದ್ದ. ರವೆ ಉಂಡೆ, ಚಕ್ಕುಲಿ ತಿಂದು ಹೆಂಡತಿಯನ್ನು ತಬ್ಬಿಕೊಂಡು ಮುತ್ತು ಕೊಡಲು ಹೋದಾಗ ಸುಬ್ಬಲಕ್ಷ್ಮಮ್ಮನಿಗೆ ಸಿಗರೇಟು ವಾಸನೆ ಬಡಿದು ಒಂದು ರೀತಿಯಲ್ಲಿ ಮುಖ ಸಿಂಡರಿಸಿಕೊಂಡು ಏನ್ರಿ, ಸಿಗರೇಟು ವಾಸ್ನೆ ಬರ‍್ತಿದೆ... ಎಂದಾಗ ಕಿಟ್ಟಯ್ಯ ಶೆಟ್ಟಿ ಯಾವಾಗಲಾದರೂ ಒಂದೊಂದು ಸೇದ್ತಿನಿ... ಎಂದು ತಪ್ಪೊಪ್ಪಿಕೊಂಡಿದ್ದ. ಇನ್ಮೇಕೆ ಕಂಟ್ರೋಲಾಗಿರ‍್ಬೇಕು. ಇಲ್ಲ ಅಂದ್ರೆ ಅತ್ತೆ-ಮಾವನಿಗೆ ಎಲ್ಲಾ ಹೇಳ್ಬಿಡ್ತೀನಿ. ಸಿಗರೇಟು ಸೆದ್ದಾಗ ಮುತ್ತುಗಿತ್ತು ಕೊಡಾಕೆ ಬರ‍್ಬೇಡ್ರಿ... ನಂಗೆ ವಾಕರಿಕೆ ಬಂದಂಗೆ ಆಗ್ತೈತೆ... ಎಂದು ಉಬ್ಬಲ್ಲನ್ನು ಪ್ರದರ್ಶಿಸಿದ್ದಳು. ಎತ್ತಲ ಮಲಾಮತ್ತು ಎಂದು ಕಿಟ್ಟಯ್ಯ ಶೆಟ್ಟಿ ರಾತ್ರಿ ಹೊತ್ತು ಸಿಗರೇಟು ಸೇದುವುದನ್ನು ಬಿಟ್ಟಿದ್ದ. ಆದರೆ ಹೆಂಡತಿ ಮೊದಲ ಮಗುವಿನ ಹೆರಿಗೆಗೆಂದು ತೌರಿಗೆ ಹೋದಾಗ ಕಿಟ್ಟಯ್ಯ ಸಿಗರೇಟು ಸೇದುವುದನ್ನು ಜಾಸ್ತಿಯೇ ಮಾಡಿದ್ದ.




ಇಂಥ ಟೈಮಿನಲ್ಲಿ ಒಂದು ಘಟನೆ ನಾಗಶೆಟ್ಟಿಗೆ ಮಗ ಕಿಟ್ಟಯ್ಯ ಶೆಟ್ಟಿಯ ಬಗ್ಗೆ ಅನುಮಾನ ಮೂಡಲು ಕಾರಣವಾಗಿತ್ತು. ಎಂಟು ಎಕರೆಯಲ್ಲಿ ಕಡಲೇಕಾಯಿ ಬಲಿತಿದ್ದರಿಂದ ಕಿಟ್ಟಯ್ಯ ಶೆಟ್ಟಿ ಯಂಗೂ ಹೆಂಡತಿ ಇಲ್ಲವೆಂದು ಹೊಲದ ಹತ್ತಿರ ಕಾವಲಿಗೆಂದು ಕರೆಂಟ್ ರೂಮಿನಲ್ಲಿ ಮಲಗುತ್ತಿದ್ದ. ಸುಗ್ಗಿಯ ಕಾಲದಲ್ಲಿ ಹಾಗೆ ರಾತ್ರಿ ಹೊತ್ತು ಒಬ್ಬನೆ ಮಲಗಿ ರೂಢಿಯಿತ್ತು. ಕೆಲವೊಮ್ಮೆ ಕಿಟ್ಟಯ್ಯ ಶೆಟ್ಟಿಯ ಕ್ಲೋಸ್ ಫ್ರೆಂಡ್ ಕಾಳ್ರಂಗಮ್ಮಜ್ಜಿಯ ಮಗ ಗೂನ್‌ಶೀನಪ್ಪನೂ ಕಿಟ್ಟಯ್ಯ ಶೆಟ್ಟಿಯ ಜೊತೆ ಕರೆಂಟ್

ರೂಮಿನ ಹತ್ತಿರ ಮಲಗಲು ಹೋಗುತ್ತಿದ್ದ. ಗೂನ್‌ಶೀನಪ್ಪನಿಗೆ ಬೀಡಿ ಸಿಗರೇಟಿನ ಚಟವಿರಲಿಲ್ಲ. ಟೀ ಬೇಯಿಸುವುದನ್ನು, ಉಪ್ಪಿಟ್ಟು ಮಾಡುವುದನ್ನು ಚೆನ್ನಾಗಿ ಕಲಿತಿದ್ದ. ಶೀನಪ್ಪನ ಬೆನ್ನು ಬಾಗಿದ್ದರಿಂದ ಆತನಿಗೆ ಗೂನ್‌ಶೀನಪ್ಪ ಎಂದೇ ಹಸರು ಬಿದ್ದಿತ್ತು. ಕೆಲವರಂತೂ ಗೂನಪ್ಪ ಅಂತಲೇ ಕರೆಯುತ್ತಿದ್ದರು. ಗೂನ್‌ಶೀನಪ್ಪನೂ, ಕಿಟ್ಟಯ್ಯ ಶೆಟ್ಟಿಯೂ ಕ್ಲಾಸ್‌ಮೇಟ್ ಕೂಡ ಆಗಿದ್ದರು. ಆದರೆ ಶೀನಪ್ಪ ಕಿಟ್ಟಯ್ಯ ಶೆಟ್ಟಿಗಿಂತ ಎರಡು ವರ್ಷ ಮೊದಲೇ ಸ್ಕೂಲ್‌ಬಿಟ್ಟು ಬೇಸಾಯ ಮಾಡುತ್ತಿದ್ದ. ಹಾಗಾಗಿ ಇಬ್ಬರಲ್ಲೂ ಸಲುಗೆಯಿತ್ತು. ಶೀನಪ್ಪ ಕಿಟ್ಟಯ್ಯನಿಗಿಂತ ಒಂದು ವರ್ಷ ಮೊದಲೇ ಮದುವೆಯಾಗಿದ್ದ. ಅವೊತ್ತೊಂದು ದಿನ ಕರೆಂಟ್ ರೂಮಿನಲ್ಲಿ ಮಲಗಿದ್ದಾಗ ''ಎಂಟು ತಿಂಗ್ಳು ಹೆಂಡ್ತೀನ ಬಿಟ್ಟು ಯಂಗಿದ್ದೀಯೋ ಶೆಟ್ಟಿ...'' ಎಂದಿದ್ದ ಗೂನ. ಏನ್ಮಾಡೋದೋ ಗೂನ ಇನ್ನೂ ಐದು ತಿಂಗ್ಳು ಬಾಣಂತಿ, ಒಂಭತ್ತು ತಿಂಗಳಿಗೆ ಕಳಿಸ್ತೀವಿ ಅಂತ ಅವ್ರೆ ಅತ್ತೆ - ಮಾವ... ಎಂದಿದ್ದ ಶೆಟ್ಟಿ ನಿಟ್ಟುಸಿರು ಬಿಡುತ್ತಾ. ಅಯ್ಯೋ ಗುಲ್ಡು ಒಂದೆಂಟ್ ದಿನ್ದಾಗೆ ಒಂದ್ಸಾರಿ ಹೆಂಡ್ತಿ ಊರ್ಗೆ ಹೋಗ್ಬಿಟ್ ಬಾ... ಮಗುನ ನೋಡೊ ನೆಪದಾಗೆ... ನಾನೇನಿಲ್ಲಪ್ಪ ಮೂರ್ತಿಂಗ್ಳ್ನಾಗೆ ಹೋಗಿ ತಗುಲ್ಕಂಡ್ ಬಂದಿದ್ದೆ... ಎಂದು ಶೆಟ್ಟಿಯನ್ನು ಹುರಿದುಂಬಿಸಿದ್ದ. ಮನೇಲಿ ಕೇಳಿ ನಾನೂ ಹೋಗ್ಬತ್ತಿನೋ ಗೂನ... ಎಂದು ಮೈ ಬಿಸಿಮಾಡಿಕೊಂಡಿದ್ದ ಶೆಟ್ಟಿ. ಬರಿ ಪಪ್ಪು ಬುರುಗು ತಿಂದ್ರೆ ಹಿಂಗೆ ಶೆಟ್ಟಿ ನಮ್ಮಂಗೆ ನಾಟಿಕೋಳಿ ತಿಂದ್ರೆ ಸಕ್ತಿ ಜಾಸ್ತಿ ಇರ್ತದೆ. ಮಗು ಆದ್ಮೇಲೆ ಹೆಂಗ್ಸುರು ಶಕ್ತೀನ ಜಾಸ್ತಿ ಹೀರ್ತಾರೆ... ತನಗಿಂತಲೂ ಎರಡು ವರ್ಷ ಮೊದಲೇ ಮದುವೆಯಾಗಿದ್ದ ಗೂನನ ಅನುಭವ ನಿಜವಿರಬೇಕೆಂದು ನಂಬಿದ್ದ ಶೆಟ್ಟಿ. ಏನೋ ಮಾಡೋದು... ಕಿಟ್ಟಯ್ಯ ಬಾಯಲ್ಲಿ ನೀರೂರಿಸಿಕೊಂಡು ಕೇಳಿದ. ನೀನು ಹೆಂಡ್ತಿ ಊರ್ಗೆ ಹೋಗೂ ಹಿಂದಿನ ದಿನ ರಾತ್ರಿ ಹೇಳು. ನಾಟಿಕೋಳಿ ತಂದು ಉರ್ದುಕೊಡ್ತೀನಿ. ಆಮೇಲೆ ನೋಡು ಲಮ್ಡಿಕೆ ಅದಷ್ಟಕದೆ ಹೆಂಡ್ತಿ ಊರ್ಗೆ ಎಳ್ಕಂಡ್ ಹೋಳ್ಕಂಡ್ ಹೋಗ್ತೈತೆ. ರಾತ್ರಿ ಪೂರ ಲಟಪಟ ಅಂತ ಮೂಳೆ ಮುರ್ದು ಪೌರುಸ ತೋರಿಸ್ಬೋದು... ಗೂನ್‌ಶೀನ ಸಿಗರೇಟಿನ ಹೊಗೆಯನ್ನು ಕರೆಂಟ್ ರೂಮಿನ ಕಡೆ ಸುರುಳಿ ಸುರುಳಿಯಾಗಿ ಬಿಡುತ್ತಾ ಶೆಟ್ಟಿಯ ಮನಸ್ಸಿನಲ್ಲಿ ಬಯಕೆಯ ಜೇಡರ ಬಲೆಯನ್ನು ಕಟ್ಟಿದ್ದ.

ಹಂಗಾದ್ರೆ ಮುಂದಿನ ವಾರ ಏರ್ಪಾಟ್ ಮಾಡು. ಖರ್ಚು ನಂದಿರ್ಲಿ ಎಂದ.

ಸರಿ, ಬೇಸ್ತ್‌ವಾರ ಮಾಡನೇಳು ಎಂದ ಶೀನ.

ಈ ವಿಷ್ಯ ಎಲ್ಲೂ ಲೀಕ್ ಆಗ್ಬಾರ್ದು... ಎಂದ ಶೆಟ್ಟಿ.

''ಇಷ್ಟು ದಿನುದ್ದು ಯಾವತ್ತಾದ್ರೂ ಲೀಕ್ ಮಾಡಿದ್ದೀನ ? ಹರಿಹರ ಬ್ರಮ್ಮ ಬಂದ್ರು ನನ್ ಬಾಯಿ ಬಿಡಿಸಕಾಗಲ್ಲ...''.

ಮುಂದಿನ ಸೋಮುವಾರ ಹೆಂಡತಿಯ ಊರಿಗೆ ಹೋಗಿ ಮಗುವನ್ನು ನೋಡಿಕೊಂಡು ಬರುವೆನೆಂದು ಅಮ್ಮನ ಹತ್ತಿರ ಹೇಳಿದಾಗ ಭಾಗ್ಯಲಕ್ಷ್ಮಮ್ಮನವರು ಖುಷಿಗೊಂಡು ''ಅಯ್ಯ ಹೋಗ್ಬಾರೊ, ನೀರಾಕಿದಾಗ ಹೋಗಿದ್ದಿದ್ದು. ನಿಮ್ಮ ನಾಯನಾನು ಮೊನ್ನೆ ಅಂಗಂತ ಇದ್ರು...'' ಎಂದಿದ್ದಳು. ಸರಿ ಭಾನುವಾರ ಗೂನ್‌ತಿಮ್ಮನು ಹೊಲದಿಂದ ಹಾಗೇ ಹನುಮಂತಪುರಕ್ಕೆ ಹೋಗಿ ಭೀಮಪ್ಪ ಬೋವಿಯ ಹತ್ತಿರ ಒಂದು ಸುಮಾರಾದ ಕೋಳಿಯನ್ನು ಕೊಯ್ಸಿ ಕ್ಲೀನ್ ಮಾಡಿಸಿಕೊಂಡು ಎಂಟುಗಂಟೆಗೆಲ್ಲ ಕಿಟ್ಟಯ್ಯ ಶೆಟ್ಟಿಯ ಕರೆಂಟ್ ರೂಮಿನ ಬಳಿ ಹಾಜರಾಗಿದ್ದ. ಸಂಜೆಯೇ ಸಣ್ಣ ಟಿಫನ್ ಕ್ಯಾರಿಯರ್‌ನಲ್ಲಿ ಮಸಾಲೆ ರುಬ್ಬಿಕೊಂಡು ತಂದಿಟ್ಟಿದ್ದ. ವಾಸ್ನೆ ಗೀಸ್ನೆ ಬಂದ್ರೆ... ಎಂದು ಭಯಪಟ್ಟ ಶೆಟ್ಟಿ. ಊರ್ಗಂಟ ಎಲ್ಲಿ ಹೋಗತ್ತೆ ಸುಮ್ಕಿರಯ್ಯ ಶೆಟ್ಟಿ. ಅದೂ ಅಲ್ದೆ ಇಸ್ಕೂಲ್ ಮುಂದೆ ಮಂಡ್ರು ಇಳ್ಕಂಡವ್ರೆ. ಊರ ತುಂಬಾ ಅವುರ್ ಗಮ್ಲೆ ತುಂಬ್ಕಂಡೈತೆ... ಎಂದು ಗೂನ್‌ಶೀನ ಒಲೆ ಹಚ್ಚಿದ. ಗಂಟೆಗೆಲ್ಲ ಘಮಘಮ ವಾಸನೆ ಸುತ್ತಿಕೊಂಡಿತ್ತು. ಕಿಟ್ಟಯ್ಯ ಶೆಟ್ಟಿಗೂ ಕೋಳಿರುಚಿಯನ್ನು ನೋಡುವ ಬಯಕೆ ಮೊದಲಿನಿಂದಲೂ ಇತ್ತು. ಗೂನ ಚೆನ್ನಾಗಿ ಹುರಿದಿದ್ದ. ಶೀನ ಎಮಕೆಯನ್ನು ಬಿಡಿಸಿ ಬಿಡಿಸಿ ಬರಿ ಖಂಡವನ್ನು ಮಾತ್ರ ಶೆಟ್ಟಿಗೆ ಕೊಟ್ಟಿದ್ದ. ಶೆಟ್ಟಿಗೆ ರುಚಿ ಹತ್ತಿತ್ತು. ಅರ್ಧ ಭಾಗ ಶೀನ ಇನ್ನರ್ಧ ಭಾಗ ಶೆಟ್ಟಿಯೂ ಕ್ಲೀನ್ ಮಾಡಿ ನೀರು ಕುಡಿದು ಎರಡೆರಡು ಸಿಗರೇಟು ಸುಟ್ಟು ಹೊಗೆಯನ್ನು ಆಕಾಶಕ್ಕೆ ಬಿಟ್ಟು ಮಲಗಿದ್ದರು. ಮಗನನ್ನು ಊರಿಗೆ ಬೇಗನೆ ಕಳುಹಿಸಲು ನಾಗಶೆಟ್ಟಿಯು ಫ್ಲಾಸ್ಕಿನಲ್ಲಿ ಕಾಫಿ ಹಾಕಿಕೊಂಡು ಹೊತ್ತು ಹುಟ್ಟುವ ಮೊದಲೇ ಕರೆಂಟ್ ರೂಮಿನ ಹತ್ತಿರ ಬಂದಿದ್ದ. ಸದ್ಯ ನಾಯಿ ರಾತ್ರಿಯೇ ಮೂಳೆಯ ಒಂದು ಚೂರನ್ನೂ ಬಿಡದೆ ಕ್ಲೀನ್ ಮಾಡಿತ್ತು. ಗೂನ್‌ಶೀನನ್ನು ನೋಡಿದಾಗ ನಾಗಶೆಟ್ಟಿಗೆ ಅನುಮಾನ ಕಾಡಿತ್ತು. ಏನ್ ಮಾಡ್ಕಂಡಿದ್ರಿ ರಾತ್ರಿ, ಊಟ ಮಾಡ್ಕಂಡೇ ಬಂದಿದ್ದಲ್ಲ... ಎಂದಿದ್ದ ನಾಗಶೆಟ್ಟಿ. ಅವಲಕ್ಕಿ ವಗ್ಗರ್ಣೆ ಹಾಕ್ಕೊಂಡಿದ್ವಿ ದೊಡ್ಡಪ್ಪ ಎಂದು



ಗೂನ್‌ಶೀನ ಬಾಯಿ ತೂರಿಸಿ ಶೆಟ್ಟಿಯನ್ನು ಸಂಕಷ್ಟದಿಂದ ಪಾರು ಮಾಡಿದ್ದ. ಆದರೂ ಶೆಟ್ಟಿಗೆ ಒಂದು ರೀತಿಯ ಅಪರಾಧಿ ಮನೋಭಾವ ಕಾಡುತ್ತಿತ್ತು. ತಂದೆಯ ಮನಸ್ಸಿನಲ್ಲಿದ್ದ ಅನುಮಾನದ ಕಿಡಿಯನ್ನು ಆರಿಸಿಬಿಡಬೇಕೆಂದು ಮನಸ್ಸು ಮಾಡಿ, ತಲೆಗೆ ಸ್ನಾನ ಮಾಡಿ, ದೇವರ ಮುಂದೆ ದೀಪ ಹಚ್ಚಿ ತಂದೆಯ ಮುಂದೆ ಬಂದು ಅಂಗಿಯ ಒಳಜೇಬಿನಿಂದ ಶ್ರೀರಾಮಚಂದ್ರನ ಭಾವಚಿತ್ರವಿದ್ದ ಪಾಕೆಟ್ ಕ್ಯಾಲೆಂಡರ್ ತೆಗೆದು, ''ನಾಯಿನಾ, ಈ ಶ್ರೀರಾಮಚಂದ್ರನ ಮೇಲಾಣೆ ನಾನು ಮಾಡಬಾರದ್ದನ್ನು ಏನೂ ಮಾಡಿಲ್ಲ...'' ಎಂದಿದ್ದ. ನಾಗಶೆಟ್ಟಿಯು ಅದುಕ್ಕೆಲ್ಲ ಇಂಥ ಪ್ರಮಾಣ ಯಾಕೆ ? ಮೊದ್ಲು ಊರಿಗೆ ಹೋಗಿ ಮಗುನ ನೋಡ್ಕಂಡ್ ಬಾ... ಎಂದು ಅನುಮಾನದ ಬೀಜವನ್ನು ಸುಟ್ಟು ನಿರಾಳವಾದರು. ಶೆಟ್ಟಿಯೂ ಲಗುಬಗೆಯಿಂದ ಹೆಂಡತಿಯ ಊರಿಗೆ ಬಸ್ಸು ಹತ್ತಲು ಏಳನೇ ಮೈಲಿ ಕ್ರಾಸಿಗೆ ನಡೆದಿದ್ದ.

ಇಂಥ ಕಿಟ್ಟಯ್ಯ ಶೆಟ್ಟಿ ಒಂದು ಸಾರಿ ಕಡಲೆ ಸುಗ್ಗಿಯಲ್ಲಿ ತನ್ನ ಉಸಿರಿನಂತಿದ್ದ ಪಾಕೆಟ್ ಕ್ಯಾಲೆಂಡರನ್ನು ಕಳೆದುಕೊಂಡುಬಿಟ್ಟಿದ್ದ. ಕಡಲೆ ಗಿಡ ಕೀಳಲು ಬಂದಿದ್ದ ಹೆಂಗಸರಿಗೆ ಅಡಿಕೆಲೆಯನ್ನು ತೆಗೆದುಕೊಂಡು ಹೋಗಲು ನ್ಯಾತನಾಯ್ಕನ ಅಂಗಡಿಯಲ್ಲಿ ಕುಳಿತಿದ್ದ. ನ್ಯಾತನಾಯ್ಕ ಬೀಡಿ, ಸಿಗರೇಟು, ಎಲೆ ಅಡಿಕೆ ಅಂಗಡಿಯನ್ನು ಇಟ್ಟಿದ್ದ. ಬೆಳಗ್ಗೆ ಮತ್ತು ಸಂಜೆಯ ಹೊತ್ತು ಬೆಲ್ಲದ ಟೀ ಕೂಡ ಕಾಯಿಸುತ್ತಿದ್ದ. ನ್ಯಾತನಾಯ್ಕನ ಟೀ ತುಂಬಾ ಫೇಮಸ್ ಆಗಿತ್ತು. ಆ ನ್ಯಾತನಾಯ್ಕ ಟೀ ಮಾಡ್ತಾನೆ. ಥರಿಕೆ ಒಂದ್ಸಾರಿ ಕುಡುದ್ರೆ ದಿನಪೂರ್ತಿ ಅದುರ್ ಗಮ್ಲು ಬಾಯಲ್ಲಿ ಹಂಗೇ ಇರ್ತೈತೆ... ಎಂದು ಜನ ಮಾತನಾಡಿಕೊಳ್ಳುತ್ತಿದ್ದರು. ಕೆಲವರು ಬೆಳಗ್ಗೆ ಹೊತ್ತು ಮನೆಗಳಲ್ಲಿ ಕುಡಿಯದೆ ನ್ಯಾತನಾಯ್ಕನ ಅಂಗಡಿಯ ಮುಂದೆ ಕುಳಿತು, ಅವನು ಕೊಟ್ಟಾಗ ಟೀ ಕುಡಿದು ಪುಸ ಪುಸ ಅಂತ ಬೀಡಿ ಸೇದಿ ಸುಖ ಅನುಭವಿಸುತ್ತಿದ್ದರು. ಸೂರ್ಯ ನೆತ್ತಿಗೇರುವವರೆಗೂ ಹತ್ತನ್ನೆರಡು ಜನ ನ್ಯಾತನಾಯ್ಕನ ಅಂಗಡಿಯ ಮುಂದೆ ಪಟ್ಟಾಂಗ ಹೊಡೆಯುತ್ತಿದ್ದರು. ನ್ಯಾತನಾಯ್ಕನಿಗೆ ಅಕ್ಷರ ಜ್ಞಾನವಿತ್ತು. ದುಡ್ಡಿನ ಬದಲು ರಾಗಿ, ಭತ್ತ, ಕಡ್ಲೆಕಾಯಿ, ಬೆಲ್ಲ ಇತ್ಯಾದಿಗಳನ್ನು ಬಾರ್ಟರ್ ಪಡೆದು ಬೀಡಿ, ಸಿಗರೇಟು, ಕಾಫಿಪುಡಿ ಕೊಡುತ್ತಿದ್ದರಿಂದ ನ್ಯಾತನಾಯ್ಕ ಒಳ್ಳೆ ಲಾಭದಲ್ಲೇ ಇದ್ದ. ಯಾರಾದರೂ ಅಪರೂಪಕ್ಕೆ ಸಾಲ ಹೇಳಿದರೆ ಎಷ್ಟೇ ವರ್ಷಗಳಾದರೂ ಅದನ್ನು ನೆನಪಿನಲ್ಲಿಟ್ಟುಕೊಳ್ಳುತ್ತಿದ್ದ. ಕಿಟ್ಟಯ್ಯ ಶೆಟ್ಟಿ ಮತ್ತು ನ್ಯಾತನಾಯ್ಕ ನೆನಪಿನ ಶಕ್ತಿಯಲ್ಲಿ ತದ್ವಿರುದ್ಧವಾಗಿದ್ದರು. ಕಿಟ್ಟಯ್ಯ ಶೆಟ್ಟಿ ಕೂಡ ಅರ್ಜೆಂಟ್ ಇದ್ದಾಗ ಸೀಕ್ರೇಟಾಗಿ ನ್ಯಾತನಾಯ್ಕನ ಅಂಗಡಿಯಲ್ಲಿ ಸಿಗರೇಟು ಪರ್ಚೇಸ್ ಮಾಡುತ್ತಿದ್ದ. ಮಧ್ಯಾಹ್ನದ

ಹೊತ್ತು ನ್ಯಾತನಾಯ್ಕನ ಹತ್ತಿರ ಒಂದು ಕಪ್ ಟೀ ಮಾಡಿಸಿಕೊಂಡು ಕುಡಿದು ಅಲ್ಲೇ ಧಂ ಹೊಡೆಯುತ್ತಿದ್ದ. ಅಲ್ಲಿಗೆ ಯಾವಾಗಲಾದರೂ ನಾಗಶೆಟ್ಟಿ ಬಂದರೂ ಕಿಟ್ಟಯ್ಯ ಶೆಟ್ಟಿಯ ಬಗ್ಗೆ ಒಳ್ಳೆಯದನ್ನು ಹೇಳುತ್ತಿದ್ದನೇ ಹೊರತು ನ್ಯಾತನಾಯ್ಕ ಕಿಟ್ಟಯ್ಯ ಶೆಟ್ಟಿಯ ಚಟದ ಬಗ್ಗೆ ತಕಾರವೆತ್ತುತ್ತಿರಲಿಲ್ಲ. ಅಂದು ಕೂಲಿಯಾಳುಗಳಿಗೆ ಎಲೆ ಅಡಿಕೆಯನ್ನು ಕೊಂಡ ಕಿಟ್ಟಯ್ಯ ಹಂಗೆ ಒಂದು ಕಪ್ ಟೀ ಮಾಡಿಸಿಕೊಂಡು ಕುಡಿದು ಸಿಗರೇಟು ಹಚ್ಚಿ ಎರಡು ಧಂ ಎಳೆಯುವುದಕ್ಕೂ ನಾಗಶೆಟ್ಟಿ ಅಪ್ಪಯ್ಯ ಕಿಟ್ಟ... ಎಂದು ಅಲ್ಲಿಗೆ ಬರುವುದಕ್ಕೂ ಒಂದೇ ಆಗಿತ್ತು. ಸಡನ್ ಆಗಿ ಕಿಟ್ಟಯ್ಯ ಬಂದೆ ನಾಯಿನಾ ಎಂದು ಸಿಗರೇಟನ್ನು ನ್ಯಾತನಾಯ್ಕನ ಒಲೆಗೆ ಎಸೆದು ಹೊರಗೆ ಬಂದಿದ್ದ. ಕುಕ್ಕರಗಾಲಿನಲ್ಲಿ ಕುಳಿತು ಸಡನ್ ಆಗಿ ಎದ್ದಿದ್ದರಿಂದ ಯಾವ ಮಾಯೆಯಲ್ಲಿಯೋ ಕಿಟ್ಟಯ್ಯಶೆಟ್ಟಿಯ ಪಾಕೆಟ್ ಕ್ಯಾಲೆಂಡರ್ ಕೆಳಗೆ ಬಿದ್ದಿತ್ತು. ನ್ಯಾತನಾಯ್ಕ ನಗುತ್ತಾ ಅದನ್ನು ತೆರೆದು ನೋಡಿದ್ದ. ಪ್ರತಿಯೊಂದು ಪೇಜಿನಲ್ಲೂ ಲೇವಾದೇವಿಯ ವಿವರಗಳು. ಇರಲಿ ಸ್ವಲ್ಪ ಆಟ ಆಡಿಸೋಣ ಎಂದು ನ್ಯಾತನಾಯ್ಕ ಅದನ್ನು ತೆಗೆದು ತನ್ನ ಹಳೆ ಪೆಟ್ಟಿಗೆಯ ತಳಕ್ಕೆ ಸೇರಿಸಿಬಿಟ್ಟ.

ಅಂದು ಸಂಜೆಯೇ ಕಿಟ್ಟಯ್ಯ ಶೆಟ್ಟಿಗೆ ಪಾಕೆಟ್ ಕ್ಯಾಲೆಂಡರ್ ಎಲ್ಲೋ ಬಿದ್ದುಹೋಗಿರುವುದರ ಅರಿವು ಬಂದು ಕಕ್ಕಾವಿಕ್ಕಿಯಾಗಿದ್ದ. ಹೊಲದಲ್ಲೆಲ್ಲಾ ಹುಡುಕಾಡಿದ್ದ. ಅವೊತ್ತು ರಾತ್ರಿ ಯಾರ‍್ಯಾರಿಗೆ ಎಷ್ಟು ಕಾಸು ಕೊಟ್ಟಿದ್ದೇನೆಂದು ಜ್ಞಾಪಿಸಿಕೊಳ್ಳಲು ಹೋದರೆ ಒಂದಾದರೂ ನೆನಪಾಗುತ್ತಿಲ್ಲ. ಸುಮಾರು ಐವತ್ತು ಅರವತ್ತು ಜನರಿಗೆ ಸಾಲಕೊಟ್ಟಿದ್ದ ಲೆಕ್ಕಗಳು ಅದರಲ್ಲಿತ್ತು. ಬೆಳಗ್ಗೆ ಎದ್ದವನೇ ಹೊಲದ ದಾರಿಗುಂಟಾ ಹುಡುಕಾಡಿದ್ದ. ಹೊಲದಲ್ಲೆಲ್ಲ ಮತ್ತೊಮ್ಮೆ ತಿರುಗಾಡಿದ್ದ. ಏನಪ್ಪ ಕಿಟ್ಟಪ್ಪ ಏನಾದ್ರು ಕಳ್ಕಂಡ್ ಗಿಳ್ಕಂಡಿದ್ದಿಯಾ... ಎಂದು ಒಂದಿಬ್ಬರು ಕೇಳಿದ್ದರು. ಹೇ... ಹೇ... ಏನೂ ಇಲ್ಲ... ಎಂದು ಉತ್ತರಿಸಿದ್ದ. ಕಡೆಗೆ ಹೆಂಡತಿಯ ಹತ್ತಿರ ವ್ಯಥೆಯನ್ನು ತೋಡಿಕೊಂಡಿದ್ದ. ಮನೇಲಿ ಅಲ್ಮೆರಾದಾಗೆ ಇಟ್ಟಿದ್ರೆ ಯಾರಾದ್ರು ತಿಂದ್ಕಂಡಿರೋರಾ... ಎಂದು ಹೆಂಡತಿಯೂ ರೇಗಿದ್ದಳು. ನ್ಯಾತನಾಯ್ಕನನ್ನು ಹೋಗಿ ಕೇಳಿದ್ದ. ಪ್ರಮಾಣ್ವಾಗ್ಲೂ ನಂಗೊತ್ತಿಲ್ಲ ಕಿಟ್ಟಪ್ಪ ನಿನ್ ಕ್ಯಾಲೆಂಡ್ರುನೇನು ನಾನು ಕೊರಳಿಗೆ ಕಟ್ಕಂಬ್ಲೆ... ಎಂದು ನ್ಯಾತನಾಯ್ಕ ನಕ್ಕಿದ್ದ. ಮಾರನೆಯ ದಿನವೇ ಕೋಟೆಕಲ್ಲಪ್ಪ ಶೆಟ್ಟಿಯ ಹತ್ತಿರ ಬಂದು ಕಡ್ಲೆಕಾಯಿ ಮಾರ್ದೆ, ನಿನ್ ಒಡ್ವೆ ತಗಳಪ್ಪ... ಅಂದಂಗೆ ಎಷ್ಟ್ ಕೊಟ್ಟಿದ್ದೋ ಗೆಪ್ತಿ ಇಲ್ಲ... ನಿನ್ ಪಾಕೆಟ್ ಕ್ಯಾಲೆಂಡ್ರ್ ತೆಗಿ... ಎಂದಿದ್ದ ಕಿಟ್ಟಯ್ಯ ಶೆಟ್ಟಿಗೆ ಜೀವ ಹೋದಂತಾಗಿತ್ತು. ಎಲ್ಲೊ ಇಟ್ಟು ಮರ್ತಿದ್ದೀನಿ... ನೀನೆ ವಸಿ ಗ್ಯಾಪಿಸ್ಕ... ಎಂದಿದ್ದ ಕಿಟ್ಟಯ್ಯ. ''ಅಯ್ಯೊ ನಂಗೂ ಗೆಪ್ತಿ ಇಲ್ಲ ಸ್ವಾಮಿ, ಯಾಸಟ್ಗೆ ಪಾಕೆಟ್ ಕ್ಯಾಲೆಂಡ್ರನ ಹುಡಿಕಿಟ್ಕಳಿ ನಾಳೆ ಬರ್ತೀನಿ...'' ಎಂದು ಕೋಟೆಕಲ್ಲಪ್ಪ ಹೊರಟು ಹೋಗಿದ್ದ. ಕಡಲೆ ಸುಗ್ಗಿ ಶುರುವಾಗಿತ್ತು. ಇನ್ನೊಂದು ತಿಂಗಳಲ್ಲಿ ಎಲ್ಲರೂ ಸಾಲ ವಾಪಸ್ಸು ಕೊಡುವವರಿದ್ದರು. ಕಿಟ್ಟಯ್ಯ ಶೆಟ್ಟಿಗೆ ಚಳಿಜ್ವರ ಬಂದಂತಾಗಿತ್ತು. ಅವೊತ್ತು ರಾತ್ರಿ ನ್ಯಾತನಾಯ್ಕನ ಮನೆಯ ಎದುರಿಗೆ ಇದ್ದ ಸುಂಕಪ್ಪನ ಮನೆಯ ಹತ್ತಿರ ಹೋಗಿದ್ದ. ಸುಂಕಪ್ಪ ಯಂತ್ರಗಿಂತ್ರ ಕಟ್ಟುತ್ತಿದ್ದ. ಎಮ್ಮೆ ಕುರಿ ಕಳೆದು ಕೊಂಡವರು ಅವನ ಹತ್ತಿರ ಅಂಜನ ಹಾಕಿಸಲು ಬರುತ್ತಿದ್ದರು. ಸುಂಕಪ್ಪ ಅನೇಕ ವರ್ಷಗಳ ಹಿಂದೆ ಆಂಧ್ರದ ಯಾವುದೋ ಊರಿನಿಂದ ಬಂದು ನಮ್ಮೂರಿನಲ್ಲಿಯೇ ನೆಲೆಯಾಗಿದ್ದ. ಮಕ್ಕಳಿಗೆ ತಾಯಿತಾ ಕಟ್ಟುವುದು, ದೆವ್ವ ಬಿಡಿಸುವುದು ಇತ್ಯಾದಿ ವಿದ್ಯೆಗಳನ್ನು ಕಲಿತಿದ್ದ. ಊರಿನ ಜನ ಅವನ ತಂಟೆಗೆ ಅಷ್ಟಾಗಿ ಹೋಗುತ್ತಿರಲಿಲ್ಲ. ಕೆಲವರು ಅವನನ್ನು ಬೂಟಾಟ್ಕೆ ನನ್ ಮಗ... ಎಂದರೂ ಎದುರಿನಲ್ಲಿ ಮಾತ್ರ ಏನ್ ಸುಂಕಪ್ಪ ಎಂದೇ ಮಾತನಾಡುತ್ತಿದ್ದರು. ಕಿಟ್ಟಯ್ಯ ಶೆಟ್ಟಿಯನ್ನು ನೋಡಿ ಏನ್ ಕಿಟ್ಟಪ್ಪಣ್ಣ ಸಮಾಚಾರ... ಎಂದು ವಿಚಾರಿಸಿ ಕೊಂಡಿದ್ದ ಸುಂಕಪ್ಪ. ಕಿಟ್ಟಯ್ಯ ಎಲೆ ಅಡಿಕೆಯಲ್ಲಿ ಐದು ರೂಪಾಯಿ ಇಟ್ಟು ಅಂಜನ ಹಾಕಿನೋಡಲು ಕೇಳಿದ್ದ. ಸುಂಕಪ್ಪ ಮುಖ ತೊಳೆದುಕೊಂಡು, ದೀಪ ಹಚ್ಚಿ, ಭದ್ರಕಾಳಿಯ ಫೋಟೋ ಮುಂದೆ ಕಣ್ಮುಚ್ಚಿ ಧ್ಯಾನಿಸಿ ಅಂಜನದ ಡಬ್ಬಿಯನ್ನು ಹತ್ತು ನಿಮಿಷ ಕೈಯ್ಯಲ್ಲಿ ಹಿಡಿದು ನೋಡಿ ನಿಟ್ಟುಸಿರು ಬಿಡುತ್ತಾ, ಕಿಟ್ಟಪ್ಪಣ್ಣ ನಿನ್ ಪಾಕೆಟ್ ಕ್ಯಾಲೆಂಡ್ರು ಯಾಕೋ ಕಾಣ್ತ ಇಲ್ಲ. ಎಮ್ಮೆನೋ, ಕುರಿನೋ ಆಗಿದ್ದಿದ್ರೆ ಗಪ್ಪನೆ ಕಣ್ಣಿಗೆ ಬೀಳೋದು. ಅದೂ ಅಲ್ದೆ ಪಾಕೆಟ್ ಕ್ಯಾಲೆಂಡ್ರು ಸರಸ್ವತಿ ತಾಯಿ ನೋಡು. ಇರ್ಲಿ ಆಚೆ ನಾಡಿದ್ದು ಅಮಾವಾಸೆ... ಅವೊತ್ತು ಇನ್ನೊಂದ್ಸಾರಿ ಮಧ್ಯರಾತ್ರಿ ಎದ್ದು ಒಬ್ನೆ ಅಂಜನ ಹಾಕಿ ನೋಡ್ತೀನಿ... ಎಂದು ಎಲೆ ಅಡಿಕೆಯ ಜೊತೆ ಐದು ರೂಪಾಯಿ ದಕ್ಷಿಣೆಯನ್ನು ಜೇಬಿಗಿಳಿಸಿ ಗಡ್ಡ ನೀವಿಕೊಂಡಿದ್ದ. ಬೆಳಗ್ಗೆ ಕೋಟ್ರೆಕಲ್ಲಪ್ಪ ಬಂದುಹೋದ ಕತೆಯನ್ನು ಸುಂಕಪ್ಪನ ಮುಂದೆ ಹೇಳಿಕೊಂಡು ಕಿಟ್ಟಯ್ಯ ಶೆಟ್ಟಿ ಮನೆಗೆ ವಾಪಸ್ಸಾಗಿದ್ದ. ಊಟ ಕೂಡ ಸೇರುತ್ತಿರಲಿಲ್ಲ. ಮಾರನೆಯ ದಿನವೇ ಕಿಟ್ಟಯ್ಯ ಶೆಟ್ಟಿ ಪಾಕೆಟ್ ಕ್ಯಾಲೆಂಡರ್ ಕಳೆದುಕೊಂಡಿರುವ ಸುದ್ದಿ ಊರಿನಲ್ಲಿ ಢಾಣಾಡಂಗೂರವಾಗಿತ್ತು.

ನ್ಯಾತನಾಯ್ಕನ ಅಂಗಡಿಗೆ ಟೀ ಕುಡಿಯಲು ಬಂದ ಸುಂಕಪ್ಪನನ್ನು ಏನೋ ಸುಂಕ ಅಂಜನ ಹಾಕಿದಂತೆ, ಕಿಟ್ಟಯ್ಯ ಶೆಟ್ಟಿಯ ಪಾಕೆಟ್ ಕ್ಯಾಲೆಂಡ್ರು ಎಲ್ಲೈತೆ ಅಂತ ಪತ್ತೆ ಆಗ್ಲಿಲ್ವ... ಎಂದು ಕೇಳಿದ. ಸುಂಕಪ್ಪ ಮತ್ತು ನ್ಯಾತನಾಯ್ಕ ತುಂಬಾ ಕ್ಲೋಸ್ ಆಗಿದ್ದರು. ಸುಂಕಪ್ಪನ ಬೂಟಾಟಿಕೆ ನ್ಯಾತನಾಯ್ಕನಿಗೆ ಗೊತ್ತಿತ್ತು. ಆದರೂ ಸುಂಕಪ್ಪನಿಗೆ ನ್ಯಾತನಾಯ್ಕ ಗಿರಾಕಿಗಳನ್ನು ಕಳುಹಿಸುತ್ತಿದ್ದ. ಬೇರೆ ಊರಿನವರೇನಾದರೂ ರಸ್ತೆ ಬದಿಯಲ್ಲೇ ಇದ್ದ ನ್ಯಾತನಾಯ್ಕನ ಅಂಗಡಿಗೆ ಬಂದು, ಇಲ್ಲಿ ವೈದ್ಯ ಸುಂಕಪ್ಪನ ಮನೆ ಎಲ್ಲಿ... ಎಂದು ಕೇಳಿದರೆ ಅಲ್ಲಿ ತಡ್ಕೆ



ಕಾಣ್ತ ಐತಲ್ಲ... ಅದೇ ಮನೆ. ಒಳ್ಳೆ ಕೈ ಗುಣ... ಎಂದು ಹೇಳುತ್ತಿದ್ದ ನ್ಯಾತನಾಯ್ಕ. ಸುಂಕಪ್ಪ ಪೂಜೆಗೀಜೆ ಹಾಕಿದಾಗ ಕೋಳಿ ಕೊಯ್ದರೆ ತಿಂಗಳಲ್ಲಿ ಮೂರ್ನಾಲ್ಕು ದಿನವಾದರೂ ಕೋಳಿ ಬಾಡನ್ನು ನ್ಯಾತನಾಯ್ಕನಿಗೆ ಕೊಡುತ್ತಿದ್ದ. ಅಯ್ಯೋ ಸುಮ್ಕಿರು ನ್ಯಾತಪ್ಪಣ್ಣ. ಪಾಕೆಟ್ ಕ್ಯಾಲೆಂಡ್ರು ಎಲ್ಲಾದ್ರೂ ಅಂಜನದಾಗೆ ಬೀಳ್ತೈತಾ... ಎತ್ತೋ, ಎಮ್ಮೇನೋ ಆಗಿದ್ರೆ ಬಿದ್‌ಬಿಡ್ತಿದ್ವು... ಎಂದು ನಕ್ಕಿದ್ದ. ''ಬಲು ದೊಕ್ಲೋನಲೇ ನೀನು'' ಎಂದು ನ್ಯಾತನಾಯ್ಕ ಶೆಟ್ಟಿಯ ಪಾಕೆಟ್ ಕ್ಯಾಲೆಂಡರ್ ತನಗೆ ಸಿಕ್ಕಿದ್ದನ್ನು ತಿಳಿಸಿದ್ದ. ಶೆಟ್ಟಿಗೆ ಆಟ ಆಡಿಸಲು ಇಬ್ಬರೂ ಸೇರಿ ಒಂದು ಪ್ಲಾನು ಹಾಕಿದರು. ಹತ್ತಿರದಲ್ಲೇ ಇದ್ದ ಅಮಾವಾಸೆ ಮುಗಿದ ಬೆಳಿಗ್ಗೆಯೇ ಸುಂಕಪ್ಪ, ಶೆಟ್ಟರ ಜಗಲಿಯ ಮೇಲೆ ಕಾಲಿಟ್ಟಿದ್ದ. ಸುಂಕಪ್ಪನನ್ನು ಕಂಡರೆ ಶೆಟ್ಟರ ಮನೆಯ ಎಲ್ಲರಿಗೂ ಭಯ ಇತ್ತು. ''ಏನು ಸುಂಕಪ್ಪ, ಬೆಳಿಗ್ಗೇನೆ ಬಂದೆ...'' ಎಂದು ನಾಗಶೆಟ್ಟಿ ಮಾತು ತೆಗೆಯುವುದರೊಳಗಾಗಿ ಕಿಟ್ಟಯ್ಯ ಶೆಟ್ಟಿಯು ಹೊರಗೆ ಬಂದು, ''ಏನು ಸುಂಕಣ್ಣ, ಏನಾದ್ರೂ ಪತ್ತೆ ಆಯ್ತಾ...'' ಎಂದು ಕೇಳಿದ್ದ. ಕಳೆದುಹೋಗಿದ್ದ ಪಾಕೆಟ್ ಕ್ಯಾಲೆಂಡರ್ ವಿಷಯ ತಿಳಿದಿದ್ದ ನಾಗಶೆಟ್ಟಿ ಒಳಹೋಗಿದ್ದ. ''ರಾತ್ರಿ ಸರೊತ್ತಿನಲ್ಲಿ ಕೋಳಿ ಕೊಯ್ದು ಅಂಜನದ ಡಬ್ಬಿಗೆ ರಕ್ತ ಹಚ್ಚಿ ನೋಡ್ದೆ ಕಿಟ್ಟಣ್ಣ. ಪುಸ್ತಕ ದೇವಮೂಲೆನಾಗೆ ಎಲ್ಲೋ ಬಿದ್ದೈತೆ. ಆದ್ರೆ ನೀನು ಗುರ್ತು ಹಾಕಿರುವ ಮೂರು ಹಾಳೆಗಳು ಅಂಜನದಾಗೆ ತೆರ್ಕಂಡ್ವು. ಕೋಟೆಕಲ್ಲಪ್ಪನಿಗೆ ನೀನು ಕೊಟ್ಟಿರೋದು ನೂರಾಮೂವತ್ತು. ಉದುಗೂರಜ್ಜಿ ಮಗ ಗಂಗಾಧರಪ್ಪನಿಗೆ ಇನ್ನೂರೈವತ್ತು. ಇನ್ನು ತಿಪ್ಪಯ್ಯನೋರ ಹನುಮಂತನಿಗೆ ನಾಲ್ಕು ನೂರು ರೂಪಾಯಿ ಅಂತ ಅಂಜನದಾಗೆ ತೋರಿಸಾತಿ ಐತೆ...'' ಕಣ್ಣು ಪಿಳ ಪಿಳ ಪಿಳಕರಿಸಿದ್ದ. ಕಿಟ್ಟಯ್ಯ ಶೆಟ್ಟಿಗೆ ಪಾಕೆಟ್ ಕ್ಯಾಲೆಂಡರ್ ನೋಡಿದಷ್ಟೇ ಖುಷಿಯಾಗಿತ್ತು. ಕೋಟೆಕಲ್ಲಪ್ಪ ಒಪ್ಪಿಕೊಂಡು ನೂರಾಮೂವತ್ತರ ಜೊತೆಗೆ ಬಡ್ಡಿಯನ್ನು ಸೇರಿಸಿ ಕೊಟ್ಟಿದ್ದ. ಗಂಗಾಧರಪ್ಪ ಮತ್ತು ಹನುಮಂತಪ್ಪ ಕೂಡ ತಮಗೆ ಕೊಟ್ಟಿರುವುದು ಅಷ್ಟೇ ಎಂದು ಒಪ್ಪಿಕೊಂಡಿದ್ದರು. ಏಕೆಂದರೆ ಅವರು ಕಿಟ್ಟಯ್ಯನ ಹತ್ತಿರ ಸಾಲ ತಗೆದುಕೊಂಡಾಗ ಯಂಗಾದ್ರಾಗಲಿ ಎಂದು ಗುರುತು ಹಾಕಿಕೊಂಡಿದ್ದರು. ಊರಿನಲ್ಲಿ ಸುಂಕಪ್ಪನ ಅಂಜನದ ಮಾಯೆ ಮನೆಮಾಡಿತ್ತು. ಕಿಟ್ಟಯ್ಯ ಶೆಟ್ಟಿಯು ಸುಂಕಪ್ಪನಿಗೆ ಮೂವತ್ತು ರೂಪಾಯಿ ದಕ್ಷಿಣೆ ಕೊಟ್ಟು ಕೋಳಿ ಕೊಂಡುಕೊಳ್ಳಲು ಕೂಡ ಕಾಸು ಕೊಟ್ಟಿದ್ದ. ಹೀಗೆ ಸುಂಕಪ್ಪ ಮೂರು ದಿನಕ್ಕೊಮ್ಮೆ ಮೂವರ ಹೆಸರುಗಳನ್ನು ಅವರು ಇಸಿದುಕೊಂಡ ದುಡ್ಡಿನ ಮೊತ್ತವನ್ನು ಹೇಳಿ ಶೆಟ್ಟಿಯ ಹತ್ತಿರ ಇನಾಮು ಇಸಿದುಕೊಂಡಿದ್ದ. ಅದರಲ್ಲಿ ಅರ್ಧ ನ್ಯಾತನಾಯ್ಕನಿಗೂ ಕೊಟ್ಟಿದ್ದ. ಕಡೆಗೊಂದು ದಿನ ಪಾಕೆಟ್ ಕ್ಯಾಲೆಂಡರನ್ನು ಕಿಟ್ಟಯ್ಯ ಶೆಟ್ಟಿಯ ಕರೆಂಟ್ ರೂಮಿನ ತೊಟ್ಟಿಯ ಪೈಪು ಸಂದಿಯಲ್ಲಿ ಇಟ್ಟುಬಂದ ಸುಂಕಪ್ಪ ಅಂಜನ ಹಾಕಿ ಪಾಕೆಟ್ ಕ್ಯಾಲೆಂಡರ್ ಅಲ್ಲಿರುವುದಾಗಿ ತಿಳಿಸಿದ್ದ. ಕಿಟ್ಟಯ್ಯ ಶೆಟ್ಟಿ ಓಡಿಹೋಗಿ ನೋಡಿದಾಗ ಕ್ಯಾಲೆಂಡರ್ ಪ್ರತ್ಯಕ್ಷವಾಗಿತ್ತು. ಶೆಟ್ಟಿಗೆ ನಿಧಿಯನ್ನು ಕಂಡಷ್ಟೆ ಸಂತಸವಾಗಿತ್ತು. ಪಾಕೆಟ್ ಕ್ಯಾಲೆಂಡರ್ ಸಿಕ್ಕಿದ ಪ್ರಯುಕ್ತ ಮನೆಯಲ್ಲಿ ಸತ್ಯನಾರಾಯಣ ಪೂಜೆಯನ್ನು ಮಾಡಿಸಿದ್ದ. ಸಾಲ ಸುಲಭವಾಗಿ ವಸೂಲಿಯಾಗಿತ್ತು. ಅದರಲ್ಲಿ ಒಂದು ನೂರು ರೂಪಾಯಿಗಳ ಇನಾಮನ್ನು ಸುಂಕಪ್ಪನಿಗೆ ಕೊಟ್ಟಿದ್ದ.

ಈಗ ನ್ಯಾತನಾಯ್ಕನೂ ಇಲ್ಲ, ಕಿಟ್ಟಯ್ಯ ಶೆಟ್ಟಿಯೂ ಇಲ್ಲ. ಪಾಕೆಟ್ ಕ್ಯಾಲೆಂಡರ್‌ಗಳಂತೂ ತುಂಬ ಅಪರೂಪವೇ ಆಗಿವೆ. ಮುಗ್ಧ ಮನಸ್ಸುಗಳಂತೂ ಇಲ್ಲವೇ ಇಲ್ಲ. ಈಗಲೂ ಪಾಕೆಟ್ ಕ್ಯಾಲೆಂಡರ್‌ಗಳನ್ನು ನೋಡಿದಾಗಲೆಲ್ಲಾ ಕಿಟ್ಟಯ್ಯ ಶೆಟ್ಟಿಯು ನೆನಪಾಗುತ್ತಾನೆ.

**ಕೇಶವ ರೆಡ್ಡಿ ಹಂದ್ರಾಳ**
'ಬೆಳದಿಂಗಳು', ಸಂಖ್ಯೆ. ೨೮೨, ೧ನೇ ಮುಖ್ಯರಸ್ತೆ, ೬ನೇ ಅಡ್ಡರಸ್ತೆ,
ನಾಗರಭಾವಿ ೨ನೇ ಹಂತ, ೯ನೇ ಬ್ಲಾಕ್, ಬೆಂಗಳೂರು - ೫೬೦ ೦೭೨

## ಅವರಿಗೆ ನಾಯಿಗಳೆಂದರೆ ಅಪಾರ ಪ್ರೀತಿ !

ಅವರಿಗೆ ನಾಯಿಗಳೆಂದರೆ ಅಪಾರ ಪ್ರೀತಿ
ಕರುಣಾಮಯಿಗಳು !
ಎಲ್ಲ ಜಾತಿಯ ನಾಯಿಗಳನ್ನೂ ಸಾಕುತ್ತಾರೆ
ಜಾತ್ಯತೀತರು !
ನಾಯಿಗಳ ಹೊಸ ತಳಿಗಳನ್ನೇ ಸೃಷ್ಟಿಸುತ್ತಾರೆ
ಸೃಜನಶೀಲರು !

ಬಾಲಗಳ ನವಿಲು ನರ್ತನಕ್ಕೆ ಆನಂದತುಂದಿಲರಾಗುತ್ತಾರೆ
ಕಲೋಪಾಸಕರು !
ಅಲ್ಲಾಡದ ಬಾಲಗಳ ಕತ್ತರಿಸಿಬಿಡುತ್ತಾರೆ
ಸಮತಾವಾದಿಗಳು !
ಎಂತೆಂಥ ನಾಯಿಗಳನ್ನೂ ಪಳಗಿಸಬಲ್ಲರು
ಕುಶಲ ಕಲಾವಿದರು !

ಅವರು ನಾಯಿಗಳಿಗೆ
ರೊಟ್ಟಿ, ಅನ್ನ, ಹಾಲು, ತತ್ತಿ, ಎಲುಬುಗಳ ಚೆಲ್ಲುತ್ತಾರೆ
ಕೂಳಿನ ರುಚಿಹತ್ತಿದ ಅವು ಅವರನ್ನು ಕಂಡೊಡನೆ
ಮುದ್ದಿನಿಂದ ಎಲ್ಲಿಬೇಕಾದರೂ ಮೂಸುತ್ತವೆ
ಎರಡು ಕಾಲಮೇಲೆ ನಿಂತು ಎದೆಮಟ್ಟ ಅಡರುತ್ತವೆ
ಬಾಲದ ಗರಿಗಳಿಂದ ಗಾಳಿ ಬೀಸುತ್ತವೆ

ನಾಯಿಗಳು ಅವರ ಮನೆ, ಮಠ, ಹೊಲ, ಫ್ಯಾಕ್ಟರಿ
ದುಡ್ಡು, ಬಂಗಾರ, ಹೆಂಡರು, ಮಕ್ಕಳು, ಅತ್ಯಾಚಾರ,
ಅನಾಚಾರ
ಎಲ್ಲವನ್ನೂ ನಿಷ್ಠೆಯಿಂದ ಕಾಯುತ್ತವೆ

ಅವರಿಗೆ ನಾಯಿಗಳೆಂದರೆ ಅಪಾರ ಪ್ರೀತಿ !
ತಮ್ಮನ್ನು ಅಗಲಿ ಹೋಗದಂತೆ ಪಳಗಿಸುತ್ತಾರೆ
ಕಚ್ಚಿದರೂ ನಂಜಾಗದಂತೆ ಚುಚ್ಚುಮದ್ದು
ಹಾಕಿಸುತ್ತಾರೆ

ಕಾಮ ಉದ್ದೀಪನಗೊಂಡು ಸಂಗಾತಿಗಳ
ಹುಡುಕಿಹೊರಡದಂತೆ
ಬೀಜನಿರೋಧಕ ಲಸಿಕೆ ಹಾಕಿಸುತ್ತಾರೆ

ತಪ್ಪಿಸಿಕೊಳ್ಳಲು ಯತ್ನಿಸಿದ ನಾಯಿಗಳನ್ನು
ಸರಪಳಿಯಲ್ಲಿ ಬಿಗಿಯುತ್ತಾರೆ
ಕಚ್ಚತೊಡಗಿದರೆ ಮಕಾಡೆ ಹಾಕುತ್ತಾರೆ
ಕೆಲ ಕಿಡಿಗೇಡಿಗಳು ಸರಪಳಿ ಹರಿದು ಮಕಾಡೆ ಕಿತ್ತು
ಕಂಡ ಕಂಡವರನ್ನು ಕಚ್ಚತೊಡಗುತ್ತವೆ

ಹುಚ್ಚು ಹಿಡಿದಿದೆಯೆಂದು ಮರುಗುತ್ತಾರೆ
ಗುಂಡಿಟ್ಟು ಕೊಲ್ಲುತ್ತಾರೆ, ಕರುಣಾಮಯಿಗಳು
ಅವರಿಗೆ ನಾಯಿಗಳೆಂದರೆ ಅಪಾರ ಪ್ರೀತಿ !

ನನ್ನ ನಾಡಿನ ಬುದ್ಧಿ ಜೀವಿಗಳೇ
ಕವಿವರ್ಯರೇ, ಕಲಾವಿದ ಬಂಧುಗಳೇ
ಅವರಿಗೆ
ನಮ್ಮ ಬಗ್ಗೆ ಕೂಡ ಅಪಾರ ಪ್ರೀತಿ !



**ಎಂ. ಡಿ. ಒಕ್ಕುಂದ**
'ನೆಮ್ಮದಿ', ನಂ. ೧೨೪, ಸಿಪಿಟಿಬಿ ಕಾಲೋನಿ
ಶ್ರೀನಗರ, ಧಾರವಾಡ - ೫೮೦ ೦೦೩



ವರ್ಣಾಲಂಕೃತ ಜಾಡಿ

ಡಾ॥ ಎನ್. ಗಾಯತ್ರಿ

# ಪುರಾತನ ನಾಗರಿಕತೆಯ ನೆನಪಿನಂಗಳದಲ್ಲಿ

**ಕ**ಪಟ ನರಿ ಮತ್ತು ಕಾಗೆಯ ಕತೆಯನ್ನು ಕೇಳದ ಯಾವ ಮಕ್ಕಳಿದ್ದಾರೆ ಹೇಳಿ. ತಲೆ ತಲೆಮಾರಿಗೆ ಸಾಗಿಬಂದಿರುವ ಈ ಕತೆಯ ಮೂಲ ಎಲ್ಲಿಯದು ಎಂದು ಯಾರೂ ತಲೆಕೆಡಿಸಿಕೊಂಡೂ ಇಲ್ಲ. ಈ ಕತೆ ಕ್ರಿಸ್ತ ಪೂರ್ವದ ಹರಪ್ಪ ನಾಗರಿಕತೆಯ ಸಂದರ್ಭದಲ್ಲೂ ಪ್ರಚುರವಾಗಿತ್ತು ಎಂದರೆ ನಂಬುತ್ತೀರಾ ? ನಂಬುವುದು ಕಷ್ಟವಾದರೂ, ಹೌದೆನ್ನುತ್ತದೆ, ಲೋಥಾಲ್‌ನ ಮ್ಯೂಸಿಯಂ.

ಚಿಕ್ಕವಳಿದ್ದಾಗ ಹರಪ್ಪ ನಾಗರಿಕತೆಯನ್ನು ಕುರಿತು ಚರಿತ್ರೆಯ ಪಾಠ ಓದುತ್ತಿದ್ದಾಗ ಮುಂದೊಂದು ದಿನ ಈ ಪ್ರಾಚೀನ ನಾಗರಿಕತೆಯ ಅವಶೇಷಗಳನ್ನು ನೋಡುವ ಅವಕಾಶ ಸಿಗಬಹುದು ಎಂದು ಊಹಿಸಿರಲಿಲ್ಲ. ಇತ್ತೀಚೆಗೆ ಗುಜರಾತಿಗೆ ಭೇಟಿ ನೀಡಿದಾಗ ಅಂತಹ ಅವಕಾಶ ಒದಗಿಬಂದಿತ್ತು. ಗುಜರಾತ್ ಎಂದೊಡನೆ ಹಲವಾರು ಚಿತ್ರಗಳು ಕಣ್ಣಮುಂದೆ ಸುಳಿಯುತ್ತವೆ. ಗಾಂಧಿಯ ನಾಡು, ಮೋದಿಯ ನಾಡು, ಅದೆಲ್ಲದರಾಚೆಗೆ ಬಣ್ಣದ ನಾಡು. ಗುಜರಾತಿನ ಜನರ ವರ್ಣಸಂಯೋಜನೆ, ಚಿತ್ತಾಕರ್ಷಕ ವಿನ್ಯಾಸದ ಉಡುಗೆ ತೊಡುಗೆ, ಆ ಜನರ ವಾಣಿಜ್ಯ ಚಾತುರ್ಯ ಎಲ್ಲವೂ ಆ ಜನರ ನೆಲದ ಖದರನ್ನು ಸೂಚಿಸುತ್ತದೆ. ಇಲ್ಲಿನ ಜನರ ಈ ವೈಶಿಷ್ಟ್ಯತೆಯ ಮೂಲದ ಜಾಡು ಹಿಡಿದು ಚಿಂತಿಸುತ್ತಾ ಅಹಮದಾಬಾದ್ ಮತ್ತು ಸುತ್ತಮುತ್ತಲ ಐತಿಹಾಸಿಕ ಪ್ರದೇಶಗಳನ್ನು ನೋಡಬೇಕೆಂದು ಬ್ಯಾಂಕಿನ ನಾವು ಐವರು ಗೆಳತಿಯರು ಪ್ರವಾಸ ಹೊರಟಾಗ ಎಲ್ಲರೂ ಒಕ್ಕೊರಲಿನಿಂದ ಆಯ್ಕೆ ಮಾಡಿಕೊಂಡಿದ್ದು ಅಹಮದಾಬಾದ್‌ನಿಂದ ೮೨ ಕಿಲೊಮೀಟರ್ ದೂರವಿರುವ ಲೋಥಾಲ್ ಅನ್ನು.

ಸಿಂಧು ಕಣಿವೆ ನಾಗರಿಕತೆಯು ಮೊಹೆಂಜೋದಾರೊನಿಂದ ಮರೆಯಾದದ್ದು ಎಲ್ಲರಿಗೂ ತಿಳಿದಿದೆ. ಆದರೆ ಅದರ ನೈರುತ್ಯ ಭಾಗದ ಗುಜರಾತ್‌ನಲ್ಲಿ ಈ ನಾಗರಿಕತೆಯ ಕುರುಹುಗಳು ಕಂಡುಬರುತ್ತವೆ ಎನ್ನುವುದು ಅಷ್ಟೊಂದು ಹೆಚ್ಚು ಪ್ರಚಾರದಲ್ಲಿಲ್ಲ. ಗುಜರಾತ್ ರಾಜ್ಯದ ಅಹಮದಾಬಾದ್ ಜಿಲ್ಲೆಯ ಧೋಲ್ಕಾ ತಾಲ್ಲೂಕಿನ ಸರಗವಾಲಾ ಹಳ್ಳಿಯ ವ್ಯಾಪ್ತಿಯಲ್ಲಿ ಬರುವ ಲೋಥಾಲ್ ಒಂದು ಎತ್ತರದ ದಿನ್ನೆಯ ಮೇಲಿದೆ. ಲೋಥಾಲ್ ಎಂದರೆ ಗುಜರಾತಿ ಭಾಷೆಯಲ್ಲಿ 'ಮೃತರ ಸ್ಥಳ'(ಗುಜರಾತಿಯ 'ಲೋಥ್' ಮತ್ತು 'ತಲ್' ಶಬ್ದ ಸೇರಿ ಆಗಿದೆ.) 'ಮೊಹೆಂಜೊ-ದಾರೊ' ಎಂಬ ಶಬ್ದಕ್ಕೂ ಸಿಂಧಿ ಭಾಷೆಯಲ್ಲಿ 'ಮೃತರ ದಿನ್ನೆ' ಎಂದರ್ಥ.

ನಾವಿದ್ದ ಟ್ಯಾಕ್ಸಿಯು ಉತ್ಖನನದ ಕೇಂದ್ರ ತಲುಪಿದಾಗ ವಿಸ್ತಾರವಾದ ಆ ಜಾಗದಲ್ಲಿ ಚಾರಿತ್ರಿಕ ಮಹತ್ವ ತಿಳಿಸುವ ಮಾರ್ಗದರ್ಶಿಗಳು ಯಾರೂ ಕಂಡುಬರಲಿಲ್ಲ. ಎಡಭಾಗದ ಬಯಲಿನಲ್ಲಿ ಯಾವುದೇ ಫಲಕಗಳಿಲ್ಲದಿದ್ದರೂ ಹರಪ್ಪ ನಾಗರಿಕತೆ ಇದ್ದಿರಬಹುದಾದ ಹಲವಾರು ವಿಸ್ತೀರ್ಣದ ಬಗೆ ಬಗೆಯ ಕಟ್ಟಡದ ಅವಶೇಷಗಳು ಕಣ್ಣಿಗೆ ಬಿದ್ದವು. ಅಲ್ಲಿನ ಕೆಲವರ ಸಲಹೆಯಂತೆ ಬಲಭಾಗದಲ್ಲಿದ್ದ ಸಂಗ್ರಹಾಲಯವನ್ನು ಮೊದಲು ನೋಡಲು ಹೋದೆವು. ಬೆಳಗ್ಗೆ ೧೦ ಗಂಟೆಯಿಂದ ಸಂಜೆ ೫ಗಂಟೆಯವರೆಗೆ ತೆರೆದಿರಲಾಗುವ ಈ ಸಂಗ್ರಹಾಲಯದೊಳಗೆ ಕ್ಯಾಮೆರಾ, ಮೊಬೈಲ್ ತೆಗೆದುಕೊಂಡು ಹೋಗುವುದನ್ನು ನಿಷೇಧಿಸಲಾಗಿದೆ. ಆದ್ದರಿಂದ ನಮ್ಮೆಲ್ಲ ಸರಕುಗಳನ್ನು ಕಾರಿನಲ್ಲೇ ಬಿಟ್ಟು ವಸ್ತು ಸಂಗ್ರಹಾಲಯದೊಳಗೆ ಹೋದೆವು.

ಭಾರತದ ಬೇರೆಡೆಗೆ ಹೋಲಿಸಿದಾಗ ಲೋಥಾಲ್‌ನ ಉತ್ಖನನದಲ್ಲಿ ದೊರಕಿರುವ ಪ್ರಾಚೀನ ಕಲಾವಸ್ತುಗಳು ಸಂಖ್ಯೆಯಲ್ಲಿ ಬಹಳವಿವೆ. ೧೯೭೬ರಲ್ಲಿ ಸ್ಥಾಪಿತವಾದ ಈ ಪ್ರಾಚ್ಯ ವಸ್ತು ಸಂಗ್ರಹಾಲಯದಲ್ಲಿ ಹರಪ್ಪ ನಾಗರಿಕತೆಯ ಶ್ರೀಮಂತಿಕೆಯನ್ನು



ಲೋಥಾಲ್ ಪ್ರವಾಸದ ವೇಳೆಯಲ್ಲಿ ವಿ. ವಿಜಯಲಕ್ಷ್ಮಿ

# ಲಂಕೇಶ್ ಪ್ರಕಾಶನ

ನಂ.9, ಇ.ಎ.ಟಿ.ರಸ್ತೆ,
ಬಸವನಗುಡಿ,
ಬೆಂಗಳೂರು-4
ಫೋನ್: 26676427

| ಶೀರ್ಷಿಕೆ | ಬೆಲೆ | ಮಾಧ್ಯಮ | ಲೇಖಕರು |
|---|---|---|---|
| ನೀಲು ಕಾವ್ಯ -ಸಂಗ್ರಹ 1 | 150.00 | ಕಾವ್ಯ ಸಂಕಲನ | ಪಿ. ಲಂಕೇಶ್ |
| ನೀಲು ಕಾವ್ಯ -ಸಂಗ್ರಹ 2 | 150.00 | ಕಾವ್ಯ ಸಂಕಲನ | ಪಿ. ಲಂಕೇಶ್ |
| ನೀಲು ಕಾವ್ಯ -ಸಂಗ್ರಹ 3 | 200.00 | ಕಾವ್ಯ ಸಂಕಲನ | ಪಿ. ಲಂಕೇಶ್ |
| ಚಿತ್ರ ಸಮೂಹ | 90.00 | ಕಾವ್ಯ ಸಂಕಲನ | ಪಿ. ಲಂಕೇಶ್ |
| ಮರೆಯುವ ಮುನ್ನ-ಸಂಗ್ರಹ 1 | 150.00 | ಸಮಕಾಲೀನ ಬರಹ | ಪಿ. ಲಂಕೇಶ್ |
| ಮರೆಯುವ ಮುನ್ನ-ಸಂಗ್ರಹ 2 | 150.00 | ಸಮಕಾಲೀನ ಬರಹ | ಪಿ. ಲಂಕೇಶ್ |
| ಮನಕೆ ಕಾರಂಜಿಯ ಸ್ಪರ್ಶ | 150.00 | ಪಾಶ್ಚಿಮಾತ್ಯ ಬರಹಗಳು | ಪಿ. ಲಂಕೇಶ್ |
| ಈ ನರಕ ಈ ಪುಲಕ | 125.00 | ಸಿನಿಮಾ ಬರಹಗಳು | ಪಿ. ಲಂಕೇಶ್ |
| ಆಟ-ಜೂಜು-ಮೋಜು! | 150.00 | ಕ್ರೀಡಾ ಬರಹಗಳು | ಪಿ. ಲಂಕೇಶ್ |
| ಟೀಕೆ-ಟಿಪ್ಪಣಿ 1 | 200.00 | ಸಮಕಾಲೀನ ಬರಹಗಳು | ಪಿ. ಲಂಕೇಶ್ |
| ಟೀಕೆ-ಟಿಪ್ಪಣಿ 2 | 200.00 | ಸಮಕಾಲೀನ ಬರಹಗಳು | ಪಿ. ಲಂಕೇಶ್ |
| ಟೀಕೆ-ಟಿಪ್ಪಣಿ 3 | 200.00 | ಸಮಕಾಲೀನ ಬರಹಗಳು | ಪಿ. ಲಂಕೇಶ್ |
| ಸಾಹಿತಿ-ಸಾಹಿತ್ಯ | 350.00 | ಸಮಕಾಲೀನ ಬರಹಗಳು | ಪಿ. ಲಂಕೇಶ್ |
| ರೂಪಕ ಲೇಖಕರು | 70.00 | ಪ್ರಸಿದ್ಧ ಲೇಖಕರ ಬದುಕು-ಬರಹ | ಪಿ. ಲಂಕೇಶ್ |
| ಕಂಡದ್ದು ಕಂಡಹಾಗೆ | 125.00 | ಸಮಕಾಲೀನ ಬರಹಗಳು | ಪಿ. ಲಂಕೇಶ್ |
| ಪ್ರಸ್ತುತ | 80.00 | ಸಮಕಾಲೀನ ಬರಹಗಳು | ಪಿ. ಲಂಕೇಶ್ |
| ಹುಳಿಮಾವಿನ ಮರ | 200.00 | ಆತ್ಮಕಥೆ | ಪಿ. ಲಂಕೇಶ್ |
| ಮುಸ್ಸಂಜೆಯ ಕಥಾ ಪ್ರಸಂಗ | 250.00 | ಕಾದಂಬರಿ | ಪಿ. ಲಂಕೇಶ್ |
| ಬಿರುಕು | 60.00 | ಕಾದಂಬರಿ | ಪಿ. ಲಂಕೇಶ್ |
| ಅಕ್ಕ | 80.00 | ಕಾದಂಬರಿ | ಪಿ. ಲಂಕೇಶ್ |
| ಮಂಜು ಕವಿದ ಸಂಜೆ | 85.00 | ಕಥಾ ಸಂಕಲನ | ಪಿ. ಲಂಕೇಶ್ |
| ಉಮಾಪತಿ ಸ್ಕಾಲರ್‌ಶಿಪ್ ಯಾತ್ರೆ | 70.00 | ಕಥಾ ಸಂಕಲನ | ಪಿ. ಲಂಕೇಶ್ |
| ಕಲ್ಲು ಕರಗುವ ಸಮಯ | 125.00 | ಕಥಾ ಸಂಕಲನ | ಪಿ. ಲಂಕೇಶ್ |
| ನಾನಲ್ಲ | 70.00 | ಕಥಾ ಸಂಕಲನ | ಪಿ. ಲಂಕೇಶ್ |
| ಕೆರೆಯ ನೀರನು ಕೆರೆಗೆ ಚೆಲ್ಲಿ | 60.00 | ಕಥಾ ಸಂಕಲನ | ಪಿ. ಲಂಕೇಶ್ |
| ಉಲ್ಲಂಘನೆ | 80.00 | ಕಥಾ ಸಂಕಲನ | ಪಿ. ಲಂಕೇಶ್ |
| ಪಾಪದ ಹೂಗಳು | 60.00 | ಕಾವ್ಯ ಸಂಕಲನ | ಪಿ. ಲಂಕೇಶ್ |
| ಬಿರುಕು | 40.00 | ನಾಟಕ | ಪಿ. ಲಂಕೇಶ್ |
| ಸಂಕ್ರಾಂತಿ | 45.00 | ನಾಟಕ | ಪಿ. ಲಂಕೇಶ್ |
| ತೆರೆಗಳು | 50.00 | ನಾಟಕ | ಪಿ. ಲಂಕೇಶ್ |
| ಈಡಿಪಸ್ ಮತ್ತು ಅಂತಿಗೊನೆ | 60.00 | ನಾಟಕ | ಪಿ. ಲಂಕೇಶ್ |
| ಟಿ. ಪ್ರಸನ್ನನ ಗೃಹಸ್ಥಾಶ್ರಮ | 35.00 | ನಾಟಕ | ಪಿ. ಲಂಕೇಶ್ |
| ಗುಣಮುಖ | 30.00 | ನಾಟಕ | ಪಿ. ಲಂಕೇಶ್ |
| ಕ್ರಾಂತಿ ಬಂತು ಕ್ರಾಂತಿ | 40.00 | ನಾಟಕ | ಪಿ. ಲಂಕೇಶ್ |
| ಕಪ್ಪು ಮಲ್ಲಿಗೆ | 75.00 | ಅನುವಾದಿತ ಕತೆಗಳು | ಗೌರಿ ಲಂಕೇಶ್ |

| ಶೀರ್ಷಿಕೆ | ಬೆಲೆ | ಮಾಧ್ಯಮ | ಲೇಖಕರು |
|---|---|---|---|
| ಕಂಡಹಾಗೆ | 125.00 | ಸಮಕಾಲೀನ ಬರಹಗಳು | ಗೌರಿ ಲಂಕೇಶ್ |
| ದರವೇಶಿ ಕತೆಗಳು | 90.00 | ಅನುವಾದಿತ ಕತೆಗಳು | ಗೌರಿ ಲಂಕೇಶ್ |
| ಬಸವರಾಜಮಾರ್ಗ | 40.00 | ಲೇಖನಗಳು | ಸಂ: ಗೌರಿ ಲಂಕೇಶ್ |
| ಬೆನಜೀರ್ | 25.00 | ಜೀವನ ಚರಿತೆ | ಗೌರಿ ಲಂಕೇಶ್ |
| ಆವರಣ ಎಂಬ ವಿ-ಕೃತಿ | 100.00 | ವಿಮರ್ಶೆಗಳು | ಸಂ: ಗೌರಿ ಲಂಕೇಶ್ |
| ಜೈಲೆಂಬ ಲೋಕದಲ್ಲಿ | 75.00 | ಸರಳುಗಳ ಹಿಂದಿನ ಸತ್ಯಗಳು | ಕುಮಾರ್ ಸಮತಳ |
| ವೇದಾಂತ ರೆಜಿಮೆಂಟ್ | 60.00 | ವೈಚಾರಿಕ ಲೇಖನಗಳು | ಬಿ.ವಿ.ವೀರಭದ್ರಪ್ಪ |
| ಕಳೆದುಕೊಂಡವಳು | 45.00 | ಕತೆಗಳು | ಜಾಹ್ನವಿ |
| ನೂರುಸ್ವರ | 60.00 | ಕತೆಗಳು | ಉಮಾ ರಾವ್ |
| ಟ್ರೇನ್ ಟು ಪಾಕಿಸ್ತಾನ್ | 125.00 | ಕಾದಂಬರಿ<br>ಅನು: ಡಾ. ಎಂ.ಬಿ. ರಾಮಮೂರ್ತಿ | ಖುಷ್ವಂತ್ ಸಿಂಗ್ |
| ಮಿಡತೆಗಳ ಬರವಿಗೆ... | 100.00 | ಅನು: ಸುಕನ್ಯಾ ಕಾನರಳ್ಳಿ | ಅರುಂಧತಿ ರಾಯ್ |
| ಡಿಸೆಂಬರ್ 13 | 150.00 | ಅನು: ಸುಕನ್ಯಾ ಕಾನರಳ್ಳಿ | ಅರುಂಧತಿ ರಾಯ್ |
| ಮನುಸ್ಮೃತಿ | 20.00 | ಸಂಘಪರಿವಾರದ ಸಂವಿಧಾನ | ಏಕಲವ್ಯ |
| ರೈತರ ಆತ್ಮ-ಹತ್ಯೆ | 10.00 | ಸಮಕಾಲೀನ ರಾಜಕೀಯ | ಶಿವಸುಂದರ್ |
| ಆರೋಗ್ಯ ಮತ್ತು ಜೀವನ | 125.00 | ವೈದ್ಯಕೀಯ ಸಾಹಿತ್ಯ | ಡಾ. ಎಂ.ಬಿ. ರಾಮಮೂರ್ತಿ |
| ಧನವಂತ್ರಿ ಚಿಕಿತ್ಸೆ | 50.00 | ನಾಟಕ | ಬಿ.ಚಂದ್ರೇಗೌಡ |
| ಮುತ್ತುರಾಜನ ಮುತ್ತು | 175.00 | ಶಿವರಾಜ್‌ಕುಮಾರ್ ಆತ್ಮಕಥೆ | ಸದಾಶಿವ ಶೆಣೈ |
| ವಿಷ್ಣು-ನೂರೊಂದು ನೆನಪು | 150.00 | ವಿಷ್ಣುವರ್ಧನ್ ಆತ್ಮಕಥೆ | ಸದಾಶಿವ ಶೆಣೈ |
| ಓ ಈಳಂ | 250.00 | ಎಲ್‌ಟಿಟಿಇ ಕಥನ | ಕುಮಾರ್‌ಬುರಡಿಕಟ್ಟಿ |
| ಖೈರ್ಲಾಂಜಿ | 200.00 | ದಲಿತ ಭಾರತದ ಕಥನ | ಆನಂದ್ ತೇಲ್‌ತುಂಬ್ಡೆ |
| ಕಮಲಾ ದಾಸ್ ಕಥೆಗಳು | 60.00 | ಸಣ್ಣ ಕಥೆಗಳು | ಅನು: ಗಂಗಾಧರನ್ |
| ಮಾಂಟೊ ಕಥೆಗಳು | 80.00 | ಸಣ್ಣ ಕಥೆಗಳು | ಅನು: ಜೆ.ಬಾಲಕೃಷ್ಣ |
| ಕೋಮುವಾದ | 60.00 | ವೈಚಾರಿಕ ಬರಹಗಳು | ರಾಮ ಪುನಿಯಾನಿ |
| ಜಾತಿ ಪದ್ಧತಿ | 125.00 | ವೈಚಾರಿಕ ಬರಹಗಳು | ರಾಮ್‌ಮನೋಹರ್ ಲೋಹಿಯಾ |
| ರಾಮಾಯಣ ವಿಷವೃಕ್ಷ | 75.00 | ವೈಚಾರಿಕ ಬರಹಗಳು | ಡಾ.ಬಂಜಗೆರೆ ಜಯಪ್ರಕಾಶ್ |
| ಅರೇಬಿಯನ್ ನೈಟ್ಸ್ | 150.00 | ಕಥೆಗಳು | ಪಂಜು ಗಂಗೊಳ್ಳಿ |
| ಜಿಮ್‌ಕಾರ್ಬೆಟ್-ಶಿಕಾರಿ ಕತೆಗಳು | 80.00 | ಕಥೆಗಳು | ಟಿ. ಎಸ್. ವಿವೇಕಾನಂದ |
| ಚೆಕ್‌ಪೋಸ್ಟ್ | 100.00 | ಸಮಕಾಲೀನ ಬರಹಗಳು | ಪಾರ್ವತೀಶ್ |
| Some-ಪದ | 80.00 | ಅನ್ಯಭಾಷಾ ಪದಗಳ ಪ್ರವಾಸ ಕಥನ | ಪಾರ್ವತೀಶ್ |
| ಬಿಡಿಚಿತ್ರಗಳು | 60.00 | ಸಮಕಾಲೀನ ಬರಹಗಳು | ಪಾರ್ವತೀಶ್ |
| ಗೋವು ಪವಿತ್ರ ಎಂಬ ಮಿಥ್ಯೆ | 80.00 | ವೈಚಾರಿಕ ಬರಹಗಳು | ಡಿ.ಎನ್.ಝಾ |
| ಕರ್ಕರೆಯನ್ನು ಕೊಂದವರ್‍ಯಾರು? | 200.00 | | ಎಸ್. ಎಂ. ಮುಶ್ರಿಫ್ |
| ಅಸ್ಪೃಶ್ಯ ವಸಂತ | 200.00 | ಕಾದಂಬರಿ | ಕಲ್ಯಾಣ್ ರಾವ್ |
| ಬಾಲಗೋಪಾಲ್ ಬರಹಗಳು | 150.00 | ವೈಚಾರಿಕ ಬರಹಗಳು | ಬಾಲಗೋಪಾಲ್ |



ಪರಿಚಯಿಸುವ, ಸಂರಕ್ಷಿಸಲ್ಪಟ್ಟಿರುವ ಹಲವಾರು ಕಲಾಕೃತಿಗಳು, ವಸ್ತುಗಳು ಪ್ರದರ್ಶನಕ್ಕಿಡಲಾಗಿದೆ. ಮ್ಯೂಸಿಯಂನ ಮುಂಭಾಗದಲ್ಲಿ ಲೋಥಾಲ್‌ನ ಕಿರುಪರಿಚಯವನ್ನು ತಿಳಿಸುವ ಫಲಕ ಕಂಡುಬರುತ್ತದೆ. ಇದನ್ನು ಓದಿಕೊಂಡು ಮುಂದೆ ಹೋದರೆ ಸಂಗ್ರಹಾಲಯದಲ್ಲಿ ಮೂರು ಗ್ಯಾಲರಿಗಳಿವೆ : ಮುಂಭಾಗದಲ್ಲಿ ಹರಪ್ಪ ನಾಗರಿಕತೆಯು ಹಿಂದೆ ಹೇಗಿದ್ದಿರಬಹುದು, ಎಂಬುದರ ಮಾದರಿಯ ಪ್ರದರ್ಶನವಿದೆ. ಇದನ್ನು ದಾಟಿ ಮುಂದುವರಿದರೆ ಎಡಭಾಗದ ಗ್ಯಾಲರಿಯಲ್ಲಿಟ್ಟಿರುವ ಶೋಕೇಸಿನಲ್ಲಿ ಮಣಿಗಳು, ಟೆರ್ರಾಕೋಟಾ ಒಡವೆಗಳು, ಮುದ್ರೆಗಳು ಮತ್ತು ಮೇಲ್ಬಾವಣಿಯ ಪ್ರತಿರೂಪಗಳು, ಕಪ್ಪೆಚಿಪ್ಪುಗಳು, ದಂತ, ತಾಮ್ರ ಮತ್ತು ಹಿತ್ತಾಳೆ ವಸ್ತುಗಳು, ಆಯುಧಗಳು ಮತ್ತು ಮಣ್ಣಿನ ಪಾತ್ರೆಗಳು – ಎಲ್ಲವನ್ನೂ ಪ್ರದರ್ಶನಕ್ಕಿಡಲಾಗಿದೆ. ಗ್ಯಾಲರಿಯ ಬಲಭಾಗದಲ್ಲಿ ಆಟದ ಸಾಮಾನುಗಳು, ಪ್ರಾಣಿಗಳ ಮತ್ತು ಮನುಷ್ಯರ ಮೂರ್ತಿಗಳು, ಮಾಪನಗಳು, ಅಲಂಕರಿಸಿದ ಮಣ್ಣಿನ ಪಾತ್ರೆಗಳು, ದೊಡ್ಡ ಮಡಕೆಗಳ ಚಿಕ್ಕ ಮಾದರಿಗಳು, ಇಟ್ಟಿಗೆಗಳು, ಸಮಾಧಿಯಲ್ಲಿಡುವ ಮತ್ತು ಪೂಜಾ ಸಲಕರಣೆಗಳು ಇವೆ. ಜೊತೆಗೆ ಜಂಟಿ ಸಮಾಧಿ ಮತ್ತು ಲೋಥಾಲ್ ನಗರದ ಮಾದರಿಯ ಪ್ರತಿರೂಪಗಳು ಇಲ್ಲಿ ಪ್ರದರ್ಶನದಲ್ಲಿವೆ.

ವಸ್ತುಪ್ರದರ್ಶನದ ಒಂದೊಂದು ವಸ್ತುವೂ ಅಂದಿನ ಜನಜೀವನದ ಬದುಕಿನ ರಂಗನ್ನು ನಮ್ಮ ಮುಂದೆ ತೆರೆದಿಡುತ್ತವೆ. ಸುಮಾರು ನಾಲ್ಕು ಸಾವಿರ ವರ್ಷಗಳ ಹಿಂದಿನ ಈ ಭವ್ಯ ನಾಗರಿಕತೆಯ ವಿವಿಧ ಚಿತ್ರಗಳ ದೃಶ್ಯಾವಳಿಗಳು ನಮ್ಮ ಮುಂದೆ ಮೂರ್ತರೂಪ ಪಡೆಯುತ್ತವೆ. ಸುಂದರವಾದ ಚಿತ್ತಾರವುಳ್ಳ ಮಣ್ಣಿನ ಜಾಡಿಗಳು ಅವರ ಕಲಾತ್ಮಕತೆಗೆ ಸಾಕ್ಷಿ. ಎಲೆಗಳು ಮತ್ತು ಜಿಂಕೆಯ ಚಿತ್ರವಿರುವ ಕಲಾಕೃತಿ ಒಂದಾದರೆ, ಕಾಗೆ ಮತ್ತು ಕಪಟ ನರಿಯ ಕಥೆಯನ್ನು ವಸ್ತುವನ್ನಾಗಿ ಉಳ್ಳ ಕಲಾಕೃತಿ ಮತ್ತೊಂದು. ತೂತುಗಳ ವಿನ್ಯಾಸ ಹೊಂದಿರುವ ಸಿಲಿಂಡ್ರಿಕಲ್ ಆಕಾರದ ಜಾಡಿಗಳು ಇಂದಿಗೂ ಮಾದರಿ ವಿನ್ಯಾಸವನ್ನು ಹೊಂದಿವೆ. ಟೆರ್ರಾಕೋಟಾದಲ್ಲಿ ಮಾಡಿರುವ ಬಸವ, ಹೆಣ್ಣಿನ ದೇಹದ ಮೇಲ್ಭಾಗ, ಚದುರಂಗದ ಆಟಕ್ಕೆ ಬಳಸಲಾದ ಆಟಿಗೆಗಳು, ಮಣ್ಣಿನ ಬಂಡಿ , ದವಸ ಧಾನ್ಯಗಳನ್ನು ತುಂಬಿಡಲು ದೊಡ್ಡ ದೊಡ್ಡ ಮಣ್ಣಿನ ಗುಡಾಣಗಳು, ಅಡಿಗೆಗೆ ಬಳಸುವ ಪಾತ್ರೆಗಳು – ಈ ಎಲ್ಲ ಕಲಾಕೃತಿಗಳು ಹರಪ್ಪ ನಾಗರಿಕತೆಯ ಕಲಾ ನೈಪುಣ್ಯಕ್ಕೆ ಹಿಡಿದ ಕೈಗನ್ನಡಿಯಾಗಿವೆ. ಮುಖ್ಯವಾಗಿ ಹರಪ್ಪ ಸಂಸ್ಕೃತಿಯ ಕಾಲದ ಮಣ್ಣಿನ ಪಾತ್ರೆಗಳು ಬಳಕೆಗೆ ಹೆಚ್ಚು ಅನುಕೂಲವಾದಂಥವು. ಹರಪ್ಪ ನಾಗರಿಕತೆಯ ಜನರು ಪ್ರಾಣಿಗಳು ಮತ್ತು ಮನುಷ್ಯಾಕೃತಿಯ ಚಿತ್ರಗಳನ್ನು ಮಣ್ಣಿನಲ್ಲಿ ತಯಾರಿಸುತ್ತಿದ್ದರು. ಆ ಪೈಕಿ ಶೋಕೇಸಿನಲ್ಲಿ ಪ್ರದರ್ಶಿತವಾಗಿದ್ದ ಸುಮೇರಿಯನ್ ತಲೆಗಳು ಮುಖ್ಯವಾದವು.

ಹರಪ್ಪ ಕಾಲದ ಸ್ತ್ರೀಪುರುಷರ ರಸಿಕತೆ ಮತ್ತು ಅಲಂಕಾರ ಪ್ರಿಯತೆಯನ್ನು ಆ ಕಾಲದ ಮಳೆಯರು ಧರಿಸುತ್ತಿದ್ದ ಒಡವೆ, ವಸ್ತ್ರಗಳಿಂದ ಗುರುತಿಸಬಹುದಾಗಿದೆ. ಉತ್ಖನನದ ಸಂದರ್ಭದಲ್ಲಿ ಇಲ್ಲಿ ದೊರಕಿರುವ ಮಣ್ಣು, ಕಲ್ಲು, ಚಿನ್ನ, ತಾಮ್ರ, ಹಿತ್ತಾಳೆಗಳಿಂದ ತಯಾರಿಸಲಾದ ಒಡವೆಗಳು ಇವರ ತಾಂತ್ರಿಕ ಪರಿಣತಿಗೂ ಮತ್ತು ಜನರ ಸೌಂದರ್ಯ ಪ್ರಜ್ಞೆಗೂ ಸಾಕ್ಷಿಯಾಗಿವೆ. ಶೋಕೇಸಿನಲ್ಲಿ ಪ್ರದರ್ಶಿತವಾದ ತಾಮ್ರದ ಹಾಗೂ ಹಿತ್ತಾಳೆಯ ಬಳೆಗಳು, ಚಿನ್ನದ ದೊಡ್ಡ ದೊಡ್ಡ ಕಾಸಿನ ಸರಗಳು, ಅತ್ಯಂತ ನಾಜೂಕಾಗಿ ಸಣ್ಣ ಸಣ್ಣ ಮಣಿಗಳ ಮೂಲಕ ತಯಾರಿಸಿದ ಚಿನ್ನದ ನೆಕ್‌ಲೇಸ್ ಇಂದಿಗೂ ನವೀನವಾದದ್ದೆಂದೆನಿಸುತ್ತದೆ. ಇವುಗಳ ಜೊತೆಯಲ್ಲಿ ಆ ಕಾಲದಲ್ಲಿ ಬಳಸಿದ ವಿವಿಧ ಆಕಾರದ ಸೂಜಿಗಳು ಪ್ರದರ್ಶನಕ್ಕಿಡಲ್ಪಟ್ಟಿವೆ.

ಶವಗಳ ಜೊತೆಯಲ್ಲಿ ಬದುಕಿಗೆ ಅಗತ್ಯವಾದ ದಿನನಿತ್ಯದ ಬಳಕೆಯ ಮಣ್ಣಿನ ಮಡಿಕೆ, ಕುಡಿಕೆಗಳು, ಮಣಿಗಳು ಮುಂತಾದವುಗಳನ್ನು ಇಡುವ ಸಂಪ್ರದಾಯವನ್ನು ಇಲ್ಲಿ ಕಾಣಬಹುದಾಗಿದೆ. ಎರಡು ದೇಹಗಳನ್ನು ಒಟ್ಟಾಗಿ ಸಮಾಧಿ ಮಾಡಿರುವ ಅಪರೂಪದ ಉದಾಹರಣೆ ಹರಪ್ಪ ಅವಶೇಷಗಳಲ್ಲಿ ಕಂಡುಬರುತ್ತದೆ. ಉತ್ಖನನದ ಸಮಯದಲ್ಲಿ ಸಿಕ್ಕಿರುವ ಪರ್ಷಿಯದ ಕೊಲ್ಲಿಯ ಮುದ್ರೆಗಳು, ಮಮ್ಮಿ, ಗೊರಿಲ್ಲಾ ಚಿತ್ರದ ಮೂರ್ತಿಗಳು – ಲೋಥಾಲ್ ನಗರವು ಸಾಗರೋತ್ತರ ವ್ಯಾಪಾರದಲ್ಲಿ ತೊಡಗಿತ್ತು ಎಂಬುದನ್ನು ಸ್ಥಿರಪಡಿಸುತ್ತದೆ.

ವಸ್ತುಸಂಗ್ರಹಾಲಯದ ಮುಂಭಾಗದಲ್ಲೊಂದು ಫಲಕವಿದ್ದು ಈ ಫಲಕದ ವಿವರಗಳು ಪಕ್ಕದಲ್ಲಿ ಹರಡಿಕೊಂಡಿದ್ದ ವಿಸ್ತಾರವಾದ ಹಾಳುಬಿದ್ದ ಹರಪ್ಪ ಸಮಕಾಲೀನವಾದ ಲೋಥಾಲ್ ನಾಗರಿಕತೆಯ ವಿವರಗಳನ್ನು ಅರ್ಥಮಾಡಿಕೊಳ್ಳಲು ಮತ್ತು ಪುರಾತನ ನಾಗರಿಕತೆಯ ಚಿತ್ರದ ನಕ್ಷೆಯನ್ನು ಮನಸ್ಸಿನ ಭಿತ್ತಿಯಲ್ಲಿ ರಚಿಸಲು ನೆರವಾಗುತ್ತವೆ.

''ಪ್ರಾಚೀನ ಲೋಥಾಲ್ ದಿನ್ನೆಯನ್ನು ಮೊದಲು ಉತ್ಖನನ ಮಾಡಿದವರು ಪ್ರೊ|| ಎಸ್. ಆರ್. ರಾವ್. ಅವರು ಸುಮಾರು ಕ್ರಿ.ಪೂರ್ವ ೨೪೦೦-೧೯೦೦ರ ಕಾಲಕ್ಕೆ ಸೇರಿದ್ದೆನ್ನಲಾದ ಹಲವಾರು ಕಟ್ಟಡಗಳ ಅವಶೇಷಗಳನ್ನು ಹೊರತೆಗೆದು ಸುಮಾರು ೧೯೫೪ರಿಂದ ೧೯೬೨ರ ಅವಧಿಯಲ್ಲಿ ಅಧ್ಯಯನ ನಡೆಸಿದ್ದಾರೆ. ಈ ತಾಣವನ್ನು ಎರಡು ಭಾಗಗಳಾಗಿ ವಿಂಗಡಿಸಬಹುದಾಗಿದೆ. ಕೋಟೆ ಬತೇರಿಯು ಹಾಗೂ ಆಡಳಿತ ಕೇಂದ್ರವು ಒಂದು ಭಾಗವಾದರೆ, ಮತ್ತೊಂದು ಜನವಸತಿಯಿರುವ ಊರು. ಭಾರತದ ಪಶ್ಚಿಮ ಭಾಗದಲ್ಲಿ ವಿಸ್ತರಿಸಿರುವ ಈ ಪ್ರದೇಶಕ್ಕೆ ೧೩ ಮೀಟರ್ ದಪ್ಪನೆಯ ಮಣ್ಣಿನ ಇಟ್ಟಿಗೆಗಳಿಂದ ಗೋಡೆಯನ್ನು ಕಟ್ಟಲಾಗಿತ್ತು. ಕೋಟೆಯೊಳಗೆ ವಾಸಿಸುತ್ತಿದ್ದ ನಗರದ ಮುಖ್ಯಸ್ಥನು ವಾಸಿಸುವ ಮನೆಗಳನ್ನು ೩ ಮೀಟರ್ ಎತ್ತರದ ಪ್ರದೇಶದಲ್ಲಿ ಕಟ್ಟಲಾಗಿತ್ತು. ಆ ಮನೆಯಲ್ಲಿ ಸ್ನಾನದ ಕೊಳಗಳು, ಒಳಚರಂಡಿಗಳು ಮತ್ತು ಕುಡಿಯುವ ನೀರಿನ ಬಾವಿ, ಮುಂತಾದ ಎಲ್ಲಾ ನಾಗರಿಕ ಸೌಲಭ್ಯಗಳು ಲಭ್ಯವಿದ್ದವು. ಜನವಸತಿಯ ನಗರ ಪ್ರದೇಶವು ಎರಡು ಭಾಗಗಳಾಗಿ ವಿಂಗಡಣೆಗೆ ಒಳಪಟ್ಟಿತ್ತು. ಒಂದು ವಾಣಿಜ್ಯ ಕೇಂದ್ರ. ಇದರಲ್ಲಿ ಕುಶಲ ಕರ್ಮಿಗಳು ವಾಸವಾಗಿದ್ದರು. ಮತ್ತೊಂದು ಜನಸಾಮಾನ್ಯರ ವಾಸ ಸ್ಥಾನ. ಇದರಲ್ಲಿ ಪ್ರಮುಖವಾಗಿ ಕಾಣುವ ಅಂಶವೆಂದರೆ, ಒಂದು ದೊಡ್ಡ ಕೆರೆ. ಅದನ್ನು ಬಂದರು ಮತ್ತು ಉಗ್ರಾಣವಾಗಿಯೂ ಬಳಸಲಾಗುತ್ತಿತ್ತು. ಈ ಬಂದರು ನೆಲೆಯನ್ನು ಚೆನ್ನಾಗಿ ಸುಟ್ಟ ಇಟ್ಟಿಗೆಗಳಿಂದ ಕಟ್ಟಲಾಗಿತ್ತು. ಹರಿವ ನೀರಿನ ಕಾಲುವೆಯನ್ನು ಅತ್ಯಂತ ವೈಜ್ಞಾನಿಕವಾಗಿ ವಿನ್ಯಾಸಗೊಳಿಸಲಾಗಿತ್ತು. ಅಗತ್ಯಕ್ಕೆ ತಕ್ಕಂತೆ ನೀರಿನ ಪ್ರವಾಹವನ್ನು ತಡೆಯುವಂತಹ ೨೧೪ × ೩೬ ಮೀಟರ್ ಅಳತೆಯ ಒಡ್ಡನ್ನು ಈ ಕಾಲುವೆಗೆ ವೈಶಿಷ್ಟಪೂರ್ಣವಾಗಿ ವಿನ್ಯಾಸಗೊಳಿಸಲಾಗಿತ್ತು. ಇಲ್ಲಿನ ಮತ್ತೊಂದು ಪ್ರಮುಖ ರಚನೆಯೆಂದರೆ, ಕೋಟೆಯ ನೈರುತ್ಯ ಭಾಗದಲ್ಲಿ ಕಂಡುಬರುವ ಉಗ್ರಾಣ. ೪೯ × ೪೦ ಮೀಟರ್ ಅಳತೆಯ ಈ ಉಗ್ರಾಣವು ೩.೫ ಮೀಟರ್ ಎತ್ತರದ ಸ್ಥಳದಲ್ಲಿ ಕಟ್ಟಲಾಗಿದೆ. ಮೂಲದಲ್ಲಿ ಇದು ಎತ್ತರದ ಸ್ಥಳದಲ್ಲಿ ಮಣ್ಣಿನ ಇಟ್ಟಿಗೆಗಳಿಂದ ಕಟ್ಟಲ್ಪಟ್ಟಿದ್ದು, ೬೪ ಕ್ಯೂಬಿಕಲ್ ಬ್ಲಾಕ್‌ಗಳನ್ನು ಹೊಂದಿತ್ತು ಮತ್ತು ಸರಕಿನ ಹಡಗುಗಳನ್ನು ರಕ್ಷಿಸಲು ಮರದ ಛಾವಣಿಯನ್ನು ಹೊಂದಿತ್ತು.



''ಲೋಥಾಲ್‌ನ ಉತ್ಖನನದಲ್ಲಿ ವೈವಿಧ್ಯಮಯವಾದ ಕುಶಲಕರ್ಮಿಗಳ ಉತ್ಪನ್ನಗಳು ದೊರಕಿವೆ: ಮಣಿಗಳು, ಮುದ್ರೆಗಳು ಮತ್ತು ಚಿತ್ತಾರಗಳು. ಶಂಖ, ದಂತ, ತಾಮ್ರ ಮತ್ತು ಹಿತ್ತಾಳೆ ಸಾಧನಗಳು, ಪ್ರಾಣಿ ಮತ್ತು ಮನುಷ್ಯಾಕೃತಿಯ ವಿಗ್ರಹಗಳು. ಮಾಪಕಗಳು, ಪೂಜಾ ವಸ್ತುಗಳು ಇತ್ಯಾದಿ. ಈ ಚಿಕ್ಕ ಊರಿನ ಸಮೃದ್ಧಿಯು ವಿಶೇಷವಾಗಿ ಅದು ನಡೆಸುತ್ತಿದ್ದ ಸಾಗರೋತ್ತರ



ನಗರ ಮಧ್ಯಭಾಗ



ಹೊರವಲಯದ ಮನೆಗಳಿದ್ದ ಬೀದಿ

ವ್ಯಾಪಾರ ವಹಿವಾಟಿನ ಮೇಲೆಯೇ ನಿರ್ಧಾರಿತವಾಗಿತ್ತು. ಉದಾಹರಣೆಗೆ, ಕಲ್ಲಿನ ಮಣಿಗಳು, ತಾಮ್ರ, ದಂತ, ಶಂಖ ಮತ್ತು ಹತ್ತಿಯ ವಸ್ತುಗಳು ಪಶ್ಚಿಮ ಏಷ್ಯಾ ದೇಶಗಳಿಗೆ ರಫ್ತಾಗುತ್ತಿದ್ದವು. ಪರ್ಷಿಯಾ ಕೊಲ್ಲಿ ರಾಜ್ಯಗಳಲ್ಲಿ ಕಂಡುಬಂದ ಟೆರ್ರಾಕೋಟಾ ಮಣ್ಣಿನ ಗೊರಿಲ್ಲಾ ಮತ್ತು ಮಮ್ಮಿ ವಿಗ್ರಹಗಳು ಲೋಥಾಲ್‌ಗೆ ಸಾಗರೋತ್ತರ ವ್ಯಾಪಾರ ವಹಿವಾಟಿನ ಸಂಪರ್ಕ ಇದ್ದ ಅಂಶವನ್ನು ದೃಢಪಡಿಸುತ್ತದೆ.''

ಈ ಫಲಕದ ಮಾಹಿತಿಯಷ್ಟೇ ಅಲ್ಲದೆ, ಲೋಥಾಲ್‌ನಲ್ಲಿರುವ ಪುರಾತತ್ವ ಸಂಗ್ರಹಾಲಯದ ಭೂಪಟದಿಂದ ಕಂಡುಬರುವ ಅಂಶವೆಂದರೆ, ಸಿಂಧೂ ಕಣಿವೆ ನಾಗರಿಕತೆಯು ಗುಜರಾತ್‌ನ ತುಂಬೆಲ್ಲಾ ವ್ಯಾಪಕವಾಗಿ ಹರಿದು ಹಂಚಿ ಹೋಗಿತ್ತೆಂಬುದು. ಸಮುದ್ರದ ದಂಡೆಯ ಮೇಲೆ, ನದಿಯ ದಡದಲ್ಲಿ, ಇಲ್ಲವೆ ಮೆಕ್ಕಲು ಭೂಮಿಯ ಬಳಿ ಈ ನಾಗರಿಕತೆಯ ಕುರುಹುಗಳು ಕಂಡುಬಂದಿರುವುದಾಗಿ ಹೇಳಲಾಗುತ್ತದೆ. ವಿಶೇಷವಾಗಿ ವಿಪುಲವಾದ ಕೆಂಪುಮಣ್ಣಿನ ಸಂಸ್ಕೃತಿಯಿರುವ ಈ ನೆಲದಲ್ಲಿ ಮಣ್ಣಿನ ಪಾತ್ರೆಗಳು ಮತ್ತು ಆಭರಣಗಳು ವೃದ್ಧಿಗೊಂಡಿದ್ದರಲ್ಲಿ ಆಶ್ಚರ್ಯವಿಲ್ಲ. ಅತ್ಯಂತ ಪ್ರಮುಖ ಬಂದರು ನೆಲೆಯಾಗಿ ರೂಪುಗೊಂಡ ಲೋಥಾಲ್ ನಗರ ಪ್ರಾಚೀನ ಭಾರತದ ನಾಗರಿಕತೆಯ ಉಜ್ವಲ ಅವಶೇಷವಾಗಿ ಇಂದು ಉಳಿದಿದೆ.

ಲೋಥಾಲ್‌ನಲ್ಲಿ ಯಾತ್ರಿಕರ ಪ್ರಮುಖ ಆಕರ್ಷಣೆಯೆಂದರೆ, ಬೃಹತ್ ಪ್ರಮಾಣದ ಬಂದರು. ಈ ಕಟ್ಟಡದ ಅವಶೇಷಗಳು ಜಾಗತಿಕ ಪುರಾತತ್ವ ಭೂಪಟದಲ್ಲಿ ಲೋಥಾಲ್ ಅನ್ನು ಒಂದು ಪ್ರಮುಖ ಕೇಂದ್ರವನ್ನಾಗಿಸಿದೆ. ಉತ್ತರದಿಂದ ದಕ್ಷಿಣಕ್ಕೆ ಸುಮಾರು ೨೨ ಮೀಟರ್‌ಗಳು ಮತ್ತು ಪೂರ್ವದಿಂದ ಪಶ್ಚಿಮಕ್ಕೆ ಸುಮಾರು

೩೭ ಮೀಟರ್‌ಗಳಷ್ಟು ವಿಸ್ತಾರವಾಗಿರುವ ಈ ಬಂದರು ಕಡಲತಡಿಯ ವಾಸ್ತುಶಾಸ್ತ್ರಕ್ಕೆ ಉತ್ತಮ ನಿದರ್ಶನವಾಗಿದೆ. ಇದು ಬಂದರು ಆಗಿತ್ತೇ ಅಥವಾ ನೀರನ್ನು ಸಂಗ್ರಹಿಸಬಲ್ಲ ದೊಡ್ಡ ಕೆರೆಯಾಗಿತ್ತೇ ಎಂಬುದರ ಬಗ್ಗೆ ಪುರಾತತ್ವ ಶಾಸ್ತ್ರಜ್ಞರಲ್ಲಿಯೇ ಭಿನ್ನಾಭಿಪ್ರಾಯಗಳಿವೆ. ಸಬರಮತಿ ನದಿಯ ಪಕ್ಕದಲ್ಲಿಯೇ ನಡೆದ ಉತ್ಖನನದಲ್ಲಿ ಕಂಡುಬಂದ ಈ ಬಂದರಿನ ಗೋಡೆಯ ಮೇಲೆ ಸಮುದ್ರದ ನೀರು, ಅಲೆಗಳು ಮತ್ತು ಜಲವಿದ್ಯುತ್ ಜ್ಞಾನವು ಯಾವ ರೀತಿ ಪರಿಣಾಮ ಬೀರುತ್ತದೆ – ಎಂಬುದನ್ನು ಕುರಿತ ಅಧ್ಯಯನಗಳು ನಡೆದಿವೆ.

ಕ್ರಿ.ಪೂ. ೨೪೦೦ಕ್ಕೂ ಹಿಂದಕ್ಕೆ ಈ ನಗರದ ಉಗಮ ಮತ್ತು ಚರಿತ್ರೆಯನ್ನು ಗುರುತಿಸಬಹುದು. ಪ್ರವಾಹದ ಏರಿಳಿತದಿಂದಾಗಿ ೩೦೦ ವರ್ಷಗಳ ನಂತರ ಅದು ಅಧಃಪತನವನ್ನು ಕಂಡಿತು. ಆದರೂ ಈ ಭಾಗದಲ್ಲಿ ಕ್ರಿ.ಪೂ. ೧೬೦೦ ಮತ್ತು ೧೫೦೦ ವರ್ಷಗಳವರೆಗೆ ಸಂಪದ್ಭರಿತ ನಾಗರಿಕತೆಯು ಉಳಿದು ನಂತರದ ಉತ್ತರದ ಭಾಗಗಳಲ್ಲಿ ಅದು ಮಾಯವಾಯಿತು. ಹರಪ್ಪಾದ ಜನತೆ ತಮ್ಮ ಉಳಿವಿಗಾಗಿ, ಬದುಕಿಗಾಗಿ ಜಲ ಸಂಚಾರದ ಮೇಲೆ ಅವಲಂಬಿತರಾಗಿದ್ದರು. ಪುರಾತತ್ವ ಉತ್ಖನನದ ಸಂದರ್ಭದಲ್ಲಿ ಸಿಕ್ಕ ಮಾಹಿತಿಗಳಿಂದ ಈಜಿಪ್ಟ್ ಮತ್ತು ಮೆಸಪೊಟೇಮಿಯಾ ದೇಶಗಳೊಂದಿಗೆ ಈ ನಗರವು ವ್ಯಾಪಾರ ಸಂಬಂಧವನ್ನು ಹೊಂದಿತ್ತು ಎಂಬುದು ತಿಳಿದುಬರುತ್ತದೆ.

ಹರಪ್ಪ ಜನರು ತಮ್ಮ ವ್ಯಾಪಾರ ವಹಿವಾಟನ್ನು ನಡೆಸಲು ಮತ್ತು ಸಂಚಾರಕ್ಕಾಗಿ ಸಮುದ್ರ, ನದಿಯನ್ನು ಅವಲಂಬಿಸಿದ್ದರು. ಅತ್ಯಂತ ಸುಧಾರಿತ ಶೈಲಿಯ ಬಂದರು ನಿರ್ಮಾಣ ಮತ್ತು ವಿಶ್ವಮಾರುಕಟ್ಟೆಗೆ ತಮ್ಮನ್ನು ತೆರೆದುಕೊಂಡ ಆ ಕಾಲದ ಜನರ ಪರಂಪರೆ ಇಂದಿಗೂ ಮುಂದುವರಿದಿದೆ ಎಂಬ ಅಂಶ ಬೆರಗನ್ನುಂಟುಮಾಡುತ್ತದೆ.

ಈ ನಾಗರಿಕತೆಯ ಪ್ರಮುಖ ಆಕರ್ಷಣೆಯೆಂದರೆ, ಅತ್ಯಂತ ಸುಧಾರಿತವಾದ ನಗರ ಯೋಜನೆ. ಇಡೀ ಪಟ್ಟಣವು ಎತ್ತರದ ದಿನ್ನೆಯಂತಹ ಪ್ರದೇಶದಲ್ಲಿ ಕಟ್ಟಲಾಗಿತ್ತು. ಈ ನಗರದ ಸುತ್ತ ಗೋಡೆಯೊಂದು ಸುತ್ತುವರೆದಿದ್ದು ಜಗಲಿಯೊಂದರ ನಿರ್ಮಾಣವಾಗಿದೆ. ಇದನ್ನು ಸಾಗಾಟದಿಂದ ಬಂದ ಸರಕನ್ನು ಇಳಿಸಿಕೊಳ್ಳಲು ಮತ್ತು ಸಂರಕ್ಷಿಸಲು ಬಳಸಲಾಗುತ್ತಿತ್ತು. ಇದರ ಬಳಿಯಿರುವ ಉಗ್ರಾಣವು ೩..೫ ಚದರ ಅಳತೆಯ ೬೪ ಕೊಠಡಿಗಳಾಗಿ ವಿಂಗಡಣೆಗೊಂಡು ೧.೨ ಮೀಟರ್ ಅಳತೆಯ ವಿಶಾಲವಾದ ಒಣೆಯನ್ನು ಹೊಂದಿತ್ತು. ಇವುಗಳಲ್ಲಿ ಈಗ ನೋಡಲು ಲಭ್ಯವಿರುವುದು ಕೇವಲ ೧೨ ಕೊಠಡಿಗಳು ಮಾತ್ರ. ಕ್ರಿ.ಪೂ. ೨೨೦೦ರ ಜಲಪ್ರವಾಹದ ನಂತರ ನೈರುತ್ಯ ಪ್ರದೇಶದಲ್ಲಿ ಪೇಟೆಯನ್ನು ವಿಸ್ತಾರಗೊಳಿಸಿ ಆಳುವವರ ಅರಮನೆ ಮತ್ತು ವರ್ತಕರ ಮನೆಗಳನ್ನು ನಿರ್ಮಿಸಲಾಗಿತ್ತು. ಉಗ್ರಾಣದ ಬಳಿ ಎತ್ತರ ಪ್ರದೇಶದಲ್ಲಿ ಕಂಡುಬರುವ ಆಳುವವರ ಮನೆಯು ಬೃಹತ್ ಅರಮನೆಯಲ್ಲದಿದ್ದರೂ ಉಳಿದಿರುವ ಪಾಯದ ಕಲ್ಲುಗಳನ್ನು ನೋಡಿದರೆ, ಅವು ಎರಡು ಅಥವಾ ಮೂರು ಮಹಡಿಗಳನ್ನಾದರೂ ಹೊಂದಿತ್ತೆಂದು ಹೇಳಬಹುದು. ಈ ಉಗ್ರಾಣಕ್ಕೂ ರಾಜರ ಮನೆಗಳಿಗೂ ಸಾಮೀಪ್ಯವಿರುವಂತೆ ನೋಡಿಕೊಳ್ಳಲಾಗಿತ್ತು. ಈ ರಾಜವಾಸದಿಂದ ಕೆಳಭಾಗದಲ್ಲಿ ವಾಣಿಜ್ಯ ಮತ್ತು ವಸತಿ ಪ್ರದೇಶಗಳು ಇರುವಂತೆ ಯೋಜಿಸಲಾಗಿತ್ತು; ಅಲ್ಲೇ ವರ್ತಕರ ಮನೆಗಳು, ಕುಶಲಕರ್ಮಿಗಳ ವಸತಿಗಳು ಇರುವಂತೆ ನೋಡಿಕೊಳ್ಳಲಾಗಿತ್ತು.



## ಕನಸು ನನಸು

ಕನಸ ಕಂಡವಳೊಂದಿಗೆ
ಅರಮನೆಯ ಕಟ್ಟಿ
ಹೂದೋಟ ನಿರ್ಮಿಸಿ
ಕೀಲು ಕುದುರೆಯನೇರಿ
ಏಳು ಸಮುದ್ರ ಏಳು ಗುಡ್ಡ
ಏಳು ದೇಶಗಳ ದಾಟಿ
ಚಂದ್ರಮನ ಮೀಟಿ
ಕಾಮನ ಬಿಲ್ಲನು ಜಾರಿ
ಮರ ಮರಕೆ ಉಯ್ಯಾಲೆಯಾಡಿ
ಹೊಳೆಯೊಳಗೆ ಮಿಂದು
ಜೇನು ತಿಂದು ಹಾಲು ಕುಡಿದು
ನೂರು ಮಕ್ಕಳ ಹೆತ್ತು..
ನಿಲ್ಲಲಿ ಇಲ್ಲಿಯೇ ಕನಸು
ಸುಂದರವಾಗಿರಲು ಹೀಗೆ

*

ಮುರುಕು ಜೋಪಡಿ
ಹರಕು ರೊಟ್ಟಿ
ಕೈ ತುತ್ತು ಪ್ರೀತಿ
ತೊಳ್ತೆಕ್ಕೆಯಲಿ ನಕ್ಷತ್ರಗಳಿಗೆ ಕಾವು ಕೊಟ್ಟ
ಕುಟಿಯ ಕಚ್ಚ ಮಧುವ ಹೀರಿ
ಕಣ್ಣಂಚಿನಲಿ ಮಿಂಚು ಹೊಮ್ಮಿಸಿ
ಮಿಣುಕುವ ಸಣ್ಣ ಹನಿಯ ನುಂಗಿ
ಅಂಗಳದಲಿ ಬೆಳುದಿಂಗಳ ಮುಡಿಸಿದ
ಎರಡು ಮಕ್ಕಳ ತಾಯಿ
ನನ್ನ ಮಗುವ ಮಾಡಿದಳು

*

ನಿಲ್ಲದಿರಲಿ ಈ ಪಯಣ
ನಿಜದ ಪ್ರಾಣ
ಇದೇ ಬದುಕು ಕಾಣ !

*



ವಿ. ಹರಿನಾಥ ಬಾಬು ಸಿರುಗುಪ್ಪ

ಗುಜರಾತ್‌ನ ಲೋಥಾಲ್ ಕ್ರಿ.ಪೂ ೧೯೦೦ರವರೆಗೂ ಮಣಿಗಳ ಕಾರ್ಖಾನೆಗೆ ಹೆಸರುವಾಸಿಯಾಗಿತ್ತು. ದಂತದ ಕಾರ್ಯಾಗಾರವು ಇಲ್ಲಿ ಇತ್ತೆಂದು ಹೇಳಲಾಗುತ್ತದೆ. ಅತ್ಯಂತ ಸೂಕ್ಷ್ಮವಾದ ಸಣ್ಣ ಸಣ್ಣ ಮಣಿಗಳ ತಯಾರಿಕೆ ಈ ಜನರ ವೈಶಿಷ್ಟ್ಯ. ಕಲ್ಲಿನಲ್ಲಿ ಮಣಿಗಳನ್ನು ಮಾಡಲಾಗಿತ್ತು. ಲೋಹ ವಸ್ತುಗಳನ್ನು ಚೆನ್ನಾಗಿ ಪುಡಿ ಮಾಡಿ, ಅವನ್ನು ಕಲಸಿ, ತಂತಿಗೆ ಮೆತ್ತಿ ಮಣ್ಣಿನ ಒಲೆಯಲ್ಲಿ ಸುಟ್ಟು ಸಣ್ಣ ಸಣ್ಣ ಮಣಿಗಳನ್ನು ಮಾಡಲಾಗುತ್ತಿತ್ತು. ಚಿನ್ನದ ಸಣ್ಣ ಸಣ್ಣ ಮಣಿಗಳನ್ನು ಪೋಣಿಸಿ ಮಾಡಿರುವ ನೆಕ್ಲೇಸ್ ಅವರ ತಂತ್ರಜ್ಞಾನ ಮತ್ತು ಕಲಾತ್ಮಕತೆಗೆ ಅಪೂರ್ವವಾದ ಸಾಕ್ಷಿ. ಚಿನ್ನ, ಹರಳಿನಂತೆಯೇ ಕಪ್ಪೆಚಿಪ್ಪು, ಶಂಖಗಳಿಂದಲೂ, ಟೆರ್ರಾಕೋಟಾ ಒಡವೆಗಳು ಕಾಣಸಿಗುತ್ತವೆ.

ಬಂದರಿನಲ್ಲಿ ಹಾದುಹೋಗುವ ಆಮದು ಮತ್ತು ರಫ್ತಿನ ಸರಕುಗಳಿಗೆ ಗುರುತಿನ ಪಟ್ಟಿಯನ್ನು ಹತ್ತಿಸಲು ಮುದ್ರೆಗಳನ್ನು ಬಳಸಲಾಗುತ್ತಿತ್ತು. ಉತ್ಖನನದ ಸಂದರ್ಭದಲ್ಲಿ ಇಂತಹ ಗುರುತಿನ ಮುದ್ರೆಗಳು, ಚಿಹ್ನೆಗಳು ಕಂಡುಬಂದಿವೆ. ಹರಪ್ಪ ನಾಗರಿಕತೆಯ ಜನ ಕಲಿತು ತಯಾರಿಸಿದ್ದ ಮಣ್ಣಿನ ಇಟ್ಟಿಗೆಗಳು ಸಮುದ್ರದ ಅಲೆಗಳಿಂದ ಸ್ವಲ್ಪವೂ ಮುಕ್ಕಾಗದೆ ಉಳಿದಿರುವುದು ಅವರ ತಂತ್ರಜ್ಞಾನದ ಶ್ರೇಷ್ಠತೆಯನ್ನು ತೋರಿಸುತ್ತದೆ.

೪೦೦೦ ವರ್ಷಗಳ ಹಿಂದಿನ ಶ್ರೀಮಂತ ನಾಗರಿಕತೆಯಿದ್ದ ತಾಣದಲ್ಲಿ ನಿಂತು ಅದರ ಅವಶೇಷಗಳೊಡನೆ ಆ ಕಾಲದ ಜೀವನವನ್ನು ಮನಸ್ಸಿನಲ್ಲಿ ಮೂರ್ತೀಭವಿಸಿಕೊಂಡ ಒಂದು ಮಧುರ ಅನುಭವ ಮನಸ್ಸಿನಲ್ಲಿ ಮೂಡಿ ನನ್ನನ್ನು ರೋಮಾಂಚನಗೊಳಿಸಿತು. ಈ ಭವ್ಯ ನಾಗರಿಕತೆಯ ವಾರಸುದಾರರಾದದ್ದಕ್ಕೆ ಹೆಮ್ಮೆ ಪಡಬೇಕೋ ಅಥವಾ ಇಂದು ಆ ನೆಲದಲ್ಲಿ ನಡೆದ ಮತ್ತು ನಡೆಯುತ್ತಿರುವ ಪೈಶಾಚಿಕ ಕೃತ್ಯಗಳಿಗೆ ದುಃಖಿಸಬೇಕೋ ಎಂಬ ಗೊಂದಲ ಮನಸ್ಸನ್ನು ಗಾಢವಾಗಿ ಕಾಡಿತು.

ಡಾ|| ಎನ್. ಗಾಯತ್ರಿ
ನಂ. ೨೦೧, ಸ್ಕೈಲೈನ್ ಗೋಲ್ಡನ್ ರೇಸ್, ಛತ್ರಂ ಬ್ಲಾಕ್, ಗವೀಪುರ
ಬೆಂಗಳೂರು - ೫೬೦ ೦೧೯


ಕತೆಯೊಂದನ್ನು ನಿರೂಪಿಸುವ ಚಿತ್ರಗಳು



# ಕುಲಾಂತರಿ ತಳಿಗಳು ಆಹಾರ ಸಮಸ್ಯೆಗೆ ಪರಿಹಾರವಲ್ಲ

– ಡಾ॥ ಎಂ. ಜಿ. ಮುರಳೀಧರ ಮತ್ತು ಡಾ॥ ಗಿರಿಜಾ ಮುರಳೀಧರ

ಡಾ॥ ಗಿರಿಜಾ ಮತ್ತು ಡಾ॥ ಮುರಳೀಧರ ಇಬ್ಬರೂ ಜೀವವಿಜ್ಞಾನಿಗಳು, ಅಮೆರಿಕಾದ ಸ್ಯಾನ್ ಡಿಯಾಗೋನಲ್ಲಿ ಸಂಶೋಧನೆಯಲ್ಲಿ ತೊಡಗಿರುವವರು. ಶಾಲೆಯಲ್ಲಿ ಓದುತ್ತಿದ್ದಾಗಲೇ ಜೀವಶಾಸ್ತ್ರದಲ್ಲಿ ಆಸಕ್ತಿ ಬೆಳೆಸಿಕೊಂಡ ಗಿರಿಜಾ ಬರೋಡಾದ ಎಂ.ಎಸ್. ವಿಶ್ವವಿದ್ಯಾನಿಲಯದಿಂದ ಎಂ.ಎಸ್‌ಸಿ. ಪಡೆದು ಸ್ಯಾನ್ ಡಿಯಾಗೋದಲ್ಲಿರುವ ಕ್ಯಾಲಿಫೋರ್ನಿಯ ವಿಶ್ವವಿದ್ಯಾನಿಲಯದಿಂದ ಪಿಎಚ್.ಡಿ. ಗಳಿಸಿದ್ದಾರೆ. ಪ್ರಯೋಗಶಾಲೆ ಎಂದರೆ ಸಂಭ್ರಮಿಸುವ ಅವರು ಸಾಂಕ್ರಾಮಿಕ ರೋಗಗಳನ್ನು ತಡೆಯುವ ಲಸಿಕೆಗಳ ಸಂಶೋಧನೆಯಲ್ಲಿ ತಜ್ಞರು. ಏಡ್ಸ್ ವಿರುದ್ಧ ವ್ಯಾಕ್ಸೀನ್ ಒಂದನ್ನು ಜೆನ್‌ಸ್ಟಾರ್ ಕಂಪನಿ ಮತ್ತು ಲಹೋಯ ಇನ್‌ಸ್ಟಿಟ್ಯೂಟ್‌ಗಳಲ್ಲಿ ಸಂಶೋಧನೆಯ ಮೂಲಕ ಕಂಡುಹಿಡಿದರು, ಆದರೆ ಅದು ಮಾರುಕಟ್ಟೆಗೆ ಬರಲಿಲ್ಲ. ಪಾರ್ಕಿನ್‌ಸನ್ ಕಾಯಿಲೆ, ಆಲ್‌ಜೈಮರ್, ಮುಂತಾದ ಕಾಯಿಲೆಗಳಿಗೆ ಮದ್ದು ಕಂಡುಹಿಡಿಯುವುದರಲ್ಲಿ ನಿರತರಾಗಿರುವ ಡಾ॥ ಗಿರಿಜಾ ನರರೋಗಶಾಸ್ತ್ರದಲ್ಲಿ ಪರಿಣತರು. ಬೆಂಗಳೂರಿನ ನ್ಯಾಷನಲ್ ಕಾಲೇಜಿನಿಂದ ಬಿ.ಎಸ್ಸಿ. ಪಡೆದ ಮುರಳೀಧರ ಜೀವಶಾಸ್ತ್ರ ವ್ಯಾಸಂಗ ಅಷ್ಟಾಗಿ ಮಾಡಿದ್ದವರಲ್ಲ. ಅವರು ಬರೋಡದ ಎಂ.ಎಸ್. ವಿಶ್ವವಿದ್ಯಾಲಯದಲ್ಲಿ ಜೀವರಸಾಯನಶಾಸ್ತ್ರದಲ್ಲಿ ಎಂ.ಎಸ್‌ಸಿ. ಪಡೆದು ಅಮೆರಿಕಾದ ಒಹಾಯೋ ವಿಶ್ವವಿದ್ಯಾಲಯದಿಂದ ಜೆನೆಟಿಕ್ಸ್ ಮತ್ತು ಮಾಲಿಕ್ಯುಲರ್ ಬಯಾಲಜಿ ಕ್ಷೇತ್ರದಲ್ಲಿ ಪಿಎಚ್.ಡಿ. ಗಳಿಸಿದರು. ನೂತನ ತಂತ್ರಗಳಲ್ಲಿ ಪರಿಣತಿ ಹೊಂದಿದ ಮುರಳೀಧರ ನಂತರ ಸ್ಯಾನ್ ಡಿಯಾಗೋದಲ್ಲಿರುವ ಖ್ಯಾತ ಸಾಲ್ಕ್ ಸಂಶೋಧನಾ ಇನ್‌ಸ್ಟಿಟ್ಯೂಟ್‌ನಲ್ಲಿ ಹಲವು ವರ್ಷಗಳ ಕಾಲ ಸಂಶೋಧಕರಾಗಿ ಕೆಲಸ ಮಾಡಿದ್ದಾರೆ. ಮಿದುಳಿನ ಸೆಲ್ (ನ್ಯೂರಾನ್)ಗಳ ಬಗೆಗೆ ವಿಶೇಷ ಅಧ್ಯಯನ ಮಾಡಿರುವ ಡಾ॥ ಮುರಳೀಧರ ಕೆಲಕಾಲ ಬೆಂಗಳೂರಿನ ರಾಷ್ಟ್ರೀಯ ಜೀವಶಾಸ್ತ್ರ ಸಂಶೋಧನಾ ಸಂಸ್ಥೆಯಲ್ಲಿದ್ದು (ಎನ್.ಸಿ.ಬಿ.ಎಸ್. – ಇದು ಟಿ.ಐ.ಎಫ್.ಆರ್.ನ ಅಂಗಸಂಸ್ಥೆ) ಪ್ರಸ್ತುತ ಅಮೆರಿಕಾದ ಒಂದು ಬಯೋಟೆಕ್ನಾಲಜಿ ಕಂಪನಿಯಲ್ಲಿ ಸಂಶೋಧನೆ ನಡೆಸುತ್ತಿದ್ದಾರೆ. ವಿವಿಧ ತಂತ್ರಜ್ಞಾನಗಳಲ್ಲಿ ಪಳಗಿರುವ ಮುರಳೀಧರ ಈಗ ಹೆಚ್ಚಿನ ಸಂಶೋಧನೆ ನಡೆಸುತ್ತಿರುವುದು ಸ್ಟೆಮ್ ಸೆಲ್ ಸಂಶೋಧನಾ ಕ್ಷೇತ್ರದಲ್ಲಿ.

ಅಕ್ಟೋಬರ್ ೨೦೧೦ರಲ್ಲಿ ಮುರಳೀಧರ ಮತ್ತು ಜಿ.ಆರ್. ಪೆರು ಮತ್ತು ಕ್ಯೂಬಾ ದೇಶಗಳಿಗೆ ಜೊತೆಯಲ್ಲಿ ಪ್ರವಾಸ ಕೈಗೊಂಡಿದ್ದರು. ಆ ಸಂದರ್ಭದಲ್ಲಿ ಡಾ॥ ಮುರಳೀಧರ ಮತ್ತು ಡಾ॥ ಗಿರಿಜಾ ಅವರನ್ನು ಅವರ ಮನೆಯಲ್ಲೇ 'ಹೊಸತು'ಗಾಗಿ ಡಾ॥ ಜಿ. ರಾಮಕೃಷ್ಣ ಸಂದರ್ಶಿಸಿ ಈ ವರದಿಯನ್ನು ಸಿದ್ಧಗೊಳಿಸಿಕೊಟ್ಟಿದ್ದಾರೆ.

**ಹೊಸತು :** ನೀವಿಬ್ಬರೂ ಭಾರತ ಹಾಗೂ ಅಮೆರಿಕಾಗಳಲ್ಲಿ ವ್ಯಾಸಂಗ ಮಾಡಿದ್ದೀರಿ. ಅಲ್ಲಿನ ಅಧ್ಯಯನ ಪದ್ಧತಿಗಳಲ್ಲಿ ನೀವು ಕಂಡುಕೊಂಡ ಗಮನಾರ್ಹ ವ್ಯತ್ಯಾಸಗಳೇನಾದರೂ ಉಂಟೆ ?

**ಡಾ|| ಗಿರಿಜಾ :** ಬೋಧನಾ ಪದ್ಧತಿಗಳಲ್ಲಿ ವ್ಯತ್ಯಾಸವಿದೆ. ಅಮೆರಿಕಾದಲ್ಲಿ ಪ್ರಶ್ನೆ-ಉತ್ತರದ ಮಾದರಿ ಹೆಚ್ಚು ಪ್ರಚಲಿತ. ನಿರ್ದಿಷ್ಟ ಯೋಜನೆಗಳ ದೃಷ್ಟಿಯಿಂದ ವಿಷಯಗಳನ್ನು ಅಳವಡಿಸಲಾಗುತ್ತದೆ.

**ಡಾ|| ಮುರಳೀಧರ :** ನಮ್ಮ ದೇಶದಲ್ಲಿ (ಅಂದರೆ, ಭಾರತದಲ್ಲಿ) ವಿಶಾಲವಾದ ಆಯಾಮವಿರುತ್ತದೆ ಮತ್ತು ವಿಷಯಗಳ ಸಂಯೋಜನೆ ಆಳವಾದ್ದು. ಕಲಿಕೆಗೆ ಉತ್ತಮ ಅವಕಾಶ. ಅಮೆರಿಕಾದ ಪಠ್ಯಕ್ಕೆ ಹೋಲಿಸಿದರೆ ನಮ್ಮ ದೇಶದ್ದು ಹಿಂದೆ ಬೀಳುವಂಥದಲ್ಲ, ಆದರೆ ಅದು ಪುಸ್ತಕ ಜ್ಞಾನವಾಗಿಬಿಡುವುದೇ ಹೆಚ್ಚು; ಗ್ರಹಿಸಿದ ವಿಷಯವು ವೈಜ್ಞಾನಿಕ ಕ್ಷೇತ್ರದಲ್ಲಿ ಹೇಗೆ ಪ್ರಯೋಗಕ್ಕೆ ಬರುತ್ತದೆಂಬುದರ ಕಲ್ಪನೆ ಕಡಿಮೆ. ಅಮೆರಿಕಾದ ಪದ್ಧತಿಯು ಸಮಸ್ಯೆಯ ಪರಿಹಾರದ ದೃಷ್ಟಿಯಿಂದ ಉಪಯುಕ್ತವಾದ್ದು. ಈ ಪ್ರಶ್ನೆಗೆ ಉತ್ತರ ಯಾವುದು ಮತ್ತು ಅದನ್ನು ಪಡೆಯುವುದು ಹೇಗೆ ಎಂಬುದಕ್ಕೆ ಒತ್ತುಕೊಡಲಾಗುತ್ತದೆ. ವಿಶ್ವವಿದ್ಯಾನಿಲಯಗಳ ಗುಣಮಟ್ಟದಲ್ಲಿ ವ್ಯತ್ಯಾಸವಿದ್ದರೂ ಸಾಮಾನ್ಯವಾಗಿ ಎಲ್ಲೆಡೆ ಸಾಕಷ್ಟು ಉನ್ನತ ಗುಣಮಟ್ಟ ಇರುವಂತೆ ಆಯೋಜಿಸಲಾಗಿದೆ. ಕಾಲೇಜಿಗೆ ಸೇರಿದ ಯಾವುದೇ ವಿದ್ಯಾರ್ಥಿ ನೇರವಾಗಿ ಪ್ರಯೋಗಶಾಲೆಗೆ ಹೋಗಿ ಪ್ರಯೋಗ ನಡೆಸಲು ಸಾಧ್ಯವಿದೆ. ವಿಷಯಗಳಲ್ಲಿ ಆಳವಾದ ಪ್ರವೇಶ ಅಥವಾ ಜ್ಞಾನವೇನೂ ವಿಶೇಷವಾಗಿ ಇರುವುದಿಲ್ಲ, ಆದರೆ ಸಮಸ್ಯೆಗಳ ಪರಿಹಾರಕ್ಕೆ ಸಾಮರ್ಥ್ಯವನ್ನು ಗಳಿಸುವ ಅವಕಾಶ ಸದಾ ಇರುತ್ತದೆ.

**ಹೊಸತು :** ವಿಜ್ಞಾನದ ಕ್ಷೇತ್ರದಲ್ಲಿ ಜ್ಞಾನದ ವಿಸ್ತರಣೆಗೆ ಆದ್ಯತೆ ಇರುವುದರಿಂದ ''ಸಂಶೋಧನೆಗಾಗಿ ಸಂಶೋಧನೆ'' ಎಂಬ ಮಾತು ಕೇಳಿಬರುತ್ತದೆ. ನಿಮ್ಮ ಸಂಶೋಧನೆ ಅಂತಹುದೇ ಮತ್ತು ಅದು ಅಗತ್ಯವೆ ?

**ಮುರಳೀಧರ :** ಬಹುಕಾಲ ನನ್ನ ಸಂಶೋಧನೆಯು ಯಾವುದಾದರೂ ಬಗೆಯಲ್ಲಿ ಮಾನವನ ಅಗತ್ಯಗಳ ಪೂರೈಕೆಗೆ ಸಾಧನವಾಗಬೇಕೆ, ಇಲ್ಲವೆ, ಎಂಬುದರ ಬಗ್ಗೆ ನಾನು ಆಲೋಚನೆ ಮಾಡಿರಲಿಲ್ಲ. ಮೂಲಭೂತ ಪ್ರಶ್ನೆಗಳಿಗೆ ಉತ್ತರ ಕಂಡುಕೊಳ್ಳುವುದಕ್ಕೆ ವೈಜ್ಞಾನಿಕ ಪ್ರಯೋಗ ಸಹಕಾರಿ ಎಂಬ ಭಾವನೆ ನನ್ನಲ್ಲಿತ್ತು. ಆ ಜ್ಞಾನದ ಪ್ರಾಯೋಗಿಕ ಉಪಯೋಗ ಹೇಗೋ ಆಗುತ್ತದೆ, ಹಿಂದೆಲ್ಲಾ ಹಾಗೆ ಜ್ಞಾನದ ಪ್ರಯೋಜನ ಸಿಕ್ಕಿದೆ, ಬೇರೆಯವರೂ ಅದರಲ್ಲಿ ನಿರತರಾಗಿದ್ದಾರಲ್ಲ, ಎಂದು ಅಂದುಕೊಳ್ಳುತ್ತಿದ್ದೆ. ಆರೋಗ್ಯ ಸುಧಾರಣೆ, ಪೌಷ್ಟಿಕ ಆಹಾರ, ಇವೆಲ್ಲಾ ಉತ್ತಮಗೊಳ್ಳಲು ವಿಜ್ಞಾನ ಕೆಲಸ ಮಾಡಿರುವುದು ಎಲ್ಲರಿಗೂ ಗೊತ್ತು. ಹೀಗೆ ಸಂಶೋಧನೆ ನಡೆಸುತ್ತಿದ್ದ ನಾನು ಕಂಪನಿಗಳಿಗೆ ಸೇರಿದಾಗ ಬೇರೆ ಗ್ರಹಿಕೆಯನ್ನು ಕಂಡೆ ಮತ್ತು ಪಡೆದೆ. ಕಂಪನಿಗಳಿಗೆ ಜ್ಞಾನಕ್ಕಾಗಿ ಜ್ಞಾನ ಬೇಕಿಲ್ಲ, ಉಪಯೋಗಕ್ಕಾಗಿ ಜ್ಞಾನ ಬೇಕು. ಆ ಜ್ಞಾನವನ್ನು ಪಡೆಯಲು ಅವರೇ ಶ್ರಮಿಸಬೇಕೆಂದೇನೂ ಇಲ್ಲ. ಇತರರು ಗಳಿಸಿದ ಜ್ಞಾನದಿಂದ ಉಪಯುಕ್ತ ಸರಕುಗಳ ತಯಾರಿ ಸಾಧ್ಯವಾದರೂ ಸರಿಯೇ, ಅವರೇ ಆಯೋಜಿಸಿದ ಪ್ರಯೋಗಗಳಿಂದ ಸಿದ್ಧಿಸಿದ ಜ್ಞಾನದಿಂದ ಅದು ಸಾಧ್ಯವಾದರೂ ಸರಿಯೇ. ಅಂದರೆ, ವಿಶ್ವವಿದ್ಯಾನಿಲಯವೋ ಸಂಶೋಧನಾ ಸಂಸ್ಥೆಯೋ ಒಂದು ತಿಳುವಳಿಕೆಯನ್ನು ನೀಡಿದ್ದರೆ ಅದನ್ನು ಬಳಸಿ ಉಪಯುಕ್ತ ಸಾಮಗ್ರಿ ತಯಾರಿಸಲು ಕಂಪನಿಗಳಿಗೆ ಅಳುಕೇನೂ ಇಲ್ಲ.

**ಗಿರಿಜಾ :** ಹತ್ತು ವರ್ಷಗಳ ಹಿಂದೆ ವಿಜ್ಞಾನವೆಂದರೆ ಸತ್ಯದ ಅರಸುವಿಕೆಯೆಂದು ನಾನು ಭಾವಿಸುತ್ತಿದ್ದುದುಂಟು. ನಂತರದ ಅನುಭವವು ನನ್ನ ದೃಷ್ಟಿಯನ್ನು ಕೊಂಚ ಬದಲಿಸಿದೆ. ಸತ್ಯವನ್ನರಿಯಬೇಕು ನಿಜ, ಆದರೆ ನನ್ನ ಸಂಶೋಧನೆಯು ಪ್ರಯೋಗ ಶಾಲೆಯಿಂದ ಆಸ್ಪತ್ರೆಗೆ, ರೋಗಿಗೆ, ವಿಸ್ತರಿಸಿಕೊಳ್ಳದಿದ್ದರೆ ಯಾವ ಪುರುಷಾರ್ಥ ಸಾಧನೆ ಆದೀತು! ಯಾರಿಗೆ ಅಗತ್ಯವೋ ಅವರಿಗೆ ನನ್ನ ಸಂಶೋಧನೆಯ ಫಲ ಮುಟ್ಟಬೇಕು. ಕೆಲವು ವರ್ಷಗಳ ಹಿಂದೆ ಏಡ್ಸ್‌ರೋಗ ಕುರಿತ ಸಮ್ಮೇಳನವೊಂದಕ್ಕೆ ಹೋಗಿದ್ದೆ. ನನ್ನ ಪ್ರಯೋಗ, ಫಲಿತಾಂಶ, ಎಲ್ಲವನ್ನೂ ಅಚ್ಚುಕಟ್ಟಾಗಿ ವಿವರಿಸಿದೆ. ಉಪನ್ಯಾಸವನ್ನು ಎಲ್ಲರೂ ಹರ್ಷದಿಂದ ಸ್ವಾಗತಿಸಿದರು. ಹಿಂದೆಲ್ಲೋ ಒಬ್ಬಾತ ಗಾಲಿಕುರ್ಚಿಯ ಮೇಲೆ ಕುಳಿತಿದ್ದ. ಆತ ಒಂದು ಪ್ರಶ್ನೆ ಹಾಕಿದ: ''ಎಲ್ಲಾ ಸರಿ, ನೀವೇನೋ ಇಲಿಗಳ ಮೇಲೆ ಪ್ರಯೋಗ ನಡೆಸಿ ಅವನ್ನು ಗುಣಪಡಿಸಿದಿರಿ, ಆದರೆ

ನನ್ನ ಕತೆ ಏನು ? ನಾನಿನ್ನೂ ಪರಿಹಾರಕ್ಕಾಗಿ ಕಾಯುತ್ತಲೇ ಇದ್ದೇನಲ್ಲ!'' ನಾನು ದಂಗಾಗಿಹೋದೆ. ಆ ಪ್ರಶ್ನೆ ನನ್ನನ್ನು ಸದಾ ಕಾಡುತ್ತದೆ: ಆತನಿಗೆ ಉಪಯೋಗವಾಗದಿದ್ದರೆ ನನ್ನ ಸಂಶೋಧನೆಯಿಂದೇನು ಪ್ರಯೋಜನ, ಎಂದು. ವಿಜ್ಞಾನಕ್ಕಾಗಿ ವಿಜ್ಞಾನ ಎಂಬುದನ್ನು ನಾನು ತಳ್ಳಿಹಾಕಲಾರೆ, ಆದರೆ ಅಗತ್ಯವಿದ್ದವರಿಗೆ ಅದರ ಫಲ ತಲುಪಬೇಕು ಎಂಬುದು ನನ್ನ ನಿಲುವು. ಸತ್ಯದ ಅರಿವು ನಿರಂತರ ಕೃಷಿಯಿಂದ ಬಂದೀತು, ಆ ಕೃಷಿಗೆ ಅಂತ್ಯ ಎಂಬುದಿಲ್ಲ. ಉದಾಹರಣೆಗೆ, ಒಂದು ಕಣ ಅಥವಾ ಅಣು ಇದೆ. ಅದರ ''ಸತ್ಯ'' ಯಾವುದು ? ಹೋಗಲಿ, ''ಸತ್ಯ'' ಎಂದರೇನು ? ''ದೇವರು ಎಂದರೇನು'' ಎಂಬ ಪ್ರಶ್ನೆಯಂತೆ ಅದು.

**ಮುರಳೀಧರ** : ನಾವು ಮಾಡುವುದೇನು ? ಪ್ರಯೋಗ, ನಿರೀಕ್ಷೆ, ತರ್ಕ, ಇತ್ಯಾದಿ. ಆದರೆ ಅತಿ ಗಂಭೀರವಾದ ಪ್ರಶ್ನೆ ಉಳಿದೇ ಇರುತ್ತದೆ. ಅದು ಮೂಲಭೂತವಾದ್ದು. ನನ್ನ ಸ್ತರದಲ್ಲಿ ತಿಳಿಯಬಹುದಾದ್ದೇನು ? ಒಂದು ಜೀನ್ ಇದೆ, ಅದು ಯಾವುದೋ ಕಾಯಿಲೆಗೆ ಜವಾಬ್ದಾರಿ ಹೊರುತ್ತದೆ. ಅಲ್ಲಿಯ ಪ್ರೋಟೀನ್ ಯಾವುದು, ಅದರ ಕಾರ್ಯವಿಧಾನವೇನು, ಬೇರೆ ಪ್ರೋಟೀನ್‌ಗಳೊಡನೆ ಅದು ಹೇಗೆ ವ್ಯವಹರಿಸುತ್ತದೆ ? ಅದನ್ನು ತಿಳಿಯಹೊರಡುತ್ತೇನೆ. ಯಾವುದೋ ಅನಾರೋಗ್ಯವಿದೆಯೆನ್ನಿ. ಅದು ಸಂಭವಿಸಿದ್ದು ಹೇಗೆ ? ಜೀವಶಾಸ್ತ್ರದಲ್ಲಿ ಇದು ಮಹತ್ವದ ವಿಚಾರ. ಉತ್ತರ ಕಠಿಣ. ಒಂದು ಜೀನ್ ''ಏಕೆ'' ಹೀಗೆ ಪ್ರವರ್ತಿಸಿತು ಎಂಬುದನ್ನು ಹೇಳುವುದು ಕಷ್ಟ. ಆದರೆ, ಏನು ನಡೆಯುತ್ತಿದೆ, ಹೇಗೆ ಪ್ರವರ್ತಿಸಿತು, ಎಂಬುದನ್ನು ತಿಳಿಯಲು ಸಾಧ್ಯ. ಆ ತಿಳುವಳಿಕೆಯು ಅನುಪಯುಕ್ತ ಖಂಡಿತ ಅಲ್ಲ.

**ಹೊಸತು** : ಸಂಶೋಧನೆಗೂ ಅದರ ಫಲದ ಪ್ರಾಯೋಗಿಕ ಅಳವಡಿಕೆಗೂ ಏನಾದರೂ ಅಡಚಣೆ ಇದೆಯೆ ? ಈ ಸಮಸ್ಯೆಯ ಸ್ವರೂಪವೇನು ?

**ಮುರಳೀಧರ** : ಅಡಚಣೆಯೇನೂ ಅನಿವಾರ್ಯವಲ್ಲ. ಕಳೆದ ಇನ್ನೂರು ವರ್ಷಗಳನ್ನು ಗಮನಿಸಿ. ಕೆಲವಾದರೂ ಮೂಲಭೂತ ಪ್ರಶ್ನೆಗಳಿಗೆ ಸ್ಪಷ್ಟ ಉತ್ತರಗಳು ಸಿಕ್ಕಿವೆಯಲ್ಲವೆ ? ಅವುಗಳ ವಿವರಗಳನ್ನು ಇನ್ನೂ ಶೋಧಿಸಬೇಕಾಗಿದೆಯೆಂಬುದು ನಿಜ. ಉದಾಹರಣೆಗೆ, ವಿಕಾಸ ಪ್ರಕ್ರಿಯೆ. ಎಷ್ಟು ಜೀವವೈವಿಧ್ಯವಿದೆ ನೋಡಿ. ಒಂದು ಇನ್ನೊಂದರಿಂದ ಭಿನ್ನ, ಆದರೆ ಎಲ್ಲವೂ ಜೀವವೇ. ವೈವಿಧ್ಯದಲ್ಲಿ ಒಂದಂಶ ವಿಶೇಷವಾದ್ದು: ಸಸ್ಯಗಳ ಜೆನೆಟಿಕ್ ಸ್ವಭಾವ ವಿವರ ನೋಡಿದರೆ ಬಹುಶಃ ಶೇಕಡ ೯೦ರಷ್ಟು ಸಾಮಾನ್ಯ ಅಥವಾ ಏಕಪ್ರಕಾರವಾದ ಸ್ವಭಾವ ಕಾಣುತ್ತದೆ. ಆದರೆ ಜೀವವೈವಿಧ್ಯ ಮಾತ್ರ ಅಗಾಧವಾದ್ದು. ಕಡಿಮೆ ಪ್ರಮಾಣದ ವ್ಯತ್ಯಾಸಗಳು ಇಷ್ಟೊಂದು ವೈವಿಧ್ಯಕ್ಕೆ ಕಾರಣವಾಗಿರುವುದು ಹೇಗೆ ? ಇದೊಂದು ವಿಸ್ಮಯ. ಎಷ್ಟೊಂದು ತೆರನಾದ ವಂಶಗಳು ! ಅಣು ಅಥವಾ ಕಣದ ಹಂತದಲ್ಲಿ ನೋಡಿದರೆ ಸಾಮಾನ್ಯ ಲಕ್ಷಣಗಳು ಹೇರಳ, ಆದರೆ ಅಭಿವ್ಯಕ್ತಿಯಲ್ಲಿ ಎಷ್ಟು ವ್ಯತ್ಯಾಸ. ಅತಿಸೂಕ್ಷ್ಮ ಸ್ತರದಲ್ಲಿ ಏನೋ ವ್ಯತ್ಯಾಸವಿರಬೇಕಲ್ಲವೆ ?

ಅದಿರಲಿ, ನಿಮ್ಮ ಪ್ರಶ್ನೆಗೆ ಬರೋಣ : ಕಂಪನಿಗಳಿವೆ, ಅವುಗಳ ಮೂಲೋದ್ದೇಶ ಉಪಯುಕ್ತ ಸಾಮಗ್ರಿಗಳ ತಯಾರಿ, ಮಾರಾಟ, ಲಾಭಗಳಿಕೆ. ''ಮೂಲಭೂತ 'ಜಿನೋಮ್'ಗಳಲ್ಲಿ ಸಾಮಾನ್ಯ ಲಕ್ಷಣಗಳಿದ್ದರೂ ಜೀವಿಗಳಲ್ಲಿ ವೈವಿಧ್ಯವಿದೆ'' ಎಂಬ ಜ್ಞಾನವಿದೆ ಎಂದಿಟ್ಟುಕೊಳ್ಳಿ. ಅದರಿಂದ ತಕ್ಷಣದ ಪ್ರಯೋಜನವೇನಿದೆ ? ವೈಜ್ಞಾನಿಕ ಸಂಶೋಧನಾ ಸಂಸ್ಥೆಗಳು ಆ ಜ್ಞಾನದಿಂದ ಹೊಮ್ಮುವ ಮುಂದಿನ ತಾರ್ಕಿಕ ಪ್ರಶ್ನೆಯತ್ತ ಹೊರಳುತ್ತವೆ. ಜ್ಞಾನವನ್ನು ಪ್ರಯೋಜನವಾಗಿ ಮಾರ್ಪಡಿಸುವ ಕೆಲಸ ಅವುಗಳ ಪರಿಧಿಯಲ್ಲಿಲ್ಲ. ಅವು ಜ್ಞಾನಕ್ಷೇತ್ರದ ಮುಂದಿನ ಸವಾಲನ್ನೆದುರಿಸಲು ಮುಂದಾಗುತ್ತವೆ. ಕಂಪನಿಗಳು ಹಾಗೆ ಮಾಡುವುದಿಲ್ಲ. ಅವುಗಳಿಗೆ ''ಪರಿವರ್ತನೆಯ ಸಂಶೋಧನೆ'' (ಟ್ರಾನ್ಸ್‌ಲೇಶನ್ ರಿಸರ್ಚ್)ಯ ಗೀಳು. ಸಂಶೋಧನೆಯು ಪ್ರಾಥಮಿಕ ಮಟ್ಟದ್ದಿರಬಹುದು, ಆದರೂ ಅದೂ ಸವಾಲೇ. ಜ್ಞಾನವನ್ನು ಪ್ರಯೋಜನವಾಗಿ ಪರಿವರ್ತಿಸುವ ಕೆಲಸಕ್ಕೂ ಮೌಲ್ಯವಿದೆ. ಮೂಲಭೂತ ಜ್ಞಾನವು ಅಸಂಪೂರ್ಣವಾಗಿರುವುದರಿಂದ ಇನ್ನಷ್ಟು ಜ್ಞಾನವರ್ಧನೆಗಾಗಿ ಒಂದು ರೀತಿಯ ಸಂಶೋಧನೆ ಅಗತ್ಯ, ನಿಜ; ಆದರೆ ಗಳಿಸಿರುವಷ್ಟು ಜ್ಞಾನವನ್ನು ಸಹ ಉಪಯುಕ್ತವಾಗುವಂತೆ ಪರಿವರ್ತಿಸುತ್ತಿರಬೇಕಲ್ಲವೆ ? ಅದಕ್ಕೆ ಪ್ರಾಯೋಗಿಕ ಅಳವಡಿಕೆ ಅಗತ್ಯ.

ಗಿರಿಜಾ : ಮೂಲಭೂತ ಸಂಶೋಧನೆಗಳು ಮುಂದುವರಿಯುತ್ತಲೇ ಇರಬೇಕು : ಎಲ್ಲದಕ್ಕೂ ನಾಳೆ ಏನೋ ಒಂದು ಪ್ರಯೋಜನ ಕಾದಿರಬಹುದು ಎಂಬ ಕಾರಣದಿಂದಲೂ ಕೂಡ. ಪ್ರಾಣಿವರ್ಗಕ್ಕೆ ಮಾತ್ರವಲ್ಲ, ಇಡಿಯಾಗಿ ನಮ್ಮ ಭೂಮಿಗ್ರಹಕ್ಕೆ. ಅದೆಂತಹ ಪ್ರಯೋಜನವೆಂದು ಈಗಲೇ ತಿಳಿದಿಲ್ಲದಿರಬಹುದು. ಯಾವತ್ತು ಆ ಪ್ರಯೋಜನ ಸಿಗುತ್ತದೆ ಎಂದೂ ಗೊತ್ತಿಲ್ಲದಿರಬಹುದು. ಆದರೆ ಲಭ್ಯವಿರುವ ಜ್ಞಾನವನ್ನು ಪ್ರಯೋಜನವಾಗಿ ಮಾರ್ಪಡಿಸಲು ಅವರೆಗೂ ಕಾಯುತ್ತಾ ಕುಳಿತಿರಬೇಕಾಗಿಲ್ಲ. ಜೈವಿಕ ತಂತ್ರಜ್ಞಾನದ ಕೆಲಸವೇ ಅದು : ಯಾವ ರೋಗಿಯ ಶುಶ್ರೂಷೆ ಸಾಧ್ಯವೋ ಅವನ ಶುಶ್ರೂಷೆ ಮಾಡುವುದು; ಯಾರದ್ದು ಈಗಲೇ ಸಾಧ್ಯವಿಲ್ಲವೋ ಅವರಿಗಾಗಿ ಸಂಶೋಧನೆ ಮುಂದುವರಿಸುವುದು. ಕಟ್ಟಕಡೆಯ ಜ್ಞಾನಾಂಗ ದೊರೆಯುವವರೆಗೂ ವಿಸ್ಮಯ ಹಾಗೇ ಉಳಿದಿರುತ್ತದೆ, ಅದು ಬೇರೆ ವಿಷಯ. ಸದ್ಯದಲ್ಲಿ ಜ್ಞಾನವನ್ನು ಪ್ರಯೋಜನವನ್ನಾಗಿ ಮಾರ್ಪಡಿಸುವಾಗ ಬರುವ ಅಡಚಣೆಗಳೇನು ? ಹಣದ ಪ್ರಶ್ನೆ, ಪೇಟೆಂಟ್‌ಗಳ ಹಾವಳಿ, ಯಾರು ಬಂಡವಾಳ ಹೂಡುತ್ತಾರೆ, ಯಾರಿಗೆ ಲಾಭವಾಗುತ್ತದೆ, ಇತ್ಯಾದಿ. ಅಂದರೆ, ವಿಜ್ಞಾನವು ವ್ಯಾಪಾರ ವಿಷಯಗಳಿಗೆ ತಲೆಹಾಕುವಂತಾಯಿತು. ಯಾವುದೋ ದೊಡ್ಡ ಔಷಧ ತಯಾರಿ ಕಂಪನಿಯ ಆಶ್ರಯವಿಲ್ಲದೆ ಜೈವಿಕ ತಂತ್ರಜ್ಞಾನ ಬೆಳೆಯಲಾರದು. ಕಂಪನಿಯಲ್ಲದಿದ್ದರೆ, ಸರ್ಕಾರ, ಸಮಾಜ, ಹೀಗೆ ಎಲ್ಲಿಂದಲೋ ಅದಕ್ಕೆ ಪುಷ್ಟಿ ಬೇಕು.



ಪೇಟೆಂಟ್‌ಗಳು ಕೆಲವೊಮ್ಮೆ ಸಂಶೋಧನೆಗೆ ಅಡ್ಡಿಯೊಡ್ಡುತ್ತವೆ, ಆದರೇನು ಮಾಡುವುದು, ನಮ್ಮ ವ್ಯವಸ್ಥೆ ಅಂಥದು, ವ್ಯಾಪಾರಿ ಸಂಸ್ಥೆಗಳ ಲಕ್ಷಣವೇ ಅದು.

**ಹೊಸತು** : ನೀವಿಬ್ಬರೂ ನಮ್ಮ ದೇಶದಲ್ಲಿ ಹಾಗೂ ಅಮೆರಿಕಾದಲ್ಲಿ ಸಂಶೋಧನೆ ನಡೆಸಿದ್ದೀರಿ ? ನಿಮ್ಮ ಅನುಭವ ಹೇಗಿದೆ ? ನಮ್ಮಲ್ಲಿ ಅಡಚಣೆಗಳೇನಾದರೂ ಇವೆಯೇ ಮತ್ತು ಇದ್ದರೆ ಅವು ಯಾವುವು ?

**ಮುರಳೀಧರ** : ಅಮೆರಿಕಾದಲ್ಲಿ ಸಂಶೋಧನೆಯು ಅಗಾಧ ಪ್ರಮಾಣದಲ್ಲಿ ನಡೆಯುತ್ತದೆ. ಇಲ್ಲಿ ಎಲ್ಲಾ ಅಗಾಧ, ಎಲ್ಲಾ ಅವಾಂತರ. ಅಗಾಧತೆಯ ನಡುವೆ ಗುಣಾತ್ಮಕತೆಯ ಸಾಧ್ಯತೆ ಹೆಚ್ಚು. ವಿಶ್ವವಿದ್ಯಾನಿಲಯಗಳು, ಸಂಶೋಧನಾ ಸಂಸ್ಥೆಗಳು ಮತ್ತು ಕಂಪನಿಗಳು ಮಹತ್ವದ ಸಂಶೋಧನೆ ನಡೆಸುತ್ತವೆ. ಸಂಶೋಧನೆಗೆ ಅಗತ್ಯವಾದ ಯಂತ್ರಗಳು, ರಾಸಾಯನಿಕಗಳು, ಮುಂತಾದುವೆಲ್ಲಾ ಶೀಘ್ರವಾಗಿ ಮತ್ತು ಸುಲಭವಾಗಿ ಸಿಗುತ್ತವೆ. ಸಂಶೋಧಕರ ನಡುವೆ ಪರಸ್ಪರ ಅನುಭವ ವಿನಿಮಯ ಸಹ ಸುಲಭ. ಸಂಬಳವು ಅಧಿಕ ಪ್ರಮಾಣದ್ದು. ಹೀಗಿರುವಾಗ ಸಂಶೋಧನೆಗೆ ಸನ್ನಿವೇಶದಲ್ಲಿ ಕೊರತೆಯಿಲ್ಲ. ಆದ್ದರಿಂದ ಸಂಶೋಧನೆ ಚೆನ್ನಾಗಿ ನಡೆಯುತ್ತಿದ್ದರೆ



ಅದರಲ್ಲಿ ವಿಶೇಷವೇನೂ ಇಲ್ಲ. ಪ್ರಪಂಚದ ಬೇರೆಬೇರೆ ದೇಶಗಳ ಧೀಮಂತರು ಅಮೆರಿಕಾಕ್ಕೆ ಧಾವಿಸಿಬರುವುದು ಇದ್ದೇ ಇದೆ. ಭಾರತದಲ್ಲಿ ಇದೆಲ್ಲಾ ಆಗದ ಮಾತು. ಆದಾಗ್ಯೂ, ಅಂತರರಾಷ್ಟ್ರೀಯ ಗುಣಮಟ್ಟದ ಹಲವು ಸಂಶೋಧನಾ ಸಂಸ್ಥೆಗಳು ಭಾರತದಲ್ಲಿವೆಯೆಂಬ ಹೆಮ್ಮೆ ಸತಾರ್ಕಿಕ. ಕಡಿಮೆ ಪ್ರಮಾಣದ ಸಂಸ್ಥೆಗಳು ಉನ್ನತ ಮಟ್ಟದ ಸಂಶೋಧನೆ ನಡೆಸುತ್ತಿವೆಯೆಂಬುದು ಸಮಾಧಾನದ ಸಂಗತಿ. ಸುಮಾರು ೧೫-೨೦ ವಿಶ್ವವಿದ್ಯಾನಿಲಯಗಳು, ಅಷ್ಟೇ ಸಂಖ್ಯೆಯ ಸಂಶೋಧನಾ ಸಂಸ್ಥೆಗಳು ಎಲ್ಲಾ ಸೇರಿ ಅಮೆರಿಕಾದ ಸಾವಿರಾರು ಸಂಸ್ಥೆಗಳಿಗೆ ಸಾಟಿಯಾಗಲು ಸಾಧ್ಯವಿಲ್ಲ, ಆದರೆ ಉತ್ತಮ ಗುಣಮಟ್ಟ ಕಾಯ್ದುಕೊಳ್ಳುವುದರಲ್ಲಿ ಅವು ಯಶಸ್ವಿಯಾಗಿವೆ. ಸಂಶೋಧನೆಗೆ ಮೂಲ ಆಕರ, ಯಂತ್ರಗಳು. 'ಇನ್‌ಸ್ಟ್ರುಮೆಂಟೇಶನ್' ಎಂದು ಅದನ್ನು ಕರೆಯುತ್ತೇವೆ. ಜೈವಿಕ ತಂತ್ರಜ್ಞಾನ ಸಂಶೋಧನೆಯಾದರೆ ಆಮೇಲೆ ರಾಸಾಯನಿಕಗಳು (ರೀ-ಏಜೆಂಟ್ಸ್) ಬೇಕು. ಅವನ್ನು ಶೀಘ್ರದಲ್ಲಿ ಪಡೆಯುವಂತಿಲ್ಲದಿರುವುದು ಭಾರತದ ಒಂದು ನ್ಯೂನತೆ. ಜಾಗತೀಕರಣದ ಮಂತ್ರ ಎಷ್ಟು ಗಟ್ಟಿಯಾಗಿ ಹೇಳಿಕೊಂಡರೂ ಸಂಶೋಧನೆಗೆ ಅಗತ್ಯವಾದ ಸಾಮಗ್ರಿಗಳನ್ನು ತರಿಸಿಕೊಳ್ಳುವುದು ಈಗಲೂ ಪ್ರಯಾಸವೇ. ಮೂರು-ನಾಲ್ಕು ತಿಂಗಳು ರೀ-ಏಜೆಂಟ್ಸ್ ದೊರೆಯದಿದ್ದರೆ, ಅಥವಾ ಯಾವುದೋ ನಿರ್ದಿಷ್ಟ ಇನ್‌ಸ್ಟ್ರುಮೆಂಟ್ ಸಿಗದಿದ್ದರೆ ಸಂಶೋಧನೆ ಹೇಗೆ ತಾನೆ ಸುಗಮವಾದೀತು ? ಹಣ ತೆಗೆದಿಡುತ್ತಾರೆ, ಆದರೆ ಅದರಿಂದ ಜಾಗ್ರತೆ ಸಾಮಗ್ರಿಗಳು ಸಿಕ್ಕಿಬಿಡುವುದಿಲ್ಲ. ಅದಕ್ಕೆ ಬೇರೆಯೇ ಸಂಯೋಜನೆ ಬೇಕು. ಅಧಿಕಾರಶಾಹಿ ಮತ್ತು ಕೊಳ್ಳಲು ವಿಧಿಸಲಾಗಿರುವ ವಿಧಾನ, ಇವೆರಡೂ ಭಾರಿ ಗೋಡೆಗಳು. ಭ್ರಷ್ಟಾಚಾರವೂ ಇರಬಹುದೇನೋ ನನಗೆ ಗೊತ್ತಿಲ್ಲ. ಹೊರದೇಶಗಳಿಂದ ಅಗತ್ಯ ಸಾಮಗ್ರಿ (ಕನ್‌ಸ್ಯೂಮಬಲ್ಸ್ ಎನ್ನುತ್ತಾರೆ ಅದನ್ನು) ತರಿಸಿಕೊಳ್ಳಬೇಕಾದ ಅನಿವಾರ್ಯತೆ ಭಾರತಕ್ಕಿದೆ. ಅವುಗಳ ಬೆಲೆ ಸಹಜವಾಗಿಯೇ ಅಮೆರಿಕಾದಲ್ಲಿರುವುದಕ್ಕಿಂತ ಜಾಸ್ತಿಯಾಗುತ್ತದೆ. ಅಲ್ಲೇ ತಯಾರಿಸಿಕೊಳ್ಳಲಿ ಎಂದರೆ ಮಾರುಕಟ್ಟೆ ಅಷ್ಟು ದೊಡ್ಡದಲ್ಲ. ಇವೆಲ್ಲಾ ಸಂಶೋಧನಾ ವ್ಯವಸ್ಥೆಯಲ್ಲಿರುವ ಅಡಚಣೆಗಳು. ಅಮೆರಿಕಾದಲ್ಲಿ ನೀವು ಕೇಳಿದ್ದನ್ನು ಕೂಡಲೆ ಒದಗಿಸುವಂತಹ ವ್ಯಾಪಾರಿ ಸಂಸ್ಥೆಗಳಿವೆ. ಭಾರತದಲ್ಲಿ ಅವು ಇರಲಾರವು, ಏಕೆಂದರೆ ಅವುಗಳಿಗೆ ಬರುವ ಬೇಡಿಕೆ ಅಗಾಧ ಪ್ರಮಾಣದ್ದಲ್ಲ.

ಗಿರಿಜಾ : ಮುರಳಿ ಹೇಳಿದಂತೆ ಭಾರತದಲ್ಲಿ ಸಂಶೋಧನಾ ವ್ಯವಸ್ಥೆ ಅತ್ಯಾಧುನಿಕಗೊಳ್ಳಲು ಈಗಿನ್ನೂ ವಿಶೇಷವಾಗಿ ವಿಕಸಿಸುತ್ತಿದೆ. ಹಿಂದಿನಿಂದ ಬಂದಿರುವುವು ಕೆಲವು ಮಾತ್ರ. ಅಮೆರಿಕಾದಲ್ಲಿ ಇನ್ನೊಂದು ಸೌಲಭ್ಯವಿದೆ. ನಿಮ್ಮ ಕ್ಷೇತ್ರದಲ್ಲಿ ಸಂಶೋಧನೆ ಮಾಡುತ್ತಿರುವ ಹಲವರನ್ನು ನಿಮಿಷಾರ್ಧದಲ್ಲಿ ನೀವು ಸಂಪರ್ಕಿಸಬಹುದು, ಅವರ ಪ್ರಯೋಗಾಲಯಗಳಿಗೆ ತಕ್ಷಣವೇ ಹೋಗಿ ಅವರ ಕೆಲಸ ನೋಡಬಹುದು, ಅವರೊಡನೆ ಚರ್ಚಿಸಬಹುದು. ಭಾರತದಲ್ಲಿ ಇದು ಅಷ್ಟು ಸುಲಭವಲ್ಲ. ವ್ಯವಸ್ಥೆಯನ್ನು ಸುಧಾರಿಸಲು ಈಗಷ್ಟೆ ತೀವ್ರ ಪ್ರಯತ್ನಗಳು ನಡೆಯುತ್ತಿವೆ. ಆದರೆ ಆಡಳಿತಗಾರರ ಮತ್ತು ಆಡಳಿತ ಯಂತ್ರದ ಅಸಡ್ಡೆ, ಅಸಹಕಾರ, ಅವಿವೇಕ, ಇವೆಲ್ಲಾ ಬೃಹತ್ ಬಂಡೆಗಳಂತಿವೆ.

**ಹೊಸತು** : ನಮ್ಮ ದೇಶದ ಸಂಶೋಧನಾ ಸಂಸ್ಥೆಗಳ ಪರಿಚಯ ನಿಮ್ಮಿಬ್ಬರಿಗೂ ಇದೆ. ಅವುಗಳ ಗುಣಾತ್ಮಕ ಕೊಡುಗೆ ಬಗ್ಗೆ ಏನು ಹೇಳುತ್ತೀರಿ ?

**ಮುರಳೀಧರ** : ನಾನು ಬೆಂಗಳೂರಿನ ಎನ್.ಸಿ.ಬಿ.ಎಸ್.ನಲ್ಲಿ ಕೆಲಸ ಮಾಡಿದ್ದೇನೆ. ಅದು ಅದ್ಭುತವಾದ ಸಂಶೋಧನಾ ಕೇಂದ್ರ. ವಿಜ್ಞಾನ ಸಂಸ್ಥೆಯೆಂದರೆ ಹೇಗಿರಬೇಕೆಂಬುದಕ್ಕೆ ಅದು ಮಾದರಿಯಾಗಬಲ್ಲದು. ಎಲ್ಲ ಸಂಸ್ಥೆಗಳೂ ಆ ಮಟ್ಟದವಲ್ಲವೆಂಬುದು ತಿಳಿದದ್ದೇ. ಭಾರತವನ್ನು ಬದಲಿಸುವುದು ಹೇಗೆ ಎಂಬುದೊಂದು ಕಠಿಣ ಪ್ರಶ್ನೆ. ಅದನ್ನು ತೃತೀಯ ಜಗತ್ತಿನ ದೇಶವೆಂದು ಹೇಳಿದರೆ ಏನೋ ಕಳಂಕ ಹೊರಿಸುತ್ತಿದ್ದೇವೆಂದು ಭಾವಿಸಬಾರದು. ಮೂಲತಃ ಅದು ಸಾಮಾಜಿಕ-ಆರ್ಥಿಕ ಸಮಸ್ಯೆಗಳ ಹೊರೆಯನ್ನು ವಿಶದೀಕರಿಸಲು ಬಳಸುವ ಪರಿಭಾಷೆ, ಅಷ್ಟೆ. ಅಂತಹ ದೇಶದಲ್ಲಿ ಎಂತಹ ಸಂಶೋಧನೆಗೆ ಆದ್ಯತೆ ಇರಬೇಕು ? ಜನರ ಅಗತ್ಯಗಳಿಗೆ ಸ್ಪಂದಿಸುವ ಸಂಶೋಧನೆ ಮೊದಲ ಸಾಲಿನಲ್ಲಿರಬೇಕು. ಎಂದೋ, ಯಾರಿಗೋ, ಪ್ರಯೋಜನವಾಗಬಹುದಾದ ಸಂಶೋಧನೆ ಅಥವಾ ಮೂಲಭೂತ ಸಂಶೋಧನೆ ಬೇಡವೆಂದಲ್ಲ. ಆದರೆ ಅದು ಪ್ರಧಾನವಾಗಕೂಡದು. ಅದು ಅಸಮರ್ಥನೀಯ. ಹಾಗಾದರೆ ಸಂಶೋಧನೆಯ ಪುನರ್ವ್ಯವಸ್ಥೆ ಹೇಗೆ? ಒಂದೆರಡು ಮುಖ್ಯ ವಿಷಯಗಳನ್ನು ಗುರುತಿಸಬಹುದು : (ಅ) ಶಿಕ್ಷಣ ಕ್ಷೇತ್ರದಲ್ಲಿ ವಿಜ್ಞಾನದ ಬೋಧನೆಯು ಸಂಶೋಧನೆಗೆ ಪೂರಕವಾಗುವಂತೆ ಪರಿವರ್ತನೆಗೊಳ್ಳಬೇಕು; (ಆ) ಪರಿವರ್ತನಾ ಸಂಶೋಧನೆ (ಆಗಲೆ ಹೇಳಿದ 'ಟ್ರಾನ್ಸ್‌ಲೇಶನ್ ರಿಸರ್ಚ್') ಹೆಚ್ಚಾಗಬೇಕು. ತಂತ್ರಜ್ಞಾನ ಎಲ್ಲೆಲ್ಲೂ ಬೆಳೆದಿದೆ. ಅದನ್ನು ನಾವೇ ಆವಿಷ್ಕಾರ ಮಾಡಬೇಕಾಗಿಲ್ಲ. ಲಭ್ಯವಿರುವ ತಂತ್ರಜ್ಞಾನವನ್ನು ಹೇರಳವಾಗಿ ಬಳಸಿ, ಬೆಳೆಸಿ, ಅಗತ್ಯ ವಸ್ತುಗಳ ಉತ್ಪಾದನೆಯನ್ನು ಹೆಚ್ಚಿಸಬೇಕು. ನಾವು ಸಂಶೋಧನೆ ಮಾಡುವುದು, ಬೇರೆಯವರು ಅದರ ಫಲ ಭೋಗಿಸಲು ಸೂಕ್ತ ತಂತ್ರಜ್ಞಾನ ಬೆಳೆಸಿಕೊಳ್ಳುವುದು ! ಇದು ಭಾರತಕ್ಕೆ ಸೂಕ್ತವಲ್ಲ. ಹೀಗೆ ಮಾಡ ಹೊರಟಾಗ ಸಂಶೋಧನೆಗೆ ಅಗತ್ಯವಾದ ಸಾಮಗ್ರಿಯ (ಕನ್‌ಸ್ಯೂಮಬಲ್ಸ್)

ಸರಬರಾಜು ಇಂದಿಗಿಂತ ಉತ್ತಮ ಮಟ್ಟದಲ್ಲಿರಲು ಸಾಧ್ಯ. ಅದರಿಂದ ಸಂಶೋಧನೆ ಇನ್ನೆರಡು ಮೆಟ್ಟಿಲು ಮೇಲೇರುತ್ತದೆ. ಇಲ್ಲವಾದರೆ ಸಂಶೋಧಕರ ಹತಾಶೆ ಇಮ್ಮಡಿಗೊಳ್ಳುತ್ತಲೇ ಹೋಗುತ್ತದೆ. ಸಮಸ್ಯೆಗೆ ಪರಿಹಾರ ನನ್ನಲ್ಲಿದೆಯೆಂದು ಹೇಳುತ್ತಿದ್ದೇನೆಂದು ತಿಳಿಯಬೇಡಿ. ಒಂದೆರಡು ಹೆಜ್ಜೆಗಳ ಸೂಚನೆ ನನ್ನದು, ಅಷ್ಟೆ. ಒಂದಂತೂ ಅತಿ ಮುಖ್ಯ: ಸ್ನಾತಕೋತ್ತರ ಅಧ್ಯಯನದಲ್ಲಿ ಸಂಶೋಧನೆಯ ಪ್ರಮಾಣ ಗಣನೀಯವಾಗಿ ತೋರಿಬರಬೇಕು, ಕೇವಲ ಪಠ್ಯಪುಸ್ತಕದ ಜ್ಞಾನ ಸಾಲದು, ಪ್ರಯೋಗದ ಅನುಭವ ಬಹುಮುಖ್ಯ.

**ಗಿರಿಜಾ :** ಎನ್.ಸಿ.ಬಿ.ಎಸ್., ಭಾರತೀಯ ವಿಜ್ಞಾನ ಸಂಸ್ಥೆ, ಮುಂತಾದುವುಗಳ ಉನ್ನತ ಗುಣಮಟ್ಟ ಪ್ರಶ್ನಾತೀತ. ಅಲ್ಲಿಯೂ ರೀ-ಏಜೆಂಟ್ಸ್ ಇನ್ನೂ ಸುಲಭವಾಗಿ ಮತ್ತು ಶೀಘ್ರವಾಗಿ ದೊರೆತರೆ ಕೆಲಸ ಇನ್ನೂ ಉತ್ತಮ ಮಟ್ಟಕ್ಕೇರಬಲ್ಲದು. ಆಗ ಸಂಶೋಧನಾ ಪ್ರಕಟಣೆಗಳೂ ಹೆಚ್ಚುತ್ತವೆ, ಉತ್ಪಾದನೆಗೆ ಹೊಸದಿಕ್ಕು ಗೋಚರಿಸುತ್ತದೆ. ಬೇರೆಯವರು ಮಾಡಿರುವುದನ್ನು ಮತ್ತು ಮಾಡುತ್ತಿರುವುದನ್ನು ಮತ್ತೆ ಮಾಡುವುದು ಬೇಡವೇ ಬೇಡವೆಂದಲ್ಲ, ಆದರೆ ಹೊಸ ಸಂಶೋಧನೆಗಳ ಅರಸುವಿಕೆಗೆ ಆದ್ಯತೆ ನೀಡಬೇಕು.

**ಮುರಳೀಧರ :** ಗಿರಿಜಾ ಹೇಳುವುದನ್ನು ಇಂದಿನ ಸನ್ನಿವೇಶದಲ್ಲಿ ಮಾಡುವುದು ಸುಲಭಸಾಧ್ಯವೋ ಅಲ್ಲವೋ ನನಗೆ ಗೊತ್ತಿಲ್ಲ. ನನಗಂತೂ ಒಂದು ಪ್ರಶ್ನೆ ಬಾಧಿಸುತ್ತದೆ : ನಮ್ಮ ದೇಶದಲ್ಲಿ, ನಮಗಿರುವ ಹಣ ಮತ್ತು ಕನಿಷ್ಠ ಸೌಲಭ್ಯಗಳ ಹಿನ್ನೆಲೆಯಲ್ಲಿ, ಪರಮಾಣು ಬಾಂಬ್ ಮಾಡುವುದು ಮುಖ್ಯವೋ ಅಥವಾ ಜನರಿಗೆ ಆಹಾರ ಪೂರೈಕೆ ಮಾಡುವುದು ಮುಖ್ಯವೋ ? ಸಮಾಜದ ಅತಿಸಾಮಾನ್ಯ ಅಗತ್ಯಗಳನ್ನು ಪೂರೈಸುವುದು ಅತ್ಯಗತ್ಯ. ಅದನ್ನು ಮಾಡದ ಸಂಶೋಧನೆಯ ಮೌಲ್ಯ ಪ್ರಶ್ನಾರ್ಹ. ಅಭಿವೃದ್ಧಿಯ ಕೆಲವು ಹಂತಗಳನ್ನು ತಟಾಯಿಸಿ ಒಮ್ಮೆಲೇ ದೊಡ್ಡ ಕಪ್ಪೆಯಂತೆ ಅತಿದೂರಕ್ಕೆ ಹಾರಿಬಿಡುತ್ತೇವೆಂಬ ಭ್ರಮೆ ಅಭಿವೃದ್ಧಿ ಮೀಮಾಂಸೆಯಲ್ಲಿ ಅಸಂಗತವಾದದ್ದು. ತಂತ್ರಜ್ಞಾನವು ಎಲ್ಲ ಸಮಸ್ಯೆಗಳನ್ನೂ ಮೀರಿ ನಿಲ್ಲುವಂಥದೆಂಬ ಕಲ್ಪನೆಯೇ ಸರಿಯಲ್ಲ. ಮಾಧ್ಯಮಗಳು ಅದನ್ನು ಹೇಳುತ್ತಿರುತ್ತವೆ: ಅವಕ್ಕೆ ತಂತ್ರಜ್ಞಾನವೇ ಸರ್ವಸ್ವವೆಂಬ ನೀತಿ ರೋಚಕವಾಗಿ ಕಾಣುತ್ತದೆ. ಆದರೆ ಅದು ಸುಲಭವಲ್ಲ, ಸಂಗತವಲ್ಲ.



**ಹೊಸತು :** ನೀವಿಬ್ಬರೂ ಕಂಪನಿಗಳಲ್ಲಿ ಸಂಶೋಧನೆ ನಡೆಸುತ್ತಿದ್ದೀರಿ. ಹಿಂದೆ ವಿಶ್ವವಿದ್ಯಾನಿಲಯಗಳಲ್ಲೂ ಅದನ್ನು ಮಾಡಿದ್ದೀರಿ. ಇವೆರಡರಲ್ಲಿ ಏನು ವ್ಯತ್ಯಾಸವೆಂದು ಹೇಳುತ್ತೀರಾ ?

**ಮುರಳೀಧರ :** ಕಂಪನಿಯಲ್ಲಿ ವಿಷಯಗಳ ಆಯ್ಕೆಗೆ ಎಲ್ಲೆಗಳಿವೆ. ಕಂಪನಿಯ ಮಾರುಕಟ್ಟೆ ವಿಷಯಗಳನ್ನು ನಿರ್ಧರಿಸುತ್ತದೆ. ಎರಡನೆಯದಾಗಿ, ಕಂಪನಿಯಲ್ಲಿ ಸಂಶೋಧನೆಯ ಪ್ರಕಟಣೆಗೆ ಕಡಿವಾಣವಿರುತ್ತದೆ. ''ಪ್ರಕಟಿಸು, ಇಲ್ಲವೆ ಪಟ್ಟಿಯಿಂದ ನಿರ್ಗಮಿಸು'' ಎನ್ನುವುದು ವಿಶ್ವವಿದ್ಯಾನಿಲಯ ಮತ್ತು ಸಂಶೋಧನಾ ಸಂಸ್ಥೆಗಳ ಸೂತ್ರ. ಅದು ಎನ್.ಸಿ.ಬಿ.ಎಸ್. ಮತ್ತು ಐ.ಐ.ಎಸ್‌ಸಿ.ಗೆ ಸೀಮಿತವಲ್ಲ, ಅಮೆರಿಕಾದಲ್ಲೂ ಅದು ಪ್ರಸ್ತುತ. ಅಲ್ಲಿ ಲಭಿಸಿದ ಜ್ಞಾನವನ್ನು ಪ್ರಯೋಜನ-ಮೌಲ್ಯವಾಗಿ ಪರಿವರ್ತಿಸುವುದು ಕಂಪನಿಗಳ ಕೆಲಸ. ಜೊತೆಗೆ ಅವೂ ಸ್ವಂತದ ಸಂಶೋಧನೆ ಮಾಡಿಕೊಳ್ಳುತ್ತವೆ. ಹಿಂದೆ ನಾನು ಸುವಿಖ್ಯಾತ ಸಾಲ್ಕ್ ಸಂಶೋಧನಾ ಕೇಂದ್ರದಲ್ಲಿ ಹಲವು ವರ್ಷಗಳ ಕಾಲ ಕೆಲಸ ಮಾಡಿದೆ, ಆದರೆ ನನ್ನ ಪ್ರಕಟಣೆಗಳು ಕಡಿಮೆ. ಆದ್ದರಿಂದಲೇ ಕಂಪನಿಗೆ ಬಂದೆನೋ ಏನೋ! ಕಂಪನಿಗಳ ಸಂಶೋಧನಾ ಕ್ಷೇತ್ರ ಹೇಗಿರುತ್ತದೆ ? ಉದಾಹರಣೆಗೆ, ಕ್ಷಯ ರೋಗ. ಅಮೆರಿಕಾದಲ್ಲಿ ನಡೆಯುವ ಅದರ ಬಗೆಗಿನ ಸಂಶೋಧನೆ ಪ್ರಸ್ತುತವಾಗುವುದು ಹೆಚ್ಚಾಗಿ ಆಫ್ರಿಕಾದಲ್ಲಿ. ಸಂಶೋಧನಾ ಸಂಸ್ಥೆಗಳ ಸಂಶೋಧಕರಿಗೆ ಪ್ರಾಯೋಗಿಕ ಮೌಲ್ಯದ ಒತ್ತಡ ಕಡಿಮೆ; ಪ್ರಾಯೋಗಿಕ ಅಗತ್ಯ ಎನ್ನುವುದರಲ್ಲಿ ಅವರ ತೊಡಗುವಿಕೆಯೂ ಕಡಿಮೆ.

**ಗಿರಿಜಾ :** ವಿಶ್ವವಿದ್ಯಾಲಯಗಳು ಮೂಲಭೂತ ಸಂಶೋಧನೆಯಲ್ಲಿ ಹೆಚ್ಚಾಗಿ ತೊಡಗಲು ಸಾಧ್ಯ. ಅದಕ್ಕೆ ಮಾರುಕಟ್ಟೆಯಲ್ಲಿ, ವ್ಯಾಪಾರದಲ್ಲಿ, ಮೌಲ್ಯವುಂಟೇ ಎಂಬ ಪ್ರಶ್ನೆ ಅಲ್ಲಿ ಉದ್ಭವಿಸುವುದಿಲ್ಲ. ಔದ್ಯಮಿಕ ಕಂಪನಿಗಳಲ್ಲಿ ಹಾಗಲ್ಲ. ಅವಕ್ಕೆ ಉತ್ಪನ್ನಗಳು ಮುಖ್ಯ. ವಿಶ್ವವಿದ್ಯಾಲಯಗಳ ಸಂಶೋಧಕರು ಅವರವರ ಕ್ಷೇತ್ರದಲ್ಲಿ ವರ್ಷಗಟ್ಟಲೆ ಕೆಲಸ ಮಾಡುತ್ತಿರಬಹುದು, ಕಂಪನಿಗಳಲ್ಲಿ ಅದು ಸಾಧ್ಯವಿಲ್ಲ. ಎರಡು-ಮೂರು ವರ್ಷಗಳ ಸಂಶೋಧನೆಯಲ್ಲಿ ಯಾವುದೋ ಹೊಸ ಉತ್ಪನ್ನ ಬರುವ ಸೂಚನೆಯಿಲ್ಲದಿದ್ದರೆ ಕಂಪನಿ ಅದನ್ನು ಅಲ್ಲಿಗೇ ಸ್ಥಗಿತಗೊಳಿಸಿಬಿಡುವ ಸಾಧ್ಯತೆ ಇರುತ್ತದೆ. ಬೇರೊಂದು ಕ್ಷೇತ್ರದ ಅಥವಾ ವಿಧಾನದ ಆಯ್ಕೆ ಅನಿವಾರ್ಯ. ವಿಶ್ವವಿದ್ಯಾಲಯಗಳೂ ಕ್ರಮೇಣ ವ್ಯಾಪಾರೀಕರಣದತ್ತ ಹೊರಳುತ್ತಿವೆ. ವಿಜ್ಞಾನಿಗಳೇ ಸ್ವತಃ ಕಂಪನಿಗಳನ್ನು ಸ್ಥಾಪಿಸುವುದೂ ಉಂಟು. ಇಲ್ಲವೆ, ಕಂಪನಿಗಳಿಗೆ ಅವರು ಸಲಹಾಗಾರರಾಗುತ್ತಾರೆ.

**ಮುರಳೀಧರ :** ಜೈವಿಕ ತಂತ್ರಜ್ಞಾನದ ಔದ್ಯಮಿಕ ಖಾಸಗಿ ಕಂಪನಿಗಳಿಗೂ ಔಷಧಿ ತಯಾರಿಸುವ ಕಂಪನಿಗಳಿಗೂ ವ್ಯತ್ಯಾಸವಿದೆ. ಜೈವಿಕ ತಂತ್ರಜ್ಞಾನ ಸಂಶೋಧನೆಗೆ ಈಗ ಹೇರಳವಾಗಿ ಬಂಡವಾಳವನ್ನು ತೊಡಗಿಸುತ್ತಾರೆ. ಸಂಶೋಧನೆಯಲ್ಲಿ ಶೇಕಡ ೯೦ರಷ್ಟು ಅಪ್ರಸ್ತುತವಾಗಿಹೋಗಿ ಶೇಕಡ ೧೦ರಷ್ಟು ಉತ್ಪನ್ನಕ್ಕೆ ಇಂಬು ನೀಡಿದರೂ ಸಾಕು ಎನ್ನುವಂತಾಗಿದೆ. ಆದರೆ ಅಷ್ಟೂ ದೊರೆಯದಿದ್ದರೆ ? ಹಾಕಿದ ಬಂಡವಾಳದ ಗತಿಯೇನು ? ಬಂಡವಾಳದ ಪ್ರಮಾಣವೂ ಜಾಸ್ತಿ. ಅದೇ, ಒಂದು ಮಾಹಿತಿ ತಂತ್ರಜ್ಞಾನ ಕ್ಷೇತ್ರ ನೋಡಿ. ಅಲ್ಲಿ ಹೂಡಿಕೆ ಕಡಿಮೆ, ಏಕೆಂದರೆ ಅದಕ್ಕೆ ಬೇಕಾದ ತಳಮಟ್ಟದ ಸಾಮಗ್ರಿಗಳು ಕಡಿಮೆ. ಅದಕ್ಕೆ ಹೆಚ್ಚಾಗಿ ಬೇಕಾದ್ದು ಪರಿಣತರ ಸಮೂಹ, ಅಷ್ಟೆ. ಆದರಿಂದಾಗಿಯೇ ಭಾರತದಂತಹ ದೇಶಗಳಲ್ಲಿ ಜೈವಿಕ ತಂತ್ರಜ್ಞಾನದ ಸಂಶೋಧನೆಗಳಿಗೆ ಬಂಡವಾಳ ತೊಡಗಿಸುವವರು ವಿರಳ.

**ಹೊಸತು :** ಕುಲಾಂತರಿ ಬೆಳೆ ಮತ್ತು ಆಹಾರದ ಮಾತು ಈಚಿನ ವರ್ಷಗಳಲ್ಲಿ ಜೋರಾಗಿ ಕೇಳಿಬರುತ್ತಿದೆ. ಅದನ್ನು ಕುರಿತಂತೆ ನಿಮ್ಮ ಅಭಿಪ್ರಾಯವೇನು ?

**ಗಿರಿಜಾ :** ಅದರ ಬಗ್ಗೆ ನನಗೆ ಬಹಳ ಅಸಮಾಧಾನವಿದೆ, ವಿರೋಧವಿದೆ. ಅದು ಬಡತನ ಮತ್ತು ಹಸಿವಿಗೆ ಖಂಡಿತ ಪರಿಹಾರವಲ್ಲ. ಪ್ರಕೃತಿಗೂ ಅದರಿಂದ ಧಕ್ಕೆಯುಂಟಾಗುವುದು ಖಚಿತ.

**ಮುರಳೀಧರ :** ಕುಲಾಂತರಿ ಬೆಳೆಗಳ ವಿಸ್ತೃತ ಕೃಷಿಯನ್ನು ತೀವ್ರವಾಗಿ ವಿರೋಧಿಸುತ್ತೇನೆ. ಸಸ್ಯ ಮತ್ತು ಪ್ರಾಣಿಗಳಿಗೆ ಸಂಬಂಧಿಸಿದಂತೆ ಪ್ರಯೋಗಶಾಲೆಯಲ್ಲಿ ಕುಲಾಂತರಿಯ ಅಧ್ಯಯನ ಮಾಡಿದರೆ ಅಭ್ಯಂತರವಿಲ್ಲ. ಆದರೆ ಹೊರಗಣ ಪ್ರಕೃತಿಯ ನಡುವೆ ಅದು ಸಲ್ಲ, ಅದು ಅಪಾಯಕಾರಿ. ಬಡತನ ಮತ್ತು ಹಸಿವು ಸಾಮಾಜಿಕ-ಆರ್ಥಿಕ ವ್ಯವಸ್ಥೆಯ ಒಂದು ಗಾಢವಾದ ಸಮಸ್ಯೆ. ಅದಕ್ಕೆ ಕುಲಾಂತರಿ ಬೆಳೆಯು ಪರಿಹಾರವೆಂದು ಹೇಳುವಾಗ ಜನರೆಲ್ಲಾ ಮೂರ್ಖರೆಂಬ ಭಾವನೆ ಕೆಲಸಮಾಡುತ್ತದೆ. ಉತ್ಪಾದನೆಯ ಪರಿಮಾಣ ಹೆಚ್ಚುತ್ತದೆಂಬುದು ಒಂದು ಮಿಥ್ಯೆ. ಹೆಚ್ಚಿದರೂ ಅದನ್ನು

ಕೊಳ್ಳಲು ಜನರಿಗೆ ಹಣ ಬೇಕಲ್ಲ! ಉದ್ಯೋಗವಿಲ್ಲದ ಬಡಜನತೆಗೆ ಈಗಲೂ ಕೊಳ್ಳಲಾಗುತ್ತಿಲ್ಲ ಅಲ್ಲವೆ ? ಆಹಾರವನ್ನು ಮಾರುಕಟ್ಟೆಗೆ ಈಗಿಗಿಂತ ಹತ್ತುಪಟ್ಟು ಹೆಚ್ಚು ತುಂಬಿಸುತ್ತಾರೇನು ? ಆಗಲೂ ಕೊಳ್ಳುವ ಸಾಮರ್ಥ್ಯ ಬೇಕಲ್ಲ! ಆದ್ದರಿಂದ ಕುಲಾಂತರಿಯ ಪ್ರಶ್ನೆ ಅಷ್ಟು ಪ್ರಮುಖವಲ್ಲ; ಪ್ರಮುಖವಾದ್ದು ಆರ್ಥಿಕ ವ್ಯವಸ್ಥೆಯ ಸುಧಾರಣೆ. ಬಡತನದ ನಿವಾರಣೆಗೆ ನಿರ್ದಿಷ್ಟ ಯೋಜನೆಯನ್ನು ಜಾರಿಗೊಳಿಸದೆ ಅನಿಶ್ಚಿತವಾದ ಬಾಹಿರ ಪರಿಹಾರವೊಂದರ ಬಾಲ ಹಿಡಿಯುವುದು ಬೇಡ. ಅದರ ಪರಿಣಾಮವೇನಾಗಬಹುದೆಂದು ಯೋಚಿಸಿದ್ದಾರೆಯೆ? ಒಂದು ಸೂಚಕ ನಿದರ್ಶನ ನೋಡಿ: ಆಸ್ಟ್ರೇಲಿಯಾದಲ್ಲಿ ಅಲ್ಲಿಲ್ಲದಿದ್ದ ಪ್ರಾಣಿಗಳನ್ನು ತಂದು ಬೆಳೆಸಹೊರಟರು. ಅವು ಅಲ್ಲಿಯ ವಾತಾವರಣಕ್ಕೆ ಹೊಂದಿಕೊಳ್ಳಲಿಲ್ಲ; ಮೊಲ, ಬಸವನ ಹುಳು, ಮುಂತಾದುವು. ದೊಡ್ಡ ಅವಾಂತರ ಉಂಟಾಯಿತು. ಅದನ್ನೆದುರಿಸಲು ಇನ್ನಷ್ಟು ಬೇರೆ ಪ್ರಾಣಿಗಳನ್ನು ತಂದರು. ಇದರಿಂದ ಸಮಸ್ಯೆ ಪರಿಹಾರವಾಗಲಿಲ್ಲ. ಈ ಕೃತ್ಯಗಳು ಮುಗ್ಗಟ್ಟನ್ನು ಇನ್ನೂ ವಿಶಾಲಗೊಳಿಸುತ್ತವೆ, ಅಷ್ಟೆ. ಪ್ರಕೃತಿಯ ಸಮತೋಲನವನ್ನು ಓಗ್ಗಾಮುಗ್ಗ ಜಗ್ಗಿಸುವುದು ಬೇಜವಾಬ್ದಾರಿತನ.

**ಹೊಸತು :** ಕುಲಾಂತರಿ ತಳಿಗಳನ್ನು ವಿರೋಧಿಸುವವರನ್ನು ಕೆಲ ವಿಜ್ಞಾನಿಗಳು ಬಹಳ ಮೂದಲಿಸುತ್ತಾರೆ. ವಿಜ್ಞಾನಿಗಳ ಶ್ರಮಕ್ಕೆ ಅಡ್ಡಿಯುಂಟುಮಾಡಿ ಅಭಿವೃದ್ಧಿಗೆ ಕಡಿವಾಣ ಹಾಕುತ್ತಿದ್ದಾರೆಂಬುದು ಅವರ ಮೇಲಿನ ಆಪಾದನೆ. ನೂರಾರು ತಳಿಗಳ ವೈವಿಧ್ಯದಿಂದ ಏನು ಸಾಧಿಸುತ್ತೀರಿ, ಒಂದೇ ತಳಿಯಿಂದ ಅಮೋಘ ಉತ್ಪಾದನೆ ಮಾಡಬಹುದಲ್ಲಾ ಎಂಬುದು ಅವರ ವಾದ.

**ತುಂಬ ಕಷ್ಟ ಕಣೊ ಮನುಷ್ಯನಾಗುವುದು**

ತಂಬ ಕಷ್ಟ
ಬೆಳಗಿನ ಥಂಡಿ
ಬೀದಿ ಚಾದರು
ಘಮ್ಮೆನ್ನುವ ಕಂಡವರ ಮನೆಯ
ಕಿಡಕಿ ವಗ್ಗರಣೆ ವಾಸನೆ
ಮಲಗಿದ್ದೇ ರಾತ್ರಿ
ಎದ್ದದ್ದೇ ಹಗಲು
ತೂತು ಬಿದ್ದ ಪಾಕೇಟಿನಲಿ
ಉದುರಿ ಬಿದ್ದ ಚಿಲ್ಲರೆ ಚಿತ್ರಗಳು.

ಚೌಕಟ್ಟಿಲ್ಲದ ಆಕೃತಿಯೇ ಚಂದ
ರೇಖೆ ಬಣ್ಣ ವಿಸ್ತಾರ
ಮೂಲೆ ಮುಟ್ಟದ ಗೆರೆಗೆ
ಹರಿದಾಡುವ ಗುಣ.

ತುಳಿದ ಮುಳ್ಳು ಲೆಕ್ಕ ಇಟ್ಟಿಲ್ಲ ನಾನು
ಕತ್ತು ಹಿಚುಕಿ ಹಿಡಿದರೂ
ಮಾತುಗಳು ಉಳಿದುಕೊಂಡಿವೆ.
ನನ್ನ ಪಾದಗಳು ಹತ್ತು ಹದಿನೆಂಟು
ಬೀದಿಗಳಿಗೆ ಹಣೆ ಹಚ್ಚಿವೆ;
ಅಲ್ಲಿ ಅರಳಿದ ಹೂವು
ಇಲ್ಲಿ ನೆತ್ತರು ಕಲೆ
ಪಾತ ಮಾಡಿದ್ದು ತಲೆ ಬೋಳಿಸಿದ್ದು
ಅತ್ತದ್ದು , ತುಂಬ ಹಿಂದೆ
ಕದ್ದು ಕೇರಿ ದುರಗವ್ವನ
ಎಡೆ ತಿಂದದ್ದು ;
ಈಗ ಈ ನದಿಯಲ್ಲಿ
ತುಂಬ ನೀರು ಹರಿದಿದೆ ಬಿಡು
ಜೋಗಿಯ ಹಾಗೆ
ಸಾಕ್ಷಾತ್ ದೇವದಾಸನೇ ಆಗಿ
ಕೆಲವು ಸಲ ಸೋಗು ಹಾಕಿ
ಸಂತನ ಹಾಗೆ ಅಲೆದಲೆದು
ಊರೆಲ್ಲ ತಿರುಗಿ ಉಸಿರಗರೆದು
ಬಂದು ನಿಂತಿದ್ದೇನೆ ಇಲ್ಲಿ
ನೋಡು ಅಲ್ಲಿ ನಗುತ್ತಿದ್ದಾನೆ ಚಲಂ.

ಉರುಳಿದ ಉಸುಕಿಗೆ
ನದಿಯ ಹಂಗಿದೆ ಕಣೋ
ನದಿಗೆ ನೆಲದ ಹಂಗಿದೆ
ಎಷ್ಟು ಹರಿದರೂ ನಾವು
ನದಿಯಾಗುವುದಿಲ್ಲವಲ್ಲಾ!
ಇದು ಜಮಾನಾ...
ಕಡ್ಡಿಪೆಟ್ಟಿಗೆಯ ಹಾಗೆ
ಒಂದಕ್ಕಿಂತ ಇನ್ನೊಂದು
ಅಂದಚೆಂದದ ಮನೆಗೆ
ಶಿಲಾಫಲಕದ ಗುರುತು
ಮಕ್ಕಳ ಹೆಸರು
ಹುದ್ದೆಯ ಹೆಸರು
ಕವಿ ಕಥೆಗಾರ ಕಾದಂಬರಿಕಾರ
ಪೋಜು ಭಾರಿ ಪೋಜು
ತುಳಿದ ದಾರಿಗಳು
ಕಟ್ಟಿಕೊಂಡ ಹಗೆತನಗಳು
ಲೆಕ್ಕವಿಲ್ಲದಷ್ಟು ಹೆಜ್ಜೆಗಳು
ಎಷ್ಟೊಂದು ಸಾರಿ ತಿಕ್ಕಿ ತಿಕ್ಕಿ
ತೊಳೆದರೂ ಉಳಿದೇ ಉಳಿವ
ಎದೆಯ ನಂಜು
ಬಿಟ್ಟಿಲ್ಲ ನಾನು ಬೇತಾಳನ ಹಾಗೆ
ಬೆನ್ನಟ್ಟಿ ಹೊರಟ ನನಗೆ
ಮನುಷ್ಯನಾಗುವ ಹಠ
ಆದರೆ ತುಂಬ ಕಷ್ಟ ಕಣೋ
ಮನುಷ್ಯನಾಗುವುದು
ತುಂಬ ಕಷ್ಟ...??



ಬಸವರಾಜ ಹೂಗಾರ
ಸಹಾಯಕ ನಿರ್ದೇಶಕ, ಕನ್ನಡ ಸಂಸ್ಕೃತಿ ಇಲಾಖೆ
೧೯ ನೇ ಸೆಕ್ಟರ್, ೬ನೇ ರಸ್ತೆ, ಶಾಲಾಭವನ, ನವನಗರ ಬಾಗಲಕೋಟೆ ಜಿ. - ೫೮೭ ೧೦೨

**ಮುರಳೀಧರ :** ಜೀವವೈವಿಧ್ಯ ಮತ್ತು ಮನುಕುಲದ ಅಗತ್ಯ, ಇವೆರಡರ ನಡುವೆ ಸಂಘರ್ಷ ಇದೆಯೆ ? ನನಗೆ ಸರಿಯಾಗಿ ಗೊತ್ತಿಲ್ಲ, ಆ ಬಗ್ಗೆ ಹೆಚ್ಚು ಆಲೋಚನೆ ಮಾಡಿಲ್ಲ. ಮೊದಲಿಗೆ ನನಗನಿಸುವುದು ವೈವಿಧ್ಯ ಒಳ್ಳೆಯದು ಎಂದು. ಅದಿಲ್ಲದಿದ್ದರೆ ಏನಾಗಬಹುದು ? ಯಾವುದೋ ಕಾರಣದಿಂದ ಹಠಾತ್ತನೆ ಸನ್ನಿವೇಶ ಬದಲಾದರೆ ತಿಪ್ಪರಲಾಗ ಹಾಕುತ್ತೀರಾ ? ಆ ಸಂದರ್ಭವನ್ನು ಹೇಗೆ ಎದುರಿಸಲು ಸಾಧ್ಯ ? ಈ ಬಗ್ಗೆ ವಂದನಾ ಶಿವ ಬರೆದಿರುವುದನ್ನು ಗಮನಿಸಿ. ಹೋಗಲಿ, ಕುಲಾಂತರಿಯ ಪರವಾಗಿ ಇರುವವರು ಹೇಳುವುದೇನು ? ಯಾವುದೋ ಒಂದು "ಸುವರ್ಣ ಛತ್ರ"ದ ತಳಿ ಇದ್ದರೆ ಸಾಕು, ಎಲ್ಲ ಸಮಸ್ಯೆಗಳೂ ದೂರವಾಗುತ್ತವೆ, ಎಂದು. ಇದರ ಮರ್ಮವೇನು ? ಸ್ಥಾಪಿತ ಹಿತಾಸಕ್ತಿಗಳು ಅದೊಂದನ್ನು ನಿಯಂತ್ರಣಕ್ಕೆ ತಂದುಕೊಂಡರೆ ಸಾಕು, ಇಡೀ ಸರಬರಾಜು ವ್ಯವಸ್ಥೆಯನ್ನು ತಲೆಕೆಳಗು ಮಾಡಬಹುದು. ನೀವು ಅವರಿಗೆ ಅಧೀನರಾಗುತ್ತೀರಿ. ಒಂದು ಬಹುರಾಷ್ಟ್ರೀಯ ಕಂಪನಿ ಅದರ ಯಜಮಾನಿಕೆ ಹೊಂದಿದರೆ ಸಾಕು, ಬೇರೆಲ್ಲ ತಳಿಗಳನ್ನು ಹೊಸಕಿಹಾಕಿ ನಿಮಗೆ ಉರುಲು ಹಾಕಬಹುದು. ಮಾರುಕಟ್ಟೆಯಲ್ಲಿ ಆ ಕಂಪನಿ ವಿಜೃಂಭಿಸುತ್ತದೆ, ಅಪಾರ ಲಾಭ ಗಳಿಸುತ್ತದೆ, ಆದರೆ ಜನರ ಕುತ್ತಿಗೆಗೆ ಉರುಲು, ಅಷ್ಟೆ. ಸಾವಿರಾರು ತಳಿಗಳು ಅಗತ್ಯವೇ, ಇಲ್ಲವೇ, ಅದನ್ನು ಬೇಕಾದರೆ ಚರ್ಚಿಸೋಣ; ಆದರೆ ಹಲವು ತಳಿಗಳಿರಬೇಕೆಂಬುದು ನಿರ್ವಿವಾದ. ನಮ್ಮ ದೇಶ ಇದನ್ನು ಗಂಭೀರವಾಗಿ ಪರಿಗಣಿಸಬೇಕು. ಇನ್ನೊಂದು ವಿಷಯ ಇದೆ: ಒಂದೇ ತಳಿಯ ಕೃಷಿ ಪ್ರಕೃತಿ ವ್ಯವಸ್ಥೆಗೆ ಮತ್ತು ಮಾನವನಿಗೆ ಮಾರಕ. ಸಸ್ಯಾಹಾರಿಗಳಿರುವ ದೇಶದಲ್ಲಿ ಪ್ರೋಟೀನ್ ಸರಬರಾಜು ತೃಪ್ತಿಕರವಾಗಿರಬೇಕಾದರೆ ವಿವಿಧ ಆಹಾರೋತ್ಪನ್ನಗಳು ಬೇಕು. ಏಕತಳಿ ಕೃಷಿ ಅದಕ್ಕೆ ಸಹಕಾರಿಯಲ್ಲ.

**ಗಿರಿಜಾ :** ಈ ಸಂಬಂಧದಲ್ಲಿ ನನಗೆ ಹೊಳೆಯುವುದಿದು : ಒಂದೇ ತಳಿಯಿದ್ದಾಗ ಅದನ್ನು ನಿರ್ನಾಮಗೊಳಿಸಲು ಒಂದು ಪ್ಯಾಥೊಜೆನ್ ಸಾಕು. ಇಡೀ ಬೆಳೆ ನಾಶವಾಗಿ ಹೋಗುತ್ತದೆ. ಆಗೇನು ಮಾಡಬೇಕು ? ಪ್ರಕೃತಿ ಮತ್ತು ಮಾನವನ ನಡುವಣ ಸೆಣಸಾಟದಲ್ಲಿ ಮಾನವ ಜೋಪಾನದಿಂದ ವರ್ತಿಸಬೇಕು. ಜೀವವೈವಿಧ್ಯ ಬಂದಿರುವುದೇ ವಿನಾಶದ ಸಾಧ್ಯತೆಯನ್ನು ಪರಿಣಾಮಕಾರಿಯಾಗಿ ಎದುರಿಸಲು. ಜೀವವಿನಾಶಕ್ಕೆ ಪ್ರಕೃತಿಯಲ್ಲಿ ಬೇಕಾದಷ್ಟು ಬ್ಯಾಕ್ಟೀರಿಯಗಳು ಹೊಂಚುಹಾಕುತ್ತಿರುತ್ತವೆ. ಒಂದು ಸಸಿಗೆ ವೈರಸ್ ಆಕ್ರಮಣ ನಡೆಸಿದರೆ ಅಲ್ಲೊಂದು ಬ್ಯಾಕ್ಟೀರಿಯ ಇದೆಯೆಂದರ್ಥ. ಅದೇ ಪ್ಯಾಥೊಜೆನ್. ಅದರಿಂದ ಪಾರಾಗಲು ಸಸಿಗೆ ಬೇರೆಬೇರೆ ಸಾಧ್ಯತೆಗಳಿರಬೇಕು, ಹಾದಿಗಳಿರಬೇಕು. ತಳಿಗಳ ವೈವಿಧ್ಯ ಅದಕ್ಕೊಂದು ಉತ್ತರ. ಇರುವ ಮೊಟ್ಟೆಗಳನ್ನೆಲ್ಲಾ ಒಂದೇ ಬುಟ್ಟಿಗೆ ಹಾಕಿ, ಆಕಸ್ಮಾತ್ತಾಗಿ ಅದು ಧೊಪ್ಪನೆ ಕೆಳಗೆ ಬಿದ್ದಾಗಿನ ಸ್ಥಿತಿಯೇ ಏಕತಳಿ ಕೃಷಿಯ ಪರಿಣಾಮ.

**ಮುರಳೀಧರ :** ಕುಲಾಂತರಿ ಹತ್ತಿ ಬೆಳೆಯ ಬಗ್ಗೆ ಡಂಗೂರ ಸಾರಿದ್ದಾರೆ. ಒಂದು ನಿರ್ದಿಷ್ಟ ಪ್ರೋಟೀನನ್ನು ಬೀಜಕ್ಕೆ ಸೇರಿಸಿದಾಗ ಹತ್ತಿಯ ಗಿಡವನ್ನು ಹಾಳುಮಾಡುವ ಬಾಲ್‌ವರ್ಮ್ ನಿಶ್ಶೇಷವಾಗುತ್ತದೆಂಬುದು ಇದರ ಸಾರಾಂಶ. ಪದೇಪದೇ ಹೀಗೆ ಮಾಡುತ್ತಾ ಬಂದಾಗ ಸಸಿಯ ನಿರೋಧಕ ಶಕ್ತಿ ಕುಗ್ಗುತ್ತದೆ. ಆಗ ಬೇರೊಂದು ತಂತ್ರ ! ಬಾಲ್‌ವರ್ಮ್ ಹೋಗಿ ಫುಟ್‌ಬಾಲ್ ಗಾತ್ರದ ವರ್ಮ್ ಬಂದಂತಾಯಿತು. ಪ್ಯಾಥೊಜೆನ್‌ಗಳನ್ನು ನಿಯಂತ್ರಿಸಿದ ತರುವಾಯದಲ್ಲಿ ಬೇರೆ ಬ್ಯಾಕ್ಟೀರಿಯಗಳನ್ನು ಹತ್ತಿಕ್ಕಲು ಆ್ಯಂಟಿಬಯಟಿಕ್ ಬಳಸುತ್ತಾರೆ. ಇದೂ ಹಾಗೆಯೇ. ಒಮ್ಮೆ ನಿರೋಧಕ ಶಕ್ತಿ ಕುಗ್ಗಿದರೆ ಪ್ಯಾಥೊಜೆನ್‌ಗಳು ವಿಕಸಿಸಲು ಅಡ್ಡಿ ಎಲ್ಲಿಯದು !

**ಹೊಸತು :** ಅಂದರೆ ಕುಲಾಂತರಿ ಹತ್ತಿ ಬೆಳೆ ಸಫಲವಾಗಿಲ್ಲವೆನ್ನುತ್ತೀರಾ ?

**ಮುರಳೀಧರ :** ಪರಸ್ಪರ ವಿರೋಧಿ ವರದಿಗಳನ್ನು ನೋಡಿದ್ದೇನೆ. ಉತ್ಪಾದನೆ ಹೆಚ್ಚಿತೆಂದು ಹೇಳುವಂತೆ ಅದು ಕುಗ್ಗಿತೆಂದು ಹೇಳುವ ವರದಿಗಳೂ ಇವೆ. ನಿಜಾಂಶ ನನಗೆ ಗೊತ್ತಿಲ್ಲ. ಒಂದು ವಿಷಯ ಗೊತ್ತು, ಕುಲಾಂತರಿ ಹತ್ತಿ ಬೆಳೆಯು ರೈತರಿಗೆ ಹಿತ ತಂದಿಲ್ಲ, ಸಮಾಜಕ್ಕೆ ಒಳಿತು ನೀಡಿಲ್ಲ, ಹತ್ತಿಬಟ್ಟೆಯ ಬೆಲೆಗಳು ಕಡಿಮೆಯಾದಂತೆ ತೋರುತ್ತಿಲ್ಲ. ಕೆಲವು ಶ್ರೀಮಂತ ರೈತರಿಗೆ ಲಾಭವಾಗಿದೆಯೆನ್ನುತ್ತಾರೆ. ಕುಲಾಂತರಿ ಬೆಳೆಗೆ ಬಂಡವಾಳದ ಹೂಡಿಕೆಯು ಹೆಚ್ಚಿನ ಪ್ರಮಾಣದ್ದಾಗಿರುತ್ತದೆ. ಶ್ರೀಮಂತ ರೈತರಲ್ಲದೆ ಬೇರಿನ್ನಾರು ಅದನ್ನು ಮಾಡಿಯಾರು ! ಮಾಡಹೋಗಿ ಕೆಲವರು ಆತ್ಮಹತ್ಯೆಗೆ ಶರಣಾಗಿದ್ದಾರೆಂಬ ವರದಿಗಳನ್ನು ಕಂಡು ರೋಸಿಹೋಗಿದ್ದೇನೆ.



...ಮುಂದಿನ 'ಸಚಿವ ಸಂಪುಟ ಸಭೆ'ಯನ್ನು 'ಕೇಶವ ಕೃಪ'ದ ಬದಲು ಆ ಮಠದಲ್ಲಿ ಮಾಡಿದ್ರೆ ಹ್ಯಾಗೇ...?!

**ಗಿರಿಜಾ :** ಇದರಲ್ಲಿ ದೀರ್ಘಾವಧಿಯ ಪರಿಣಾಮ ಮತ್ತು ಅಲ್ಪಾವಧಿಯ ಲಾಭ, ಇವುಗಳನ್ನು ಗಣನೆಗೆ ತೆಗೆದುಕೊಳ್ಳಬೇಕು. ಕುಲಾಂತರಿ ಹತ್ತಿ ಬೆಳೆ ಅವತರಿಸಿ ಹತ್ತು ವರ್ಷಗಳು ಸಂದಿವೆ, ಅಷ್ಟೆ. ಜೀವವಿಕಾಸ ನಡೆದಿರುವುದು ಸಾವಿರಾರು ವರ್ಷಗಳ ಅವಧಿಯಲ್ಲಿ. ವಿಕಾಸವು ಕೊನೆಯಾಗಿಲ್ಲ. ಕುಲಾಂತರಿಯು ಕುಲದ ನಾಶ ಮಾಡುವುದಿಲ್ಲವೆಂದು ಖಾತ್ರಿಯಾಗಿದೆಯೆ ?

**ಹೊಸತು :** ಹಾಗಿದ್ದರೆ ವಿಜ್ಞಾನಿಗಳ ಒಂದು ಬಣಕ್ಕೆ ಈ ತಿಳುವಳಿಕೆ ಇಲ್ಲವೆನ್ನುತ್ತೀರಾ ?

**ಮುರಳೀಧರ :** ಈಗ ನಮ್ಮನ್ನು ಬೆಂಬಲಿಸದಿದ್ದರೆ ನಿಮಗೆ ಉಳಿಗಾಲವಿಲ್ಲವೆಂದು ಅಬ್ಬರಿಸುವ ವಿಜ್ಞಾನಿಗಳು ಹಾಗೇಕೆ ಹೇಳುತ್ತಾರೆ ? ಕುಲಾಂತರಿಯ ಬೆಳವಣಿಗೆಯಾದ ನಂತರ ವಿಜ್ಞಾನವು ವಿರಮಿಸುತ್ತದೆಯೆ ? ಇನ್ನೂ ಎಷ್ಟೋ ಹೊಸ ಆವಿಷ್ಕಾರಗಳಾಗುವುದಿದೆ, ಸಂಶಯ ಬೇಡ. ಮುಖ್ಯವಾಗಿ, "ಮಾನವಕುಲದ ಹಿತಕ್ಕೆ" ಎಂಬ ಸೂತ್ರ ವಿಜ್ಞಾನಕ್ಕೆ ಹತ್ತಿರವಾದ್ದು. ಹಾನಿಕಾರಕವಾದ ಅನೇಕ ಸಂಗತಿಗಳು ಈಗಾಗಲೆ ಇವೆ, ಅದಕ್ಕೆ ಇನ್ನಷ್ಟು ಸೇರಿಸಬೇಕೆ ? ಪ್ರಕೃತಿ ಸಮತೋಲನ ವ್ಯವಸ್ಥೆಗೆ ಮಾರಕವಾಗುವಂಥದೆಲ್ಲಾ ವರ್ಜ್ಯ ಎಂಬ ನೀತಿ ಸರಿಯಾದ್ದು. ರಾಸಾಯನಿಕ ಉದ್ಯಮವು ಪ್ರಕೃತಿಯ ಧ್ವಂಸ ಮಾಡುವಂತಹ ಪ್ರಕ್ರಿಯೆಯಲ್ಲಿ ಬಹುವಾಗಿ ಪಾಲ್ಗೊಂಡಿದೆ. ಉದ್ಯಮವು ಮಾನವನಿಗೆ ಸಹಾಯ ಮಾಡಿದೆ, ಆದರೆ ಪ್ರಕೃತಿಯನ್ನು ಹಾನಿಗೊಳಿಸಿದೆ ಎಂಬುದೂ ನಿಜ. ಅಂತಹ ಬೆಳವಣಿಗೆ ಕುಲಾಂತರಿ ಸಂದರ್ಭದಲ್ಲಿ ಆಗಕೂಡದು.

**ಗಿರಿಜಾ :** ವಿಜ್ಞಾನಿಯು ಸತ್ಯಾನ್ವೇಷಣೆಯಲ್ಲಿ ಆಸಕ್ತ. ಆದರೆ ಅದನ್ನು ಕೈಗೊಂಡಾಗ ಎಲ್ಲ ಪ್ರಶ್ನೆಗಳ ವಿವಿಧ ಮಗ್ಗುಲುಗಳನ್ನು ತೂಗಿನೋಡಬೇಕು. ಮೊಂಡುತನ ವಿಜ್ಞಾನದ ಲಕ್ಷಣವಲ್ಲ. ವಿಜ್ಞಾನಕ್ಕೆ ಸಾಮಾಜಿಕ ಜವಾಬ್ದಾರಿಯಿದೆ. ಯಾವುದು ಹಿತ ಮತ್ತು ಯಾವುದು ಅಪಾಯ ಎಂಬ ಅರಿವು ವಿಜ್ಞಾನಿಗೆ ಅತ್ಯವಶ್ಯಕ. ಪ್ರಕೃತಿ ಮತ್ತು ಮಾನವ, ವಿಜ್ಞಾನಿಗೆ ಆಟಿಕೆಯ ಸಾಮಗ್ರಿಯಲ್ಲ. ನೈಜ ಜ್ಞಾನ ಮತ್ತು ಹಿತದ ಅರಿವು ಒಂದಕ್ಕೊಂದು ವಿರೋಧಿ ಅಂಶಗಳಾಗಬೇಕಿಲ್ಲ. ಮಾನವಕುಲದ ಹಿತವನ್ನು ಅಲಕ್ಷಿಸುವಂತಹ ವಿಜ್ಞಾನ ಸರ್ವಥಾ ವರ್ಜ್ಯ.

**ಮುರಳೀಧರ :** ಏನನ್ನೋ ಕಂಡುಹಿಡಿದು, ಆಮೇಲೆ ಅದರ ನಿಯಂತ್ರಣ ಅಸಾಧ್ಯವಾದರೆ, ವಿಜ್ಞಾನಿಗೆ ಆತಂಕ ಮತ್ತು ಹತಾಶೆ ಸಹಜ. ಪರಮಾಣು ಶಸ್ತ್ರಾಸ್ತ್ರಗಳ ಉದಾಹರಣೆ ನಮ್ಮೆದುರಿಗಿದೆ. ವಿಜ್ಞಾನಿಗಳಲ್ಲಿ ಆ ಪ್ರಶ್ನೆ ಗಾಢವಾಗಿತ್ತು, ಆದರೆ ಅವರ ಕೈತಪ್ಪಿಹೋಗಿ ಕೈ ಕೈ ಹಿಸುಕಿಕೊಳ್ಳುವಂತಾಯಿತು. ವಿಮುಖತೆಯಿಂದ "ಸತ್ಯದ ಅರಸುವಿಕೆಯ ಹಾದಿಯಲ್ಲಿ ಹೋದೆ, ಮುಂದಿನದು ನನಗೆ ಸಂಬಂಧಿಸಿಲ್ಲ" ಎನ್ನುವುದು ಮಾನವನಿಗೆ, ವಿಜ್ಞಾನಿಗೆ, ತಕ್ಕುದಲ್ಲ.

**ಹೊಸತು :** ಈ ಮಧ್ಯೆ ಸ್ಟೆಮ್ ಸೆಲ್ಸ್ ಸಂಶೋಧನೆಗಿರುವ ವಿರೋಧದ ಬಗ್ಗೆ ನಿಮ್ಮ ಅನಿಸಿಕೆ ಏನು ?

**ಮುರಳೀಧರ :** ಅದು ಮಹತ್ತರ ಸಮಸ್ಯೆಯಲ್ಲ. ಆ ಸಂಶೋಧನೆಯ ಸಾರವೇನು ? ಜೈವಿಕ ಘಟಕಗಳು ಹೇಗೆ ಕಾರ್ಯ ನಿರ್ವಹಿಸುತ್ತವೆ, ಎಂಬುದು. ಮಾನವನಿಗೆ ಮತ್ತು ಇತರ ಜೀವಿಗಳಿಗೆ ಅದು ಸರಿಪ್ರಯೋಗದಿಂದ ಅಸಾಧಾರಣವಾಗಿ ಉಪಯುಕ್ತವಾಗಬಲ್ಲದು. ಸಮಸ್ಯೆ ಉದ್ಭವಿಸಿದ್ದು ಭ್ರೂಣರೂಪದ ಸ್ಟೆಮ್ ಸೆಲ್‌ಗಳ ಸಂಶೋಧನೆ ಬಗ್ಗೆ. ಮಾನವ ಭ್ರೂಣದ ಹಿನ್ನೆಲೆಯಲ್ಲಿ ನೈತಿಕ ಪ್ರಶ್ನೆ ಬಂದಿದೆ. ಕ್ರೈಸ್ತಧರ್ಮದ, ಅದರಲ್ಲೂ ರೋಮನ್ ಕ್ಯಾಥೊಲಿಕ್ ಪಂಗಡದ, ಪರಂಪರೆಯಲ್ಲಿ ಈ ಪ್ರಶ್ನೆ ಎದ್ದಿದೆ. ಅವರ ವಾದಕ್ಕೆ ನನ್ನ ಮಾನ್ಯತೆ ಇಲ್ಲ. ಮಾನವ ಭ್ರೂಣದ

ಹತ್ಯೆಯಾಗುತ್ತದೆಂಬ ಗುಲ್ಲೆಬ್ಬಿಸಿದ್ದಾರೆ, ಅಲ್ಲವೆ ? ಇನ್‌ವಿಟ್ರೊ ಫರ್ಟಲೈಸೇಶನ್‌ನಲ್ಲಿ ಉಪಯೋಗಕ್ಕೆ ಬಳಸದ ಎಷ್ಟು ''ಜೀವ''ಗಳನ್ನು ಎಸೆಯುತ್ತಾರೆ ಗೊತ್ತೆ ? ಅದಕ್ಕೂ ಸ್ಟೆಮ್ ಸೆಲ್ ಸಂಶೋಧನೆಯ ಪರಿಣಾಮಕ್ಕೂ ವ್ಯತ್ಯಾಸವೇನೂ ಇಲ್ಲ. ರೋಗಗಳ ಉಪಶಮನಕ್ಕೆ ಈ ಸಂಶೋಧನೆ ಸಾಧನವಾಗಬಲ್ಲುದು. ಪಾರ್ಕಿನ್‌ಸನ್ ರೋಗ (ಮಿದುಳಿನ ಕ್ರಿಯೆಗೆ ಸಂಬಂಧಿಸಿದ್ದು), ಆಲ್‌ಜೈಮರ್, ಸಕ್ಕರೆ ಕಾಯಿಲೆ, ಇವಕ್ಕೆಲ್ಲಾ ಸ್ಟೆಮ್ ಸೆಲ್‌ಗಳು ಬರುವ ದಿನಗಳಲ್ಲಿ ಪರಿಹಾರ ನೀಡುತ್ತವೆ. ಮುಂದೊಂದು ದಿನ ಕತ್ತರಿಸಿ ಹಾಕಲಾದ ಕೈಕಾಲುಗಳ ಜಾಗದಲ್ಲಿ ಹೊಸ ಕೈಕಾಲು ಬೆಳೆವಣಿಗೆಯೂ ಅಸಾಧ್ಯವಲ್ಲ. ಹೀಗಿರುವಾಗ ಸಮಾಜವು ಅದನ್ನು ಬೆಂಬಲಿಸಬೇಕಾದ್ದು ಅಗತ್ಯ. ಅದು ಹೇಗೆ ಅನೀತಿಯೆನಿಸಿಕೊಳ್ಳುತ್ತದೆ ?

**ಗಿರಿಜಾ :** ವಿಜ್ಞಾನ ಮತ್ತು ಮತಧರ್ಮ ಬೇರ್ಪಡಬೇಕಾದ್ದು ಅಗತ್ಯ. ಅಮೆರಿಕಾದಲ್ಲಿ ಬಂದಿರುವುದು ಮತಧರ್ಮ ಪ್ರೇರಿತ ರಾಜಕೀಯ ಚರ್ಚೆ.

**ಮುರಳೀಧರ :** ನಾನು ಮತಧರ್ಮಕ್ಕೆ ಜೋತುಬಿದ್ದಿರುವವನಲ್ಲ. ನನ್ನ ಸಂಶೋಧನೆಯು ಮಾನವ ಸಮಾಜಕ್ಕೆ ಹಾನಿಯುಂಟುಮಾಡಕೂಡದೆಂಬುದಷ್ಟೇ ಒಳ್ಳೆಯ ನೀತಿ. ''ಜೀವ'' ಎಂಬುದು ಯಾವಾಗ ಆರಂಭವಾಗುತ್ತದೆಂಬ ಪ್ರಶ್ನೆ ಎತ್ತಿದ್ದಾರೆ. ರೇತಸ್ಸು ಮತ್ತು ಅಂಡ ಜೊತೆಗೂಡಿದ ಕೂಡಲೆ ಜೀವೋತ್ಪತ್ತಿಯಾಗಿದೆ ಎಂಬುದು ರೋಮನ್ ಕ್ಯಾಥೊಲಿಕ್ ಬಣದ ವಾದ. ಈ ರೀತಿಯ ವಾದ ಎಷ್ಟು ಸರಿ ?

**ಗಿರಿಜಾ :** ಕೆಲವರ್ಷಗಳ ಹಿಂದೆ ನಾನೊಂದು ಸ್ಟೆಮ್ ಸೆಲ್ ಸಂಶೋಧಕರ ಸಮಾವೇಶದಲ್ಲಿ ಭಾಗವಹಿಸಿದ್ದೆ. ಬರ್ಕ್ಲಿ ವಿಶ್ವವಿದ್ಯಾಲಯದ ದೈವತಾಶಾಸ್ತ್ರದ ಪ್ರಾಧ್ಯಾಪಕರೊಬ್ಬರು ಸ್ಟೆಮ್ ಸೆಲ್ ಸಂಶೋಧನೆಯ ನೀತಿಯ ಬಗ್ಗೆ ಉಪನ್ಯಾಸ ನೀಡಿದರು. ನಾನೊಂದು ಪ್ರಶ್ನೆ ಕೇಳಿದೆ: ''ನೀವು ಹೇಳಿದ್ದೆಲ್ಲಾ ಒಂದು ಮತಧರ್ಮದ ಅಭಿಪ್ರಾಯ : ರೋಮನ್ ಕ್ಯಾಥೊಲಿಕ್ ಚರ್ಚ್ ಮತ್ತು ಪೋಪ್ ಅಭಿಪ್ರಾಯ. ಆದರೆ ಬೇರೆ ಧರ್ಮಗಳೂ ಇವೆಯಲ್ಲ, ಉದಾಹರಣೆಗೆ ಹಿಂದುಗಳ ಮತ. ಅವುಗಳ ಅಭಿಪ್ರಾಯ ನಗಣ್ಯವೆ ?'' ಆತ ತಕ್ಷಣ ಉತ್ತರಿಸಲಿಲ್ಲ. ಮಾರನೆಯ ದಿನ ನನ್ನನ್ನಾತ ಭೇಟಿಯಾಗಿ ಹೇಳಿದರು: ''ನೀವು ಹೇಳಿದ್ದು ಸರಿ. ಬೇರಾವ ಧರ್ಮವೂ ಈ ಸಂಶೋಧನೆಯನ್ನು ವಿರೋಧಿಸುವುದಿಲ್ಲ. ಇಸ್ಲಾಂ ಹೇಳುತ್ತದೆ, 'ಬೇರೆಯವರ ಒಳಿತಿಗಾಗಿ ಅಗತ್ಯವಿದ್ದರೆ ನಿನ್ನ ಶರೀರವನ್ನು ತ್ಯಾಗ ಮಾಡು,' ಎಂದು. ವಿಶ್ವದಲ್ಲಿ ನಾವು (ರೋಮನ್ ಕ್ಯಾಥೊಲಿಕ್ಕರು) ಮೂರನೆಯ ಒಂದು ಭಾಗವೂ ಇಲ್ಲ. ಹಾಗಿರುವಾಗ ಮೂರನೆಯ ಎರಡು ಭಾಗವನ್ನು ತಡೆಯಲು ನಾವು ಯಾರು ?''

**ಹೊಸತು :** ಕಡೆಯ ಪ್ರಶ್ನೆ ಡಾ॥ ಮುರಳೀಧರ ಅವರಿಗೆ. ನೀವು ಈಗ ತಾನೆ ಕ್ಯೂಬಾಕ್ಕೆ ಭೇಟಿ ನೀಡಿ ಬಂದಿದ್ದೀರಿ. ಹಿಂದೆ-ಇಂದು-ಮುಂದೆ ಎಂಬ ನೆಲೆಯಲ್ಲಿ ನಿಮಗೇನನಿಸುತ್ತದೆ ?

**ಮುರಳೀಧರ :** ಸಮಾನತೆಯತ್ತ ಹೆಜ್ಜೆ ಹಾಕುವುದು ಅತಿಮೌಲಿಕವಾದುದೆಂದು ನನ್ನ ನಿಲುವು. ಫ್ರಾನ್ಸ್, ಸೋವಿಯೆತ್ ಒಕ್ಕೂಟ, ಕ್ಯೂಬಾ, ಎಲ್ಲಾ ಆ ದಿಕ್ಕಿನ ಪ್ರಯತ್ನ ನಡೆಸಿವೆ; ಆದ್ದರಿಂದ ಅವೆಲ್ಲಾ ಸ್ಫೂರ್ತಿದಾಯಕವಾದುವು. ಮಾನವ ಸಮಾಜದ ವಿಕಾಸದಲ್ಲಿ ಅವು ಪ್ರಮುಖ ಪಾತ್ರ ಉಳ್ಳವು. ಮೃಗೀಯವಾದ ಅಮೆರಿಕಾ ಸಾಮ್ರಾಜ್ಯಶಾಹಿಯ ಅತಿ ಸನಿಹದಲ್ಲಿ ಕ್ಯೂಬಾ ಕ್ರಾಂತಿಯುತ ಹೆಜ್ಜೆ ಹಾಕಿರುವುದು ಬಹಳ ದೊಡ್ಡ ವಿಷಯ. ಕ್ರಾಂತಿಗೆ ಮುನ್ನ ಕ್ಯೂಬಾ ಏನಾಗಿತ್ತು ? ಅಮೆರಿಕಾದ ಶ್ರೀಮಂತರ ಪರವಾಗಿ ಸರ್ವಾಧಿಕಾರ ಚಲಾಯಿಸುತ್ತಿದ್ದ ದ್ರೋಹಿಗಳ ಕೈಯಲ್ಲಿದ್ದ ಆಟಿಕೆಯಾಗಿತ್ತು. ಆದ್ದರಿಂದ ಕ್ಯೂಬಾದ ಸಮಾಜವಾದಿ ಕ್ರಾಂತಿಗೆ ಐತಿಹಾಸಿಕ ಮಹತ್ವವಿದೆ. ನಂತರದಲ್ಲಿ ಕ್ಯೂಬಾ ಅಲಿಪ್ತ ರಾಷ್ಟ್ರಗಳ ಚಳುವಳಿಯಲ್ಲಿ ಮುಖ್ಯ ಪಾತ್ರ ವಹಿಸಿತು. ಭಾರತಕ್ಕೆ ಇದು ಸಂತಸದ ಸಂಗತಿ. ೧೯೯೦ರ ದಶಕದಲ್ಲಿ ಸೋವಿಯೆತ್ ಒಕ್ಕೂಟ ಹರಾಕಿರಿ ಮಾಡಿಕೊಂಡಿತು. ಆಗ ಕ್ಯೂಬಾಕ್ಕೆ ಹೆಚ್ಚು ಸಂಕಷ್ಟದ ಪರಿಸ್ಥಿತಿ ಉಂಟಾಯಿತು. ಕ್ಯೂಬಾ ಕ್ರಾಂತಿಪಥದಲ್ಲಿ ಉಳಿಯುವುದೇ ಎಂಬ ಸಂದಿಗ್ಧತೆ ಇತ್ತು. ಸದ್ಯಕ್ಕಂತೂ ಕ್ಯೂಬಾ ಯಶಸ್ಸು ಕಂಡಿದೆ. ಮುಂದೇನು ? ಕ್ಯೂಬಾದಲ್ಲಿ ಎಲ್ಲಾ ಸಮರ್ಪಕವಾಗಿದೆಯೆಂದು ನಾನು ಹೇಳುತ್ತಿಲ್ಲ. ಅಲ್ಲಿಯೂ ಅಸಮಾನತೆ ಇದೆ, ವಿಷಮತೆ ಇದೆ, ನಿರುದ್ಯೋಗವೂ ಇದೆ. ಆದರೆ ಕ್ಯೂಬಾದ ಸಾಹಸಮಯ ಗಾಥೆ ಮುಗಿದಿಲ್ಲ. ಅಮೆರಿಕಾ ಹೇರಿರುವ ಅನೀತಿಯುತ ಪಾತಕ ನಿರ್ಬಂಧಗಳಿಂದಾಗಿ ಕ್ಯೂಬಾದ ಮುನ್ನಡೆ ಸಾಧ್ಯವಾಗುತ್ತಿಲ್ಲ. ಆ ದೇಶವು ಪ್ರವಾಸಿಗಳ ಬರುವಿಕೆಯನ್ನು ಅತಿಯಾಗಿ ಅವಲಂಬಿಸಿದೆ. ಅದೂ ಒಂದು ವಿಧದ ಅಸಮಾನತೆಗೆ ಕಾರಣ. ಪ್ರವಾಸಿ ಉದ್ಯಮದಲ್ಲಿರುವವರು ಅದರಲ್ಲಿ ಇಲ್ಲದವರಿಗಿಂತಲೂ ಹೆಚ್ಚಿನ ಸೌಲಭ್ಯ ಹೊಂದುತ್ತಾರೆ. ಕ್ಯೂಬಾದಲ್ಲಿ ಎರಡು ನಾಣ್ಯಗಳು ಪ್ರಚಲಿತ : ಒಂದು, ರಾಷ್ಟ್ರೀಯ ಪೇಸೊ; ಇನ್ನೊಂದು, ಕನ್ವರ್ಟಬಲ್ ಪೇಸೊ. ಕನ್ವರ್ಟಬಲ್ ಪೇಸೊ ಯಾರಲ್ಲಿದೆಯೋ ಅವರಿಗೆ ಸೌಲಭ್ಯಗಳು ಅಧಿಕ. ಇವರು ಕೊಳ್ಳುವ ವಸ್ತುಗಳು ರಾಷ್ಟ್ರೀಯ ಪೇಸೊ ಇರುವವರಿಗೆ ಸಿಕ್ಕುವುದಿಲ್ಲ. ಜೊತೆಗೆ, ಅವರಲ್ಲಿ ಅಷ್ಟೊಂದು ಪೇಸೊಗಳಿರುವುದಿಲ್ಲವಾದ್ದರಿಂದ ೨೪ ಪೇಸೊ ಕೊಟ್ಟು ಒಂದು ಕನ್‌ವರ್ಟಬಲ್ ಪೇಸೊ ಪಡೆಯಲಾರರು. ಇದು ಒಂದು ಮುಖ ಅಷ್ಟೆ. ಶಿಕ್ಷಣ, ವಸತಿ, ಆರೋಗ್ಯ, ಕೃಷಿ, ಇವೆಲ್ಲಾ ಜನಪರವಾಗಿವೆ. ಸಾರಿಗೆ ಸುಧಾರಿಸಿಲ್ಲ, ನಿಜ; ಆದರೆ ಅದಕ್ಕೆ ತೈಲ ಮತ್ತು ಉದ್ದಿಮೆ ಬೇಕಾಗಿದೆ. ಹೊಸ ಉದ್ಯಮಗಳು ತಲೆಯೆತ್ತಲು ಅಮೆರಿಕಾದ ಕಬಂಧಬಾಹುಗಳೂ ಅಡ್ಡಿಯುಂಟುಮಾಡಿವೆ. ಆದಾಗ್ಯೂ, ಜನಸಾಮಾನ್ಯರನ್ನು ನೋಡಿದರೆ ಸಾಕಷ್ಟು ಹಸನ್ಮುಖಿಗಳು ಎನಿಸುತ್ತದೆ. ಅವರ ಹಾಡು ಮತ್ತು ನೃತ್ಯ ಅವರಿಗೆ ಜೀವಧಾತುವಾಗಿದೆ. ಕ್ಯೂಬಾ ಪೂರ್ಣಾರ್ಥದಲ್ಲಿ ಸಮಾಜವಾದಿ ದೇಶವಾಗಿಬಿಟ್ಟಿಲ್ಲ; ಆದರೆ ಹೆಚ್ಚಿನ ಸಮಾನತೆಗಾಗಿ, ಆರ್ಥಿಕ ಚಟುವಟಿಕೆಗಳಿಗಾಗಿ, ಶ್ರಮಿಸುತ್ತಿದೆ. ಹವಾನಾ ವಿಶ್ವವಿದ್ಯಾನಿಲಯಕ್ಕೆ ಹೋಗಿದ್ದಾಗ ನಾನಲ್ಲಿ ಹಲವು ದೇಶಗಳ ವಿದ್ಯಾರ್ಥಿಗಳನ್ನು ಕಂಡೆ. ಅವರಲ್ಲಿ ಬಹಳಷ್ಟು ಮಂದಿ ವೈದ್ಯಕೀಯ ವಿದ್ಯಾರ್ಥಿಗಳು. ಅವರವರ ದೇಶಗಳಿಗೆ ಇವರು ಅಪಾರವಾಗಿ ದುಡಿಯುತ್ತಾರೆ. ಅದಕ್ಕೆ ಕ್ಯೂಬಾದ ಕೊಡುಗೆ ಶ್ಲಾಘನೀಯ. ಮುಂದಿನ ದಿನಗಳಲ್ಲಿ ಕ್ಯೂಬಾ ಸಮಾನತೆ ಮತ್ತು ಅಭಿವೃದ್ಧಿ ಎರಡನ್ನೂ ಸಾಧಿಸಲು ಸಾಧ್ಯವಾಗಲೆಂದು ಆಶಿಸುತ್ತೇನೆ. ಆ ದೀಪ ಆರಿಹೋದರೆ ಕಗ್ಗತ್ತಲಿಂದ ನಾವು ಹೊರಬರುವುದಾದರೂ ಹೇಗೆ ?

ಸಂದರ್ಶನ, ಚಿತ್ರಗಳು ಮತ್ತು ನಿರೂಪಣೆ : **ಡಾ॥ ಜಿ.ರಾಮಕೃಷ್ಣ**


೨-ಎಫ್, 'ಪವನ ಪರಂಜ್ಯೋತಿ', ೨೨/೧, ೪ನೇ ಕ್ರಾಸ್, ಕಾವೇರಿ ನಗರ
ಕತ್ತರಿಗುಪ್ಪೆ ವಾಟರ್ ಟ್ಯಾಂಕ್ ಹತ್ತಿರ, ಬನಶಂಕರಿ ೩ನೇ ಹಂತ, ಬೆಂಗಳೂರು - ೫೬೦ ೦೮೫



ಆರ್. ಚಲಪತಿ

# ಪಠ್ಯಗಳು ಮತ್ತು ಕಲಿಕೆಯ ರಾಜಕಾರಣ*



* ಉದ್ದೇಶ ಪೂರ್ವಕವಾಗಿಯೇ ಷ, ಞ, ಋ, ಙ – ಅರ್ಕಾವೊತ್ತು ಅಕ್ಶರಗಳನ್ನು ಇಲ್ಲಿ ಬಳಸಿರುವುದಿಲ್ಲ. ಬದಲಾಗಿ ಉಚ್ಚಾರಣೆಗೆ, ಮತ್ತು ಗ್ರಹಿಕೆಗೆ ಅನುಕೂಲವೂ, ಸ್ಪಶ್ಟವೂ ಆಗಿ ಬಳಸಬಹುದಾಗಿರುವ – ಬಳಕೆಯಲ್ಲಿ ಇರುವ 'ಶ' 'ನ'ವೊತ್ತು ( ್ನ ), ಮತ್ತು 'ರ' ಅಕ್ಶರಗಳನ್ನು ಮಾತ್ರವೇ ಬಳಸಲಾಗಿದೆ.

**ಶಿ**ಕ್ಶೆ ಎನ್ನುವುದು ವ್ಯಕ್ತಿಯನ್ನು ಅಪರಾಧೀಕರಿಸುವುದರ ಕೊನೆಯ ಹಂತ. 'ಶಿಕ್ಶಣ' ಎನ್ನುವುದು ಇಂತಹ ಅಮಾನವೀಯ ತಿರುಳನ್ನು ತನ್ನೊಳಗೇ ಅಡಗಿಸಿಟ್ಟುಕೊಂಡಿರುವ ಪರಿಭಾಶೆ. ಶಿಕ್ಶಿಸುವುದು ಶಿಕ್ಶಣ. ವ್ಯಕ್ತಿ ಹುಟ್ಟುವಾಗಲೇ ಅನಾಗರಿಕ, ಪಾಪಿ. ತಮ್ಮ ಪಾಪಗಳಿಂದಾಗಿಯೇ ಮನುಶ್ಯರು ಜನ್ಮ ಪಡೆಯುತ್ತಾರೆ. ಅನಂತರ ಅವರನ್ನು ಸಂಸ್ಕರಿಸಬೇಕು ಎನ್ನುವ ಕ್ರಿಶ್ಚಿಯಾನಿಟಿಯ ಅರ್ಥವನ್ನೇ ಸಂಸ್ಕೃತದ 'ಶಿಕ್ಶಣ' ಪದವೂ ಹೇಳುತ್ತದೆ. ಇಂಗ್ಲಿಶ್ ಸಂಸ್ಕೃತಿಯ ಮೂಲದಿಂದ ಬಂದ ಆಧುನಿಕವಾದ ಕಲಿಕೆಯನ್ನು ಭಾರತೀಯ ಸನ್ನಿವೇಶದಲ್ಲಿ ಸಂಸ್ಕೃತ ಪರಂಪರೆಯು ಅನುವಾದಿಸಿಕೊಂಡಿರುವುದೂ ಸಹ ಇದೇ ಅರ್ಥದಲ್ಲಿಯೇ. ಹಾಗಾಗಿ 'ಎಜುಕೇಶನ್'ಅನ್ನು 'ಶಿಕ್ಶಣ'ವಾಗಿಸಿರುವುದು ಇಂತಹ ಅಪರಾಧೀಕರಣದ ಭಾಗವೇ ಆಗಿದೆ. ಇದು ಸಂಸ್ಕೃತ ಪರಂಪರೆಯ ಮೂಲಭೂತವಾದವನ್ನೇ ಮಂಡಿಸುತ್ತದೆ. ಆದ್ದರಿಂದಾಗಿ, ವ್ಯಕ್ತಿಯನ್ನು ಸಮುದಾಯದಿಂದ ಬೇರೆಯಾಗಿಸಿ ಹತ್ತಿಕ್ಕುವ ಗುರಿಯನ್ನುಳ್ಳ 'ಶಿಕ್ಶಣ' ಪದವನ್ನು ಉದ್ದೇಶಪೂರ್ವಕವಾಗಿಯೇ ಬಿಟ್ಟು 'ಎಜುಕೇಶನ್' ಪದಕ್ಕೆ 'ಕಲಿಕೆ' ಎನ್ನುವುದನ್ನೇ ಬದಲಿ ಪದವಾಗಿ ಇಲ್ಲಿ ಬಳಸಲಾಗಿದೆ. ಇಂತಹ 'ಗಿಲ್ಟ್' ಒಂದು ಆಧುನಿಕತೆಯ ಭಾಗವಾಗಿಯೇ ಬೆಳೆದು ಬಿಟ್ಟಿದೆಯಾದ್ದರಿಂದ ಈ ತಾತ್ವಿಕತೆಯಿಂದ ಹೊರಗಿರಿಸಿ ಪಠ್ಯಗಳು ಆಗುಮಾಡುವ ಕಲಿಕೆಯನ್ನು ವಿವರಿಸಿಕೊಳ್ಳಲು ಸಾಧ್ಯವಾಗುವುದಾದರೂ ಹೇಗೆ ?

**ನಮ್ಮ ಕಲಿಕೆಯ ಸನ್ನಿವೇಶವು ಏನಾಗಿದೆ ?**

ಕಲಿಕೆಯು ನಮ್ಮ ಇಡೀ ಬದುಕನ್ನು ಬಿಡಿ ಬಿಡಿಯಾಗಿ ಗ್ರಹಿಸಲು ಅನುವು ಮಾಡಿಕೊಡುತ್ತದೆ ಎಂಬುದನ್ನು ಪಠ್ಯಪುಸ್ತಕಗಳ ಮೂಲಕವೇ ನಂಬಿಸಲಾಗಿದೆ. ವಿಶಯವಾರು ವಿಂಗಡಣೆ ಮಾಡಿ, ಪ್ರತಿವಿಶಯವೂ ಒಂದು ವಿಶೇಶ ಮತ್ತು ಪ್ರತ್ಯೇಕ ಅರಿಮೆಯಾಗಿ ಗ್ರಹಿಸುವಂತಹ ತಿಳುವಳಿಕೆಯ ದಾರಿಯನ್ನು ರೂಪಿಸಿ ಕಲಿಸಲಾಗುತ್ತಿರುವುದು ಹೆಚ್ಚೆಚ್ಚು ನಿರೀಕ್ಶೆಗಳನ್ನು ಹುಟ್ಟಿಸಿದೆ. ಆದರೆ ಆಧುನಿಕ ಕಲಿಕೆಯ ಆರಂಭಕಾಲದಿಂದಲೂ ನಡೆದುಕೊಂಡು ಬರುತ್ತಿರುವ ಮುದ್ರಿಸಿದ ಪಠ್ಯಗಳನ್ನು ಅವಲಂಬಿಸಿದ ಇಂತಹ ಕಲಿಕೆಯು ಕಲಿಯುವ ತಿಳುವಳಿಕೆಗಳ ನಡುವೆ ಇರಬೇಕಾಗಿದ್ದ ಸಹಸಂಬಂಧವನ್ನು ಕಳೆದುಹಾಕಿಲ್ಲವೇ ? ಕಲಿಕೆಯ ಪಠ್ಯಪುಸ್ತಕಗಳನ್ನು ಹೀಗೆ ಒರಣಗೊಳಿಸಿದ್ದರಿಂದಾಗಿ ಕಲಿಯುವ ಚರಿತ್ರೆ, ವಿಜ್ನಾನ, ಸಮಾಜವಿಜ್ನಾನ, ಗಣಿತ ವಿಜ್ನಾನ ಮೊದಲಾಗಿ ಯಾವುದೇ ವಿಷಯಗಳು ಕಲಿಯುವವರ ಅನುಭವ ಲೋಕದಿಂದ ದೂರವೇ ಉಳಿಯುವಂತಾಗಿಲ್ಲವೇ ? ಸರ್ವಸ್ವತಂತ್ರ ಅರಿಮೆಯ ಶಿಸುಗಳೆಂಬಂತೆ ಇಂದು ಪ್ರತಿ ವಿಭಾಗಗಳೂ ವರ್ತಿಸುತ್ತಿವೆ. ಯಾವುದು ಹೆಚ್ಚು ಯಾವುದು ಕಮ್ಮಿ, ಯಾವುದೆಲ್ಲಾ ಬೇಕು ಯಾವುದೆಲ್ಲಾ ಬೇಡ ಎನ್ನುವಂತೆಯೂ ಒಂದರ ಮೇಲಿನ್ನೊಂದು ಸವಾರಿ ಮಾಡುವುದನ್ನು ರೂಢಿಸಿಕೊಂಡಿವೆ. ಈ ಸವಾರಿ ಕಲಿಯುವವರ ತಿಳುವಳಿಕೆಯಲ್ಲೂ ಇರುವಂತೆ ನೋಡಿಕೊಳ್ಳಲಾಗುತ್ತಿದೆ. ಸ್ವತಂತ್ರ ಭಾರತ, ಏಕೀಕರಣೋತ್ತರ ಕರ್ನಾಟಕದ

ಕನ್ನಡ ಅಕ್ಷರಮಾಲೆಯನ್ನು ಪರಿಷ್ಕರಿಸುವ ಈ ಪರಿಯನ್ನು 'ಹೊಸತು' ಸಂಪೂರ್ಣವಾಗಿ ಸ್ವಾಗತಿಸುವುದಿಲ್ಲ. ಆದರೆ ಲೇಖಕರ ಅಪೇಕ್ಷೆಯ ಮೇರೆಗೆ ಅದನ್ನು ಅವರು ಬರೆದ ರೀತಿಯಲ್ಲಿಯೇ ಸಾದರಪಡಿಸಲಾಗಿದೆ. ಲೇಖನ ಓದಿಕೊಳ್ಳಲು ಓದುಗರಿಗೆ ವಿಶೇಷ ತೊಂದರೆಯಾಗಲಾರದೆಂದು ಭಾವಿಸುತ್ತೇವೆ.

– ಸಂ.

ಸನ್ನಿವೇಶದಲ್ಲಿಯೂ ಹೀಗೇ ಹಾದು ಬಂದಿದ್ದೇವೆ. ಜಾಗತೀಕರಣದ ಇವತ್ತಿನ ಸನ್ನಿವೇಶದಲ್ಲಿ ನಮ್ಮ ಬದುಕಿನ ಸಹವರ್ತಿ ನೆಲೆಗಳನ್ನು, ನಮ್ಮ ಸಹವರ್ತಿಗಳನ್ನು ನಾವೇ ನಂಬದಷ್ಟು ಒಡೆದುಹೋಗಿರುವುದು ಇವತ್ತು ನಮ್ಮ ಅರಿವಿಗೆ ಬರುತ್ತಿದೆ. ಸೈನ್ಸ್ ಓದುವವರಿಗೆ ಸಾಹಿತ್ಯ ಯಾಕೆ ಬೇಕು ? ಕಾಮರ್ಸ್ ಕಲಿಯುವವರಿಗೆ ಕನ್ನಡ ಯಾಕಿರಬೇಕು ? ಕಾಮರ್ಸಿಗೂ ಸೈನ್ಸಿಗೂ ಸಂಬಂಧವೇನಿದೆ ? ಇಂಜಿನಿಯರಿಂಗ್, ಮೆಡಿಕಲ್ ವಿಜ್ಞಾನಕ್ಕೂ ಸಮಾಜಶಾಸ್ತ್ರಕ್ಕೂ ಎಲ್ಲಿಯ ನಂಟು ? ಸೈನ್ಸ್ ಕಲಿಯುವವರಿಗೆ ಅರ್ಥಶಾಸ್ತ್ರದೊಂದಿಗೆ ಸಂಬಂಧ ಎಂತಹುದು ? ಕಾಮರ್ಸ್ ಕಲಿಯುವವರಿಗೆ ಮನಶ್ಶಾಸ್ತ್ರ ಯಾಕೆ ಬೇಕು ಎನ್ನುವಂತಹ ಮೂರ್ಖತನದ ಕೇಳ್ವಿಗಳನ್ನು ಹುಟ್ಟುಮಾಡುವುದನ್ನಷ್ಟೇ ನಮ್ಮ ಕಲಿಕೆಯು ಅಗುಮಾಡಿದೆ. ಇದನ್ನು ಹೀಗೆ ಇರುವಂತೆ ಕಾಪಾಡಿ ಕೊಂಡು ಬರುವುದನ್ನು ಪರಮ ಕೆಲಸವಾಗಿಸಿ ಕೊಂಡಿದ್ದೇವೆ. ಯಾಕೆ ಹೀಗೆ ?

ಇದರಿಂದೆಲ್ಲಾ ಆಗಿರುವುದೇನು ? ಸೈನ್ಸ್, ಆರ್ಟ್ಸ್, ಕಾಮರ್ಸ್ ಎಂದ ಕೂಡಲೇ ನಮ್ಮದಲ್ಲದ ಜಗತ್ತೊಂದನ್ನು ವಿಶೇಷವಾಗಿ ಕಲಿತು ಪರಿಣತಿ ಪಡೆಯುವುದು ಎಂದೇ ತಿಳಿದಿದ್ದೇವೆ. ಹೀಗೆ ಕಲಿಯುವುದರ ಮೂಲಕ ನಮ್ಮದಲ್ಲದ ಇನ್ನಾವುದರೊಂದಿಗೋ ವ್ಯವಹರಿಸುವುದು ಎಂದೇ ನಂಬಿಸಲಾಗಿದೆ. ಬದುಕಿನ ಈ ಪ್ರತಿ ವಿಷಯಗಳೂ ಪರಸ್ಪರ ವ್ಯವಹರಿಸುತ್ತವೆ. ಅವು ಒಂದು ಇನ್ನೊಂದರ ಸಹವರ್ತಿಗಳು ಎನ್ನುವುದನ್ನು ಕಲಿಸಲೇ ಇಲ್ಲ, ಕಲಿಸಲಾಗುತ್ತಲೂ ಇಲ್ಲ. ಆದರಿಂದಾಗಿ ಕಲಿಯುವ ವಿಷಯವನ್ನು, ಕಲಿತ ವಿಷಯದ ಮೂಲಕ ವ್ಯಕ್ತಿಯನ್ನು ತೂಗುತಕ್ಕಡಿಯಲ್ಲಿ ಹಾಕಿ ಅಯೋಗ್ಯರನ್ನಾಗಿಸುವ ಉದ್ಯಮ ನನ್ನಾಗಿ ಜಾರಿಯಲ್ಲಿರಿಸಿಕೊಂಡಂತಾಗಿಲ್ಲವೇ. ಇದಕ್ಕಾಗಿ ಕಲಿಯುವ ವಿಷಯಗಳನ್ನು, ಪಠ್ಯಗಳನ್ನು ಸ್ವತಂತ್ರ ಭಾಗಗಳಾಗಿ ಒಡೆದುಕೊಂಡು ಪ್ರತ್ಯೇಕ ಪ್ರೊಡಕ್ಷನ್ ಯೂನಿಟ್ ಗಳನ್ನಾಗಿ ಸ್ಥಾಪಿಸಿದ್ದೇವೆ ಅಲ್ಲವೇ ? ಈ ಮೇಲುಕೀಳುಗಳನ್ನು ನಿರಂತರವಾಗಿ ಆಗು ಮಾಡಿಕೊಳ್ಳುವ ಕಾರಣದಿಂದ, ಇವೆಲ್ಲವನ್ನೂ ಒಳಗೊಳ್ಳುವ ನಮ್ಮ ಬದುಕಿನ ಆಶೆಯನ್ನು ನಾವು ಕಲಿಯುವ ವಿಷಯಗಳಿಂದ ದೂರವಿರಿಸಿಕೊಂಡು ಬರಲಾಗಿದೆ ಎಂದು ಅನಿಸುತ್ತಿಲ್ಲವೇ ? ಕಲಿಯುವ ಮಕ್ಕಳನ್ನು ಹೀಗೆ ಕನ್‌ಸ್ಟ್ರಕ್ಟ್ ಮಾಡಲು ಹೊರಟಿರುವ ಸ್ಟೇಟ್ ನಾಳೆಗಳಲ್ಲಿ ಅವರಿಂದ ಏನನ್ನು ಎದುರು ನೋಡುತ್ತಿದೆ ? ಇಂತಹ ಕಲಿಕೆಯ ನೆಪದಲ್ಲಿ ಕಲಿಯುವವರನ್ನು ಬಂಧಿಗಳಾಗಿಸುವ ನಾವು ನಮ್ಮ ನಾಳೆಗಳಲ್ಲಿ ನಿಜಕ್ಕೂ ಸಮಾಧಾನವನ್ನು ಕನಸುತ್ತಿದ್ದೇವೆಯೇ ? ಇಂದು ಕಲಿಸುವ ಸಂಸ್ಥೆಗಳ ಹೊರಗೂ ಕಲಿಕೆಯನ್ನು ಬಿಕರಿ ಮಾಡುವ ಬಹುದೊಡ್ಡ ಮಾರುಕಟ್ಟೆ (ಎಜುಕೇಶನಲ್ ಮಾರ್ಕೆಟ್)ಯೊಂದು ಹುಟ್ಟಿಕೊಂಡಿದೆ. ಕೌಟುಂಬಿಕವಾಗಿ, ವ್ಯಾವಹಾರಿಕವಾಗಿ, ಕೆಲಸದ ಕಾರಣವಾಗಿ ವ್ಯಕ್ತಿಗೆ ಬೇಕಾದ ಸ್ಕಿಲ್ಲುಗಳನ್ನು, ಮಾನಸಿಕ ಸಮಾಧಾನವನ್ನು ನಾವು ಅಲ್ಲಿ ಕೊಂಡುಕೊಳ್ಳಲು ಹೊರಟಿದ್ದೇವೆ. ಇದರಿಂದಾಗಿ ಕನಸಲು ಬೇಕಾದ ದಾರಿಗಳನ್ನು ಮುಚ್ಚುತ್ತಿದ್ದೇವೆ ಅನಿಸುತ್ತಿಲ್ಲವೇ ? ಕಾಡುತ್ತಿರುವ ಇಂತಹ ಕೇಳ್ವಿಗಳನ್ನಿರಿಸಿಕೊಂಡು ಪಠ್ಯಗಳು ಮತ್ತು ಕಲಿಕೆಯ ಸಂಬಂಧಗಳಲ್ಲಿನ ಚಿಕ್ಕಟ್ಟುಗಳನ್ನು ಅರಿಯುವ ಪ್ರಯತ್ನ ಮಾಡುತ್ತೇನೆ.

**ಪಠ್ಯಪುಸ್ತಕಗಳಲ್ಲಿರುವುದು ನಮ್ಮದೆನಿಸುವ ಕಲಿಕೆಯೇ ?**

ಕಲಿಯುವವರಿಗೆ, ಹೀಗೆ 'ತಮ್ಮದೇ' ಆಗಿರದ, ತಮ್ಮ ಬದುಕಿನ ಪರಿಸರವನ್ನು ಒಳಗೊಳ್ಳದ ಮಾಹಿತಿಯನ್ನು ಪಟ್ಟುಹಿಡಿದು ತಮ್ಮ ನೆನಪಿನ ಭಾಗವಾಗಿಸಿಕೊಳ್ಳುವ ಚಟುವಟಿಕೆಯನ್ನು ಕಲಿಕೆ-ಶಿಕ್ಷಣ ಎಂದು ಪಠ್ಯಪುಸ್ತಕಗಳ ಮೂಲಕ ಹೇಳಿ ಕೊಡಲಾಗುತ್ತಿದೆ. ಈ ಬಗೆಯ ತಿಳುವಳಿಕೆಯಿಂದಾಗಿ ನಮ್ಮದೇ ಬದುಕಿನ ಪರಿಸರದ ಮೂಲಕ ಕಲಿಯಬಹುದಾದ ವಿಜ್ಞಾನ, ವಾಣಿಜ್ಯ, ಚರಿತ್ರೆ, ಸಮಾಜಶಾಸ್ತ್ರ, ಮನಶಾಸ್ತ್ರ, ಮಾನವಶಾಸ್ತ್ರ ಮೊದಲಾಗಿ ಎಲ್ಲದರಿಂದ - ನಮ್ಮಿಂದ, ನಮ್ಮದರಿಂದ ನಾವೇ ದೂರವುಳಿಯುವುದು 'ನಾಗರಿಕ'ತನವೆನಿಸಿಬಿಟ್ಟಿದೆ. ಕಲಿಕೆಯ ಉನ್ನತ ನೆಲೆಗಳಿಗೆ ಹೋದಂತೆಲ್ಲಾ ಕಲಿಯುವ ವಿಷಯಗಳು ಇನ್ನಷ್ಟು ಬಿಡಿಯಾಗಿ ಒಡೆದುಕೊಳ್ಳುವುದರಿಂದಾಗಿ ಹಾಗೆ ಬಿಡಿಗೊಂಡ ವಿಷಯದ ಎಕ್ಸ್‌ಪರ್ಟ್‌ತನವನ್ನು




**ಜಿ.ಪಂ., ತಾ.ಪಂ., ಚುನಾವಣೆ ಸಂದರ್ಭದಲ್ಲಿ ಇನ್ನಷ್ಟು ಕೇಂದ್ರಗಳು ಹೆಚ್ಚಾಗಿದ್ದಿರಬೇಕು !**

ಅತ್ಯುನ್ನತ ಅರಿವು ಎಂದು ನಂಬಲಾಗಿದೆ, ಹಾಗೆಂದೇ ನಂಬಿಸಲಾಗಿದೆ. ಹೀಗಾಗಿ ಬಿಡಿ ಬಿಡಿ ವಿಷಯ ಕ್ಕೊಂದೊಂದು ವಿಭಾಗಗಳನ್ನು ಹುಟ್ಟುಹಾಕಿ ಅವುಗಳ ಆಟಾನಮಸ್ ಅನ್ನು ಉಳಿಸುವತ್ತ/ಉಳಿಸಿಕೊಳ್ಳುವತ್ತ ಹೆಚ್ಚೆಚ್ಚು ಒತ್ತನ್ನು ಹಾಕಲಾಗುತ್ತಿದೆ. ಇದು ಇನ್ನಷ್ಟು ನ್ಯಾನೊ ಆಗುವ ಕಡೆಗೆ ನಡೆಯುತ್ತಿರುವುದು ನಮ್ಮ ಬದುಕುಗಳ ಸನ್ನಿವೇಶದಲ್ಲಿ ಭರವಸೆಯ ಸಂಗತಿ ಯಾಗಿಯೇನೂ ಉಳಿದಿಲ್ಲ.

ಹೀಗೆ ವಿಷಯಗಳಾಗಿ, ಭಾಗಗಳಾಗಿ ಒಡೆದು ಕೊಂಡಿರುವುದರಿಂದ ಏನನ್ನು ಕಲಿಸಬೇಕು ಎನ್ನುವಾಗ ಒಟ್ಟು ಬದುಕನ್ನು ಗ್ರಹಿಸುವ ನೆಲೆಯನ್ನು ಉಳಿಸಿ ಕೊಳ್ಳುವುದೂ ಸಾಧ್ಯವಿಲ್ಲದಂತಾಗಿದೆ. ಈ ವಿಷಯ, ವಿಭಾಗಗಳು ಪ್ರತ್ಯೇಕ ಜ್ಞಾನಶಿಸ್ತು ಎನ್ನುವಂತಾಗಿ ಉಳಿದ ವಿಷಯ, ವಿಭಾಗಗಳೊಡನೆ ಸಂಬಂಧ ರಾಹಿತ್ಯವನ್ನು ಕಟ್ಟಿಕೊಳ್ಳುತ್ತಲೇ ಬೆಳೆದಿವೆ. ಅಥವಾ ತಿಳುವಳಿಕೆಯನ್ನು ಉಂಟುಮಾಡುವಲ್ಲಿ ತನ್ನದು ಹೆಚ್ಚೆಚ್ಚು ಮುಖ್ಯ, ಉಳಿದದ್ದು ಅಮುಖ್ಯ ಎನ್ನುವ ತಡೆ ಗಳನ್ನು ಬೆಳೆಸಿ ನಿಲ್ಲಿಸಲಾಗಿದೆ. ಹೀಗಾಗಿ ಪಠ್ಯಕ್ರಮದ ರಚನೆಯಲ್ಲಿಯೂ ಸಹ ಇದೇ ಮಾದರಿಯನ್ನು ಅನುಸರಿಸಲಾಗುತ್ತದೆಯಾದ್ದರಿಂದ ಕಲಿಯಲೆಂದೇ ಇರಿಸಿಕೊಳ್ಳುವ ಪಠ್ಯವು ಒಳಗೊಳ್ಳುವ ಮಾದರಿಯಾಗದೆ ಕಳೆದುಕೊಳ್ಳುವ ಮಾನಗಳನ್ನೇ ಮಂಡಿಸುತ್ತದೆ. ಇದನ್ನು ಜಾಗತಿಕ ಅರಿವಿನ ಕಲ್ಪನೆಯಲ್ಲಿರಿಸಿ ಕಟ್ಟಲಾಗುತ್ತದೆ. ವಿಜ್ಞಾನ ಮತ್ತು ಸಮಾಜ ವಿಜ್ಞಾನಗಳ ಪಠ್ಯಗಳನ್ನು ನಿಗದಿಪಡಿಸುವಾಗ ಅಥವಾ ಏರ್ಪಡಿಸುವಾಗ ಜಾಗತಿಕವಾದ ಇಂತಹ ಮಾದರಿಗಳನ್ನೇ ಅನುಸರಿಸುತ್ತಿರುವುದು ಸಾಮಾನ್ಯವೆನಿಸಿ ಕೊಂಡುಬಿಟ್ಟಿದೆ. ಸ್ಥಳೀಯ ಸಂಸ್ಥೆಗಳು ರಾಷ್ಟ್ರೀಯ ಸಂಸ್ಥೆಗಳ ಮಾದರಿಗಳನ್ನು, ರಾಷ್ಟ್ರೀಯ ಸಂಸ್ಥೆಗಳು ಜಾಗತಿಕ ಮಾದರಿಗಳನ್ನೂ – ಇದು ಸಾಮಾನ್ಯವಾಗಿ ಶ್ರೀಮಂತ ರಾಷ್ಟ್ರಗಳ ಮಾದರಿ, ಒಂದು ವಿಶ್ವವಿದ್ಯಾಲಯ ಮತ್ತೊಂದು ವಿಶ್ವವಿದ್ಯಾಲಯದ ಮಾದರಿಗಳನ್ನೂ ಅನುಕರಿಸಲಷ್ಟೇ ಶಕ್ತವಾಗಿವೆಯೇ ಹೊರತಾಗಿ, ಸ್ಥಳೀಯ ಬದುಕುಗಳ ಮೂಲಕ ಹೊಸ ಅರಿವುಗಳನ್ನು ಹುಟ್ಟುಹಾಕುವಲ್ಲಿ ಅಲ್ಲ.

**ನಮ್ಮ ಬದುಕೇ ಪಠ್ಯವಾಗುವ ದಾರಿ**

ಒಳಗೊಳ್ಳುವ (ಇನ್‌ಕ್ಲೂಸಿವ್) ತಿಳುವಳಿಕೆಯ ಸಣ್ಣ ಮಾದರಿಯೊಂದರ ಉದಾಹರಣೆಯನ್ನು ಇಲ್ಲಿ ಪ್ರಸ್ತಾಪಿಸಬಯಸುತ್ತೇನೆ. ಸಂಗತಿ (ಥೀಮ್) ಪ್ರಧಾನವಾದ ಪಠ್ಯಕ್ರಮವೊಂದರ ಪ್ರಾಯೋಗಿಕ ಉದಾಹರಣೆ ಇದು. ಬೆಂಗಳೂರು ವಿಶ್ವವಿದ್ಯಾಲಯದ ಕನ್ನಡ ಪಠ್ಯಕ್ರಮಕ್ಕೆ ಸಂಬಂಧಿಸಿದಂತೆ ೨೦೦೭ರ ನಂತರದ ಕಳೆದ ಮೂರು ವರುಶಗಳಲ್ಲಿ ನಮ್ಮ ಬದುಕೇ ಆಗಿರುವ ಸಂಗತಿಗಳನ್ನು ಪಠ್ಯಕ್ರಮದೊಳಗೆ ತರುವ ಪ್ರಯತ್ನವೊಂದು ನಡೆಯಿತು. **ಪರಿಸರ, ಊರು-ಭಾಷೆ, ದೈನಂದಿನ ಲಯ, ಸೃಜನಶೀಲತೆ, ಯುದ್ಧ ಮತ್ತು ಶಾಂತಿ, ಕನಸು, ಕಾಲ ಮತ್ತು ಮನುಷ್ಯ, ಮನರಂಜನೆ ಮತ್ತು ಬಿಡುವು, ಜ್ಞಾನದ ರಾಜಕಾರಣ, ಲೈಂಗಿಕತೆ, ಸಾವು, ವಿಜ್ಞಾನದ ತಾತ್ವಿಕತೆ, ಕೋಮುವಾದ ಮತ್ತು ಹಿಂಸೆ, ಕ್ರೀಡೆ** ಹೀಗೆ ಸೇರಿದ ಮುಖ್ಯ ಸಂಗತಿಗಳಲ್ಲಿ ಹಲವು ಇವು. ಈ ಹೊಸ ಪಠ್ಯಕ್ರಮದಲ್ಲಿ ಈ ಮತ್ತು ಇಂತಹ ಸಂಗತಿಗಳನ್ನು ಬದುಕನ್ನು ನೋಡಿಕೊಳ್ಳುವ ಬೇರು ಚಿಂತನೆಯಾಗಿಸಿಕೊಂಡು ಪಠ್ಯಕ್ರಮವನ್ನು ಯೋಜಿಸಲಾಗಿತ್ತು. ಪದವಿಯಲ್ಲಿ ಎರಡು ವರುಶಕಾಲ ಕನ್ನಡನುಡಿಯನ್ನು ಪಠ್ಯವನ್ನಾಗಿ ಆಯ್ಕೆಮಾಡಿಕೊಂಡು ಕಲಿಯುವವರಿಗಾಗಿ ಸಾಹಿತ್ಯವೂ ಸೇರಿದಂತೆ ಚಿತ್ರಕಲೆ, ಪತ್ರಿಕೆ, ಟಿ.ವಿ. ಮಾಧ್ಯಮ ಪ್ರಧಾನವಾದ ಭಾಷಿಕ ಪಠ್ಯಗಳು, ದಿನದಿನದ ಸಂವಹನ ಚಳಕ, ವ್ಯಾವಹಾರಿಕ ಚಳಕದ ಕಲಿಕೆಯ ಸಾಧ್ಯತೆಗಳು ಈ ಸಂಗತಿಗಳಡಿಯಲ್ಲಿದ್ದವು.

ಪಠ್ಯಕ್ರಮಕ್ಕೆ ಸಂಬಂಧಿಸಿದ ಈ ಉದಾಹರಣೆಯೊಂದನ್ನು ಇಲ್ಲಿ ತೆಗೆದುಕೊಳ್ಳಲು ಕಾರಣವಿಷ್ಟೆ. ಕಲಿಕೆಯ ಸಾಧ್ಯತೆಗಳನ್ನು ಡೆಮಾಕ್ರೆಟಿಕ್ಕಾಗಿರುವಂತೆ ನೋಡಿ ಕೊಳ್ಳುವುದಕ್ಕೆ ಹೇಗೆ ಆಗುತ್ತದೆ ಎಂಬುದರ ಸೂಚನೆಗಳು ಈ ಪಠ್ಯಕ್ರಮದಲ್ಲಿ ಸ್ಪಷ್ಟವಾಗಿ ಕಾಣಿಸುತ್ತವೆ. ಈ ಮೇಲೆ ಸೂಚಿಸಿರುವ ಯಾವುದೇ ಸಂಗತಿ (ಥೀಮ್)ಯೂ ತರಗತಿಯೊಳಗೆ ವಿಸ್ತರಿಸಬಹುದಾದ ಸಾಧ್ಯತೆಗಳ ಸ್ವರೂಪ

ಪ್ರಜಾಪ್ರಭುತ್ವೀಕರಣದ ಹೊಸ ಅರಿವಿನ ದಾರಿಗಳನ್ನು ಬಿಚ್ಚಿಡುತ್ತದೆ. ಉದಾಹರಣೆಗೆ, ಪರಿಸರ ಸಂಗತಿಯೊಂದನ್ನು ಪರಿಶೀಲನೆಗೆ ಒಳಪಡಿಸಿ ನೋಡೋಣ.

ಪರಿಸರ ಕುರಿತಾಗಿ ಸಾಮಾನ್ಯ ಗ್ರಹಿಕೆಯ ಸಾಧ್ಯತೆಗಳಲ್ಲಿರುವಂತೆ ಹಳ್ಳಿ ಪರಿಸರ, ನಗರ ಪರಿಸರ, ಅರಣ್ಯ ಪರಿಸರ, ಜಾಗತಿಕ ಪರಿಸರ, ಅಭಿವೃದ್ಧಿ ಪರಿಸರಗಳನ್ನು ಕುರಿತು ನಾವು ಮಾತನಾಡುತ್ತಿರುತ್ತೇವೆ. ನಮ್ಮ ತರಗತಿಗಳಲ್ಲಿ ಅಥವಾ ಸಭೆ ಸೆಮಿನಾರುಗಳಲ್ಲಿ ಈ ಕುರಿತಾಗಿ ದೊಡ್ಡ ದೊಡ್ಡ ಚರ್ಚೆಗಳನ್ನೂ ಆರಂಭಿಸಿದ್ದೇವೆ. ಪ್ರಾಥಮಿಕ ಶಾಲೆಯಿಂದಲೇ ಪರಿಸರ ಅಂದರೆ ಏನು ಎನ್ನುವ ಪ್ರಶ್ನೆಯನ್ನೂ ಕಲಿಯುವ ಮಕ್ಕಳೆದುರಿಗಿರಿಸಿ 'ನಮ್ಮ ಸುತ್ತಮುತ್ತಲಿನ ವಾತಾವರಣವನ್ನು ಪರಿಸರ ಎನ್ನುತ್ತೇವೆ' ಎಂಬ ಉತ್ತರವನ್ನೂ ಒದಗಿಸಿದ್ದೇವೆ. ಇದು ತಪ್ಪೆಂದು ವಾದಿಸುವುದು ಇಲ್ಲಿನ ಉದ್ದೇಶವಲ್ಲ. ಬದಲಾಗಿ, ಒಂದು ಕ್ಲಾಸ್ ರೂಮು ಎನ್ನುವುದು ಅನೇಕ ಜಾತಿ, ಕುಲ, ಪಣಕಟ್ಟು, ಪಂಗಡ ಸಮುದಾಯಗಳಿಂದ ನಾಗರಿಕ ಕಲಿಕೆಗೆ ಬಂದವರನ್ನು ಒಳಗೊಂಡಿರುವುದಾಗಿದ್ದು, ಇವರು ಸಾಂಸ್ಕೃತಿಕವಾಗಿ, ಭೌಗೋಳಿಕವಾಗಿ ಮತ್ತು ದುಡಿಮೆಯ ಸ್ವರೂಪ, ಆಹಾರದ ರೂಢಿಗಳು ಹಾಗೂ ಬಳಕೆಯ ಭಾಷೆಯ ಬಗೆಗಳ ಕಾರಣವಾಗಿ ರೂಢವಾಗಿ ಬಂದಿರುವ ನಡುವಳಿಕೆಯ ಸ್ವರೂಪದಲ್ಲೂ ಭಿನ್ನತೆಯನ್ನು (ಇದನ್ನು ನಗಣ್ಯವಾಗಿ ಕಾಣುವುದು ಸಲ್ಲ) ಉಳ್ಳವರೇ ಆಗಿರುತ್ತಾರೆ. ಒಂದೇ ಊರು ಅಥವಾ ಒಂದೇ ಪ್ರದೇಶದಿಂದ ಬಂದವರಾದಾಗಲೂ ಅಲ್ಲಿನ ಸಾಮಾಜಿಕ ಸ್ಥಾನದ ಏರುಪೇರಿನಿಂದಾಗಿ ಬೆಳೆದಿರುವ ಸಾಮಾಜಿಕ ಸಂಬಂಧಗಳೂ ಅವರ ಬೆಳವಣಿಗೆಯನ್ನು ಪ್ರಭಾವಿಸಿರುತ್ತವೆ. ಹೀಗಾಗಿ ಒಂದು ಸಾಮಾನ್ಯ ತರಗತಿಯಲ್ಲಿ ಕಲಿಯಲೆಂದು ಬಂದವರು ಒಂದು ಸಂಗತಿಯನ್ನಿಟ್ಟುಕೊಂಡು ಮಾತನಾಡುವುದಕ್ಕೆ-ಓಪನ್ ಆಗುವುದಕ್ಕೆ ಸಾಧ್ಯವಾಗುವುದಾದರೆ ಅಲ್ಲಿ ತೆರೆದುಕೊಳ್ಳುವ ಲೋಕವೇ ಬಹುಪಠ್ಯೀಯವಾಗಿರುತ್ತದೆ. ಜಾತಿ, ಕುಲ, ಪಂಗಡಗಳ ಕಾರಣವಾಗಿಯೇ ಕ್ರಿಯೇಟಾಗಿರುವ ಹಟ್ಟಿಗಳ ಪರಿಸರ, ಬೀದಿಗಳ ಪರಿಸರ, ಪಟ್ಟಣದೊಳಗೂ ಅಭಿವೃದ್ಧಿಯ ದಾರಿಯಲ್ಲಿ ಹೆಜ್ಜೆ ಹಾಕಲು ಸಾಧ್ಯವಿರದೇ ಜೀವಿಸಬೇಕಾಗಿರುವ ಸ್ಲಂ ಪರಿಸರ, ಭೂಮಿ, ಆಸ್ತಿ, ಅಧಿಕಾರ ಮೊದಲಾಗಿ ಆರ್ಥಿಕವಾದ ಅಸಹಜತೆಯಿಂದಾಗಿ ಉಂಟಾಗಿರುವ ಮೇಲರಿಮೆ, ಕೀಳರಿಮೆಗಳ ಪರಿಸರಗಳು ಏಕಕಾಲದಲ್ಲಿ ಎದುರುಬದುರಾಗಿ ನಮ್ಮ ಭೌತಿಕ ಮತ್ತು ಮಾನಸಿಕವಾದ ಸಾಮಾಜಿಕ ಬಡಿದಾಟಗಳನ್ನು ನಿಭಾಯಿಸಬೇಕಾದ ವೇದಿಕೆಯೊಂದು ತಾನೇ ತಾನಾಗಿ ಅಲ್ಲಿ ಜೀವ ಪಡೆಯುತ್ತದೆ. ಹೀಗಾಗಿ ಇಡೀ ತರಗತಿಯೆನ್ನುವುದೇ ಒಂದು ಪಠ್ಯಕ್ರಮವಾಗಿ ಅಗತ್ಯವೂ ಅನಿವಾರ್ಯವೂ ಆದ ಬಹುಮುಖೀ ಪಠ್ಯಗಳು ಅಲ್ಲಿ ಹುಟ್ಟು ಪಡೆಯುತ್ತವೆ. ಕಲಿಕೆ ಎನ್ನುವುದು ಅನೇಕ ಸಾಮಾಜಿಕ ಅಸಂಬದ್ಧತೆಗಳನ್ನೂ, ಸಾಮಾಜಿಕ ಅಸಮಾನತೆಗಳ ಸ್ವರೂಪವನ್ನೂ, ಶ್ರೇಷ್ಠ-ಕನಿಷ್ಠತೆಗಳ ಮಾನ-ಅವಮಾನದ ನೆಲೆಗಳನ್ನೂ ಹೊರಗೆ ಹಾಕಿಕೊಳ್ಳಲು, ಆ ಮೂಲಕ ನೈತಿಕ ಹೊಣೆಗಾರಿಕೆ ಗಳನ್ನು ಪರಸ್ಪರ ತಿಳಿಯಲು ಅನುವು ಮಾಡಿಕೊಡುತ್ತದೆ. ಜೊತೆಗೆ ಕಲಿಯುವವರ ಅರಿವಿನ ಭಾಗವಾಗಿ ಸಾಂಸ್ಕೃತಿಕ ಕೊಡುಕೊಳೆಗಳನ್ನು ಆಗುಮಾಡುವುದರ ಮೂಲಕವೇ ಕಲಿಕೆಯೆನ್ನುವುದು ನಡೆಯಲು ಸಾಧ್ಯವಾಗುತ್ತದೆ. ಪ್ರತಿ ವ್ಯಕ್ತಿಯ ಬೆಳವಣಿಗೆಯಲ್ಲಿ, ಅವರು ಬದುಕಿರುವ ಪರಿಸರವು ಆಗುಮಾಡಿರುವ ಅನೇಕ ಒಪ್ಪ-ಓರಣಗಳು, ಅಸಂಬದ್ಧತೆಗಳು ಹೊರಚಲನೆಯನ್ನು ಪಡೆಯುವುದರ ಮೂಲಕವೇ ಪ್ರಜಾಪ್ರಭುತ್ವವನ್ನು ಸಾಧಿಸುವ 'ಭಾಗವಹಿಸುವಿಕೆ'ಯೆಂಬ ನಿಜದ ತಿಳುವಳಿಕೆಯು ಸಾಧಿತವಾಗುತ್ತಾ ಹೋಗುತ್ತದೆ. ಹೀಗಾಗಿ ಕಲಿಯುವವರಿಗೆ ತಮ್ಮ ಬದುಕನ್ನೇ ಬೇರು ಅನುಭವವಾಗಿರಿಸಿ ಕೊಂಡು ಸಾಹಿತ್ಯ, ವಿಜ್ಞಾನ, ಚರಿತ್ರೆ, ದೇಶ, ನಾಡು, ನುಡಿ ಮೊದಲಾಗಿ ಯಾವುದೇ ಪಠ್ಯಗಳನ್ನು ಅರಿವಾಗಿ ಗ್ರಹಿಸುವ ನೆಲೆಯೊಂದು ತಾನೇ ತಾನಾಗಿ ಸಿಗಲು ಆಗು ಮಾಡುತ್ತದೆ. ಹೀಗೆ ಕಲಿಯುವವರು ಊರು-ಭಾಷೆಯನ್ನು ಸಂಗತಿಯಾಗಿಸಿಕೊಂಡು ನೋಡುವಾಗ ಭೌಗೋಳಿಕ ಮತ್ತು ಭಾಷಿಕ ಭಿನ್ನತೆಗಳ ಮೂಲಕ, ಯುದ್ಧ ಮತ್ತು ಶಾಂತಿಯನ್ನು ಸಂಗತಿಯಾಗಿಸಿಕೊಂಡು ಗಮನಿಸುವಾಗ ವ್ಯಕ್ತಿಗಳ ನಡುವಿನ ಸಂಬಂಧಗಳಿಂದ ಶುರುವಾಗಿ ಗಂಡ-ಹೆಂಡತಿ ಆದಿಯಾಗಿ ಪರಸ್ಪರ ಜಗಳಗಳ ನೆಲೆಯಿಂದ ಕುಟುಂಬ-ಊರು, ಜಾತಿ-ವಿಜಾತಿಗಳು, ದೇಶ ವಿದೇಶಗಳ ನಡುವಿನ ನಿರಂತರ ಬಡಿದಾಟಗಳ ಮೂಲಕವೇ ಗ್ರಹಿಸುವ ಸಾಧ್ಯತೆಗಳು ಹುಟ್ಟಿಕೊಳ್ಳಬಹುದಾಗಿದೆ. ಹೀಗೆ ಅನೇಕ

# ಅಭಿನಂದನೆಗಳು



ಡಾ॥ ಎಂ. ಎಂ. ಕಲಬುರ್ಗಿ

ವಿದ್ವಾಂಸ, ಸಂಶೋಧಕ ಮತ್ತು ಹಂಪಿ ಕನ್ನಡ ವಿಶ್ವವಿದ್ಯಾಲಯದ ಮಾಜಿ ಕುಲಪತಿ ಡಾ॥ ಎಂ. ಎಂ. ಕಲಬುರ್ಗಿ ಅವರಿಗೆ ಮತ್ತು ಪ್ರಾಧ್ಯಾಪಕ, ಹೊಸ ಅಲೆಯ ಚಿತ್ರ ನಿರ್ಮಾಪಕ ಮತ್ತು ಕನ್ನಡ ಪುಸ್ತಕ ಪ್ರಾಧಿಕಾರದ ಮಾಜಿ ಅಧ್ಯಕ್ಷ ಪ್ರೊ॥ ಬರಗೂರು ರಾಮಚಂದ್ರಪ್ಪ ಅವರಿಗೆ ಕನ್ನಡ ವಿಶ್ವವಿದ್ಯಾಲಯ, ಹಂಪಿ, 'ನಾಡೋಜ ಪ್ರಶಸ್ತಿ' ನೀಡಿ ಗೌರವಿಸಿದೆ. ಈ ಇಬ್ಬರೂ ಪುರಸ್ಕೃತರಿಗೆ ನವಕರ್ನಾಟಕದ ಮತ್ತು 'ಹೊಸತು' ಪತ್ರಿಕೆಯ ಹಾರ್ದಿಕ ಅಭಿನಂದನೆಗಳು.



ಡಾ॥ ಬರಗೂರು ರಾಮಚಂದ್ರಪ್ಪ

ಸಾಧ್ಯತೆಗಳನ್ನು ಇಂತಹ ಸಂಗತಿ ಪ್ರಧಾನ ಪಠ್ಯಕ್ರಮವು ಆಗುಮಾಡುತ್ತದೆ.

ಇಂತಹ ಸಾಧ್ಯತೆಗಳನ್ನು ಎದುರಿಗಿರಿಸಿಕೊಂಡಾಗ ನಿರ್ದಿಷ್ಟ ಪಠ್ಯಗಳ ಹಿಂದಿರುವ ಸಾಂಸ್ಕೃತಿಕ ರಾಜಕಾರಣವು ಎಂತಹದೆಂಬುದನ್ನು ಅರಿಯವುದು ಮತ್ತಷ್ಟು ಸುಲಭವೂ ಸ್ಪಷ್ಟವೂ ಆಗುತ್ತದೆ. ಕಲಿಸುವವರು ಬಲು ಹಿಂದಿನಿಂದಲೂ (ಪಾರಂಪರಿಕವಾಗಿ) ಬೆಳೆದಿರುವ ಜಡತೆಯಿಂದ ಬಿಡಿಸಿಕೊಳ್ಳಲು, ಬೋಧನೆಯಲ್ಲಿನ ಅಧಿಕಾರಸ್ಥ ಸಂಬಂಧಗಳನ್ನು ಬಿಟ್ಟುಕೊಡಬಹುದಾದ ಒಂದು ಹೊಸದಾದ ಕಲಿಸುವ (ಅಧ್ಯಾಪನ) ಕ್ರಮ ಮತ್ತು ಅದನ್ನು ನಿರ್ವಹಿಸಬೇಕಾದ ಹೊಣೆಗಾರಿಕೆಯೂ ಸಹ ಅಲ್ಲಿ ರೂಪ ಪಡೆಯುತ್ತದೆ ಎನ್ನುವುದು ಇಂತಹ ಪಠ್ಯಕ್ರಮದ ಸನ್ನಿವೇಶದಲ್ಲಿ ಕಾಣಿಸುತ್ತದೆ ಎನ್ನುವುದು ಮುಖ್ಯ. ಯಾಕೆಂದರೆ, ಆಧುನಿಕವಾದ ಕಲಿಕೆಯ ಕ್ರಮವು ಕಲಿಯುವವರ ಮತ್ತು ಕಲಿಸುವವರ ನಡುವಿನ ಸಂಬಂಧವನ್ನು ಸಂಪ್ರದಾಯಬದ್ಧವಾದ ಅಧಿಕಾರಸ್ಥ ನೆಲೆಯಲ್ಲಿಯೇ ಉಳಿಸಿಕೊಂಡಿರುವುದು ಕಲಿಕೆಯ ಪ್ರಕ್ರಿಯೆಯಲ್ಲಿ ಪ್ರಜಾಪ್ರಭುತ್ವೀಕರಣಕ್ಕಿರುವ ಬಹುದೊಡ್ಡ ತಡೆಗೋಡೆಯಾಗಿದೆ. ಇದಕ್ಕೆ ಪೂರಕವಾಗಿಯೇ ಪಠ್ಯಪುಸ್ತಕಗಳನ್ನು ತಯಾರು ಮಾಡಲಾಗುತ್ತಿದೆ ಅಥವಾ ಪಠ್ಯಗಳನ್ನು ನಿಗದಿಗೊಳಿಸಲಾಗುತ್ತಿದೆ ಎನ್ನುವುದು ಈ ಕುರಿತ ರಾಜಕಾರಣದ ಬೆನ್ನಿಗಿರುವ ಶಕ್ತಿ ಎಂದು ಅರಿಯಬೇಕಾಗಿದೆ.

**ಪಠ್ಯಪುಸ್ತಕಗಳ ಮೂಲಕ ಆಗುಮಾಡುವ ರಾಜಕಾರಣ**

ಇಲ್ಲಿರುವ ಒಂದು ವ್ಯವಸ್ಥಿತ ರಾಜಕಾರಣವನ್ನೂ ಗಮನಿಸದೆ ಇರಲಾಗುವುದಿಲ್ಲ. ಅದೆಂದರೆ ಈ ಪಠ್ಯಗಳ ಮೂಲಕ ಮಂಡಿತವಾಗುವ ಮೌಲ್ಯಗಳನ್ನು ಕುರಿತದ್ದು. ಯಾಕೆಂದರೆ ಒಂದು ನಿರ್ದಿಷ್ಟ ಭಾಷಿಕ ಪ್ರದೇಶದಲ್ಲಿ, ಹಲವು ಧಾರ್ಮಿಕ ಸಮುದಾಯಗಳು, ನೂರೆಂಟು ಜಾತಿ ಸಮುದಾಯಗಳು ವಿಭಿನ್ನವಾದ ಪ್ರಾದೇಶಿಕ ಪರಿಸರಗಳನ್ನು ಹಂಚಿಕೊಂಡು ಬದುಕುತ್ತಿರುತ್ತವೆ. ಪಠ್ಯಗಳಲ್ಲಿ ಮಂಡಿತವಾಗುವ ಮೌಲ್ಯಗಳು ಈ ಎಲ್ಲಾ ಸಮುದಾಯಗಳಲ್ಲೂ ಒಂದೇ ಆಗಿರಬಲ್ಲದು ಎನ್ನುವಂತೆ ಮಂಡಿಸುವುದು ಕೆಳ್ವಿಯಾಗಿಯೇ ಉಳಿಯುತ್ತದೆ. ಯಾಕೆಂದರೆ, ಪ್ರಾಣಿ ಪಕ್ಷಿಗಳನ್ನು ಆಹಾರವಾಗಿ ಬಳಸುವ ಸಮುದಾಯಗಳು ಮತ್ತು ಬಳಸದ ಸಮುದಾಯಗಳ ನಡುವಿನ ಸಾಮಾಜಿಕ ಮತ್ತು ಸಾಂಸ್ಕೃತಿಕ ಸಂಬಂಧವನ್ನು ಅರಿವಿಗೆ ಬರದಂತೆ ಈ ಪಠ್ಯಗಳ ಮುಖಾಂತರ ಸಾಧಿಸುವುದರ ಮೂಲಕ ಕೆಲವರಲ್ಲಿ ಮೇಲರಿಮೆ ಮತ್ತು ಅವಹೇಳನಗಳನ್ನೂ, ಹಲವರಲ್ಲಿ ಕೀಳರಿಮೆ ಮತ್ತು ಕಳೆದುಕೊಳ್ಳುವಿಕೆಯನ್ನೂ ಹುಟ್ಟಿಸಲಾಗುತ್ತದೆ. ಇದರಿಂದಾಗಿ ಹಿಂದು-ಮುಸ್ಲಿಂ, ಹಿಂದು-ಕ್ರಿಶ್ಚಿಯನ್, ಬ್ರಾಹ್ಮಣ-ದಲಿತ, ಜಮೀನ್ದಾರಿ-ಬಿಕಾರಿ, ಅಧಿಕಾರಿ-ಆಳು, ಹೆಂಗಸು-ಗಂಡಸು, ನಗರ-ಗ್ರಾಮ, ಸಂಸ್ಕೃತ-ಕನ್ನಡ, ಇಂಗ್ಲಿಶ್-ಕನ್ನಡ, ಪೇಟೆ-ಸ್ಲಂ ಹೀಗೆ ಹುಟ್ಟುಹಾಕಿರುವ ದ್ವಿಮಾನ ವಿರೋಧಗಳ ನಡುವಿನ ಅರಿವನ್ನು ಮರೆಯಲ್ಲಿ ಇರಿಸಿದ ಕಲಿಕೆಯನ್ನು ಮಂಡಿಸುವ ಪಠ್ಯಪುಸ್ತಕಗಳು ವ್ಯಕ್ತಿಯನ್ನು



# ಕಡೆಯ ಸೂರ್ಯನ ತಾವಿಗೆ




ಕ್ಯೂಬನ್ನರು ನಾವು
ಫಿಡೆಲನ ತಂಗಿ, ಅಣ್ಣ, ತಮ್ಮಂದಿರು
ನಮ್ಮ ಕಣ್ಣಿನ ಹಣ್ಣು - ಅವನು ನಮಗೆ
ಅಣ್ಣನೂ, ನೆಚ್ಚಿನ ತಮ್ಮನೂ
ಹಂಚಿ ಹೊರುವ ತೋಳ್ಗಳು – ನಾವು ಕ್ಯೂಬನ್ನರು !

ಗುರುತು ಸಿಗಲಿಲ್ಲವೆ ?
ನಮ್ಮ ಬೆವರಿನ ಸಕ್ಕರೆಯ ಹೋಳಿಗೆಯನ್ನು
ತಮ್ಮ ಮನೆಯ ಹಬ್ಬದಲ್ಲಿ ಉಂಡು ತೇಗಿದವರು
ಹಳದಿಗಣ್ಣಿನ ನಿಮ್ಮ ದೊಡ್ಡಣ್ಣನವರು ?
ಅವರ ಮನೆಯವರು – ನಾವು ಕ್ಯೂಬನ್ನರು !

ನಿಮಗೆ ಕೇಳಸಿಗಲಿಲ್ಲವೆ ?
''ಎಚ್ಚರ ! ಅವರ ತೋಳೆಲುಬುಗಳು ಬಡಿದುಕೊಳ್ಳುವುದು
ರೆಕ್ಕೆಗಳು ಹಾರಲೆಂದಲ್ಲ, ಪುಕ್ಕಗಳನ್ನು ಹೊದ್ದ
ಮೊನಚು ಖಡ್ಗಗಳನ್ನು ಮಸೆಯಲು.'' ಎಂದೂ ಎಂದೂ
ವಿಶ್ವದಗ್ರಹಾರದ ಡೊಂಕು ಬೀದಿಗಳಲ್ಲಿ ಪಿಸುಗುಡುವ
ತಮಟೆಯನು ಬಾರಿಸುತಿಹರು – ನಿಮ್ಮ ದೊಡ್ಡಣ್ಣನವರು
ಹೂಂಗುಡುತಿಹರು ನಪುಂಸಕ ಪಡೆಯ
ಅವರ ಹಿಂಬದಿಯ ಹಿಂಬಾಲಕರು
ರೆಕ್ಕೆಯ ಹಕ್ಕಿಗಳು – ನಾವು ಕ್ಯೂಬನ್ನರು !

ಅಂದೊಮ್ಮೆ –
ಹೆಲ್ಮ್ಸ್ - ಬರ್ಟನ್, ಟೊರಿಸೆಲ್ಲಿಗಳ
ಕಪ್ಪು ತಂತ್ರಗಳ ದಿಗ್ಬಂಧನದ
ಧೂಪದ ಪರದೆಯ ಹೊರಗಿಣುಕಿ
ಹರಕು ಹಸಿರು ನೋಟುಗಳನ್ನು ಕಚ್ಚಿ ಹಿಡಿದು
ನಮ್ಮ ಜೀವನಾಳಗಳಿಗೆ ಕೊಂಡಿ ಬೆಸೆಯುವ
ಧೂರ್ತ ಹಂಬಲದಿಂದ ನಮ್ಮದೇ ಬಾನ ಬಯಲಿಗೆ
ಹಾರಿಹೊಕ್ಕ ಆ ಕೊಕ್ಕುಗಳಿಗೆ ಕಾಣಿಸಲೆಂದು
ಛಲದ ಗೊಬ್ಬರ ಹೂಡಿ, ಸತ್ಯದಕ್ಷರ ಬಿತ್ತಿ , ಸ್ವಾಭಿಮಾನದ ಮಳೆಗರೆದು

'ನಾಗರಿಕ'ರನ್ನಾಗಿಸುವ ನೆಪದ ವಂಚನೆಯ ಸಾಧನಗಳೇ ಆಗುತ್ತವೆ.

ಈ ಎಲ್ಲಾ ಒಳ ರಾಜಕಾರಣದ ಅರಿವಿಲ್ಲದ ಕಲಿಸುವವರು ಮತ್ತು ಕಲಿಯುವವರು ಅಮಾಯಕತನವನ್ನು ತೋರಿಸಿಕೊಳ್ಳುತ್ತಾ ಇದೇ ನಾವು ಕಲಿಸಬೇಕಾದದ್ದು/ಕಲಿಯಬೇಕಾದದ್ದು ಎಂದು ಒಪ್ಪಿದಂತೆ ಜೀವಿಸತೊಡಗುತ್ತಾರೆ. ಈ ಪ್ರಕ್ರಿಯೆಯಲ್ಲಿ ಸೋಲುತ್ತಾ ಹೋಗುತ್ತಾರೆ. ಈ ಸೋಲಿನಲ್ಲಿ, ಕಲಿಯುವವರ ಕಲಿಕೆಯ ಬೆಳವಣಿಗೆಯ ಏಳುಬೀಳುಗಳಿಗೆ ಕಲಿಸುವವರ ಚತುರತೆಯ ಕೊರತೆಯನ್ನೂ ಅಥವಾ ಕಲಿಯುವವರ ಕುಟುಂಬದ ಪರಿಸರ, ಹಿನ್ನೆಲೆಗಳನ್ನೂ ಕಾರಣವಾಗಿಸಿ ಅದನ್ನೆ ಹೊಣೆಯಾಗಿಸುತ್ತಾ - ಅಪರಾಧೀಕರಿಸುತ್ತಾ ಹೋಗುವುದು ಕಲಿಕೆಯನ್ನು ಒದಗಿಸುವ ವ್ಯವಸ್ಥೆಗಳಿಗೆ ಸುಲಭವೂ ಆಗಿದೆ.

**ಕಲಿಸುವ, ಕಲಿಯುವ ಕೆಲಸ ಆದರ್ಶವೇನಲ್ಲ**

ಡಿಎಡ್/ಬಿಎಡ್ ಕೋರ್ಸುಗಳಲ್ಲಿ ಕಲಿಸುವವರಿಗೆ ನೀಡುವ ತರಬೇತಿಗಳಲ್ಲಿ ನಾಡು-ನುಡಿ, ಸಾಹಿತ್ಯ-ಸಂಸ್ಕೃತಿಯ ಬಗೆಗೆ ಅಭಿಮಾನವನ್ನು ಬೆಳೆಸುವುದು, ಸಾಹಿತ್ಯಾಭಿರುಚಿಯ ಮೂಲಕ ಅಂತರ್‌ದೃಷ್ಟಿ ಮತ್ತು ಆನಂದವನ್ನು ಹೆಚ್ಚಿಸುವುದು, ಸೌಂದರ್ಯಪ್ರಜ್ಞೆ, ಸ್ವಂತಿಕೆ ಮತ್ತು ಸೃಜನಾತ್ಮಕ ಶಕ್ತಿಯನ್ನು ಬೆಳೆಸುವುದು, ಸರ್ವಾಂಗೀಣ ವ್ಯಕ್ತಿತ್ವ ವಿಕಾಸಕ್ಕೆ ಬೇಕಾದ ಜೀವನ ಮೌಲ್ಯಗಳನ್ನು ಕಲಿಸುವುದು, ಸಮಾನತೆ, ರಾಷ್ಟ್ರೀಯ ಪ್ರಜ್ಞೆ, ಜಾತ್ಯಾತೀತತೆ ಮೈಗೂಡಿಸಿಕೊಳ್ಳುವ ಬಗ್ಗೆ ಅರಿವು ಮೂಡಿಸುವುದು, ಸಾಹಿತ್ಯದ ಮೂಲಕ ಪರಿಸರ ಸಂರಕ್ಷಣೆ, ನೈಸರ್ಗಿಕ ಸಂಪನ್ಮೂಲಗಳ ರಕ್ಷಣೆ ಮತ್ತು ವೈಜ್ಞಾನಿಕ ಮನೋಭಾವ ಬೆಳೆಸುವುದು, ಸಾಮಾಜಿಕ, ಆರ್ಥಿಕ, ನೈತಿಕ ಮತ್ತು ಸಾಂಸ್ಕೃತಿಕ ಮೌಲ್ಯಗಳನ್ನು ಪರಿಚಯಿಸುವುದು, ಸಮಸ್ಯೆಗಳ ಕುರಿತ ಚಿಂತನೆ ಮತ್ತು ಅದಕ್ಕೆ ಕಾರಣಗಳನ್ನು ಹುಡುಕುವ ಸಾಮರ್ಥ್ಯವನ್ನು ಬೆಳೆಸುವುದು – ಇಂತಹ ತಾತ್ವಿಕತೆಗಳನ್ನು ಮಂಡಿಸಲಾಗುತ್ತದೆ. ಆದರೆ ಇಂತಹ ನಿಲುವುಗಳನ್ನು ಕಲಿಕೆಯ ಸನ್ನಿವೇಶಕ್ಕೆ ಹೇಗೆ ತಂದು ಕೊಳ್ಳಬೇಕೆಂಬುದಕ್ಕೆ ಯಾವ ಶಿಕ್ಷಣ ತರಬೇತಿಯ ಕೈಪಿಡಿಯಲ್ಲೂ ವಿವರಗಳು ದೊರೆಯಲಾರವು. ಭಾಶಾ ಕಲಿಕೆಯ ಸನ್ನಿವೇಶದಲ್ಲಿಯೂ ಸಹ; ರಸಾಸ್ವಾದನೆಯ ಸಾಮರ್ಥ್ಯ-ನೈತಿಕ, ದೈವತ್ವ ಮತ್ತು ಸತ್ಯಸಂದತೆಗಳನ್ನು ಬೆಳೆಸುವುದು-ಸಾಂಸ್ಕೃತಿಕ ಪರಂಪರೆಯನ್ನು ಪರಿಚಯಿಸುವುದು - ಸೌಂದರ್ಯ ಪ್ರಜ್ಞೆಯನ್ನು ವೃ (ಲೇಖಕರು ಬಳಸಿರುವ ಕಾಗುಣಿತ ಇದು. – ಸಂ.) ದ್ಧಿಸುವುದು- ಸ್ರುಜನಶೀಲತೆ ಮತ್ತು ಉತ್ಪಾದಕ ಶಕ್ತಿಯನ್ನು ಬೆಳೆಸುವುದು-ತಾರ್ಕಿಕ ಚಿಂತನಾಶಕ್ತಿಗಳನ್ನು ಬೆಳೆಸುವುದು-ವೈಚಾರಿಕ, ಸಾಹಿತ್ಯಕ ಮತ್ತು ಭಾಶಾಶಾಸ್ತ್ರದ ಜ್ಞಾನ ಮೂಡಿಸುವುದು- ಪರಿಸರ ರಕ್ಷಣೆ ಎಂದೆಲ್ಲಾ ಬೊಗಳೆ ಹೊಡೆಯಲಾಗುತ್ತದೆ.

ತೆಗೆದೆವು ಸಾರ್ಥಕ ಸಂಜೀವಿನಿಯ ಸ್ವಾವಲಂಬಿ ಬೆಳೆಯನ್ನು
ಮತ್ತೆ ಮತ್ತೆ ತೆಗೆದೆವು...
ಶ್ರಮದ ಸೈನ್ಯದಿರುವೆಗಳು — ನಾವು ಕ್ಯೂಬನ್ನರು !

ಅವರ ಕೋಪ ವಿಕೋಪವಾಗಿ
ಕಣ್ತಪ್ಪಲಿನ ಸಮಯ ಕಾದು ಹೊರಡಿಸಿದರು ಮಗದೊಮ್ಮೆ
ಟೊಳ್ಳು ತಗಡಿನ ರೋಗಗ್ರಸ್ತ ಪಕ್ಷಿ ಸೈನ್ಯವನ್ನು
ನಮ್ಮ 'ಚೆ'ನ ಕಟ್ಟೆಯ ಬಳಗದ ಗೆಳೆಯರ
ಮೂಕ ಹಿಂಡಿನ ಮೇಲೆ
ತನ್ನೊಡಲಿನಲ್ಲವಿತಿಟ್ಟ ಸೂತಕದ ಪಾಷಾಣವನ್ನು ಸೂಸಿ ಹೋಗಲು !

ತಾಳೆ ಕಾನನಗಳಲ್ಲಿ ಅಂದು
ಅದೃಶ್ಯವಾದ ಎಷ್ಟೋ ಕರುಳ ತುಂಡುಗಳ
ಮಾರ್ಮಿಕ ಹಣೆಬರಹದ ನೆವದಲ್ಲಿ ಹರಿಯುವ ತಾಯ್ಗಣ್ಣೀರು
ತಿರುಗಲಿವೆ ಗ್ವಂತನಮೋದ ಆ ಚೋರರ ಹೊಟ್ಟೆಗಳಲ್ಲಿ ಹಳದಿ
ಸಲ್ಫ್ಯೂರಿಕ್ ಆ್ಯಸಿಡ್ಡು !!
ತಾಳೆಗರಿಯ ಎಲೆಗಳು ನಾವು... ಕ್ಯೂಬನ್ನರು.

ಇಂದಿನ್ನೂ ಮಿಡಿಯುತಿದೆ ನಮ್ಮ ನಾಡಿ
ತಾಳ ತಪ್ಪದೆ ಹಾಡುಗಳನ್ನು... 'ಗ್ವಂತನಮೆರಾ'ವನ್ನು

ತೇಲಿಬಂದವು ಬುಟ್ಟಿ ಬುಟ್ಟಿಗಳಲ್ಲಿ ಸ್ನೇಹದ ದಾಸ್ತಾನು
ನಾವು ಒಬ್ಬಂಟಿಗರಲ್ಲ !!
ಸೋವಿಯತ್‌ನ ಕಲ್ಲಿದ್ದಲ ಕಾವು,
ಚೈನಾದ ಟೀ ಸೊಪ್ಪಿನ ಚೈತನ್ಯ,
ಭಾರತದ ಗೋಧಿಯ ಪುಷ್ಟಿ
ಆಫ್ರಿಕಾದ ಕೆಮ್ಮಣ್ಣಿನ ಹಣತೆ,
ವಿಯತ್ನಾಮಿನ ಕೆಚ್ಚೆದೆಯ ಉರಿಬತ್ತಿಗಳು,
ಮೆಕ್ಸಿಕೋದ ಶಾಖದೆಣ್ಣೆ -
ಉರುಳಿಸಿದವು ಅಂಧ ದೆಸೆಯ ಗಾಲಿಗಳನ್ನು,
ಹಚ್ಚಿಹೋದವು ಹೊಸ ಹೊಸ ಆಶಾಕಿರಣಗಳ ದೀಪಾವಳಿಯನ್ನು!
ಅಜಾತ ಶತ್ರುಗಳು... ನಾವು ಕ್ಯೂಬನ್ನರು !

ಇಂದು -
ಇಂದೇನು ನಿಮ್ಮ ಮನೆಯ ವಿಶೇಷ?
ನಮ್ಮ ಅಡುಗೆಮನೆಯಲ್ಲಿಂದು ಹೆಚ್ಚಿಲ್ಲ
ಚೆಲ್ಲಲು - ರೊಟ್ಟಿಯ ಎಂಟು ಅರೆ ತುಂಡುಗಳು
ಇಂದು ಎಂದಿನದೇ ವಿಶೇಷ
ಬೆಳಗಾದರೊಮ್ಮೊಮ್ಮೆ
ತೊದಲು ತುಟಿಗಳಿಗಷ್ಟೆ ನೀರು ಹಾಲಿನ
ಸ್ಪರ್ಶ - ತೊದಲು ನುಡಿವವರೆಗಷ್ಟೆ!
ನಮ್ಮ ತಾಯ್ಗೆಚ್ಚಲ ಮಿಕ್ಕ ಹಾಲೆಲ್ಲ ??
ಒಮ್ಮೆಯಾದರೂ ಬಗ್ಗಿಸಿಟ್ಟ ನಿಮ್ಮ ಕತ್ತೆತ್ತರಿಸಿ ನೋಡಿರಲ್ಲಿ
ನೆರೆಮನೆಯ ಒಕ್ಕೂಟದಲ್ಲಿ ಸಾಮ್ರಾಜ್ಯಶಾಹಿಗಳ ಮೇಲುಗೈ
ಹಿಡಿದೆತ್ತಿರುವ ಕಗ್ಗಾಫಿ ಲೋಟಗಳಲ್ಲಿ !!

ಬೇಡ...
'ಅಯ್ಯೋ-ಪಾಪ'ಗಳನ್ನು ದಯವಿಟ್ಟು ಎಸಗದಿರಿ,
'ತ್ಯಾಗ' ನಮ್ಮ ಮನದಂಗಳದಲ್ಲಿ ನಿತ್ಯದ ಪೂಜೆ,
ಅಂತರಾತ್ಮದಾಳ್ವರು... ನಾವು ಕ್ಯೂಬನ್ನರು !

ಕುಹಕವಾಡುವ ಹಳದಿಗಣ್ಣುಗಳಿಗಿದು
ಸ್ವಯಂಕೃತ ದಾರಿದ್ರ್ಯದ ಪರಮಾವಧಿ ಎನಿಸಿರಬಹುದು
ಆತ್ತರೂ ನಾವು ಅಳುಬುರುಕರಲ್ಲ
ನಮಗೆ ನೋವಿಲ್ಲವೇ ಇಲ್ಲ ನಲಿವಿನದೇ ಕನಸುಗಳ
ಹೊಲದ ರೈತರು ನಾವು ನಾವು - ಕ್ಯೂಬನ್ನರು !

ಧರೆ ಹೊತ್ತ ನಿಜ ಬಯಕೆ
ಇದುವೆ - 'ಸ್ವತಂತ್ರ ಸ್ವರ್ಗ'
ಬನ್ನಿರೊಮ್ಮೆ ನಮ್ಮ ಮನಕೆ
ಕಡೆಯ ಸೂರ್ಯನ ತಾವಿಗೆ.

**ಸೂರಜ್ ಎಸ್. ವಸಿಷ್ಠ**
ನಂ. ೨೪, ಕೆನರಾ ಬ್ಯಾಂಕ್ ಕಾಲನಿ, ೩ನೇ ಬ್ಲಾಕ್ (ಪೂರ್ವ)
ಜಯನಗರ, ಬೆಂಗಳೂರು - ೫೬೦ ೦೧೧

ನಮ್ಮ ಕಲಿಕೆಯ ಹಿಂದಿನ ಇಂತಹ ಗ್ರಹಿಕೆಯಿಂದಾಗಿ ಪಠ್ಯಕ್ರಮಗಳಲ್ಲಿ ಈ ತೊಡಕುಗಳನ್ನು ಪರಿಹರಿಸಿಕೊಳ್ಳಲು ಬೇಕಿರುವ ದಾರಿಗಳನ್ನು ಕಾಣಿಸುವುದಿಲ್ಲ. ಅಂತಹ ಹೊಣೆಗಾರಿಕೆಯಿಂದ ತಪ್ಪಿಸಿಕೊಳ್ಳಲು ಅನುಕೂಲವಾಗುವಂತೆ ನೀತಿಯನ್ನು ಬೋಧಿಸುವ, ಅದನ್ನು ಎಲ್ಲಾ ಜಾತಿ, ಕುಲ, ಧರ್ಮ ಸಮುದಾಯಗಳ ಸನ್ನಿವೇಶಕ್ಕೂ ಸಾಮಾನ್ಯೀಕರಿಸುವ ನೆಪವಿಟ್ಟುಕೊಂಡು ಪಠ್ಯಪುಸ್ತಕಗಳನ್ನು ತಯಾರಿಸಲಾಗುತ್ತದೆ. ಆದರೆ ಇಲ್ಲೂ ಸಹ ಯಾವುದೋ ಒಂದು ಸಮುದಾಯದ ಭಾಗವಾಗಿರುವ ನೀತಿನಿಯಮಗಳೇ ಭಾರತೀಯವೆಂದು ಬಿಂಬಿಸಲ್ಪಡುತ್ತವೆ. ಹೊರತಾಗಿ ನಮ್ಮ ಬದುಕಿನ ಪರಿಸರದವೇ ಆಗಿರುವ ಬೌದ್ಧ, ಜೈನ ಧರ್ಮಗಳು, ಇಸ್ಲಾಂ ಕ್ರಿಶ್ಚಿಯನ್ ಧರ್ಮಗಳು ಮೊದಲ್ಗೊಂಡು ದಮನಿಸಲ್ಪಟ್ಟ ಜಾತಿ, ಕುಲ ಮತ್ತು ಆದಿಮ ಸಮುದಾಯಗಳು ಪಠ್ಯವಾಗಿರಿಸಿರುವ ಈ ವಿಶಯಗಳನ್ನು ಹೇಗೆ ನಿರೂಪಿಸಿ ಕೊಳ್ಳುತ್ತವೆ ಎಂಬುದನ್ನು ಮರೆಯಲ್ಲಿಯೇ ಇಡಲಾಗುತ್ತದೆ. ಇವುಗಳ ಪ್ರಶ್ನೆಯೇನು ಎಂಬುದನ್ನು ಇವುಗಳ ತಯಾರಿಕೆ ಅಥವಾ ನಿಗದಿಯಲ್ಲಿ ಆಲೋಚನೆಗೂ ಭಾರವಾಗೇ ಇರಿಸಿಕೊಳ್ಳಲಾಗುತ್ತದೆ. ಇಂತಹ ಸನ್ನಿವೇಶದಲ್ಲಿ ಭಾಷಾ ಕಲಿಕೆ ಎನ್ನುವುದೂ ಸಹ ಮೂರನೆಯ ಜಾಗದಲ್ಲಿಯೇ ಉಳಿದುಬಿಡುವಂತಾಗುತ್ತದೆ. ಏನೇನನ್ನೋ ಕಲಿಯಲು ಒಂದು ನೆಪವಾಗುತ್ತದೆ. ಆದ್ದರಿಂದಾಗಿ ಯಾರ ಪಠ್ಯ ಸೇರಬೇಕು, ಯಾವ ಪಠ್ಯ ಸೇರಬೇಕು ಎಂಬುದರ ರಾಜಕಾರಣವೊಂದು ಇಲ್ಲಿ ಪ್ರವೇಶ ಪಡೆಯುತ್ತದೆ. ಆದಕ್ಕಾಗಿ ಪ್ರಕಾಶಕ- ಲೇಖಕ ಸಂಬಂಧಿಯಾದ ವಶೀಲಿಬಾಜಿ ವ್ಯವಹಾರವೂ, ಜಾತಿ ಸಂಬಂಧಿಯಾದ ವಕಾಲತುಗಳೂ, ಶ್ರೇಷ್ಠ-ಕನಿಷ್ಠವೆಂಬ ಅವಮಾನಿಸುವ ಅಳತೆಗೋಲುಗಳೂ ಮುಂಚೂಣಿಗೆ ಬಂದು ಕಲಿಯ ಬೇಕಾದುದೇನು ಎನ್ನುವ ನೆಲೆಯು ಮರೆಯಾಗಿಬಿಡುತ್ತದೆ. ಕೆಲವೊಮ್ಮೆ ಒಂದು ಸಮುದಾಯಕ್ಕೆ ಸಹಜವಾದದ್ದು ಮತ್ತೊಂದು ಸಮುದಾಯಕ್ಕೆ ಮುಜುಗರವುಂಟು ಮಾಡುತ್ತದೆಯೆಂಬ ಕಾರಣಗಳೂ ಮುನ್ನೆಲೆಯನ್ನು ಪಡೆದುಕೊಳ್ಳುತ್ತವೆ. ಇಂತಹ ಸನ್ನಿವೇಶಗಳಲ್ಲಿ ಪ್ರಬಲ ಸಮುದಾಯಗಳ ಒತ್ತಾಯಗಳಿಗೆ ಮಣಿದು ಅಂತಹ ಪಠ್ಯಗಳನ್ನು ಮುಟ್ಟುಗೋಲು ಹಾಕುವ ಪ್ರಸಂಗಗಳೂ ನಡೆಯುವಾಗ ಕಲಿಯುವವರು ಕೇವಲ ಅಮಾಯಕರಷ್ಟೆ.

ಇಂತಹ ನೆಪಗಳು ಇತರೆ ವಿಶಯ ಸಂಬಂಧೀ ಕಲಿಕೆಗಳಲ್ಲಿ ಇಲ್ಲವೆಂದೇನಲ್ಲ. ವಿಜ್ಞಾನ, ಸಮಾಜ ವಿಜ್ಞಾನ, ಗಣಿತದ ಪಠ್ಯಕ್ರಮವು ಸ್ಥಳೀಯತೆಯನ್ನು ಕಳೆದುಕೊಂಡ, ದೇಶ ಅಥವಾ ಯೂನಿವರ್ಸಲ್ ತತ್ತ್ವಗಳೆಂದು ಸಾಮಾನ್ಯೀಕರಿಸುವ ನೆಲೆಯಲ್ಲಿ ಹಿಡಿದಿರುವ ಬಡಿಗೆಗಳು ಅರಿವಿನ ದಾಹದ ನೆಪದ ಆದರ್ಶದಲ್ಲಿ ಕಾಣುತ್ತಿರುವುದಿಲ್ಲವಷ್ಟೇ.

## ಕ್ಯುಲರ್ ಎನ್ನುವುದು ವಂಚನೆಗೆ ತೊಡಿಸಿದ ವೇಶ



ಸಮಾಜ ವಿಜ್ಞಾನವೆನ್ನುವುದು ಆಧುನಿಕತೆಯ ಭಾಗವಾಗಿ ವಿದೇಶಿಯರು ಕಟ್ಟಿದ ರಿತ್ರೆ, ಆಧುನಿಕ ಸರಕಾರ ವ್ಯವಸ್ಥೆ, ಪೌರತ್ವನ್ನು ಪಾಲಿಸಬೇಕಾದ ನೀತಿಗಳ ಾದರಿಯನ್ನಷ್ಟೇ ಕಲಿಸುವವರ/ಕಲಿಯುವವರ ಎದುರಿನಲ್ಲಿಡುತ್ತದೆ. ಇಲ್ಲಿಯೂ ಸಹ ಹುಸಮುದಾಯಗಳು ಒಳಗೊಳ್ಳಲಾಗದ ನೆಲೆ ಯೊಂದು ಅನಾವರಣಗೊಳ್ಳುತ್ತದೆಯೇ ೂರತಾಗಿ ಕಲಿಯುವವರ ಮತ್ತು ಕಲಿಸುವವರ ಬದುಕಿನ ಪರಿಸರದ ಮೂಲಕ ರಿಯುವ ಪಾತಳಿಯೊಂದು ಈ ನಡೆಗಳಲ್ಲಿ ಮೈಪಡೆಯುವುದಿಲ್ಲ. ಹೀಗಾಗಿ ದೇಶ ಾಶೆಗಳ ಅಭಿಮಾನದ ಹೆಸರಲ್ಲಿ ಶತ್ರುತ್ತ್ವವನ್ನು ಗಳಿಸುವ, ಬೆಳೆಸುವ ಮತ್ತು ಅಧಿಕಾರಸ್ಥ ಂಬಂಧ ಗಳನ್ನು ವಿಸ್ತರಿಸಿಕೊಳ್ಳುವ ರಚನಾ ಮಾದರಿಗಳು ಮಾತ್ರವೇ ಮುನ್ನೆಲೆಯನ್ನು ಡೆಯುತ್ತವೆ. ಜೊತೆಗೆ ಕಲಿಯುವವರು ಮುಂದೆ ದೇಶದ ನಾಗರಿಕರಾಗಲು ಬೇಕಾಗುವ ೋಗ್ಯತೆಗಳನ್ನು ವಿವರಿಸಲಷ್ಟೇ ಈ ಪಠ್ಯಗಳು ಮಿತಿಗೊಳ್ಳುತ್ತವೆ. ಇದನ್ನು ನುಸರಿಸದವರು ನಾಗರಿಕ ಪ್ರಜೆಗಳಲ್ಲವೆಂಬಂತೆಯೂ, ದೇಶದ್ರೋಹಿಗಳು ನ್ನುವಂತೆಯೂ ಈ ಪಠ್ಯಗಳು ಬಿಂಬಿಸುತ್ತವೆ. ಹೀಗಾಗಿ ಅಧಿಕಾರಸ್ಥ ಸಮುದಾಯಗಳು ದುಕುತ್ತಾ ಬಂದಿರುವ, ಆ ಸಮುದಾಯಗಳು ಅಧಿಕಾರಸ್ಥ ಮಾದರಿಗಳನ್ನು ನಿರಂತರ ೀವಂತವಾಗಿರಿಸಿಕೊಳ್ಳಲು ಬೇಕಾಗುವ ಕಲಿಕೆಯ ಪರಿಕರಗಳು ಮತ್ತು ಕ್ರಮಗಳನ್ನು ಠ್ಯಪುಸ್ತಕಗಳಲ್ಲಿ ತುಂಬಲಾಗಿದೆ. ಈ ಅಧಿಕಾರವನ್ನು ಗಳಿಸಿಕೊಳ್ಳುವ ದಾರಿಯಲ್ಲಿ ದೇಶದ ್ರಜೆ ಯಾಗಿರುವ ಯಾರೂ ಬೇಕಾದರೂ ಭಾಗವಹಿಸಬಹುದು ಎನ್ನುವುದು 'ಸೆಕ್ಯುಲರ್' ದ ತಾತ್ವಿಕತೆಯಾಗಿ ಕಲಿಯುವವರ ಮುಂದಿಡುತ್ತದೆಯಾದರೂ ಅದರ ಸಾಧ್ಯತೆಗಳನ್ನು ಗೆದು ನೋಡುವಂತೆ ಅವಕಾಶವನ್ನು ಒದಗಿಸುವುದಿಲ್ಲ. ಆದರೆ ಅವಕಾಶವನ್ನು ಸದಾ ನಸುತ್ತಲೇ ಇರುವಂತೆ ನೋಡಿಕೊಳ್ಳುತ್ತದೆ. ಮತ್ತು ತನ್ನ ಕನಸನ್ನು ನನಸು ಾಡಿಕೊಳ್ಳಲು ಇರುವ ಅಡ್ಡಿಗಳು ತನ್ನ ಪರಿಸರದವಲ್ಲ, ಅದರಿಂದ ಹೊರಗಿನವು ನ್ನುವ ಭ್ರಮೆಯನ್ನು ಹುಟ್ಟಿಸಿ ತನ್ನದಲ್ಲದ ದೇಶ ಭಾಶೆ ಧರ್ಮ ಎಲ್ಲವನ್ನೂ ದ್ವೇಶಿಸುವಂತೆ ಿರ್ದೇಶಿಸುತ್ತವೆ. ಸೆಕ್ಯುಲರ್ ತಿಳುವಳಿಕೆಗಳನ್ನು ಬಳಸಿಯೇ ವ್ಯಕ್ತಿಯನ್ನು ವಂಚಿಸಲು ಈ ಠ್ಯಗಳು ಬಳಕೆಯಾಗುತ್ತವೆ.

ವಿಜ್ಞಾನ ವಿಶಯವು ವಿಜ್ಞಾನದ ಸ್ಥಳೀಯತೆಯನ್ನು ದೂರವಿಡುವುದರ ಮೂಲಕ ಯೂನಿವರ್ಸಲ್ಲಾದ ತತ್ತ್ವಗಳಿಗೇ ಜೋತುಬಿದ್ದಿರುವುದರಿಂದ ಸ್ಥಳೀಯವಾದ ಸಾಮಾಜಿಕ ಜೀವನದ ವಿರೋಧಗಳನ್ನು ಬಚ್ಚಿಟ್ಟು ವಿಶ್ವಮಾನವರಾಗುವ ಭ್ರಮೆಯನ್ನು ಹುಟ್ಟುಹಾಕುವುದು ಮತ್ತಷ್ಟು ಸಹಜವೆನ್ನುವಂತೆ ಮಾಡಿಕೊಳ್ಳಲು ಸಾಧನವಾಗುತ್ತದೆ. ಆದ್ದರಿಂದಲೇ ಕಲಿಯುವ ಮಕ್ಕಳಲ್ಲಿ ವಿಜ್ಞಾನವನ್ನು ಓದಿ ಡಾಕ್ಟರರು, ಇಂಜಿನಿಯರರು, ವಿಜ್ಞಾನಿಗಳು ಆಗುವ ಆದರ್ಶವನ್ನು ಬೆಳೆಸುವ ಹುನ್ನಾರ ಹಿಂದೆಂದಿಗಿಂತ ಇವತ್ತಿನ ದಿನಗಳಲ್ಲಿ ಬಹು ಜೋರಾಗಿಯೇ ನಡೆಯುತ್ತಿದೆ. 'ವಿಜ್ಞಾನ' ಮತ್ತು 'ಸಮಾಜ ವಿಜ್ಞಾನ'ದ ಉನ್ನತ ಕಲಿಕೆಯಲ್ಲಿ/ಕಲಿಸುವಿಕೆಯಲ್ಲಿಯೂ ಇಂತಹ ಮರೆವಿನ ವೇಶದ ಕೆಲಸಗಳು ಪ್ರಚಂಡವಾಗಿಯೇ ನಡೆಯುತ್ತಿವೆ. ಸಾಹಿತ್ಯ, ಸಂಸ್ಕೃತಿ ಅಧ್ಯಯನಗಳನ್ನು ಆಗುಮಾಡುವ ಪಠ್ಯಗಳ ಮೂಲಕವೂ ಇದಕ್ಕೆ ಪೂರಕವಾದ ಪಾಲನ್ನು ಕೊಡ ಮಾಡುವಂತೆ ವ್ಯವಸ್ಥಿತವಾಗಿಯೇ ನೋಡಿಕೊಳ್ಳಲಾಗುತ್ತಿದೆ, ಕಾಪಾಡಿಕೊಳ್ಳಲಾಗುತ್ತಿದೆ. 'ವಿಜ್ಞಾನ' ಮತ್ತು 'ಸಮಾಜ ವಿಜ್ಞಾನ'ಗಳ ಪಠ್ಯಕ್ರಮವನ್ನು ನಿಗದಿ ಮಾಡುವಾಗ ದೇಶದ/ಪ್ರಾದೇಶಿಕವಾದ ವಿವಿಧ ವಿಶ್ವವಿದ್ಯಾಲಯಗಳ ಪಠ್ಯವ್ಯವಸ್ಥೆಯನ್ನು ಗಮನಿಸಿ ನಿರ್ಧರಿಸುವುದು ಸಾಮಾನ್ಯವಾದ ವಿದ್ಯಮಾನವೆನ್ನುವುದನ್ನು ಗಮನಿಸಿದರೆ ಇದು ಇನ್ನಷ್ಟು ಸ್ಪಶ್ಟವಾಗುತ್ತದೆ.

ಪುಸ್ತಕಗಳಲ್ಲಿ ಅಳವಡಿಸಿರುವ ಕಲಿಕೆಯ ಪಠ್ಯ ಪರಿಕರಗಳು ಕಲಿಯುವವರ ಬದುಕಿನ ಭಾಗವಾಗದೆ ದೂರ ಉಳಿಯಲು ಕಾರಣವಾಗಿರುವ ಸ್ಥಳೀಯವೂ, ರಾಶ್ಟ್ರೀಯವೂ, ಜಾಗತಿಕವೂ ಆದ ಅಧಿಕಾರಸ್ಥ ತಂತ್ರಗಳು ಇಂತಹ ಬಿಕ್ಕಟ್ಟಿಗೆ ಕಾರಣವಾಗಿವೆ ಎನ್ನುವುದನ್ನು ಇದನ್ನು ಆಗುಮಾಡುವ ಆಡಳಿತ ವ್ಯವಸ್ಥೆಗಳು ಗ್ರಹಿಸುವುದಿಲ್ಲವೆಂದೇನಲ್ಲ. ಜಾತಿ ಧರ್ಮಾಧಾರಿತ ಅಧಿಕಾರವಿರಲಿ, ರಾಜಕೀಯವಾದ ಅಧಿಕಾರ ವಿರಲಿ ಅಥವಾ ಇನ್ನಾವುದೇ ಬಗೆಯ ಅಧಿಕಾರವಿರಲಿ




ಅದನ್ನು ಉಳಿಸಿಕೊಳ್ಳಲಶ್ಟೇ ಇದು ಮಾಧ್ಯಮವೂ, ಸಾಧನವೂ ಆಗುವಾಗ ಇಂತಹವನ್ನು ಬಳಸದೇ ಇರಲಾರರು. ಬದಲಾಗಿ ಇವತ್ತು ಈ ಆಡಳಿತ ವ್ಯವಸ್ಥೆಗಳೇ ವಿಶ್ವಮಾರುಕಟ್ಟೆಯ ಭಾಗವಾಗಿ ತಮ್ಮನ್ನು ಗುರುತಿಸಿಕೊಳ್ಳುವ ಹಪಾಹಪಿಯಲ್ಲಿ ಇಂತಹ ಸಿಲೆಬಸ್‌ಗಳನ್ನು, ಇದನ್ನು ಜಾರಿಮಾಡಲು ಬೇಕಾದ ಕೋರ್ಸುಗಳನ್ನು ಕಲಿಕೆಯಲ್ಲಿ ಬಳಕೆಗೆ ತರುವಲ್ಲಿ ಬೆಂಬಲವಾಗಿ ನಿಂತಿವೆ. ಅಥವಾ ಇಂತಹ ಸನ್ನಿವೇಶಗಳಲ್ಲಿ, ಅಧಿಕಾರ ಮತ್ತು ಇನ್ನಿತರೆ ಲಾಭಗಳಿಗಾಗಿ ಅಮಾಯಕರಂತೆ ನಡೆದುಕೊಳ್ಳುವುದನ್ನು ರೂಢಿಸಿಕೊಂಡಿವೆ. ಇದರಿಂದಾಗಿ ಸ್ಥಳೀಯವಾದ ಪರಿಸರ, ಆ ಪರಿಸರದ ನುಡಿ, ಆ ನುಡಿಯಲ್ಲಿನ ಸಾಹಿತ್ಯ, ಬದುಕು ಎಲ್ಲವೂ 'ಸ್ಥಳೀಯ' ಎನ್ನುವ ಕಾರಣಕ್ಕಾಗಿಯೇ ಹೊರೆಯೆನಿಸಿ ಬಿಡುತ್ತವೆ. ಇವು ಕಲಿಯುವ ಕೋರ್ಸುಗಳೊಳಗೆ ತೀರಾ ಮಿತಗೊಳ್ಳುತ್ತವೆ ಅಥವಾ ಇಲ್ಲದಂತೆ ದೂರವಿರಿಸಲಾಗುತ್ತದೆ. ವಿಶ್ವಜ್ಞಾನದ ಮೂಲಕ ಸ್ಥಳೀಯತೆಯನ್ನು ಕಳೆದುಹಾಕುವ ಕಲಿಕೆಯ ಪಠ್ಯಗಳು, ಸಿದ್ಧಾಂತಗಳು, ಮೆಥಡಾಲಜಿಗಳು ಕಲಿಯುವವರು ತಮ್ಮ ಸಹವರ್ತಿ ನೆಲೆಗಳಿಂದ ದೂರ ಉಳಿಯುವಂತೆ ಒತ್ತಾಯಿಸತೊಡಗುತ್ತವೆ. ಜಾಗತಿಕ ತಿಳಿವಿನ ಮೂಲಕ ಸ್ಥಳಿಯವಾದ ನಮ್ಮ ಬದುಕು ರಿಚ್ಚಾಗುತ್ತದೆ ಎಂದು ಭ್ರಮಿಸುವ ಅರಿವುಗಳನ್ನು ಕಟ್ಟುವ ವಾರಸುದಾರರು, ಅದನ್ನು ಬೆಂಬಲಿಸುವ ವ್ಯವಸ್ಥೆಗಳು ಈ ಹುನ್ನಾರುಗಳ ಅರಿವಿಲ್ಲದಂತೆ ನಡೆದುಕೊಳ್ಳುತ್ತಿ ರುವುದೇ ಕೇಡಿನ ಸಂಗತಿಯೆಂದು ತಪ್ಪದೇ ತಿಳಿಯಬೇಕಾಗಿದೆ.

ಇನ್ನು, ಕಲಿಯುತ್ತಾ ಬೆಳೆಯುವ ವ್ಯಕ್ತಿಗೆ – 'ಸಾಮಾಜಿಕ ನ್ಯಾಯ'ದ ನಡೆಯಲ್ಲಿ- ಕೇಡನ್ನೇ ಉಣಿಸುವ ಪರೀಕ್ಷೆ ಮತ್ತು ಮೌಲ್ಯಮಾಪನ ಚಟುವಟಿಕೆಗಳು ಡೆಮಾಕ್ರಸಿಯನ್ನು ಇಲ್ಲವಾಗಿಸು ತ್ತಿರುವ ಅಸಹನೆಯ ಕುರಿತಾಗಿ ತೀವ್ರತರವಾದ ಚರ್ಚೆಯನ್ನೇ ಶುರುಮಾಡಬೇಕಿದೆಯಲ್ಲವೇ ?

ಆರ್. ಚಲಪತಿ
ಶೇಷಾದ್ರಿಪುರಂ ಕಾಲೇಜು, ಶೇಷಾದ್ರಿಪುರಂ, ಬೆಂಗಳೂರು-೨೦

# ಕರ್ನಾಟಕ ರಾಜ್ಯದಲ್ಲಿ ಅಂತರ್ಜಲದ ಅಭಾವವೇಕೆ?

ಎನ್. ಪಿ. ಶ್ರೀಕಾಂತ

ವಸ್ತುವಿನ ಬೇಡಿಕೆ ದೊರಕುವಿಕೆಗಿಂತಲೂ ಜಾಸ್ತಿಯಾದಾಗ ಅಭಾವವುಂಟಾಗು ದೆ. ಅಂತರ್ಜಲವೂ ಸಹ ಅದನ್ನೇ ಪಾಲಿಸುತ್ತದೆ. ಅಂತರ್ಜಲದ ಶೇಖರಣೆಗೂ ಹ ಮಳೆಯೇ ಮುಖ್ಯ ಆಧಾರ.

ಆದರೆ, ಮಳೆಯ ಪೂರ್ಣಾಂಶ ಅಂತರ್ಜಲವಾಗಲು ಪ್ರಕೃತಿ ಎಡೆಕೊಡುವುದಿಲ್ಲ. ಮಳೆಯ ನೀರು ನೆಲದ ಮೇಲೆ ಬಿದ್ದ ನಂತರ, ಹರಿವಿಗೂ, ಆವಿಗೂ ಹಾಗೂ ಇಳಿಕೆಗೂ ಹಂಚಿಹೋಗುತ್ತದೆ. ಈ ವಿತರಣೆಯನ್ನು ವಿಜ್ಞಾನಿಗಳು ಒಂದು ಸುಲಭ ಸೂತ್ರದಲ್ಲಿ ತಿಳಿದುಕೊಳ್ಳುವರು.

ಪಿ = ಕ್ಯೂ + ಇ + ಕ್ಯೂ – ΔS

ಇದರಲ್ಲಿ, 'ಪಿ' ಮಳೆಯ ಪ್ರಮಾಣ 'ಕ್ಯೂ' ನೆಲದ ಮೇಲೆ ಹರಿಯುವ ಭಾಗ 'ಇ' ಎಂಬುವುದು ಆವಿಯಾಗುವ ಭಾಗ ಹಾಗೂ 'ΔS' ಎಂಬುವುದು ಅಂತರ್ಜಲದ ಭಾಗ. ಈ ನಾಲ್ಕು ಅಂಶಗಳೂ ಸಹ ಪರಿಸರಕ್ಕನುಗುಣವಾಗಿ ಹೆಚ್ಚು ಅಥವಾ ಕಡಿಮೆಯಾಗುತ್ತವೆ.

'ಪಿ' ಎಂಬ ಮಳೆಯ ಅಂಶವು ಸಾಮಾನ್ಯವಾಗಿ ಬೇಸಿಗೆ ಅಥವಾ ಒಣಹವೆ ಪ್ರದೇಶಗಳಲ್ಲಿ ಅಲ್ಪವಾಗಿಯೂ, ಚಳಿಗಾಲದಲ್ಲಿ ಸ್ವಲ್ಪವಾಗಿಯೂ, ಮಳೆಯಾಗುವ ಕಾಲದಲ್ಲಿ ಅಧಿಕವಾಗಿಯೂ ಇರುತ್ತದೆ. ಈ ಮಳೆಯ ಅನೇಕ ವರ್ಷಗಳ ಸರಾಸರಿಗನುಸಾರವಾಗಿ, ಮಳೆಯನ್ನು 'ಅತಿವೃಷ್ಟಿ' 'ಅನಾವೃಷ್ಟಿ' ಎಂದು ಗುರುತಿಸ ಬಹುದು. ಈ ಎರಡು ರೀತಿಗಳೂ ಸಹ, ಅಂತರ್ಜಲವನ್ನು ಪೋಷಿಸಲೂಬಹುದು ಅಥವಾ ಕ್ಷೀಣಿಸಲೂಬಹುದು. ಇದಕ್ಕೆ ಈ ಪರಿಸ್ಥಿತಿಗಳ ಮರುಬರುವಿಕೆ ಅಥವಾ ಪುನರಾವೃತ್ತಿ ಮುಖ್ಯ ಪಾತ್ರ ವಹಿಸುತ್ತದೆ.

'ಕ್ಯೂ' ಎಂಬ ಮಳೆಯ ಅಂಶವನ್ನು ನಿರ್ಧರಿಸುವ ಅತಿ ಮುಖ್ಯ ಪರಿಸರ ಇಳಿಜಾರು. (ಚಿತ್ರ-೧) ಇದು ಬೆಟ್ಟ ಪ್ರದೇಶಗಳಲ್ಲಿ ಕಡಿದಾಗಿಯೂ, ಮಟ್ಟ ಪ್ರದೇಶಗಳಲ್ಲಿ ಸಾಮಾನ್ಯವಾಗಿಯೂ, ಕಣಿವೆಗಳಲ್ಲಿ ಕ್ಷೀಣವಾಗಿಯೂ ಇರುತ್ತದೆ. ಈ ಮೂರು ವಿಧಗಳನ್ನು ಬೆಟ್ಟ, ಮಟ್ಟ, ಕಣಿವೆ ಎಂದು ವಿಶಾಲವಾಗಿ ವಿಂಗಡಿಸಬಹುದಾದರೂ ಸಹ, ಪ್ರತಿ ವಿಧಗಳೂ ಸಹ ಎಲ್ಲ ರೀತಿಗಳನ್ನೂ ಒಳಗೊಂಡಿರುತ್ತವೆ. ಎತ್ತರದ ಭಾಗಗಳನ್ನು 'ಅಂತರ್ಜಲ ಪೂರಕ' Recharge ಮತ್ತು




ಚಿತ್ರ ೧ ಇಳಿಜಾರು

ಕಣಿವೆ ಭಾಗಗಳನ್ನು 'ಅಂತರ್ಜಲ ವಿಸರ್ಜಕ' ಎಂದು ಪರಿಗಣಿಸುವರು. ಇವು ಅಂತರ್ಜಲ ಶೇಖರಣೆಯಲ್ಲಿ ಬದಲಾವಣೆಗಳನ್ನು ಉಂಟುಮಾಡುವುವು.

'ಇ' ಎಂಬ ಆವೀಕರಣ ಅಂಶವು ಪ್ರದೇಶದ ಶಾಖ ಮತ್ತು ಜಲಮೂಲಗಳು ನೆಲಕ್ಕೆ ಹೊಂದಿರುವ ಸಮೀಪತೆಯಿಂದ ಬದಲಾಗುತ್ತವೆ. ಶಾಖ ಜಾಸ್ತಿ ಹಾಗೂ ಜಲಮೂಲ ನೆಲಕ್ಕೆ ಹತ್ತಿರವಿದ್ದಾಗ, ಆವೀಕರಣ ಅಧಿಕವಾಗಿರುತ್ತದೆ. ಆದ್ದರಿಂದ ಆವೀಕರಣದ ಅಂಶವು ಅಂತರ್ಜಲಕ್ಕೆ ನಗಣ್ಯವಾಗಿರುತ್ತದೆ. (ಚಿತ್ರ-೨). ಭಾವಣೆ ನೀರಿನ ಸಂಗ್ರಹಣೆಗೆ ಆದ್ಯತೆ ಬಂದಿರುವುದು ಈ ಆವೀಕರಣದ ನಷ್ಟವನ್ನು ತಡೆಗಟ್ಟುವ




ಚಿತ್ರ ೨

ಒಂದು ವಿಧಾನವೆಂದು ಪರಿಗಣಿಸುವುದರಿಂದಲೇ ಎಂದರೆ ತಪ್ಪಾಗಲಾರದು.

+ ಅಥವಾ – ΔS ಎಂಬ ಅಂತರ್ಜಲದ ಅಂಶವು, ಈ ಮಳೆಯ ನೀರು ಹರಿದು ಮೇಲ್ಜಲಗಳನ್ನು ತುಂಬಿಸುವಾಗ, ಆವೀಕರಣಕ್ಕೆ ತುತ್ತಾಗುವುದೇ ಅಲ್ಲದೆ, ಪ್ರದೇಶದ ಶಿಲಾಗುಣಗಳಿಗನುಸಾರವಾಗಿ ನೆಲಕ್ಕೆ ಇಳಿದು ಅಂತರ್ಜಲವಾಗುವ ಭಾಗ. ಆದ್ದರಿಂದಲೇ ಈ ಮಳೆ ನೀರಿನ ಭಾಗವು ಉಳಿಯಲೂಬಹುದು (+) ಅಥವಾ




ಚಿತ್ರ ೩

ಉಳಿಯದೆಯೂ ಇರಬಹುದು (–). ಆದ್ದರಿಂದ, ಈ ಅಂತರ್ಜಲ ಶೇಖರಣೆ ಈ ಎಲ್ಲ ಕ್ರಿಯೆಗಳ ಒಂದು ಸಂಕೀರ್ಣ ಅಂಶ. ಇದರಿಂದಾಗಿ, ಈ ಅಂತರ್ಜಲದ ಭಾಗ ವಿಶ್ವದ ಜಲಮೂಲಗಳಲ್ಲಿ ಕೇವಲ ಶೇಕಡ ೧ ಅಥವಾ ಅದಕ್ಕಿಂತಲೂ ಕಡಿಮೆ.

ಈ ಮಳೆ ನೀರು ಕೆಳಗೆ ಇಳಿಯಲು ಶಿಲಾರಂಧ್ರಗಳ ಮೊತ್ತ, ಆಕಾರ ಮತ್ತು ಅಗಲಗಳು ಮುಖ್ಯ ಪಾತ್ರವಹಿಸುತ್ತವೆ. (ಚಿತ್ರ-೩ ಅ, ಆ, ಇ). ಇವು ಸಾಮಾನ್ಯವಾಗಿ ಶಿಲೆಯಾಗಿರದ ದಂಡೆ ಪ್ರದೇಶಗಳಲ್ಲಿ ಅತಿಯಾಗಿಯೂ ಮೆತ್ತನೆಯ ಶಿಲೆಗಳಲ್ಲಿ ಸಾಮಾನ್ಯವಾಗಿಯೂ, ಗಡಸು ಶಿಲೆಗಳಲ್ಲಿ ಅತಿ ಕಡಿಮೆಯಾಗಿಯೂ ಇರುತ್ತವೆ. ಈ ಇಳುವಿಕೆಯ ದರವು ಪ್ರದೇಶದಲ್ಲಿ ದೊರಕಬಲ್ಲ ಅಂತರ್ಜಲದ ಮೊತ್ತವನ್ನು ನಿರ್ಧರಿಸುತ್ತದೆ. ಈ ದರ ಮತ್ತು ಮೊತ್ತವನ್ನು 'Re = RAP' ಎಂಬ ಸೂತ್ರವನ್ನು ಅನುಸರಿಸಿ ತಿಳಿಯುವರು. 'Re = ದೊರಕುವ ಅಂತರ್ಜಲ ಮೊತ್ತ 'R' = ಪ್ರದೇಶದ ಸರಾಸರಿ ವಾರ್ಷಿಕ ಮಳೆ, 'A' ಒಂದೇ ಪ್ರಮಾಣದ ಮಳೆ ಇರುವ ಪ್ರದೇಶದ ವಿಸ್ತೀರ್ಣ 'P' : ಶಿಲಾರಂಧ್ರಗಳಲ್ಲಿಯ ಇಳಿಕೆ.

ವಿವಿಧ ಶಿಲಾ ಪ್ರಭೇದಗಳಲ್ಲಿ, ಅಂದರೆ, ಶಿಲೆಯಾಗಿರುವ ಮರಳು ಜಲ್ಲಿಗಳಲ್ಲಿ ಅತಿಯಾಗಿಯೂ (ಶೇಕಡ ೨೦), ಮೆದು ಶಿಲೆಗಳಲ್ಲಿ ಸಾಮಾನ್ಯವಾಗಿಯೂ (ಶೇಕಡ ೧೨) ಮತ್ತು ಗಡಸು ಶಿಲೆಗಳಲ್ಲಿ, ಕಡಿಮೆಯಾಗಿಯೂ (ಶೇಕಡ ೭) ಇಳಿಕೆಯ ಅಂಶ ಇರುತ್ತದೆ. ಉದಾಹರಣೆಗೆ: ವಿಸ್ತೀರ್ಣ ೧೦೦೦ ಕಿ.ಮೀ.², ಮಳೆ ೭೦೦ ಮಿ.ಮೀ. (೦.೭ಮೀ.)

# ಬೆಂಗಳೂರಿನ ನಗರೀಕರಣ : ಯೋಜನೆ ಮತ್ತು ಆಡಳಿತದ ಕೊರತೆಗೊಂದು ದೃಷ್ಟಾಂತ



ಡಾ|| ಟಿ. ವಿ. ರಾಮಚಂದ್ರ

**ನ**ಗರ ಪ್ರದೇಶಗಳು ರಾಷ್ಟ್ರೀಯ ಆರ್ಥಿಕತೆಯ ಬಹುಮುಖ್ಯ ಭಾಗ. ಅವು ಜಿಡಿಪಿಯ ಶೇಕಡ ೫೦ರಿಂದ ೬೦ರಷ್ಟನ್ನು ನೀಡುತ್ತವೆ. ಉದ್ಯೋಗಾವಕಾಶ ನೀಡುವ ಈ ಪ್ರದೇಶ ಹೆಚ್ಚು ಜನನಿಬಿಡತೆಯನ್ನು ಹೊಂದಿ, ಅಲ್ಲಿ ಸ್ಲಂಗಳು ಹುಟ್ಟಿಕೊಂಡು, ಕುಡಿಯುವ ನೀರು, ನೈರ್ಮಲ್ಯ, ಆರೋಗ್ಯ, ಶುದ್ಧ ಹವೆ, ಉತ್ತಮ ಸಾರಿಗೆ ಇವುಗಳಲ್ಲೆಲ್ಲ ಅಪಾರ ಕೊರತೆಯನ್ನು ಅನುಭವಿಸುತ್ತಿವೆ. ವಾಸ ಮಾಡುವ ಸ್ಥಳದಿಂದ ಕೆಲಸ ಮಾಡುವ ಸ್ಥಳಕ್ಕೆ ಹೋಗಿಬರುವುದೆ ಕಷ್ಟವಾಗುತ್ತಿದೆ. ಇವೆಲ್ಲವುಗಳನ್ನು ಯೋಜಿಸಿ, ಅಭಿವೃದ್ಧಿ ಪಡಿಸಲು ರಚಿಸಿರುವ ಹಲವು ವಿಧದ ಆಡಳಿತ ಸಂಸ್ಥೆಗಳ ಅಸಮರ್ಥತೆಯನ್ನು ಈ ಪರಿಸ್ಥಿತಿ ಪ್ರತಿಬಿಂಬಿಸುತ್ತದೆ. ಸ್ಥಳೀಯ ಸಂಸ್ಥೆಗಳಾದ ಮುನಿಸಿಪಾಲಿಟಿ, ಕಾರ್ಪೊರೇಷನ್‌ಗಳು, ರಾಜ್ಯಸರ್ಕಾರದ, ಕೇಂದ್ರ ಸರ್ಕಾರದ ಹಲವು ಸಂಸ್ಥೆಗಳು ಈ ಹೊಣೆ ಹೊತ್ತವು. ಇವುಗಳೆಲ್ಲ ಸಕಾಲದಲ್ಲಿ ಯೋಜನೆಗಳನ್ನು ತಯಾರಿಸಿ, ಸಾಕಷ್ಟು ಸಂಪನ್ಮೂಲಗಳನ್ನು ಪಡೆದು, ಮೂಲ ಸೌಕರ್ಯಗಳನ್ನು ಅಭಿವೃದ್ಧಿ ಪಡಿಸುವುದು ನಿರಂತರ ನಡೆಯುತ್ತಲೇ ಇರಬೇಕು. ಅವುಗಳಲ್ಲಿ ಲಾಭಕೋರ ವಾಣಿಜ್ಯ ಮತ್ತು ಭ್ರಷ್ಟ ರಾಜಕಾರಣಿಗಳ ಹಸ್ತಕ್ಷೇಪ ಇರಬಾರದು.

ನಗರಸಭೆಗಳೇ ಎಲ್ಲವನ್ನು ನಿರ್ವಹಿಸುವುದಿಲ್ಲ. ರಾಜ್ಯ ಸರ್ಕಾರದ ಸಂಸ್ಥೆಗಳು ನಗರಸಭೆಗೆ ನೀಡುವ ನಿರ್ದೇಶನಗಳು, ಹಣಕಾಸು ಇವು ನಗರಸಭೆಯ ಸಾಮರ್ಥ್ಯವನ್ನು ನಿರ್ಧರಿಸುತ್ತವೆ. ಹಾಗೆಯೇ ಕೇಂದ್ರ ಸರ್ಕಾರದ ಸಂಸ್ಥೆಗಳ ಪಾತ್ರವೂ. ಆದರೂ ನೇರವಾಗಿ ಪೌರನಿಗೆ ಉತ್ತರದಾಯಿತ್ವ ನಗರ ಸಭೆಯದೆ ಆಗಿರುತ್ತದೆ. ಅವು ತಮ್ಮದೇ ವೈಫಲ್ಯಗಳ ಜೊತೆಗೆ, ರಾಜ್ಯ, ಕೇಂದ್ರ ಸರ್ಕಾರಗಳ ವೈಫಲ್ಯಕ್ಕೂ ಹೊಣೆಯಾಗುತ್ತವೆ. ಸಂವಿಧಾನದಂತೆ ನಗರಸಭೆಗಳಿಗೆ ಈ ಕುರಿತು ಸಾಕಷ್ಟು ಅಧಿಕಾರ ನೀಡಬೇಕು ಮತ್ತು ಅವುಗಳ ಕರ್ತವ್ಯ ನಿರ್ವಹಿಸಲು ಅವಕ್ಕೆ ತಕ್ಕ ಬೆಂಬಲವನ್ನು ನೀಡಬೇಕು. ಆದರೆ ವಾಸ್ತವದಲ್ಲಿ ಇದು ಆಗಿಲ್ಲ. ರಾಜ್ಯ ಸರ್ಕಾರ ಪದೇಪದೇ ಚುನಾಯಿತ ನಗರಸಭೆಯನ್ನು ಬರಖಾಸ್ತು ಮಾಡಿ, ತನ್ನದೇ ಅಧಿಕಾರ ಚಲಾಯಿಸುವ ಪ್ರಜಾಪ್ರಭುತ್ವ ವಿರೋಧೀ ಕ್ರಮ ನಡೆಯುತ್ತಿದೆ. ಹೀಗಾಗಿ ನಗರಾಭಿವೃದ್ಧಿ ಯೋಜನೆ ಮತ್ತು ಅದನ್ನು ಕಾರ್ಯಗತಗೊಳಿಸುವ ಹೊಣೆಗಾರಿಕೆ ನೇರವಾಗಿ ರಾಜ್ಯಸರ್ಕಾರದ್ದೇ ಆಗಿರುತ್ತದೆ. ಇಷ್ಟಾದರೂ ಪೌರನಿಗೆ ಆವಶ್ಯಕ ಸೇವೆಗಳನ್ನು ಒದಗಿಸುವ ಜವಾಬ್ದಾರಿ ನಗರಾಡಳಿತದ್ದೇ ಆಗಿರುತ್ತದೆ.

ನಗರಾಭಿವೃದ್ಧಿ ಯೋಜನೆಯ ಬಹುಮುಖ್ಯ ಕೆಲಸ ಅಲ್ಲಿ ಸೀಮಿತವಾಗಿ ಲಭ್ಯವಿರುವ ಭೂಮಿಯ ಸರಿಯಾದ ಬಳಕೆಯನ್ನು ಕುರಿತದ್ದು. ಭೂಮಿಯ ಬಳಕೆಯ ಇನ್ನೊಂದು

ಈ ಅಧ್ಯಯನದಿಂದ ಹೊರಹೊಮ್ಮಿರುವ ಪಾಠ ನಗರಾಭಿವೃದ್ಧಿಯನ್ನು ರಾಜಕೀಯ-ವಾಣಿಜ್ಯದ ಅಪವಿತ್ರ ಒತ್ತಡಕ್ಕೆ ಮಣಿಯದೆ, ವೈಜ್ಞಾನಿಕವಾಗಿ ಯೋಜಿತವಾಗಿ ನಡೆಸಬೇಕಾದ ಶಿಸ್ತು ಎಂದು ಪರಿಗಣಿಸುವ ಜವಾಬ್ದಾರಿಯತ್ತ ಗಮನ ಸೆಳೆಯುತ್ತದೆ. ಕೆಡಿಸಿದ್ದನ್ನು ಸರಿಪಡಿಸುವುದು ತುಂಬ ಕಷ್ಟ. ಕೆಡಿಸದೆಯೇ ಅಭಿವೃದ್ಧಿಪಡಿಸುವುದು ಸಾಧ್ಯ. ಇದಕ್ಕೆ ಬೇಕಾದ ವಿಜ್ಞಾನ ನಮ್ಮಲ್ಲಿದೆ. ತಂತ್ರಜ್ಞಾನ ಪರಿಣತರು ಇದ್ದಾರೆ. ನೀತಿನಿಷ್ಠೆಯೊಂದೇ ಈಗಿರುವ ಕೊರತೆ. ಇದು ಕೇವಲ ಹಣದ ವಿಷಯವಲ್ಲ.



ಮುಖವೆ ಸ್ಥಳಾವಕಾಶದ ಸರಿಯಾದ ಬಳಕೆ. ಒಂದು ಜಾಗದಲ್ಲಿ ಪಾರ್ಕ್ ಬೇಕೆ, ಶಾಲೆಯೇ, ಆಸ್ಪತ್ರೆಯೇ, ಕೈಗಾರಿಕೆಯೇ ಮುಂತಾಗಿ ಇವಕ್ಕೆ ತಕ್ಕ ನೀತಿ ನಿರೂಪಣೆ ಮಾಡಬೇಕು ಮತ್ತು ಅಭಿವೃದ್ಧಿ ಅದರಂತೆ ನಡೆಯುವಂತೆ ನಿಭಾಯಿಸಬೇಕು. ಇವೆಲ್ಲ ನಗರದ ಅಭಿವೃದ್ಧಿಯ ಮಾದರಿ ಬಹಳಕಾಲ ನಿಲ್ಲುವಂತೆ, ಸಂವಹನ ಸಾಧ್ಯವಾಗಿರಬೇಕು. ಒಂದು ರಸ್ತೆ ಮಾಡಿ, ಕೆಲವೇ ವರ್ಷಗಳಲ್ಲಿ ಅದು ಸಾಲದಿದ್ದರೆ ಅಲ್ಲಿ ಯೋಜನೆಯ ದೋಷ, ದೀರ್ಘಕಾಲೀನ ದೃಷ್ಟಿ ಇಲ್ಲದಿರುವುದು, ಸ್ಪಷ್ಟವಾಗುತ್ತದೆ. ಅಂದರೆ ಪರಿಸರವನ್ನು ಸಂರಕ್ಷಿಸಿಕೊಂಡು, ಅಭಿವೃದ್ಧಿ ಎಂಬುದು ಹೊಸ ಸಮಸ್ಯೆ ಹುಟ್ಟು ಹಾಕದೆ, ಸಸ್ಟೈನಬಲ್, ಅಂದರೆ ಉಳಿಸಿ, ಮುಂದುವರಿಸಿಕೊಂಡು ಹೋಗಲು ಸಾಧ್ಯವಾಗಬೇಕು. ಇನ್ನು ಐದು ವರ್ಷಕ್ಕೆ, ಹತ್ತು ವರ್ಷಕ್ಕೆ, ಅರ್ಧ ಶತಮಾನಕ್ಕೆ ನಗರದ ಯಾವ ಯಾವ ಪ್ರದೇಶದಲ್ಲಿ ಎಂತೆಂಥ ಬೆಳವಣಿಗೆಗಳು ಬರಬಹುದು, ಅವಕ್ಕೆ ಭೂಮಿಯೂ ಸೇರಿ ಏನೇನು ಬೇಕು, ಮತ್ತು ಅವಕ್ಕೆ ಅಗತ್ಯವಾದ ಭೂಮಿಯನ್ನು ಇಂದೆ ಕಾದಿರಿಸುವ ಹಾಗೆ ಮುನ್ನೋಟದ ಯೋಜನೆ ಬೇಕು. ಇಂದು ಮಾಡುವ ಹಲವು ಕೆಲಸಗಳು ದೀರ್ಘಕಾಲೀನ ಪರಿಣಾಮ ಉಳ್ಳವು ಎಂಬ ಪ್ರಜ್ಞೆ ಇರಬೇಕು. ಇದರ ಪ್ರಾಮುಖ್ಯವರಿತ ರಾಜ್ಯ ಸರ್ಕಾರ ಇದಕ್ಕಾಗಿ ತನ್ನದೇ ನಿಯಂತ್ರಣದ ಅಭಿವೃದ್ಧಿ ಪ್ರಾಧಿಕಾರದಂಥ ಸಂಸ್ಥೆಗಳನ್ನು ಸೃಷ್ಟಿಸುತ್ತದೆ. ಇದರ ಒಂದು ಬಹುಮುಖ್ಯ ಕೆಲಸವೆಂದರೆ ಅಭಿವೃದ್ಧಿ ಯೋಜನೆಯ ಮಾಸ್ಟರ್‌ಪ್ಲಾನ್ ತಯಾರಿಸಿ, ಪ್ರಚಾರ ನೀಡುವುದು. ಇದನ್ನು ನಿಯತಕಾಲದಲ್ಲಿ ಪುನರ್ವಿಮರ್ಶಿಸುತ್ತಾ ನವೀಕರಣಗೊಳಿಸುತ್ತಿರಬೇಕು. ಅದನ್ನು ಯಾರೂ ಅತಿಕ್ರಮಿಸದೆ ಪಾಲಿಸುವಂತೆ ವ್ಯವಸ್ಥೆ ಮಾಡಬೇಕು. ಅತಿಕ್ರಮಿಸಿದರೆ ಶಿಕ್ಷೆ ಆ ವ್ಯವಸ್ಥೆಯ ಭಾಗವಾಗಿರಬೇಕು. ಬಹಳಷ್ಟು ನಗರಸಭೆಗಳಲ್ಲಿ ನೀರು ಮತ್ತು ಒಳಚರಂಡಿ ವ್ಯವಸ್ಥೆ ನಗರಸಭೆಯ ಜವಾಬ್ದಾರಿಯಾದರೂ, ಅಭಿವೃದ್ಧಿಯೋಜನೆ ರಾಜ್ಯ ಸರ್ಕಾರದ ಸಂಸ್ಥೆಯದೇ ಆಗಿರುತ್ತದೆ.

ನಗರದ ಎಲ್ಲೆಯನ್ನು ಮೀರಿ ಹೊರಗೆ ಹರಿದಿರುವ ಒಳ್ಳೆಯ ರಸ್ತೆ ಎಷ್ಟಿದೆ ಎಂಬುದು ನಗರದ ಅಭಿವೃದ್ಧಿಯ ಒಂದು ಸೂಚಕ. ಬೆಂಗಳೂರಿನಲ್ಲಿ ಲಭ್ಯವಿರುವ ನೆಲದ ಕೊರತೆಯಿಂದಾಗಿ, ನಗರ ಪ್ರದೇಶದ ಹೊರಾವರಣವಲ್ಲೂ, ವಿಪರೀತ ಬೆಲೆ ಏರಿ, ದಳ್ಳಾಳಿಗಳ ಪ್ರಭಾವಕ್ಕೆ ಸಿಕ್ಕಿದೆ. ಇಲ್ಲಿ ಯಾವುದೇ ಯೋಜನೆಯ ನಿಯಮಗಳಿಗೆ ಗಮನವಿಡದೆ, ನಗರದ ಯೋಜಿತ ಬೆಳವಣಿಗೆಯನ್ನು ಕೆಡಿಸುವ ಕಟ್ಟಡ, ರಸ್ತೆ ಮುಂತಾದುವುಗಳು ಹಿಗ್ಗಾಮುಗ್ಗಾ ಬೆಳೆಯುತ್ತಿವೆ. ನಗರಸಭೆಗಳು ಕ್ರಮಶಃ ಈ ಪ್ರದೇಶಗಳನ್ನು ತಮ್ಮ ಅಧೀನಕ್ಕೆ ವಹಿಸಿಕೊಂಡು, ಅವಕ್ಕೂ ನೀರು, ಒಳಚರಂಡಿ ಮುಂತಾದ ಮೂಲಸೌಲಭ್ಯಗಳನ್ನು ಒದಗಿಸಬೇಕಾಗುತ್ತದೆ. ಹೀಗೆ ಯೋಜನಾರಹಿತ ಬೆಳವಣಿಗೆಗಳನ್ನು ಅಭಿವೃದ್ಧಿ ಯೋಜನೆಯೊಳಗೆ ಅಳವಡಿಸುವುದು ಒಂದು ತಾಂತ್ರಿಕ ಸವಾಲಾಗುತ್ತದೆ ಹಾಗೂ ಸಂಪನ್ಮೂಲಗಳ ಕೊರತೆಯುಂಟಾಗುತ್ತದೆ. ಅಧಿಕ ಬಂಡವಾಳ ಹೂಡಿಕೆಯನ್ನು ಬಯಸುತ್ತದೆ.

ನಗರಾಭಿವೃದ್ಧಿ ಯೋಜನೆಯೂ ಒಂದು ತಾಂತ್ರಿಕ ಕ್ಷೇತ್ರದ ಶಾಸ್ತ್ರ. ಆದರನ್ನಾಯ ಈ ಮೇಲಿನ ವಿಷಯಗಳನ್ನು ಗಮನದಲ್ಲಿಟ್ಟುಕೊಂಡು, ಬೆಂಗಳೂರು ಮಹಾನಗರದ ಬೆಳವಣಿಗೆಯನ್ನು ಅಭ್ಯಸಿಸಬಹುದು. ಮೊದಲಿಗೆ ಎಗ್ಗಿಲ್ಲದ ಬೆಳವಣಿಗೆ, ಅದನ್ನು ಗಮನಿಸಿ, ನಂತರ ಅವುಗಳ ನಡುವೆ ಯೋಜನೆಯ ಶಿಸ್ತನ್ನು ತರುವುದು. ನಗರದ ಪರಿಸರ ಸಂರಕ್ಷಿಸುವಲ್ಲಿ ಅಂದರೆ ಈ ಪ್ರದೇಶದ ನೀರಿನ ತಾಣಗಳು, ಹಸಿರು ಪದರ, ಇಂಧನದ ಲಭ್ಯತೆ ಮುಂತಾದುವುಗಳು ಒಡ್ಡುವ ಸಮಸ್ಯೆಗಳನ್ನು, ಸ್ಥಳೀಯ ವಾತಾವರಣ ಮಾಲಿನ್ಯದ ಸಮಸ್ಯೆಯನ್ನು ಮೊದಲಿಗೆ ತಿಳಿಯುವುದು ಅವುಗಳ ಪರಿಹಾರಕ್ಕೆ ಮುಖ್ಯ. ಶಿಸ್ತಿಲ್ಲದ ನಗರೀಕರಣ ತನ್ನ ಭೂಪ್ರದೇಶದಲ್ಲಿ ಪ್ರಾಕೃತಿಕ ಮೂಲವಸ್ತುಗಳ ಕೊರತೆಯನ್ನು ಉಂಟುಮಾಡುತ್ತದೆ. ಅಲ್ಲಿ ಲಭ್ಯವಿರುವ ಕೆರೆ ಕುಂಟೆಗಳನ್ನು ಕಡಿಮೆ ಮಾಡುತ್ತದೆ. ಅಲ್ಲಿ ಲಭ್ಯವಿರುವ ಅಂತರ್ಜಲದ ದಾಸ್ತಾನು ಕಡಿಮೆಯಾಗುತ್ತದೆ. ಬೆಂಗಳೂರು ಮಹಾನಗರ ಈ ಎಲ್ಲ ಪರಿಣಾಮಗಳನ್ನು ಅನುಭವಿಸುತ್ತಿರುವುದು ಈ ಕುರಿತ ಅಧ್ಯಯನದಿಂದ ಸ್ಪಷ್ಟವಾಗಿದೆ. ನಗರೀಕರಣದ ಕೆಲವು ಮುಖ್ಯ ಪರಿಣಾಮಗಳನ್ನು ಪಟ್ಟಿ ಮಾಡಬಹುದು.

೧. ನೀರು ಹರಿಯುವ ಸ್ವಾಭಾವಿಕ ಮಾರ್ಗಗಳೆಲ್ಲ ರಸ್ತೆಯೋ, ನಿವೇಶನವೋ ಆಗಿ, ಸಣ್ಣ ಮಳೆಯಲ್ಲೂ ದೊಡ್ಡ ಪ್ರವಾಹವಾಗುತ್ತದೆ. ಮನೆಯೊಳಗೆಲ್ಲಾ ನೀರು ನುಗ್ಗುತ್ತದೆ. ಬಿದ್ದ ಮಳೆಯ ನೀರನ್ನು ಭೂಮಿ ತನ್ನಲ್ಲೇ ಹೀರಿಕೊಳ್ಳುವುದು ಕಡಿಮೆಯಾಗುತ್ತದೆ. ಒಂದು ಕಾಲದಲ್ಲಿ ಕೆರೆಯಾಗಿದ್ದ ತಗ್ಗುಪ್ರದೇಶವನ್ನು ನಿವೇಶನವಾಗಿಸಿದ ಸ್ಥಳದಲ್ಲಿ ಈ ಸಮಸ್ಯೆ ತೀರ ಗಂಭೀರವಾಗುತ್ತದೆ. ಮರಗಿಡಗಳನ್ನೆಲ್ಲ ಕತ್ತರಿಸಿ, ನಿವೇಶನ ಮಾಡಿರುವುದೂ ಇದಕ್ಕೆ ಕಾರಣವಾಗುತ್ತದೆ. ಈ ಪ್ರವಾಹಪೀಡೆಯನ್ನು ಪರಿಪಡಿಸಬೇಕಾದರೆ ಮೂಲದಲ್ಲಿ ಇದ್ದ ಕೆರೆಕುಂಟೆಗಳನ್ನು, ಅವುಗಳ ಆಯಕಟ್ಟಿನ ಸ್ವಾಭಾವಿಕ ನೀರು ಹರಿವ ಮಾರ್ಗಗಳನ್ನು ತೆರವುಗೊಳಿಸಬೇಕಾಗುತ್ತದೆ.

೨. ಮನುಷ್ಯನ ವಾಸದಿಂದ ಉಂಟಾಗುವ ಅನೇಕ ಬದಲಾವಣೆಗಳು ಆ ಪ್ರದೇಶದಲ್ಲಿ ಹೆಚ್ಚು ಉಷ್ಣತೆಯನ್ನು ಉಂಟುಮಾಡುತ್ತದೆ. ಹೆಚ್ಚು ಶಕ್ತಿಯ, ಇಂಧನದ





ಬಳಕೆ, ರಸ್ತೆಗೆ ಬಳಿದ ಡಾಂಬರು, ಕಾಂಕ್ರೀಟುಗಳು, ಸಾಕಷ್ಟು ಸಸ್ಯದ ಹೊದಿಕೆ ಇಲ್ಲದಿರುವುದು ಇವೆಲ್ಲ ಶಾಖವನ್ನು ಪ್ರಾಕೃತಿಕವಾಗಿ ಹೀರಿಕೊಳ್ಳಲಾಗದೆ, ವಾತಾವರಣಕ್ಕೆ ಸೇರಿಸಿ ಉಷ್ಣತೆ ಹೆಚ್ಚುತ್ತದೆ. ೧೮೩೦ರಲ್ಲಿ ಬೆಂಗಳೂರಿನ ತಾಪಮಾನ ೧೬-೧೮° ಸೆಂಟಿಗ್ರೇಡ್ ಇತ್ತು. ಇಂದು ಅದು ಸರಾಸರಿ ೩೪-೩೬° ಸೆಂಟಿಗ್ರೇಡ್ ಆಗಿದೆ. ಕಳೆದ ಇಪ್ಪತ್ತು ವರ್ಷದಲ್ಲೇ ತಾಪಮಾನದ ವೃದ್ಧಿ ೨-೨.೫° ಸೆಂಟಿಗ್ರೇಡ್ ಅಷ್ಟಾಗಿದೆ.

೩. **ನೀರಿನ ತಾಣಗಳು ನಶಿಸಿದ್ದು** : ಕೆರೆಕುಂಟೆಗಳು ಬತ್ತಿಹೋಗಿರುವುದು ಅವುಗಳ ನೆಲದಲ್ಲಿ ಕಟ್ಟಡಗಳು ಬಂದಿರುವುದು. ಅವುಗಳ ಪರಿಣಾಮವಾಗಿ ಕೊಳವೆಬಾವಿಯ ಆಳ ಹೆಚ್ಚುತ್ತಾ, ಅಂತರ್ಜಲ ಕಡಿಮೆಯಾಗುತ್ತಿರುವುದು. ಬೆಂಗಳೂರು ನಗರದ ಹರಹನ್ನು ಸೂಚಿಸುವ, ವಿವಿಧ ಕಾಲಘಟ್ಟದ ಚಿತ್ರಗಳನ್ನು ನೀಡಲಾಗಿದೆ. ಅವುಗಳನ್ನು ಗಮನಿಸಿದರೆ ೧೯೭೩ರಿಂದ ೨೦೦೯ರವರೆಗೆ ಕ್ರಮಕ್ರಮವಾಗಿ ಕಟ್ಟಿದ ಪ್ರದೇಶ ಹೆಚ್ಚುತ್ತಾ, ಸಸ್ಯದ ಹೊದಿಕೆ ಕಮ್ಮಿಯಾಗುತ್ತಾ, ನೀರಿನ ತಾಣಗಳು, ಕೆರೆಕುಂಟೆಗಳು ಮರೆಯಾಗುತ್ತಾ ಇರುವ ಬೆಳವಣಿಗೆಯನ್ನು ತೋರಿಸುತ್ತದೆ. ಈ ನಾಲ್ಕು ದಶಕಗಳಲ್ಲಿ ನೀರಿನ ತಾಣಗಳಲ್ಲಿ ಶೇಕಡ ೭೯ರಷ್ಟು, ಮತ್ತು ಹಸಿರು ಹೊದಿಕೆಯಲ್ಲಿ ಶೇಕಡ ೬೬ರಷ್ಟು ಕುಗ್ಗಿಹೋಗಿದೆ ಎಂದು ಹೇಳುತ್ತವೆ ಈ ಚಿತ್ರಗಳು.

೪. **ಕೊಳವೆಬಾವಿಯಲ್ಲಿ ನೀರಿನ ಇಂಗು** : ಕೆರೆಕುಂಟೆಗಳಿಗೂ, ಕೊಳವೆಬಾವಿಯ ನೀರಿನ ಆಳಕ್ಕೂ ನೇರ ಸಂಬಂಧವಿದೆ. ಅವು ಹಾಳಾದಂತೆಲ್ಲ, ಕೊಳವೆಬಾವಿಯ ಆಳವೂ ಹೆಚ್ಚುತ್ತಾ ಹೋಗುತ್ತದೆ. ಅಂದರೆ ಅಂತರ್ಜಲ ಮಟ್ಟ ಕೆಳಕ್ಕೆ ಇಳಿಯುತ್ತಾ ಹೋಗುತ್ತದೆ. ಕೇವಲ ೨೦ ವರ್ಷಗಳ ಹಿಂದೆ ೨೮ ಮೀಟರ್‌ಗಳ ಆಳದಲ್ಲಿ ನೀರು ದೊರೆಯುತ್ತಿತ್ತು. ಈಗ ಅದು ೩೦೦ ಮೀಟರ್‌ಗೂ ಹೆಚ್ಚಿದೆ. ವೈಟ್‌ಫೀಲ್ಡ್‌ನಂತಹ ಹೆಚ್ಚು ಸಾಂದ್ರತೆಯ ಹೊಸ ನಗರ ಬಡಾವಣೆಗಳಲ್ಲಿ ಇದು ೪೦೦-೫೦೦ ಮೀಟರ್‌ನಷ್ಟು ಕೆಳಕ್ಕೆ ಇಳಿದಿದೆ.

೫. **ಇಂಗಾಲದ ಹೆಚ್ಚುವಿಕೆ** : ಕಟ್ಟಡದ ಗಾಳಿ ಬೆಳಕಿಗೆ ತೆರೆದುಕೊಳ್ಳದಿದ್ದಾಗ ಹೆಚ್ಚು ಹೆಚ್ಚು ವಿದ್ಯುತ್ ಬಳಕೆಯನ್ನು ಬೇಡುತ್ತದೆ. ನಮ್ಮದು ಭೌಗೋಳಿಕವಾಗಿ ಉಷ್ಣಪ್ರದೇಶ. ಇಲ್ಲಿಗೆ ತಕ್ಕ ಕಟ್ಟಡಗಳ ರಚನೆಯಾಗಬೇಕಿತ್ತು. ಆಗ ಅಲ್ಲಿ ವಿದ್ಯುತ್ ಬಳಕೆ ಕಮ್ಮಿಯಾಗುತ್ತಿತ್ತು. ಹಾಗಾಗದೆ ಇಂದು ಬೆಂಗಳೂರಿನಲ್ಲಿ ಇಂಧನದ ಬೇಡಿಕೆ ಅಗಾಧವಾಗಿ ಬೆಳೆದಿದೆ. ಅದು ಸಾಕಷ್ಟು ಇಲ್ಲ ಎನ್ನುವುದು ಹಾಗಿರಲಿ. ಹೆಚ್ಚು ಇಂಧನದ ಬಳಕೆ ಅಂದರೆ ಹೆಚ್ಚು ಇಂಗಾಲ ವಾತಾವರಣಕ್ಕೆ ಸೇರುತ್ತದೆ. ಖಾಸಗಿ ವಾಹನಗಳ ಸಂಖ್ಯೆ ವಿಪರೀತ ಹೆಚ್ಚಿದೆ ರಸ್ತೆ ಸಂಚಾರದಲ್ಲಿ ಪದೇ ಪದೇ ವಾಹನ ದಟ್ಟಣೆ ಉಂಟಾಗುತ್ತಿದೆ. ಸಾಗುವ ಗತಿ ನಿಧಾನವಾಗುತ್ತಿದೆ. ಇವೆಲ್ಲಾ ನಮ್ಮ ವಾತಾವರಣವನ್ನು ಕೆಡಿಸಿ, ಅಪಾರವಾದ ವಾಯುಮಾಲಿನ್ಯ ಉಂಟುಮಾಡಿದೆ. ಇದರ ಜೊತೆಗೇ ನಗರದಲ್ಲಿ ಉತ್ಪತ್ತಿಯಾಗುವ ಬೃಹತ್ ಪ್ರಮಾಣದ ದ್ರವ, ಘನ, ಪ್ಲಾಸ್ಟಿಕ್ ತ್ಯಾಜ್ಯ ರೂಪದ ಕಸವೂ, ಅದರ ಅಸಮರ್ಪಕ ವಿತರಣೆಯೂ ಇದಕ್ಕೆ ಕಾರಣವಾಗಿದೆ. ಅವು ನೈರ್ಮಲ್ಯದ, ಆರೋಗ್ಯದ ಸಮಸ್ಯೆಯನ್ನು ಹುಟ್ಟುಹಾಕಿವೆ.

ಒಟ್ಟಿನಲ್ಲಿ ಈ ಅಧ್ಯಯನದಿಂದ ಹೊರಹೊಮ್ಮಿರುವ ಪಾಠ ನಗರಾಭಿವೃದ್ಧಿಯನ್ನು ರಾಜಕೀಯ-ವಾಣಿಜ್ಯದ ಅಪವಿತ್ರ ಒತ್ತಡಕ್ಕೆ ಮಣಿಯದೆ, ವೈಜ್ಞಾನಿಕವಾಗಿ ಯೋಜಿತವಾಗಿ ನಡೆಸಬೇಕಾದ ಶಿಸ್ತು ಎಂದು ಪರಿಗಣಿಸುವ ಜವಾಬ್ದಾರಿಯತ್ತ ಗಮನ ಸೆಳೆಯುತ್ತದೆ. ಕೆಡಿಸಿದ್ದನ್ನು ಸರಿಪಡಿಸುವುದು ತುಂಬ ಕಷ್ಟ. ಕೆಡಿಸದೆಯೇ ಅಭಿವೃದ್ಧಿ ಪಡಿಸುವುದು ಸಾಧ್ಯ. ಇದಕ್ಕೆ ಬೇಕಾದ ವಿಜ್ಞಾನ ನಮ್ಮಲ್ಲಿದೆ. ತಂತ್ರಜ್ಞಾನ ಪರಿಣತರು ಇದ್ದಾರೆ. ನೀತಿನಿಷ್ಠೆಯೊಂದೇ ಈಗಿರುವ ಕೊರತೆ. ಇದು ಕೇವಲ ಹಣದ ವಿಷಯವಲ್ಲ.

**ಡಾ|| ಟಿ. ವಿ. ರಾಮಚಂದ್ರ**
ಸಂಘಟಕ, ಇಂಧನ ಮತ್ತು ತೇವಭೂಮಿಯ ಸಂಶೋಧನೆಯ ಗುಂಪು, ಫ್ಯಾಕಲ್ಟಿ ಅಸೋಸಿಯೇಟ್
ಸೆಂಟರ್ ಫಾರ್ ಸಸ್ಟೈನಬಲ್ ಟೆಕ್ನಾಲಜೀಸ್, ಭಾರತೀಯ ವಿಜ್ಞಾನ ಸಂಸ್ಥೆ
ಬೆಂಗಳೂರು - ೫೬೦ ೦೧೨
e-mail : cestvr@ces.iisc.ernet.in



ಪರಂಜ್ಯೋತಿ

# ಹೆಬ್ಬಂಡೆಯ ಮೇಲೊಂದು ಭದ್ರಕೋಟೆ ಚೆಂಜಿ

ಚೆಂಜಿ ದಕ್ಷಿಣ ತಮಿಳ್ನಾಡಿನ ವಿಳುಪುರಂ ಜಿಲ್ಲೆಯ ಒಂದು ನಗರ. ಊರಿನ ಹೊರಗಿರುವ ಇತಿಹಾಸ ಪ್ರಸಿದ್ಧ ಚೆಂಜಿ ಕೋಟೆಯ ಕಾರಣ ಆ ನಗರದ ಖ್ಯಾತಿ ಹರಡಿದೆ. ಚೆಂಜಿ ಚೆನ್ನೈ ಪಟ್ಟಣದಿಂದ 160 ಕಿ.ಮೀ. ದೂರದಲ್ಲಿ ತಿರುವಣ್ಣಾಮಲೈಯ ಮಾರ್ಗದಲ್ಲಿದೆ. ಸಮೀಪದ ರೈಲು ನಿಲ್ದಾಣವೆಂದರೆ ದಿಂಡಿವನಂ. ಕೇಂದ್ರಾಡಳಿತ ಪ್ರದೇಶವಾದ ಪಾಂಡಿಚೆರಿ ಅಲ್ಲಿಗೆ 60 ಕಿ.ಮೀ. ದೂರದಲ್ಲಿದೆ. ಸುಮಾರು ಸಾವಿರ ವರ್ಷಗಳ ವರ್ಣರಂಜಿತ ಇತಿಹಾಸ ಇದರದು.

ವಿಶಾಲ ಬಯಲಿನಲ್ಲಿ ಅಲ್ಲಲ್ಲಿ ದೊಡ್ಡ ಬಂಡೆಗಳನ್ನು ತಂದು ಸುರಿದಿರುವಂತೆ ರೂಪುಗೊಂಡಿರುವ ಬೆಟ್ಟಗಳು. ಅದು ಪೂರ್ವಘಟ್ಟಗಳ ಒಂದು ಸೆರಗು. ಕೋಲಾರ ಜಿಲ್ಲೆ ಅಥವಾ ಹಂಪೆಗೆ ಹೋಲಿಸಬಹುದಾದ ಭೂಲಕ್ಷಣ. ಸುತ್ತಮುತ್ತ ಅಂಥವೇ ಕಲ್ಲು ಬೆಟ್ಟಗಳು. ತಪ್ಪಲಿನಲ್ಲಿ ಅಲ್ಲಲ್ಲಿ ಊರುಗಳು, ಫಲವತ್ತಾದ ಭೂಮಿ, ಹೊಲ ಗದ್ದೆಗಳು, ಮರ ಗಿಡಗಳು.

ನಮ್ಮ ನೆಲವನ್ನು, ಕೋಟೆಗಳನ್ನು ಬಹಳ ಸಲೀಸಾಗಿ ವಶಪಡಿಸಿಕೊಂಡ ಬ್ರಿಟಿಷರಿಗೆ ಸ್ಥಳೀಯ ಹೆಸರುಗಳನ್ನು ಉಚ್ಚರಿಸಲು ತೊಡಕು. ತಮಿಳಿನ ಸೆಂಜಿ ಅಥವಾ ಚೆಂಜಿಯನ್ನು ಅವರು 'ಜಿಂಜಿ' ಎಂದು ಛಾಪಿಸಿದರು. ಬ್ರಿಟಿಷರು ಭಾರತದ ಊರುಗಳ ಹೆಸರುಗಳನ್ನು ಅಧ್ವಾನ ಮಾಡಿರುವ ಕುರಿತು ಸಂಶೋಧನೆ ಮಾಡಿದರೆ ಸ್ವಾರಸ್ಯಕರವಾಗಿರುತ್ತದೆ. ಈಗಲೂ ಇಂಗ್ಲಿಷ್ ಪಾಠಗಳಲ್ಲಿ 'ಜಿಂಜಿ' ಎಂಬ ಹೆಸರೇ ಉಳಿದಿದೆ!

ಚೆಂಜಿ ಕೋಟೆಯದು ಸುಮಾರು ಸಾವಿರ ವರ್ಷಗಳ ವರ್ಣರಂಜಿತ ಇತಿಹಾಸ. ರಕ್ಷಣೆಯ ದೃಷ್ಟಿಯಿಂದ ಆಯಕಟ್ಟಿನ ಸ್ಥಳದಲ್ಲಿರುವುದರಿಂದ ಅದನ್ನು ವಶಪಡಿಸಿಕೊಳ್ಳಲು ಅದಕ್ಕೆ ಲಗ್ಗೆ ಇಟ್ಟ ರಾಜರುಗಳ ಸಂಖ್ಯೆಯೂ ಹೆಚ್ಚು. ಇತಿಹಾಸದಲ್ಲಿ ಅದು ಆಗಾಗ ಒಬ್ಬರ ನಂತರ ಮತ್ತೊಬ್ಬರಂತೆ ಅನೇಕ ರಾಜರ ವಶದಲ್ಲಿತ್ತು. ಚೋಳ ರಾಜವಂಶದವರು ಒಂಬತ್ತನೇ ಶತಮಾನದ ಪ್ರಾರಂಭದಲ್ಲಿ ಅಲ್ಲಿ ಒಂದು ಸಣ್ಣ ಕೋಟೆ ಕಟ್ಟಿಸಿದ್ದರು. ಆ ಪ್ರಾಂತದಲ್ಲಿ ಪ್ರಬಲವಾಗಿದ್ದ ಕುರುಂಬ ಪಾಳೆಗಾರರು ಚೋಳರೊಂದಿಗೆ ಹೋರಾಡಿ ಅದನ್ನು ತಮ್ಮ ವಶಕ್ಕೆ ತೆಗೆದುಕೊಂಡರು. ಮುಂದೆ ೧೩ನೇ ಶತಮಾನದಲ್ಲಿ ವಿಜಯನಗರದ ಅರಸರು ಅದನ್ನು ವಶಪಡಿಸಿಕೊಂಡು ಕೋಟೆಯನ್ನು ಬಲಪಡಿಸಲು ಕ್ರಮ ಕೈಗೊಂಡರು.

ತಮಿಳ್ನಾಡಿನ ಆ ಭಾಗದಲ್ಲಿ ನಾಯಕ ಅರಸರು ಪ್ರಬಲರಾಗಿದ್ದಾಗ 'ಚೆಂಜಿ ನಾಯಕ'ರು ಅದನ್ನು ವಶಪಡಿಸಿಕೊಂಡರು. ಶತ್ರು ಸೈನ್ಯಗಳ ಆಕ್ರಮಣವನ್ನು ಹಿಮ್ಮೆಟ್ಟಿಸುವುದು ಆ ಕೋಟೆ ನಿರ್ಮಾಣದ ಮುಖ್ಯ ಉದ್ದೇಶವಾಗಿತ್ತು. ಆಗ ಅಂಥ ಪ್ರಬಲ ಕೋಟೆಯನ್ನು ವಶಪಡಿಸಿಕೊಂಡರೆ, ಸುತ್ತಲಿನ ಪ್ರಾಂತ್ಯವನ್ನು ಗೆಲ್ಲಲು ಅದು ಆಧಾರ ತಾಣವಾಗುತ್ತಿತ್ತು. ಈ ಮಧ್ಯೆ ಸ್ವಲ್ಪಕಾಲ ಬಿಜಾಪುರದ ಸುಲ್ತಾನನ ವಶದಲ್ಲಿದ್ದ ಕೋಟೆ ಕ್ರಿ.ಶ. ೧೬೭೭ರಲ್ಲಿ ಶಿವಾಜಿ ನಾಯಕತ್ವದ ಮರಾಠರ ವಶಕ್ಕೆ ಬಂದಿತು. ಅವರು ಅದನ್ನು ಮತ್ತಷ್ಟು ಬಲಪಡಿಸಿದರು. ಛತ್ರಪತಿ ಶಿವಾಜಿಯ ಅಭಿಪ್ರಾಯದಂತೆ ಆಗಿನ ಇಂಡಿಯಾದಲ್ಲಿ ಚೆಂಜಿ ಅತ್ಯಂತ ಅಭೇದ್ಯ ಕೋಟೆಯಾಗಿತ್ತು.

ಮೊಘಲರು ದಖ್ಖನಿನಲ್ಲಿ ಸೈನ್ಯ ಕಾರ್ಯಾಚರಣೆ ನಡೆಸುತ್ತಿದ್ದ ಸಂದರ್ಭದಲ್ಲಿ,

ಆಗಷ್ಟೆ ಪಟ್ಟಕ್ಕೆ ಬಂದಿದ್ದ ಶಿವಾಜಿಯ ಎರಡನೆಯ ಮಗ ಛತ್ರಪತಿ ರಾಜಾರಾಮ್ ಮೊಘಲರಿಂದ ತಪ್ಪಿಸಿಕೊಂಡು ದೂರದ ಚೆಂಜಿ ಕೋಟೆಗೆ ಬಂದು ಮೊಘಲ ವಿರುದ್ಧ ಅಲ್ಲಿಂದಲೇ ಹೋರಾಟ ಪ್ರಾರಂಭಿಸಿದ. ಮೊಘಲರು ಹೆಚ್ಚು ಸೈನ್ಯದ ಸಹಾಯದಿಂದ ಕೋಟೆಗೆ ಮುತ್ತಿಗೆ ಹಾಕಿದರೂ ಏಳು ವರ್ಷಗಳ ಕಾಲ ಕೋಟೆಯನು ತಮ್ಮ ವಶಕ್ಕೆ ತೆಗೆದುಕೊಳ್ಳಲು ಸಾಧ್ಯವಾಗಲಿಲ್ಲ. ಕೊನೆಗೆ ೧೬೯೮ರಲ್ಲಿ ಚೆಂಜಿ ಕೋಟೆ ಮೊಘಲರ ವಶವಾಯಿತು. ಆದರೆ ಆ ವೇಳೆಗೆ ಛತ್ರಪತಿ ರಾಜಾರಾಮ ಅಲ್ಲಿಂದ ತಪ್ಪಿಸಿಕೊಂಡಿದ್ದ! ಮುಂದೆ ಅದು ಕರ್ನಾಟಕದ ನವಾಬರ ವಶಕ್ಕೆ ಬಂದಿತು ೧೭೫೦ರಲ್ಲಿ ಅದನ್ನು ಫ್ರೆಂಚರು ವಶಪಡಿಸಿಕೊಂಡರು. ಕೊನೆಗೆ ೧೭೬೧ರಲ್ಲಿ ಕೋಟೆಯನ್ನು ಬ್ರಿಟಿಷರು ವಶಕ್ಕೆ ತೆಗೆದುಕೊಂಡರು. ಇದರ ಮಧ್ಯೆ ಅದು ಸ್ವಲ್ಪಕಾಲ ಮೈಸೂರಿನ ಹೈದರ್ ಅಲಿಯ ವಶದಲ್ಲಿಯೂ ಇದ್ದಿತು. ಚೆಂಜಿ ಕೋಟೆ ಹಲವು ಪಾಳೆಗಾರರ, ರಾಜರುಗಳ ಏಳುಬೀಳಿಗೆ ಸಾಕ್ಷಿಯಾಗಿದೆ. ಜೊತೆಗೆ ಕಾಲಕಾಲಕ್ಕೆ ಅದು ತನ್ನ ಹೆಸರನ್ನು ಬದಲಾಯಿಸಿಕೊಂಡಿರುವುದೂ ಉಂಟು!

ಕ್ರಿ.ಶ. ೧೬೬೬ರಿಂದ ೧೬೭೭ರವರೆಗೆ ಕೋಟೆ ಬಿಜಾಪುರದ ನವಾಬರ ವಶದಲ್ಲಿದ್ದಾಗ ಅದನ್ನು ಬಾದಷಾಬಾದ್ ಎಂದು ಕರೆದರು. ಅನಂತರ ಬಂದ ಮರಾಠರು ಚಂದ್ರಿ ಅಥವಾ ಚಿಂಡಿ ಎಂದರು. ೧೬೯೮ರಲ್ಲಿ ಮೊಘಲರು ಅದನ್ನು ನಸ್ರತ್‌ಘಡ ಎಂದು ಹೆಸರಿಸಿದ್ದರು.



*ರಕ್ಷಣೆಗೆಂದು ಸ್ಥಾಪಿತವಾದ ತೋಪು*

ಆರ್ಕಾಟ್ ನವಾಬರ ಸೈನ್ಯಾಧಿಕಾರಿಯಾಗಿದ್ದ ರಾಜಾ ತೇಜ್ ಸಿಂಗ್, ನವಾಬರ ವಿರುದ್ಧ ಬಂಡಾಯವೆದ್ದು ಚೆಂಜಿ ಕೋಟೆಯಲ್ಲಿ ಆಶ್ರಯ ಪಡೆದಿದ್ದ. ನವಾಬರ ಸೈನ್ಯ ಆತನ ಬೆನ್ನು ಹತ್ತಿತು. ಆತ ಹೋರಾಡುತ್ತಲೇ ಮಡಿದ. ತಮಿಳಿನಲ್ಲಿ 'ರಾಜಾ ದೇಸಿಂಗ್' ಕುರಿತ ಲಾವಣಿ, ನಾಟಕ ಬಹಳ ಜನಪ್ರಿಯವಾಗಿವೆ.

ಕೋಟೆಯನ್ನು ವಶಪಡಿಸಿಕೊಂಡ ಎಲ್ಲ ರಾಜರ ಅವಧಿಗಳಲ್ಲಿಯೂ ಹಲವು ವರ್ಷಗಳ ಕಾಲ ಅದು ದೊಡ್ಡ ಕಾಲಾಳು ದಳ, ರಾಹುತ ದಳ ಹಾಗೂ ಗಜದಳದ ಠಾಣ್ಯವಾಗಿತ್ತಲ್ಲದೆ, ಆಡಳಿತ ಕೇಂದ್ರವೂ ಆಗಿತ್ತು.

ಬ್ರಿಟಿಷ್ ವಿದ್ವಾಂಸ ಮೆಕೆಂಜಿಯ ಹಸ್ತಪ್ರತಿಗಳಲ್ಲಿ ಚೆಂಜಿ ಕೋಟೆಯ ಇನ್ನೂರು ವರ್ಷಗಳ ಇತಿಹಾಸದ ದಾಖಲೆ ದೊರಕುತ್ತದೆ. ಬ್ರಿಟಿಷರು ವಶಪಡಿಸಿಕೊಂಡನಂತರ ಚೆಂಜಿ ಕೋಟೆಯ ಬಳಕೆ ಅಗತ್ಯವೆನ್ನಿಸಲಿಲ್ಲ. ಅದನ್ನು ೧೯೨೧ರಲ್ಲಿ ರಾಷ್ಟ್ರೀಯ ಸ್ಮಾರಕವೆಂದು ಘೋಷಿಸಲಾಯಿತು.

ಚೆಂಜಿ ಕೋಟೆಯ ವೃತ್ತಾಂತ ರಾಮಾಯಣದೊಂದಿಗೂ ತಳುಕು ಹಾಕಿಕೊಂಡಿದೆ. ಅದು ದಂತಕಥೆಯ ರೂಪದಲ್ಲಿ ಪ್ರಚಲಿತವಾಗಿದೆ. ಲಂಕಾದಲ್ಲಿ ರಾವಣನೊಂದಿಗೆ ನಡೆದ ಯುದ್ಧದಲ್ಲಿ, ಬಾಣದ ಏಟಿನಿಂದ ಲಕ್ಷ್ಮಣ ಮೂರ್ಛೆ ಹೋದದ್ದು, ಆತನನ್ನು ಬದುಕಿಸಲು ಹನುಮಂತ ಆಕಾಶಮಾರ್ಗದಲ್ಲಿ ಹಾರಿಹೋಗಿ ಚಂದ್ರದ್ರೋಣ ಪರ್ವತದಲ್ಲಿ ಸಂಜೀವಿನಿ ಮೂಲಿಕೆಗಾಗಿ ಹುಡುಕಾಡಿ, ಅದನ್ನು ಪತ್ತೆ ಹಚ್ಚಲು ಸಾಧ್ಯವಾಗದೆ ಬೆಟ್ಟವನ್ನೇ ಬುಡಸಹಿತ ಕಿತ್ತು ತಟ್ಟೆಯಂತೆ ಕೈಯಲ್ಲಿ ಹಿಡಿದು ಹಾರುತ್ತ ಹೋಗಿ ಸಂಜೀವಿನಿಯ ಸಹಾಯದಿಂದ ಲಕ್ಷ್ಮಣನ ಮತ್ತು ರಾಮನ ವಾನರ ಸೇನೆಯ ಪ್ರಾಣ ಉಳಿಸಿದನೆಂಬ ಪ್ರಕರಣ ರಾಮಾಯಣದಲ್ಲಿ ಬರುತ್ತದಷ್ಟೆ. ಹನುಮಂತ ಕಿತ್ತು ಒಯ್ದದ್ದು ಚೆಂಜಿ ಬೆಟ್ಟದ ಒಂದು ಭಾಗವನ್ನೇ ಎಂಬುದು ದಂತಕಥೆ. ಚೆಂಜಿ ಬೆಟ್ಟದಲ್ಲಿ



ವಸ್ತು ಸಂಗ್ರಹಾಲಯ



ಸುಸ್ಥಿತಿಯಲ್ಲಿರುವ ಭಾಗ

ಹ ಸಂಜೀವಿನಿ ಲಭ್ಯವಿತ್ತು ಎಂಬುದು ಕಥೆಯ ಇನ್ನೊಂದು ಭಾಗ.

ಚೆಂಜಿ ಕೋಟೆಗೆ ಲಗ್ಗೆ ಹಾಕಿದವರ ಲೆಕ್ಕದಲ್ಲಿ ಎಪ್ಪತ್ತಮೂರರ ನನ್ನನ್ನು ಮತ್ತು ದಿನೇಳರ ನನ್ನ ಮೊಮ್ಮಗ ನಿಶಾಂತನನ್ನು ಸೇರಿಸಬಹುದೆನ್ನಿಸುತ್ತದೆ!

ಚೆಂಜಿಯು ರಾಜಗಿರಿ, ಕೃಷ್ಣಗಿರಿ ಮತ್ತು ಚೆಕ್ಕಿಲಿದುರ್ಗ – ಈ ಮೂರು ಕೋಟೆಗಳ ಂದು ಸಂಕೀರ್ಣ. ನಾವು ಏರಿದ್ದು ರಾಜಗಿರಿ ಕೋಟೆಗೆ.

ಎಲ್ಲ ಕೋಟೆಗಳಿಗಿರುವಂತೆ ಎತ್ತರವಾದ ಕಲ್ಲಿನ ಗೋಡೆ ಹೊರಗೆ ಸುಮಾರು ಪ್ಪತ್ತು ಅಡಿ ಅಗಲ, ಹತ್ತು ಅಡಿ ಆಳದ ಅಗಳು (ರಕ್ಷಣಾ ಕಾಲುವೆ). ಕೋಟೆಯ ವರಣಕ್ಕೆ ತಲುಪಿ ಟಿಕೇಟು ಪಡೆದು ಆರೋಹಣ ಪ್ರಾರಂಭಿಸಿದಾಗ ಮಧ್ಯಾಹ್ನ ನ್ನೆರಡೂವರೆ ಗಂಟೆ. ಪ್ರಾಯಶಃ ನೂರು ಡಿಗ್ರಿ ಫ್ಯಾರನ್‌ಹೈಟ್ ತಾಪದ ರುಬಿಸಿಲು!

ಒಳ ಆವರಣದಲ್ಲಿ ಒಂದು ಸಣ್ಣ ವಸ್ತು ಸಂಗ್ರಹಾಲಯ ಇದೆ. ಅಲ್ಲಿ ಶಿಲ್ಪಗಳು ಾಗೂ ಆಯುಧಗಳು ಹಾಗೂ ಇತರ ವಸ್ತುಗಳ ಸಂಗ್ರಹ ಇದೆ. ಅಂದು ಂಗ್ರಹಾಲಯ ಮುಚ್ಚಿತ್ತು; ಹೊರಗಡೆ ಭಗ್ನ ಮೂರ್ತಿಗಳ ದರ್ಶನ ಮಾಡಿ ಮುಂದುವರಿದೆವು.

ಕೋಟೆಯ ಒಳ ಆವರಣ ವಿಶಾಲವಾಗಿದೆ. ಬಲಗಡೆ ಸುಮಾರು ಹತ್ತು ಹಡಿಯಷ್ಟು ಎತ್ತರದ ಭವ್ಯವಾದ ಕಲ್ಯಾಣ ಮಹಲ್ ಇದೆ. ಹೆಸರು ಕೇಳಿದ ೂಡಲೆ ನೆನಪಿಗೆ ಬರುವಂತೆ ಅದೇನೂ ಸಾಮಾನ್ಯ ಮದುವೆ ಮಂಟಪವಲ್ಲ. ರಾಣಿ ಾಸದವರು ವಾಸವಿದ್ದ ಹವಾಮಹಲ್ ಎನ್ನುತ್ತಾರೆ. ಆವರಣದಲ್ಲಿ ಕುದುರೆ ಾಯಗಳು, ಆನೆ ಲಾಯ, ಸೈನಿಕರ ವಾಸದ ಮನೆಗಳು, ಆನೆಕೊಳ ಇವೆಲ್ಲ ಈಗಲೂ ುಸ್ಥಿತಿಯಲ್ಲಿವೆ. ಊರು ದೇವತೆ ಚೆಂಜಿಯಮ್ಮನ ಸಣ್ಣ ದೇವಾಲಯವಿದೆ. ಒಂದು ಡೆ ದೊಡ್ಡ ಧಾನ್ಯ ಕಣಜ, ಮತ್ತೊಂದು ಕಡೆ ಮದ್ದು-ಗುಂಡು ಕೋಠಿ, ಿಮ್ನಾಸಿಯಂ ಇವೆ. ಕೋಟೆ ಮುಸ್ಲಿಮರ ವಶದಲ್ಲಿದ್ದಾಗ ಕಟ್ಟಿಸಿರುವ ಮಸೀದಿ ಇದೆ.

ಒಮ್ಮೆ ಎಡಕ್ಕೆ, ಅಲ್ಲಿಂದ ಬಲಕ್ಕೆ ಏರು ದಾರಿಯಲ್ಲಿ ಸುಮಾರು ಇನ್ನೂರು-ುನ್ನೂರು ಅಡಿಗಳಿಗೊಂದರಂತೆ ಕಲ್ಲುಮಂಟಪದ ಕಾವಲು ಠಾಣೆಗಳಿವೆ. ಈಗ ಾವಲುಗಾರರಿಲ್ಲ. ಮೇಲೆ ಹತ್ತುವವರು ಆ ಮಂಟಪಗಳ ಮೂಲಕವೇ ಹಾದು ೋಗಬೇಕು. ಪಕ್ಕದಲ್ಲಿ ನುಸುಳಿ ಹೋಗಲು ಸಾಧ್ಯವಿಲ್ಲದಂತೆ ಎರಡೂ ಕಡೆ ಹೆಬ್ಬಂಡೆಗಳಿವೆ. ಮಂಟಪದಾಚೆ ಮತ್ತೆ ಕಡಿದಾದ ಮೆಟ್ಟಿಲುಗಳು.

ಸುಮಾರು ಅರ್ಧದಷ್ಟು ಬೆಟ್ಟ ಏರಿದ ಮೇಲೆ ನನಗೆ ಆಯಾಸವಾಗತೊಡಗಿತು. ಮೈಯಿಂದ ಬೆವರಿಳಿಯತೊಡಗಿತು. ನಾಲಿಗೆ ಒಣಗಿತು. ಒಂದು ಕಡೆ ನಿಶಾಂತನಿಗೆ ಹೇಳಿದೆ: ''ನಿನಗೆ ಕಷ್ಟವಾಗುತ್ತದೆ ಎನ್ನಿಸಿದಾಗ ಹೇಳಿಬಿಡು. ಅಲ್ಲಿಂದಲೇ ಹಿಂದಿರುಗೋಣ!'' ನನಗೆ ಚಿಕ್ಕಂದಿನಿಂದಲೇ ಬೆಟ್ಟ-ಗುಡ್ಡ ಹತ್ತಿ ಇಳಿದ ಅನುಭವವಿತ್ತು. ನಿಶಾಂತ ಮೊದಲಬಾರಿಗೆ ಅಭೇದ್ಯ ಚೆಂಜಿ ಕೋಟೆ ನೋಡಲು ಬಂದಿದ್ದ. ಆತನ ಉತ್ಸಾಹಕ್ಕೆ ತಣ್ಣೀರೆರಚುವುದು ನನ್ನ ಉದ್ದೇಶವಾಗಿರಲಿಲ್ಲ. ನನ್ನ ಸೋಲನ್ನು ಮುಚ್ಚಿಹಾಕಲು ನಾನು ತಂತ್ರ ರೂಪಿಸುತ್ತಿದ್ದೇನೆಂದು ಆತನಿಗೆ ತಿಳಿಯಬಾರದು ಅಷ್ಟೆ. ''ಹಾಗೇನೂ ಕಷ್ಟವಿಲ್ಲ ತಾತ. ಕೋಟೆಗೆ ಹೋಗಿಯೇ ಬರೋಣ!'' ಎನ್ನಬೇಕೆ ಆತ!

ಏದುಸಿರುಬಿಡುತ್ತ ಬೆಟ್ಟ ಹತ್ತುವುದರೊಂದಿಗೆ ದಾರಿಯಲ್ಲಿ ಸಿಕ್ಕಿದ ಕೀಟಗಳು, ಕಪಿಗಳ ಹಿಂಡು ಇತ್ಯಾದಿ ಫೋಟೋ ತೆಗೆಯುತ್ತಿದ್ದುದನ್ನು ಗಮನಿಸಿದ ಯುವತಿಯೊಬ್ಬಳು, ''ಅಂಕಲ್ ನೀವು ಪೇಪರಿನೋರಾ?'' ಎಂದು ಕೇಳಿ ನನಗೆ ಅಚ್ಚರಿ ಉಂಟುಮಾಡಿದಳು. ನೆರಳಿನಲ್ಲಿ ಸ್ವಲ್ಪ ವಿಶ್ರಾಂತಿ ತೆಗೆದುಕೊಳ್ಳುವಂತೆ ಸಲಹೆ ಮಾಡಿದಳು. ಪರಸ್ಪರ ಪರಿಚಯವಾಯಿತು. ಕೋಟೆಯ ಆವರಣದೊಳಗೆ ನನ್ನನ್ನು ಗಮನಿಸುತ್ತ ಬಂದಿದ್ದ ಆಕೆ ಹಾಗೆ ಊಹಿಸಿದಳಂತೆ. 'ಚುರುಕಿನ ಹುಡುಗಿ' – ಎಂದುಕೊಂಡೆ. ಆಕೆಯ ಹೆಸರು ಚಿತ್ರಾ. ಎಂಜಿನಿಯರಿಂಗ್ ಕಲಿಯುತ್ತಿರುವ ಆಕೆ ಪಾಂಡಿಚೆರಿಯಿಂದ ಸ್ನೇಹಿತನ ಜೊತೆಗೆ ಬಂದಿದ್ದಳು. ಪ್ರಾಯಶಃ ಕಾಲೇಜಿಗೆ ಚಕ್ಕರ್ ಕೊಟ್ಟು! ಫೋಟೋ ತೆಗೆಸಿಕೊಳ್ಳಲು ವಿನಯದಿಂದಲೇ ನಿರಾಕರಿಸಿದಳು. ಲೇಖನದಲ್ಲಿ ಹೆಸರು ಬರೆಯುವೆನೆಂದು ತಮಾಷೆ ಮಾಡಿದಾಗ ತನ್ನ ತಂದೆ ಕನ್ನಡ ಪತ್ರಿಕೆ ಒದುವುದಿಲ್ಲವೆಂದು ಆಕೆಯೂ ತಮಾಷೆ ಮಾಡಿದಳು! ''ನೀವು ಬರೆಯುವಂತಿದ್ದರೆ, ನಮ್ಮ ಜನರು ಈ ಕೋಟೆಯನ್ನು ಹೇಗೆ ದುರುಪಯೋಗಪಡಿಸಿಕೊಳ್ಳುತ್ತಿದ್ದಾರೆ ಎಂಬುದನ್ನು ಬರೆಯಿರಿ'' ಎಂದು ಸಲಹೆ ಮಾಡಿದಳು. ಅಂಥ ಸ್ಥಳಗಳಿಗೆ ಜೋಡಿಯಾಗಿ ಬರುವುದು, ಮರೆಯಲ್ಲಿ ಕುಳಿತು ಪ್ರೇಮ ಸಲ್ಲಾಪ ನಡೆಸುವುದು, ಕಲ್ಲುಗಳ ಮೇಲೆ ತಮ್ಮ ಹೆಸರುಗಳನ್ನು ಕೊರೆದು ಪ್ರೇಮವನ್ನು ಅಜರಾಮರಗೊಳಿಸುವುದು – ಇವೆಲ್ಲ ಎಲ್ಲ ಕಡೆ ನಡೆಯುವಂಥವೇ ಎಂದು





ಬೆಟ್ಟದ ಮೇಲಿನಿಂದ ಕಾಣಸುವ ದೃಶ್ಯಗಳು



ಮಕ್ಕಳನ್ನು ಹೊತ್ತುಕೊಂಡು ಕೋಟೆಗೆ ಬಂದವರು

ಸಮಜಾಯಿಷಿಕೊಟ್ಟೆ. ಚಿತ್ರಾಳ ಸ್ನೇಹ ಸಲ್ಲಾಪದಿಂದ ಸ್ವಲ್ಪ ಆಯಾಸ ಪರಿಹಾರವಾಯಿತು. ಅವರಿಂದ ಬೀಳ್ಕೊಟ್ಟು ಮೆಟ್ಟಿಲೇರತೊಡಗಿದೆವು.

ಪ್ರತಿಯೊಂದು ತಿರುವಿನಲ್ಲಿ ಕೆಳಗಡೆಯ ದೃಶ್ಯಗಳು ಬದಲಾಗುತ್ತ ಒಂದು ಬದಿಯಲ್ಲಿ ಕೃಷ್ಣಗಿರಿಯ ಕೋಟೆ ಮತ್ತೊಂದು ಬದಿಯಲ್ಲಿ ಚಕ್ಕಿಲಿದುರ್ಗದ ಮೇಲಿನ ಕೋಟೆಗಳು ಸ್ಪಷ್ಟವಾಗಿ ಕಾಣಿಸತೊಡಗಿದವು. ಕೃಷ್ಣಗಿರಿ ಕೋಟೆಯನ್ನು ಬ್ರಿಟಿಷರು ಕೆಲವು ವರ್ಷ ವಿಶ್ರಾಂತಿ ತಾಣವಾಗಿ ಮಾಡಿಕೊಂಡಿದ್ದರಂತೆ. ಪ್ರಾಯಶಃ ಪ್ರಾರಂಭದಲ್ಲಿ ಭೂಮಿಯ ಕುದಿತ ಆರಿ ತಣ್ಣಗಾದಾಗ ರೂಪುಗೊಂಡ ಕಲ್ಲುಗುಡ್ಡಗಳು. ಅಂಥ ಗುಡ್ಡಗಳಲ್ಲಿ ಮಣ್ಣು ಶೇಖರಣೆಗೆ ಅವಕಾಶವಿಲ್ಲದ್ದರಿಂದ ಮರಗಿಡಗಳ ತೋಪುಗಳು ಬೆಳೆದಿಲ್ಲ. ಚೆಂಜಿ ಕೋಟೆ ಹತ್ತಲು ಬರುವವರಿಗೆ ಭೂಲಕ್ಷಣದ ಅರಿವಿನ ಜೊತೆಗೆ ಇತಿಹಾಸದಲ್ಲಿ ಸ್ವಲ್ಪವಾದರೂ ಆಸಕ್ತಿ ಇಲ್ಲದಿದ್ದರೆ ಕೋಟೆಗೆ ಸಂಬಂಧಿಸಿದ ದೃಶ್ಯಗಳೆಲ್ಲ ಬರಿಯ ನೋಟಗಳಾಗುತ್ತವೆ ಅಷ್ಟೆ!

ಎಂಟುನೂರು ಅಡಿ ಎತ್ತರದ ಹೆಬ್ಬಂಡೆಯ ಶಿಖರದ ಮೇಲೆ ನಿರ್ಮಿಸಲಾಗಿರುವ ರಾಜಗಿರಿ ಕೋಟೆಗೆ ತಲುಪಲು ಮತ್ತಷ್ಟು ಸುತ್ತು ಬಳಸಬೇಕು. ಹಿಂದಿನವರು ಹೆಬ್ಬಂಡೆಗಳನ್ನು ಸೀಳಿ ದೊಡ್ಡ ದಿಮ್ಮಿಗಳಿಂದ ಅಷ್ಟು ಎತ್ತರದ ಗಿರಿಶಿಖರದ ಮೇಲೆ ಭದ್ರವಾದ ಕೋಟೆ ನಿರ್ಮಿಸಲು ಸಮರ್ಥರಾಗಿದ್ದರು ಎಂಬುದಕ್ಕೆ ಆ ಕೋಟೆ ಸಾಕ್ಷಿಯಾಗಿದೆ. ಒಂದು ತಿರುವಿನಲ್ಲಿ ಸ್ಥಾಪಿಸಲಾಗಿದ್ದ ಹಿಂದಿನ ಕಾಲದ ದೊಡ್ಡ ತೋಪು ಕೋಟೆಯ ರಕ್ಷಣೆಗೆ ತಯಾರಾಗಿ ನಿಂತಿದೆ !

ಬಿಸಿಲು ಮತ್ತು ಆಯಾಸದ ಕಾರಣ ನನ್ನ ನಡಿಗೆಯ ವೇಗ ಮತ್ತಷ್ಟು ಕಡಿಮೆಯಾಯಿತು. ನಾಲಿಗೆ ಒಣಗಿದಾಗ ಒಂದೊಂದೇ ಗುಟುಕು ನೀರು ಕುಡಿಯುತ್ತ ನಿಶಾಂತನನ್ನು ಹಿಂಬಾಲಿಸಿದೆ. ಎಡಕ್ಕೆ, ಬಲಕ್ಕೆ ಬಳಸಿಕೊಂಡು ಕಡಿದಾದ ಮೆಟ್ಟಿಲುಗಳನ್ನು ಹತ್ತುತ್ತ, ಪೂರ್ವದಿಂದ ಪಶ್ಚಿಮಕ್ಕೆ, ಅಲ್ಲಿಂದ ಉತ್ತರಕ್ಕೆ ಮತ್ತೆ ದಕ್ಷಿಣಕ್ಕೆ ಕಾವಲು ಠಾಣೆಗಳನ್ನು ದಾಟುತ್ತ ನಡೆಯತೊಡಗಿದೆವು. ಪ್ರತಿಯೊಂದು ಕಡೆ ನಿಂತಾಗಲೂ ಬೆಟ್ಟದ ಕೆಳಗಿನ ಕುರುಚಲು ಕಾಡು, ರಸ್ತೆಗಳು, ತೋಟಗಳು ಅಲ್ಲಲ್ಲಿ ಸಣ್ಣ ಊರುಗಳು. ಮತ್ತೆ ತಲೆಯೆತ್ತಿ ನಿಂತಿರುವ ಕಲ್ಲುಬಂಡೆಗಳ ಗುಡ್ಡೆಗಳು.






ಹೆಬ್ಬಂಡೆಯ ಬುಡದಲ್ಲಿ ನಿಂತಾಗ, ಬಂಡೆಯ ಮೈ ಬೇರೆ ಬೇರೆ ಬಣ್ಣ ಬಳಿದುಕೊಂಡು ಬಿಸಿಲಿಗೆ ಮೈಕಾಯಿಸುತ್ತ ನಿಂತಂತೆ ಕಣ್ಣಿಗೆ ಹಬ್ಬ ಉಂಟುಮಾಡುವ ದೃಶ್ಯ. ಕಲ್ಲಿನ ಮೇಲೆ ಉಂಟಾಗಿರುವ ಹುರುಪಲು, ಬಿಸಿಲಿಗೆ ತಳೆದಿರುವ ಬಣ್ಣಗಳು ಅವು. ಒಂದು ಕಡೆ ಬಂಡೆ ಸಂದಿಯಲ್ಲಿ ಹುಟ್ಟಿ ಬೆಳೆದು ನಿಂತಿರುವ ಮರ. ಮತ್ತೊಂದು ಕಡೆ ಬಂಡೆಯಿಂದ ಜಿನುಗುತ್ತಿರುವ ನೀರು. ಅಷ್ಟು ಎತ್ತರದ ಬಂಡೆಯೊಳಗೆ ನೀರಿನ ಸೆಲೆ ಅಡಗಿರುವುದಾದರೂ ಹೇಗೆ ಎಂಬ ವಿಸ್ಮಯ.

ನಿಶಾಂತ ತನಗೆ ಚಂದ ಕಂಡ ದೃಶ್ಯಗಳನ್ನು ವೀಡಿಯೋದಲ್ಲಿ ಚಿತ್ರಿಸಿಕೊಳ್ಳುತ್ತ, ಅದೇ ವೇಳೆ ನನ್ನ ನಡಿಗೆಯನ್ನೂ ಗಮನಿಸುತ್ತ, ನೀರು ಗುಟುಕರಿಸಬೇಕಾದಾಗ ತನ್ನ ಬ್ಯಾಕ್‌ಪ್ಯಾಕಿನಿಂದ ಬಾಟಲು ತೆಗೆದುಕೊಡುತ್ತ, ನನ್ನನ್ನು ಬಿಟ್ಟು ಮುಂದೆ ಹತ್ತಿಹೋದರೂ ಒಂದೆಡೆ ನಿಂತು ನನಗಾಗಿ ಕಾಯುತ್ತ ನನ್ನ ಶ್ರಮದ ಚಾರಣಕ್ಕೆ ಜೊತೆಯಾಗಿದ್ದ.

ಶಿಖರ ಸಮೀಪಿಸಿದಂತೆ ಮೆಟ್ಟಿಲುಗಳು ಮತ್ತಷ್ಟು ಕಡಿದಾಗುತ್ತವೆ. ಮತ್ತೊಂದು ನಿಸರ್ಗ ನಿರ್ಮಿತ ಕಂದಕ ಎದುರಾಗುತ್ತದೆ. ಸುಮಾರು ಇಪ್ಪತ್ತು ಅಡಿ ಅಗಲ, ಮೂವತ್ತು ಅಡಿ ಆಳದ್ದು. ಅದನ್ನು ದಾಟಲು ಮರದ ಸೇತುವೆ ನಿರ್ಮಿಸಿದ್ದಾರೆ. ಪ್ರಾಯಶಃ ಹಿಂದೆ ಹಗ್ಗದ ಸೇತುವೆಯ ಸಹಾಯದಿಂದ ದಾಟುತ್ತಿದ್ದರೆನ್ನಿಸುತ್ತದೆ. ಮುಂದೆ ಬಂಡೆಯಲ್ಲೇ ಕೆತ್ತಿರುವ ಮೆಟ್ಟಿಲುಗಳು ಮತ್ತಷ್ಟು ಕಡಿದಾಗುತ್ತವೆ. ಶಿಖರದ ಮೇಲೆ ಸುಮಾರು ಏಳುನೂರು ಅಡಿ ಸುತ್ತಳತೆಯ ಮಟ್ಟ ಸ್ಥಳವಿದೆ. ಅಲ್ಲಿ ಒಂದು ಬಂದೀಖಾನೆ, ಕಮಾನು ಬಾಗಿಲುಗಳಿರುವ ಒಂದು ಭವನ, ಒಂದು ಪುರಾತನ ದೇವಾಲಯವಿದೆ. ಅಲ್ಲಿಂದ ಕೃಷ್ಣಗಿರಿ ಕೋಟೆಗೆ ರಹಸ್ಯ ದಾರಿಯೊಂದಿತ್ತಂತೆ. ಇಂತಹ ಐತಿಹ್ಯಗಳು ಮಾಮೂಲೇ ತಾನೆ! ಅದರ ಕಡೆ ಇಣಿಕಿ ಹಾಕಿದೆವು. ಶಿಖರದ ಮೇಲಿನಿಂದಲೂ ಸುತ್ತಲಿನ ದೃಶ್ಯ ನೋಡುತ್ತ ಅಲೆದಾಡಿದೆವು.

ಹೆಬ್ಬಂಡೆಯ ಪಶ್ಚಿಮ ಮತ್ತು ಉತ್ತರ ಭಾಗದಲ್ಲಿ ಸುಮಾರು ಎಂಬತ್ತು ಅಡಿ ಎತ್ತರದ ಕಲ್ಲುಗೋಡೆ ಕೋಟೆಯ ರಕ್ಷಣೆಗೆ ನಿಂತಿದೆ. ಶಿಖರದ ಮೇಲಿನ ಬಂದೀಖಾನೆ ಅತ್ಯಂತ ಉಗ್ರ ವೈರಿಗಳಿಗಾಗಿ ಕಟ್ಟಿಸಿದ್ದಿರಬಹುದು. ನಂದಿಬೆಟ್ಟದಲ್ಲಿರುವ 'ಟಿಪ್ಪು ಡ್ರಾಪ್' ಅನ್ನು ಹೋಲುವಂಥ ಸ್ಥಳವಿದೆ. ಅಲ್ಲಿ ಶಿಕ್ಷೆಗೊಳಗಾದವರನ್ನು ತೆರೆದ ಬಯಲಿನಲ್ಲಿ ಅವರ ಪಾಡಿಗೆ ಬಿಟ್ಟುಬಿಡುತ್ತಿದ್ದರಂತೆ. ಅಲ್ಲಿಂದ ಯಾವ ಕಡೆಗೂ ಇಳಿಯಲು ಸಾಧ್ಯವಿಲ್ಲದಂಥ ಸ್ಥಳ. ಜೊತೆಗೆ ಕಾಡು ಪ್ರಾಣಿಗಳ ಬಾಯಿಗೂ ತುತ್ತಾಗಬಹುದಾದ ಪರಿಸ್ಥಿತಿ.

ಸೈನ್ಯಾಧಿಕಾರಿ ರಾಜಾ ತೇಜ್ ಸಿಂಗ್, ಛತ್ರಪತಿ ರಾಜಾರಾಮ್‌ರಂಥ ರಾಜಕೀಯ ಆಶ್ರಯ ಪಡೆದವರು ಹೊರಗಿನ ಯಾರಿಗೂ ಸುಳಿವು ತಿಳಿಯದಂತೆ ಅಡಗಿಕೊಂಡಿದ್ದ ತಾಣವಾದುದರಿಂದ ಅದರ ರಕ್ಷಣೆ ಮತ್ತಷ್ಟು ಮಹತ್ವ ನೀಡಿರಬಹುದು. ಈ ಕಾರಣದಿಂದಲೇ ಅದನ್ನು ಅಭೇದ್ಯ ಕೋಟೆಯೆಂದು ಕರೆದಿರಬಹುದು.

ಒಂದು ಕಡೆ ಕುಳಿತು ದಣಿವಾರಿಸಿಕೊಂಡೆವು. ಮನೆಯಿಂದ ಒಯ್ದಿದ್ದ ತಿಂಡಿ ಹಣ್ಣು ತಿಂದೆವು. ಬಾಟಲಿಯಲ್ಲಿ ಒಯ್ದಿದ್ದ ನೀರು ಖಾಲಿಯಾಯಿತು.

ಚೆಂಜಿ ಕೋಟೆ ಬೆಟ್ಟದ ತುದಿಯವರೆಗೆ ಹಾಯಾಗಿ ಕಾರಿನಲ್ಲಿ ಹೋಗಿ ಶಿಖರದ ಮೇಲೆ ತಿರುಗಾಡಿ ಗಾಳಿ ಸೇವನೆ ಮಾಡುತ್ತ, ಸುತ್ತಲಿನ ದೃಶ್ಯ ನೋಡಿ ಪುಳಕಗೊಳ್ಳುವಂಥ ಸ್ಥಳವಲ್ಲ. ಒಂದೊಂದೇ ಮೆಟ್ಟಲು ಹತ್ತುತ್ತ ಸಾಕಷ್ಟು

ವಿವರಿಸಬೇಕು. ಬೆಟ್ಟದ ನೆತ್ತಿಯ ಮೇಲೆ ಪಾಪ್‌ಕಾರ್ನ್, ಬಿಸಿ ಚಾ, ಕೂಲ್ ಡ್ರಿಂಕ್ಸ್ – ಮುಂತಾದವನ್ನು ಕಲ್ಪನೆ ಮಾಡಿಕೊಳ್ಳಬಹುದಷ್ಟೆ!

ಹೇಗೂ ಒಂದು ಸಾವಿರದ ಎಂಟುನೂರು ಮೆಟ್ಟಿಲು ಹತ್ತಿ ಶಿಖರ ತಲುಪಿದ ಬಗ್ಗೆ ಮನಸ್ಸಿಗೆ ಸಂತೋಷವಾಗಿತ್ತು. ಚೆಂಜಿ ಕೋಟೆಯನ್ನು ಜಯಿಸಿದ ಸಂಭ್ರಮದಿಂದ ಬೀಗುವಾಗಲೇ ವೃದ್ಧಾಪ್ಯ, ರಕ್ತದ ಒತ್ತಡ, ಆಲ್ಟಿಟ್ಯೂಡ್ ಸಿಕ್‌ನೆಸ್, ಬಿಸಿಲ ಬೇಗೆ, ಆಯಾಸ, ಶರೀರದ ನಿರ್ಜಲೀಕರಣ – ಹೀಗೆ ಯಾವುದಾದರೂ ಕಾರಣದಿಂದ ನಾನು ಅಲ್ಲಿ ಕುಸಿದು ಬಿದ್ದಿದ್ದರೆ, ನಿಶಾಂತ ಅದನ್ನು ಹೇಗೆ ನಿಭಾಯಿಸುತ್ತಿದ್ದ, ಯಾರ ಸಹಾಯ ಕೋರುತ್ತಿದ್ದ – ಮುಂತಾದ ಕಲ್ಪನೆಯೂ ಮನಸ್ಸಿನಲ್ಲಿ ಸುಳಿಯದೆ ಇರಲಿಲ್ಲ! ಅಲ್ಲದೆ ಅಲ್ಲಿಗೆ ಬಂದು ಹೋಗುವ ಜನರೂ ಹೆಚ್ಚಿಲ್ಲ. ಅಲ್ಲಿ ತತ್‌ಕ್ಷಣ ವೈದ್ಯಕೀಯ ನೆರವು ಸಿಗುವ ಸಾಧ್ಯತೆಯೂ ಇಲ್ಲ. ಸದ್ಯ ನನ್ನಿಂದ ಆತ ಅಂಥ ಪೇಚಾಟಕ್ಕೆ ಸಿಲುಕಲಿಲ್ಲ ಎಂದು ಒಳಗೇ ಸಂತೋಷವೂ ಆಯಿತು.

ಮಕ್ಕಳನ್ನು ಹೆಗಲಮೇಲೇರಿಸಿಕೊಂಡು ಮೆಟ್ಟಿಲೇರಿ ಬರುತ್ತಿದ್ದ ಗಂಡಸರು ಹೆಂಗಸರು ಸೇರಿದ ಆರೇಳು ಜನರ ಗುಂಪು ಸಿಕ್ಕಿದಾಗ, ಅವರ ಉತ್ಸಾಹ ಕಂಡು ನನಗೆ ಸಂತೋಷವಾಯಿತು. ನನ್ನ ದಣಿವನ್ನು ಸ್ವಲ್ಪ ಮರೆತೆ ಎನ್ನಬಹುದು. ಅವರ ಪರಿಚಯ ಮಾಡಿಕೊಂಡು, ಅವರದೊಂದು ಗ್ರೂಪ್ ಫೋಟೋ ತೆಗೆದಾಗ ಅವರೂ ಸಂತೋಷಪಟ್ಟರು.

ಬೆಟ್ಟ ಹತ್ತುವುದಕ್ಕಿಂತ ಇಳಿಯುವುದು ಹೆಚ್ಚು ಕಷ್ಟ. ಹೆಚ್ಚು ಜಾಗರೂಕತೆ ಬೇಕಾಗುತ್ತದೆ. ಬೆಟ್ಟಗಾಡಿನಲ್ಲಿ ಹುಟ್ಟಿಬೆಳೆದ ನನಗೆ ಇದರ ಅನುಭವವಿದೆ. ಆದರೆ ಕೋಟೆಯ ದಾರಿ ನನ್ನ ಶಕ್ತಿಯನ್ನು ಕುಗ್ಗಿಸಿತ್ತು – ಉತ್ಸಾಹವನ್ನಲ್ಲ. ಎದೆಬಡಿತ ಹೆಚ್ಚಿತ್ತು, ಏದುಸಿರು, ದೇಹದ ನೀರು ಬೆವರಾಗಿ ಹರಿದಿತ್ತು, ನಾಲಿಗೆಯ ನೀರು ಬತ್ತಿತ್ತು, ಕೈಕಾಲಿನ ಶಕ್ತಿ ಉಡುಗಿತ್ತು. ಸ್ವಲ್ಪ ದೂರ ಇಳಿದನಂತರ ಮೆಟ್ಟಿಲ ಮೇಲೆ ಕುಳಿತು ಸುಧಾರಿಸಿಕೊಂಡು ಮತ್ತೆ ಇಳಿಯತೊಡಗಿದೆ. ಹೀಗೆ ಹಲವು ಸಲ ಮಾಡಬೇಕಾಯಿತು. ಕುಳಿತು ಏಳುವಾಗ ಪಕ್ಕದ ಕಲ್ಲನ್ನೋ, ಗೋಡೆಯನ್ನೋ ಹಿಡಿದುಕೊಂಡೇ ಏಳಬೇಕಾಗುತ್ತಿತ್ತು. ಬಾಟಲಿಯ ನೀರು ಖಾಲಿಯಾಗಿದ್ದುದರಿಂದ, ಕೋಟೆಯ ಕಡೆ ಹೊರಟಿದ್ದ ಯುವ ಜೋಡಿಗಳಿಂದ ನಾಲ್ಕು ಗುಟುಕು ನೀರು ಕೇಳಿ ತೆಗೆದುಕೊಂಡು ಅವರಿಗೆ ಥ್ಯಾಂಕ್ಸ್ ಹೇಳಿದ್ದಾಯಿತು. ನಾನು ಹೀಗೆ ಅವಸ್ಥೆಪಟ್ಟುದನ್ನು ನಿಶಾಂತ ತನ್ನ ಅಜ್ಜಿಯ ಜೊತೆಗೆ ಹೇಳಿಕೊಂಡಿದ್ದ!

ನಾವು ಬೆಟ್ಟದ ದಾರಿ ಇಳಿದು ಚೆಂಜಿ ನಗರಕ್ಕೆ ಆಟೋ ಹತ್ತಿದಾಗ ಚೆಂಜಿ ಶಿಖರದ ಮೇಲೆ ಮೋಡ ತೇಲಾಡುತ್ತಿತ್ತು. ಒಂದು ಹೋಟೆಲಿನಲ್ಲಿ ಅವಸರದ ಊಟ ಮಾಡಿ ಕೂಡಲೇ ಚೆನ್ನೈ ಬಸ್ ನಿಲ್ದಾಣಕ್ಕೆ ಬಂದೆವು. ನಿಲ್ದಾಣದಲ್ಲಿ ಪ್ರತಿ ಐದು ನಿಮಿಷಕ್ಕೆ ಬಸ್ಸುಗಳು ಬರುತ್ತಿದ್ದವು. ಕಾಯುತ್ತ ನಿಂತವರ ಪೈಕಿ ಹತ್ತು ಜನ ಬಸ್ಸು ಹತ್ತಿದರೆ, ಮತ್ತೊಂದು ಬಸ್ಸು ಬರುವ ವೇಳೆಗೆ ಮೂವತ್ತು ಜನರು ಸೇರುತ್ತಿದ್ದರು. ಬರುವ ಬಸ್ಸುಗಳೆಲ್ಲ ತುಂಬಿ ತುಳುಕುತ್ತಲೇ ಬರುತ್ತಿದ್ದವು. ಈ ಮಧ್ಯೆ ರಪರಪ ಮಳೆ, ರಸ್ತೆ



ಶಿಖರದ ಮೇಲಿರುವ ಕಟ್ಟಡ

ಕಾಣಿಸದಷ್ಟು ದಟ್ಟವಾಗಿ ಬೀಳತೊಡಗಿತು. ನಾವು ಅಲ್ಲಿ ನಿಂತು ಕಾಯುತ್ತಿರುವಾಗಲೇ ಸುಮಾರು ಹತ್ತು ಬಸ್ಸುಗಳಾದರೂ ಹೋಗಿರಬೇಕು. ಕೊನೆಗೆ ಧೈರ್ಯಮಾಡಿ ಒಂದು ಬಸ್ಸಿನೊಳಕ್ಕೆ ಹೇಗೋ ತೂರಿಕೊಂಡೆವು. ಕಾಲೂರಲು ಸ್ಥಳವಿಲ್ಲ. ದಾರಿಯುದ್ದಕ್ಕೂ ಮಳೆ. ನಾವು ಮತ್ತೆ ೧೬೦ ಕಿ.ಮೀ. ದೂರದವರೆಗೆ ನಿಂತೇ ಪಯಣ ಮಾಡಬೇಕಾಯಿತು!!

ರಾತ್ರಿ ಹನ್ನೊಂದು ಗಂಟೆಗೆ ಮನೆ ತಲುಪಿದಾಗಲೂ ಮಳೆ ನಿಂತಿರಲಿಲ್ಲ. ಆತಂಕದಿಂದ ನಮ್ಮನ್ನು ಕಾಯುತ್ತಿದ್ದ ಎಲ್ಲರೂ ನೆಮ್ಮದಿಯ ನಿಟ್ಟುಸಿರುಬಿಟ್ಟರು. ತನ್ನ ಮಗನನ್ನು ಅಲೆದಾಟಕ್ಕೆ ಕರೆದೊಯ್ದ ಬಗ್ಗೆ ಮಗಳು ಸಣ್ಣಗೆ ಆಕ್ಷೇಪಿಸಿದಳು. ಮಕ್ಕಳಿಗೆ ಇಂಥದ್ದೆಲ್ಲ ಪರಿಚಯವಾಗಬೇಕು ಎಂದು ಅಳಿಯ ನನ್ನ ಬೆಂಬಲಕ್ಕೆ ನಿಂತರು.

ಅಷ್ಟು ಆಯಾಸದ ನಡುವೆಯೂ ರಾತ್ರಿ ನನಗೆ ಚೆಂಜಿ ಕೋಟೆಯದೇ ಕನಸು!

ಪರಂಜ್ಯೋತಿ
ನಂ. ೧೬೭, ೧೧ನೇ ಮುಖ್ಯರಸ್ತೆ, ೪ನೇ ಹಂತ
ಪೀಣ್ಯ ಕೈಗಾರಿಕಾ ಪ್ರದೇಶ
ಬೆಂಗಳೂರು - ೫೬೦ ೦೫೮





ಕಲ್ಯಾಣ ಮಹಲ್





**ಜ್ಯೋತಿ ಬಿ. ಕುಲಕರ್ಣಿ**



# ಕೇಳಿರೇ ಕಲ್ಯಾಣದ ಕಥೆಯ

ಬಸವಕಲ್ಯಾಣ ಹೊಕ್ಕು, ನಡೆಯುತ್ತ ನೋಡುವಾಗ ಎದುರಾದ ಅನೇಕರು ಗಂಭೀರ ಚಹರೆ ಹೊತ್ತು ಗಡಿಬಿಡಿಯೊಳಗ ನಡೆದಾಡುತ್ತಿದ್ದರು. ಇದೊಂದು ಐತಿಹಾಸಿಕ, ಕಾರಣಿಕ ಐತಿಹ್ಯಗಳ ಊರಾದ್ದರಿಂದ ಇಲ್ಲಿ ಹೆಚ್ಚಿನವರು ತಾತ್ವಿಕರೆ ಇರಬೇಕು ಅಂಬೋದನ್ನ ಶಶಿ ತನ್ನ ಸಹಪ್ರಯಾಣಿಕಳಾದ ಜೀನ್ಸ ಜುಬ್ಬಾ ಧಾರಿಣಿಯಾದ ನಮಿತಾಳ ಕಿವಿಯಲ್ಲಿ ಪಿಸುಗುಟ್ಟಿದ.

''ಇದು ಹಳೆಯ ರೀತಿ ರಿವಾಜುಗಳ ಊರು. ನೀನು ಈ ಜುಬ್ಬದ ಮೇಲೊಂದು ಪೇಲೊ, ಸ್ಕಾಲೊ ಹಾಕಬೇಕಿತ್ತು'' ಎಂದ. ''ಸ್ವಲ್ಪ ಸುಮ್ಮನಿದ್ದು ಇಲ್ಲಿಯ ಬದಲಾವಣೆಯನ್ನು ನೋಡು. ಅಲ್ಲಿ ಲಾರಿಗಳು ನೋಡು, ಹ್ಯಾಂಗ ಸಾಲುಗಟ್ಟಿ ನಿಂತಾವ. ಈಗ ಇಲ್ಲಿಯವರು ಮಾತೆತ್ತಿದರ ಬೊಂಬಾಯಿ, ಪುಣೆ ಅಂತಾರ. ಅತ್ತ ವ್ಯಾಪಾರ ವಹಿವಾಟು ಬೆಳಸಿ ಓಡಾಟಕ್ಕ ಹತ್ಯಾರ. ಇವರೆಲ್ಲ ಹೆಚ್ಚು ಮಾತಾಡದಿರೊದಕ್ಕ ಕೆಂಪಾದ ಗ್ವಾಡಿಗಳೆ ಉತ್ತರ ಹೇಳತಾವು ನೋಡಲ್ಲಿ. ಅದ್ಹಂಗ ಮೂಲಿ ಮೂಲಿಗಿ ಎಲಿ ಅಡಿಕೆ ಜಗಿದು ಉಗಳ್ಯಾರ. ಇದೆ ಇವರ ಗಂಭೀರ ಮೌನದ ಗುಟ್ಟು'' ಎಂದೆ. ''ಸರಿ ನೀ ಹೆಂಗಬೇಕೊ ಹಂಗ ಇರು, ನೀ ಭಾಳ ಮೊಂಡು ಹುಡುಗಿ, ಈಗ ಇಲ್ಲಿ ನಾವು ಮೊದಲಿಗಿ ಏನು ನೋಡೋಣ ಹೇಳು,'' ಎಂದು ಶಶಿ ಕೇಳಿದ್ದಕ್ಕೆ ನಮಿತಾ ಪ್ರತಿಕ್ರಿಯಿಸಿದಳು.

''ಇದೊಂದು ಶರಣರ ಕ್ರಾಂತಿ ನಡೆದ ಊರು. ಬಿಜ್ಜಳ ವಿಕ್ರಮಾದಿತ್ಯರಂತಹ ದೊರೆಗಳು ಆಳಿದ ಊರು, ಹೀಂಗ ನೀನು ಪುಸ್ತಕದಲ್ಲಿ ಓದಿದ್ದನ್ನು ಆಮೇಲೆ ನೋಡೋಣ, ನಾನು ಇಲ್ಲಿ ನೋಡಿ ಕೇಳಿ ತಿಳದಕೊಳ್ಳಲಿಕ್ಕೆ ಬಂದದ್ದು ಒಂದು ಹೊಸ ವಿಷಯ. ಅದನ್ನ ಮೊದಲಿಗೆ ಹೇಳಿದ್ರ ನೀನು ಹ್ಯಾಂಗ ಪ್ರತಿಕ್ರಿಯಿಸುತ್ತೀಯೋ ಅನ್ನೊ ದುಗುಡ ಇರೋದರಿಂದ ನಾ ಹೇಳಲಿಲ್ಲ, ಬಸವಕಲ್ಯಾಣ ಅಂದ್ರ ಶರಣರ ತವರು ಸನ್ಯಾಸಿಗಳ ತಾತ್ವಿಕರ ನೆಲೆ. ಕಾಲಕಾಲಕ್ಕೆ ಶರಣರು, ಸಾಧು ಸನ್ಯಾಸಿಗಳು ವಿರಕ್ತರು ಕಲ್ಯಾಣಕ್ಕೆ ಹರಿದುಬಂದರು, ಹೀಂಗ ಸನ್ಯಾಸಕ್ಕ, ತ್ಯಾಗಕ್ಕ ಒಲಿದವರೆಲ್ಲ ನೂರಕ್ಕ ನೂರರಷ್ಟು ಸಂದರೆ? ಖರೊಖರೆ ಹೇಳಬೇಕಂದ್ರ ಇಲ್ಲ!

ಎಲ್ಲರಿಗೂ ಆ ತ್ಯಾಗಜೀವನ ಒಲಿಯಲಿಲ್ಲ. ಒಗ್ಗಲಿಲ್ಲ. ಮೊದಲು ಸನ್ಯಾಸಕ್ಕೆ ಹೊರಳಿದವರಲ್ಲಿ ಕೆಲವರು ಮರಳಿ ಸಾಮಾನ್ಯ ಜೀವನಕ್ಕೆ ಬರಲು ಹಾತೊರೆದು ಹಿಂದಿರುಗಿದರು. ಆಗೇನಾಯ್ತು ಗೊತ್ತೇನು? ಆ ಸಂಕ್ರಮಣ ಸ್ಥಿತಿಯ ಒಂದು ಕಥೆಯನ್ನು ಈಗ ಮೊದಲಿಗಿ ಕೇಳಿ, ಅವರ ಮನಿ ಮನೆತನ ನೋಡಿಬರೋಣ.

*　　　*　　　*

ಕರಿಯ ಕಲ್ಲಿನಲ್ಲಿ ಕಟ್ಟಿದ ಸಾಲು ಸಾಲಾದ ಉಪ್ಪರಿಗೆಯ ಮನೆಗಳು. ಒಂದಕ್ಕಿಂತಲು ಒಂದು ಭವ್ಯ ಸುಂದರ ಬಂಗಲೆಗಳು, ಅಗಲವಾದ ರಸ್ತೆಗಳು, ಗತವೈಭವಕ್ಕೆ ಹಿಡಿದ ಕನ್ನಡಿಗಳಂಗ ಅವರಿಗೆ ಕಂಡವು. ನಮಿತಾ-ಶಶಿಯರ ಕಿವಿಯಲ್ಲಿ ಆ ಕಟ್ಟಡಗಳ ಹಿಂದಿನ ಹಳೆಯ ಕಥಿಯ ಗೆಜ್ಜೆನಿನಾದದ ಘಿಲಕು ನಿಲ್ಲದೆ ಶುರು ಹಚ್ಚಿಕೊಂಡಿತು.

ಆಗ ಮಳೆಗಾಲದ ಮಳಿ ಜಿಟಿ ಜಿಟಿ, ತಟ ಪಟ ಬರುತ್ತಿತ್ತು. ಮುಗಿಲಿನ್ಯಾಗ ಕರಿಮಾಡ ದಟ್ಟ ಆಗಿ ಮೂಡಲದಾಗ ಸೂರ್ಯ ಆಕಳಿಸುತ್ತ ಮುಸುಕಿನ್ಯಾಗ ಮೈ ಒಡ್ಡು ಮುರಿಯುವಂಗ ಇದ್ದ, ಅದರಿಂದ ಇನ್ನೂ ಊರು ಎಚ್ಚೆತ್ತಿರಲಿಲ್ಲ, ಆ ಜುಮು ಜುಮು ಕತ್ತಲಲ್ಲಿ ಎಂದಿನ ಕರ್ಮಠತನದಿಂದ ಹೊಂಟು ಜಗವೆಲ್ಲ. ಜಳಕ ಮಾಡುವಾಗ ನಾನು ಜಳಕ ಮಾಡುವದೇನು ವಿಶೇಷವಲ್ಲ ಎನಿಸಿ ತ್ರಿಪುರಾಂತ ಕೆರೆಯ ದಂಡೆಗೆ ಬಂದು, ಉಟ್ಟ ಕಾವಿ ಬಟ್ಟೆ ದಂಡಿಯ ಮ್ಯಾಲ ತಗದಿಟ್ಟು ಕೆರೆಯಲ್ಲಿ ಮುಳುಗುಹಾಕಿದೆ, ಅದೆಲ್ಲಿಂದಲೊ ತಣ್ಣಗಿನ ಗಾಳಿ ತೇಲಿ ಬಂದು ಈ ದೇಹದಂಡಿಸೊ ಹಟ ಯಾಕ ಎಂದು ಕೇಳಿ ಹೋಯಿತು. ಸನ್ಯಾಸಿಗೆ ಈ ಚಳಿ ಮಳಿ ಯಾವ ಮಹಾ ದೊಡ್ಡ ವಿಷಯಗಳೆಂದು ಮತ್ತೆ ಮುಳುಗಿ ಮ್ಯಾಲೆದ್ದಾಗ ಚಳಿ ಸಂಪೂರ್ಣವಾಗಿ ಅಡರಿದಾಗ ದಂಡಿಯ ಮ್ಯಾಲಿನ ಅರ್ಧ ಹಸಿಯಾದ ಬಟ್ಟೆಗಳನ್ನೆ ಆತುರದಿಂದ ತೆಗೆದುಕೊಂಡು ಒಂದನ್ನು ಉಟ್ಟು ಮತ್ತೊಂದನ್ನು ಹೊಚ್ಚಿಕೊಳ್ಳುವ ಮೊದಲು ಮೆತ್ತಗಿನ ಶಲ್ಯದಿಂದ ಮುಖ ಒರಿಸಿ, ಬೋಳು ತಲಿಯನ್ನು ಒರಿಸಿಕೊಂಡಾಗ, ಮೈ ಏನೊ ಸ್ವಚ್ಛ ಆಯ್ತು, ಆದ್ರ ಮನಸ್ಸಿಗೇನೊ ಹೆಪ್ಪಿಟ್ಟಂಗ ಮನಸ್ಸು ದಟ್ಟವಾಗಿ ಅದನ್ನ ಆಲೋಚಿಸುತ್ತ ಎಲ್ಲೋ ತೊಡಕಿತ್ತು.

ನಾನು ಚೆನ್ನವೀರಯ್ಯರ ಮಾತಿಗ ಬೆಲೆಕೊಟ್ಟು ಅವರ ಮನೆಗೆ ಒಮ್ಮೆ ಪಾದಪೂಜೆಗೆ ಹೋದದ್ದು ತಪ್ಪಾಗಿತ್ತು. ಮತ್ತೆ ರುದ್ರಾಭಿಷೇಕಕ್ಕೆ ಹನ್ನೊಂದು ದಿನ ಸತತವಾಗಿ ಹೋಗಲು ಒಪ್ಪಲೇಬಾರದಾಗಿತ್ತು, ನನ್ನ ಜಂಗಮತ್ವಕ್ಕೆ, ಅವರ ದಾಸೋಹ ತತ್ವಕ್ಕೆ ಗೌರವಿಸಿ ಹೋಗಿದ್ದೆಂದು ಮೇಲಿನ ಮಾತಿಗಿ ಹೇಳಬಹುದು. ಮೊದಲ ಬಾರಿಗೆ ಹೋದದ್ದು

ಕೂಡ ಅವಳ ರೂಪದ ಬಗ್ಗೆ ಕಿವಿಯ ಮೇಲೆ ಬಿದ್ದ ಮಾತುಗಳು ಖರೆ ಏನು, ಅಂಬೋದನ್ನು ಪರೀಕ್ಷಿಸಲಿಕ್ಕಿ, ನಂತರ ಹೋಗುತಿದ್ದದ್ದು ಯಾಕ? ... ಹೀಂಗ ನನ್ನ ಮನಸ್ಸು ಅನೇಕ ಬಾರಿ ತೂಗುದೀಪದಂಗ ಹೋಯ್ದಾಡುತಿತ್ತು.

ಸನ್ಯಾಸಿ ಎಲ್ಲಿಯೂ ಸ್ಥಾವರನಾಗದೆ ಜಂಗಮನೆ ಆಗಿರಬೇಕೆಂಬ ಗುರುನುಡಿ ಇರಇರುತ್ತ ನೆನಪಿಗೆ ಬರಲೆ ಇಲ್ಲ. ಸತತವಾಗಿ ಅವರ ಮನಿಗಿ ಪೂಜೆಗೆ ಹೋಗತೊಡಗಿದೆ. ಒಂದೇ ಒಂದು ಬಾರಿ ಮಾತ್ರ ಆಕಿಯ ಮುಖ ನೋಡಿದ್ದೆ. ಆಮೇಲೆ ಆಕಿನ - ವಿಭೂತಿ ಉಂಡೆ, ಹೂವಿನ ಬುಟ್ಟಿ, ಎಣ್ಣೆಬತ್ತಿ ಹೀಂಗ ಪೂಜಾ ಪರಿಕರಗಳನ್ನು ಹಿಡಿದುಕೊಂಡು ಎದುರಿಗಿ ಬಂದಾಗಲೆಲ್ಲ ಕಣ್ಣುಮುಚ್ಚಿಕೊಂಡರೂ ನನ್ನ ಅಂತರಂಗದ ಕಣ್ಣು ಮುಚ್ಚಿತ್ತೇನು? ಇಲ್ಲ! ಅಲ್ಲಿ ಮೂಡಿಬಿಟ್ಟಿತ್ತಲ್ಲ ಆಕಿಯ ಪ್ರತಿಬಿಂಬ.

ಮನಿಯ ಬಡತನದಲ್ಲಿ ಮತ್ತೊಬ್ಬ ಮಗನನ್ನು ಸಾಕುವುದು, ಸಲಹಿ ಸಾಲಿಗ ಕಲಿಸುವುದು ಭಾರ ಎಂದು ಭಾಳ ಹಿಂದೆಯೆ ಬೃಹನಮಠಕ್ಕೆ ತಂದು ನನ್ನನ್ನು ಬಿಟ್ಟಿದ್ದ ತಂದೆಯವರು ಆಗಾಗ ಬಂದು ನೋಡಿಕೊಂಡು ಹೋಗುತ್ತಿದ್ದರು. ಮಠದ ಹಿರಿಯ ಸದಸ್ಯರೊಂದಿಗೆ ಒಂದಾಗಿ ಇರುತ್ತ, ಅವರ ಭಜನಾ ಮಂಡಳಿಯಲ್ಲಿ ವಿಶೇಷ ಆಸಕ್ತಿ ವಹಿಸಿ, ಅಷ್ಟಿಷ್ಟು ಸಂಗೀತ ಜ್ಞಾನ ಪಡೆದು ವಚನಗಳನ್ನು ನಾಲಿಗೆಯ ಮ್ಯಾಲ ಕುಣಿಸುತ್ತಿದ್ದೆ, ನಾದದ ಗುಂಗು ಹತ್ತಿತು, ಗುರುಗಳು ಅದನ್ನ ಅದ್ಭುತ ಭಕ್ತಿ ಎಂದೆ ಭಾವಿಸಿದರು.

ಬೃಹನಮಠದ ಹಿರಿಯ ಸ್ವಾಮಿಗಳು ನನ್ನ ಸಂಸ್ಕೃತ – ಕನ್ನಡ ಎರಡೂ ಭಾಷಾ ಜ್ಞಾನ, ವಚನ ಗಾಯನದ ಪರಿಣತಿ, ಒಟ್ಟಾರೆ ಶರೀರ ಶಾರೀರಗಳೆರಡನ್ನು ಗಮನಿಸಿ, ''ಇವನು ಜನಕ್ಕ ಇಹಪರಗಳ ಜ್ಞಾನ ಬಿಚ್ಚಿ ಹೇಳುವಷ್ಟು ಬುದ್ಧಿವಂತ ಅದಾನ. ಇಂದಿನ ಹೊಸ ಗಾಳಿಗೆ ತಕ್ಕಂಗ ಅಂಗ್ರಜಿ ಕೂಡ ನಾಲ್ಕು ಮಾತು ಬರ್ತದ'' ಎಂದು ಭಾವಿಸಿ ಅದಕ್ಕ ತಮ್ಮ ಮುಂದಿನ ಉತ್ತರಾಧಿಕಾರಿಯಾಗಿ ಮಾಡಿಕೊಳ್ಳಲು ಅಪೇಕ್ಷಿಸಿದರು ಹಿರಿಯ ಸ್ವಾಮಿಗಳು. ತಮ್ಮ ನುಣ್ಣನೆಯ ಮಾತುಗಳಲ್ಲಿ ನನ್ನ ತಂದೆಯವರ ಎದುರಿಗೆ ತಮ್ಮ ಅಂತರಂಗದ ನಿವೇದನೆ ಎಂಬಂತೆ ಮಾತು ತೆಗೆದಾಗ ನನ್ನ ತಂದೆಯವರು ಕೂಡ ತಮ್ಮ ಮಗ ಮಠದ ಉತ್ತರಾಧಿಕಾರಿಯಾಗಿ ನಿಲ್ಲುವುದರಿಂದ ತಮಗೊಂದು ಪದವಿ ದೊರಕುವುದೆಂಬಂಗ ಒಂದು ಕ್ಷಣದಾಗ 'ಹೂಂ' ಗುಟ್ಟಿಬಿಟ್ಟರು.

ನನ್ನ ಅವ್ವ ಬದುಕಿದ್ರೆ ಇದಕ್ಕೆಲ್ಲ ಒಪ್ಪುತ್ತಿರಲಿಲ್ಲವೇನೊ? ಆಕಿಗೆ ಮಗನ ಹಣೆಮ್ಯಾಲ ಭಾಸಿಂಗ ನೋಡುವ ಮನಸಿತ್ತು. ಮಠಕ್ಕ ಓದಿಸಲಿಕ್ಕಿ ಕಳುಹಿಸುವಾಗಲೆ ಹನಿಗಣ್ಣಾಗಿ ಸೆರಗಿನಲ್ಲಿ ಮುಖ ಮರೆ ಮಾಡಿಕೊಂಡು ಅತ್ತಿದ್ದಳು. ನನ್ನ ಹಿರಿಯ ಅಕ್ಕ ಅಣ್ಣಂದಿರ ಮಕ್ಕಳನ್ನು ಅದೆಷ್ಟು ತೊಡಿ ಮ್ಯಾಲ ಆಡಿಸಿದರೂ ಆಕಿಯ ಅಪೇಕ್ಷಾ ಹಿಂಗಿರಲಿಲ್ಲ, ಆಕಿ ಒಂದು ರೀತಿ ವಿಶ್ವ ಕುಟುಂಬಿನಿ. ಕುಟುಂಬ ದೊಡ್ಡದಾದಷ್ಟು ಆಕಿಯಲ್ಲಿ ಹಿಗ್ಗುವ ಗುಣವಿತ್ತು. ಆಕಿ ಬದುಕಿದ್ರ ಮಠಕ್ಕೆ ಮರಿಯಾಗಿಸುವ ಮೊದಲು ಅಪ್ಪ ಆಕಿಯನ್ನು ಒಪ್ಪಿಸಲಿಕ್ಕಿ ಪ್ರಯತ್ನಿಸಬೇಕಾಗುತಿತ್ತೇನೊ. ಆಕಿ ಇಂತಹದಕ್ಕೆಲ್ಲ ಸುಲಭವಾಗಿ ಒಪ್ಪುವಕಿನೆ ಅಲ್ಲ. ಆಕಿಯ ಜಿಜೇವಿಶ ಗುಣ ಸ್ವಭಾವಗಳ ನೆನಪು ಈಗಲೂ ಆಗುತ್ತದೆ. ಆಕಿ ಎಂದು ಜೀವನ ವಿಮುಖವಾದ ಮಾತಿಗ ಒಪ್ಪಿದಕಿನ ಅಲ್ಲ, ತನ್ನ ಸೊಸೆಯರು ದೇವರ ಹೆಸರಿನಲ್ಲಿ ಉಪವಾಸವಿದ್ರ ಕಕ್ಕುಲತೆ ತೋರಿಸುತ್ತ, ''ದೇವ್ರು ಉಪವಾಸ ಇರು ಅಂದಾನೇನು? ಪೂಜೆ ಪುನಸ್ಕಾರ ಮಾಡಿ ಆಮ್ಯಾಲ ಉಣ್ಣೋದಕ್ಕ ಅಡ್ಡಿ ಇಲ್ಲ,'' ಎಂದು ಗೊಣಗುತ್ತ ಕೈಲಾಗದಕ್ಕ ತನ್ನ ಹಾಸಿಗಿ ಬಿಡಿಸಿಕೊಂಡು ಮಲಗಿಬಿಡುವ ಸ್ವಭಾವದಕಿ ಆಕಿಯಾಗಿದ್ದಳು ಎಂದು ಆಕಿಯ ಬಗ್ಗೆ ನೆನಪುಗಳು ಕಾಡಿಸುತ್ತಿದ್ದವು.

ಮಠಕ್ಕೆ ಮರಿಸ್ವಾಮಿಯಾಗಿ ಉಳಿಯುವ ವಿಚಾರ ಮೊದಲಿಗೆ ನನ್ನ ಎದುರು ಪ್ರಸ್ತಾಪಕ್ಕ ಬಂದಾಗ ಊಹುಂ ಒಲ್ಲೆ ಎಂದಿದ್ದೆ. ಆಗ ದೇಶದ ಎಲ್ಲ ಭಾಗದಾಗ ಸ್ವಾತಂತ್ರ್ಯದ ಹೋರಾಟದ ಗಾಳಿ ಬಿರುಸಾಗಿ ಬೀಸುತ್ತಿತ್ತು. ನನಗ ಅಲ್ಲಿಯ ಕೆಲಸನು ಕೈ ಮಾಡಿ ಕರಿತಿತ್ತು, ಸ್ವಾಮಿಗಳು ಅದಕ್ಕ, ''ಮಠದ ಸೇವಾದ ಜೋತಿಗಿ ದೇಶಸೇವಾ ಮಾಡೋದು ತಪ್ಪೇನಿಲ್ಲ,'' ಎಂದು ಹೇಳಿ ಸಮಾಧಾನ ಮಾಡಿಬಿಟ್ಟರು. ಇದರಿಂದ ಮಠದ ಮರಿಸ್ವಾಮಿ ಆಗಲು ಒಪ್ಪಿಬಿಟ್ಟಿದ್ದೆ.

ಮಠದ ಮರಿಸ್ವಾಮಿಯಾಗಿ ಶಿವಾನಂದ ಎಂಬೂ ನಾಮಾಂಕಿತ ಬದಲಾಯಿಸಿಕೊಂಡು 'ಸತ್ಯಾತ್ಮ ಸ್ವಾಮಿ' ಆದಮೇಲೆ ಜ್ಯೋತಿರ್ಲಿಂಗಗಳ ದರ್ಶನಕ್ಕೆ ಹೊರಟು



ಶ್ರೀಶೈಲವನ್ನು ನೋಡಿಕೊಂಡು ಇನ್ನೇನು ರಾಮೇಶ್ವರಕ್ಕೆ ಹೋಗುವ ಮನಸ್ಸಾಗಿತ್ತು. ಆದ್ರ ಬೃಹನ್ಮಠದ ಹಿರಿಯ ಸ್ವಾಮಿಗಳಿಗ ಪಾರ್ಶ್ವವಾಯು ಹೊಡೆದು ಅವರು ಅನಾರೋಗ್ಯದಿಂದ ಮುದಿ ಎತ್ತಿನಂಗ ಮೂಲೆಗುಂಪಾಗಿ ಶಿಷ್ಯಂದಿರ ಮೂಲಕ ಮಠದ ಆಗುಹೋಗುಗಳ ಬಗ್ಗೆ ತಿಳಿದುಕೊಳ್ಳುತ್ತಿದ್ದರು. ಜ್ಯೋತಿರ್ಲಿಂಗಗಳ ದರ್ಶನಕ್ಕೆ ಹೊರಟಿದ್ದ ನಾನು ಹಿಂದಿರುಗಿ ಬಂದು, ಗುರುಗಳ ಅಪ್ಪಣೆಯಂತೆ ಗುರೂಪದೇಶ ಪಡೆದು ಪೀಠವನ್ನೇರಿ, ಪಟ್ಟಾಭಿಷೇಕ ಮಾಡಿಕೊಂಡು, ಪಲ್ಲಕ್ಕಿಯಲ್ಲಿ ತಿರುಗಾಡತೊಡಗಿದೆ. ಬರಬರುತ್ತ ನನಗೆ ಆ ಸಾತ್ವಿಕ ಬದುಕು, ತಾತ್ವಿಕ ಮಾತುಗಳು ಒಗ್ಗಿ ಹೋದವು, ಅದನ್ನೆ ಜೀವನ ಅಂದುಕೊಂಡಿದ್ದೆ. ಪಟ್ಟಕ್ಕೆ ಬಂದಮೇಲೆ ಜೊತೆಗೆ ಇದ್ದ ಕೆಲವು ಗುರು ಬಂಧುಗಳೂ, ''ಈಗ ಸ್ವಾಮಿಗಳಾದ್ರಿ. ಇನ್ನ ಜ್ಯೋತಿರ್ಲಿಂಗಗಳಿಗ ಹೋಗ್ರಿ ಜನರು, ದೇವ್ರು ಒಟ್ಟಿಗೆ ಕಣ್ಣ ಬಿಟ್ಟು ನೋಡ್ತಾರ'' ಎಂದು ತಮ್ಮ ಮನಸ್ಸಿನ ಕುಹಕ ಹೊರಹಾಕಿದ್ದರು. ನಾನು ದಾಸೋಹದಲ್ಲಿ ಇದ್ದದ್ದನ್ನೆ ಸುಖ ಹಚ್ಚಿಕೊಂಡು ಹಿಂದುದ್ದಕ್ಕ ಕಟ್ಟುಮಸ್ತಾಗಿ ಬೆಳದಿದ್ದೆ. ಮಠಕ್ಕ ಭಕ್ತರ ದೇಣಿಗಿಯ ಕೊರತಿ ಎಂದೂ ಇರಲಿಲ್ಲ, ಕಾಯಿಪಲ್ಯ, ಜೋಳ, ಗೋಧಿಯ ಮದನಾ ಬರ್ತಿತ್ತು.

*　　　　*　　　　*

ಎಂದಿನಂತೆಯೆ ಅವತ್ತು ಮಠದ ಶಿವಲಿಂಗಕ್ಕ ಆಸರಂತ ಮೇಲಿನ ಕಂಚಿನ ಗಿಂಡಿಯಿಂದ ಗಂಗೆಯು ಕ್ರಮ ತಪ್ಪದೆ ಲಯಬದ್ಧವಾಗಿ ಟಪ ಟಪ ಎಂದು ದನಿಯುತ್ತಿತ್ತು. ಆಗತಾನೆ ಪೂಜೆ ಮುಗಿಸಿದ್ದರಿಂದ ಅಗರ ಚಂದನ ಕರ್ಪೂರಗಳ ಸುವಾಸನೆ ವಾತಾವರಣವನ್ನು ಆವರಿಸಿತ್ತು. ಆರತಿಯ ಹೊತ್ತಿನ ನಗಾರಿ ಬಡಿದು ನಿಂತಿದ್ದರಿಂದ ಜಡಿಮಳೆ ಜಡಿದು ನಿಂತ ವಾತಾವರಣವಿತ್ತು. ಸೂರ್ಯನ ಕಿರಣಗಳು ನೇರವಾಗಿ ಮಠದಲ್ಲಿ ಬಿದ್ದುದರಿಂದ, ಆವರಣವೆಲ್ಲ ಪಾರದರ್ಶಕವಾಗಿ ಪ್ರಕಾಶಿಸುತ್ತಿತ್ತು. ಗರ್ಭಗುಡಿಯಲ್ಲಿ ದೀಪಗಳು ದೇದೀಪ್ಯಮಾನವಾಗಿ ಉರಿಯುತ್ತ ಭಕ್ತರ ಮನಸ್ಸಿಗೆ ಶಿವನ ಕಣ್ಣ ಬೆಳಕಾಗಿದ್ದವು, ನಾನು ನನ್ನ ಪೂಜಾ ಕಾರ್ಯ ಮುಗಿಸಿ ಬಲಗಡೆಯ ಕಟಾಂಜನದಿಂದ ಮೆಟ್ಟಿಲಿಳಿದು ಇನ್ನೇನು ನನ್ನ ಕೋಣೆಗೆ ಹೋಗಲಿದ್ದೆ, ಅಷ್ಟರಲ್ಲಿ ಮಠದ ತಲೆಬಾಗಿಲ ಹೊರಗೆ ಎದುರುಗಡೆ ಕುದುರೆಗಾಡಿಯೊಂದು ಬಂದು ಗಕ್ಕನೆ ನಿಂತಿತು. ದೇವಸ್ಥಾನದ ಹಳೆಯ ಭಕ್ತರೂ, ದಾನಿಗಳೂ ಆದ ಚೆನ್ನವೀರಯ್ಯ ನಿಧಾನವಾಗಿ ಇಳಿದು, ಇನ್ನೊಬ್ಬರ ಆಶ್ರಯ ಪಡೆದು ಮಠದ ಒಳಗೆ ಬರತೊಡಗಿದರು. ಅವರನ್ನು ಮಾತನಾಡಿಸಲು, ನನ್ನ ಎಂದಿನ ಸಿಂಹಾಸನದಂತೆ ಎತ್ತರವಾಗಿದ್ದ ಕುರ್ಚಿಯಲ್ಲಿ ಕೂತಿದ್ದೆ, ಕಾಲು ನೆಲಕ್ಕೆ ತಾಕದಷ್ಟು ಎತ್ತರದ ಕುರ್ಚಿ ಅದು. ಅವರು ಬಂದವರೆ, ಅತ್ಯಂತ ಭಕ್ತಿಭಾವದಿಂದ ನನ್ನ ಪಾದಗಳನ್ನು ತಮ್ಮ ಬೊಗಸೆಯಲ್ಲಿ ಹಿಡಿದು, ಬಾಗಿ ಅವಕ್ಕೆ ತಲೆ ಆನಿಸಿ ಎದ್ದರು, ಈ ರೀತಿಯ ನಮಸ್ಕಾರದಿಂದ ಆಯಾಸಪಟ್ಟುಕೊಂಡು ಎದ್ದು ನೆಲದ ಮೇಲೆ ತೊಡೆ ಹಾಕಿ ಕೂತುಕೊಂಡು ಮಾತಿಗೆ ಆರಂಭಿಸಿದರು.

''ಮಗಳ ಮದುವಿ ಆಗಬೇಕಂತ ರುದ್ರಾಭಿಷೇಕ ಮಾಡಲಿಕ್ಕಿ ಬೇಡಿಕೊಂಡಿನಿ. ಅದು ನಿಮ್ಮ ಕೈಯಿಂದ ಆಗಬೇಕು'' ಎಂದು ಕೈಮುಗಿದು ಕೇಳಿದರು. ನಾನು ಏನನ್ನೂ ಉತ್ತರಿಸಿರಲಿಲ್ಲ. ನಾನು ಆ ಅಮೂರ್ತ ಶಿವನ ಬಗ್ಗೆ ಒಂದು ಕ್ಷಣ ಚಿಂತನ ಮಾಡಿ, ನನ್ನ ನಾನೆ ಹೇಳಿಕೊಂಡೆ, ''ದೇವ್ರೆ, ನಮ್ಮಂತಹವರು ನಿನ್ನ ಬಗ್ಗ ಧ್ಯಾನಿಸುತ್ತೇವೆ. ಆದ್ರ ಈ ಸಂಸಾರವಂದಿಗರು, ಸಣ್ಣ ಸಣ್ಣ ಸುಖಗಳ ಗುರಿಯಿಟ್ಟುಕೊಂಡು ಅವುಗಳನ್ನು ಸಾಧಿಸುವಲ್ಲಿ ಪರಮ ಸಾರ್ಥಕತೆಯನ್ನು ಕಾಣುತ್ತಾರೆ. ಅದರಲ್ಲಿಯೆ ಅವರಿಗೆ ಆನಂದವಿದೆ ಎಂದು ನಾವು ಅವರ ಕಣ್ಣಲ್ಲಿ ಕಾಣಬಹುದು. ಮಠಮಂದಿರಗಳಿರುವುದು ಮನಸ್ಸು ಶುದ್ಧಗೊಳಿಸಲಿಕ್ಕಿ, ಸನ್ಮಾರ್ಗ ತಿಳಿಸಲಿಕ್ಕಿ. ಆದ್ರ ಇಲ್ಲಿಗೆ ಬರುವವರೆಲ್ಲ ಆಸೆ, ಆಕಾಂಕ್ಷೆಗಳ ಪಟ್ಟಿಯನ್ನು ಹಿಡಿದುಕೊಂಡು ಬರ್ತಾರ, ಅದರಲ್ಲಿ ಇವರು ಒಬ್ಬರು. ಇವರು ತಮ್ಮ ಕೆಲಸದಲ್ಲಿ ಯಶಸ್ಸು ಪಡೆಯಲಿ'' ಎಂದು ಸಶಬ್ದವಾಗಿ ಕೊನೆಯ ಮಾತನ್ನು ಉಚ್ಚರಿಸಿದೆ, ಆದ್ರ ಚನ್ನವೀರಯ್ಯ ಅಷ್ಟಕ್ಕೆ ತೃಪ್ತರಾಗಲಿಲ್ಲ.

''ಕಾಶಿಯ ಪಂಡಿತರಿಗೆ ಮಗಳ ಜಾತಕ ತೋರಿಸಿದೆ. ಮದವಿ ಆದ್ರ ಈ ಶಿವರಾತ್ರಿ ಒಳಗ ಆಗಬೇಕು ಇಲ್ಲಂದ್ರ ಏಳು ವರ್ಷ ಸಾಡೇಸಾತಿ ಅದ, ಆಗಂಗಿಲ್ಲ ಅಂದ್ರು. ಭಾಳ ವಿಚಿತ್ರ ಜಾತಕ ಅಂಬೋಣ ಅವರ್ದು. ಅದಕ್ಕ ಸತತ ಹನ್ನೊಂದು ದಿವಸ ರುದ್ರಾಭಿಷೇಕ ಇಟ್ಟುಕೊಂಡಿನಿ, ನಿಮ್ಮ ಕೈಯಿಂದ ನೆರವೇರಬೇಕು'' ಎಂದು ಮತ್ತೊಮ್ಮೆ ಕೈಮುಗಿದು ಕೇಳಿದರು. ಚನ್ನವೀರಯ್ಯನವರು ಆಗರ್ಭ ಶ್ರೀಮಂತರು ಮಹಾ ಆಸ್ತಿಕರು, ಅವರ ಹೆಂಡತಿ ಗತಿಸಿಹೋಗಿ ಇರುವ ಒಬ್ಬಳೇ ಮಗಳಿಗೆ ಅನೇಕ ನೆಂಟಸ್ತಿಕೆಗಳು ಬೇಡಿ ಬರುತ್ತಿದ್ದವು. ಆದ್ರ ಅನುರೂಪವಲ್ಲದ ವರನೊಂದಿಗೆ ಒತ್ತಾಯದಿಂದ ಇದ್ದ ಒಬ್ಬ ಮಗಳ ಮದುವಿ ಮಾಡಿ ಆಗಬಾರದ್ದು ಆಗಿ ಹೋದ್ರ, ಎಂಬ ದುಗುಡ ಅವರಿಗೆ. ಆ ವಿಶೇಷವಾದ ಹುಡುಗಿಯನ್ನು ನೋಡುವ ಚಪಲ ನನ್ನಲ್ಲಿ ಬೈತಿಟ್ಟುಕೊಂಡದ್ದು ತಪ್ಪು ಎಂದು ನಾನು ಭಾವಿಸಲಿಲ್ಲ, ಅವರ ಮನೆಗೆ ಸಹಜವಾಗಿ ಹೋಗಲು ಒಪ್ಪಿದೆ.

*　　　　*　　　　*

ಅಂದು ಅವರ ಮನೆಗೆ ಪೂಜೆಗೆ ಹೋಗಿದ್ದೆ. ಶಿವಲಿಂಗವನ್ನು ಅದರ ಸುತ್ತಲಿನ ಕಂಚಿನ ವಿಗ್ರಹಗಳನ್ನು ತಿಕ್ಕಿ ತೀಡಿ ಇಟ್ಟು ವಿಭೂತಿ ಗಂಧಗಳನ್ನು ಅವುಗಳ ನೊಸಲಿಗಿಟ್ಟು ಹೂ ಮುಡಿಸಿ, ಆನಂದ ಪಟ್ಟೆ. ಗೃಹಿಣಿ ಅಡುಗೆಮನೆಯಲ್ಲಿ ಪಾತ್ರೆಗಳ ಹೊಳಪನ್ನು ಕಂಡು ಹೀಗೆಯೆ ಸಂತಸಪಡುತ್ತಾಳೇನೊ ? ನಾನು ಯಾಕ್ಕೆ ಇದಕ್ಕಿಂತ ಎತ್ತರಕ್ಕೆ ಏರಲಾರದವನಾಗಿ ಉಳದಿದ್ದೇನೆಂದು ಹಳಿಹಳಿಸಿಕೊಳ್ಳುತ್ತಲಿದ್ದೆ.

ಅವತ್ತು ಶಿವರಾತ್ರಿ ಶಿವ ಪೂಜೆಗೆಂದು ಹಚ್ಚಿದ ದೀಪಗಳು ದೇದೀಪ್ಯಮಾನವಾಗಿ ಬೆಳಗುತ್ತಿದ್ದ ಆ ಪ್ರಶಾಂತ ಪೂಜಾಗೃಹದಿಂದ ಆಕೆ ತನ್ನ ಸೌಂದರ್ಯದ ಮಂದ ಪ್ರಭೆಯೊಂದಿಗೆ ಪ್ರವೇಶಿಸಿದಳು. ಅಂದು ಪೂಜೆಯ ಕೊನೆಯ ದಿನ ಅವಳನ್ನು ನಾನು ಸನ್ಯಾಸಿ ಎಂಬುದನ್ನು ಮರೆತು ನಿಬ್ಬೆರಗಾಗಿ ದಿಟ್ಟಿಸಿದೆ, ಆಕೆಯೊ ಹೆಸರಿಗೆ ತಕ್ಕಂತೆ ಸುಶೀಲೆ, ಮುಖ ಮೇಲೆತ್ತದೆ ಕೆಲಸದಲ್ಲಿ ತೊಡಗಿದ್ದಳು.

ಆ ನಿರಾಭರಣ ಸುಂದರಿಯನ್ನು ಕಣ್ಣು ತುಂಬಿಸಿಕೊಳ್ಳುತ್ತಿರುವಾಗಲೇ, ಆಕೆಯ ತಂದೆಯವರು ಬಂದು ನನ್ನ ಕಾಲಿಗೆರಗಿ ಕೈ ಮುಗಿದು ಹೋದರು. ಆಕೆಯು ತುಸುವೆ ತಲೆಯ ಮೇಲೆ ಸೆರಗು ಹೊದ್ದು, ಶರಣು ಮಾಡಿ ದೂರ ಸರಿದು ನಿಂತು, ''ನೀವು ನನ್ನ ಕೋರಿಕೆಯನ್ನು ಈಡೇರಿಸಬೇಕು, ತಂದೆಗೆ ವಯಸ್ಸಾಗಿ ಆರೋಗ್ಯ ಸರಿ ಇಲ್ಲ, ಅರ್ಬುದ ರೋಗ. ಆ ದುಃಖ ತೋರಗೊಡದೆ ಓಡಾಡುತ್ತಾರೆ. ಯೋಗ್ಯ ವರನ ಕೈಯಿಂದ ನನ್ನ ಕುತ್ತಿಗೆಗೆ ತಾಳಿಕಟ್ಟಿಸುವ ಇಚ್ಛೆಯಿಂದ ಇದ್ದಾರ, ನನಗೆ ನೀವು ಸುಭದ್ರೆಗೆ ಒಲಿದ ಅರ್ಜುನನಂತೆ ಕಂಡಿದ್ದೀರಿ, ನೀವು ಈ ಕೋರಿಕೆ ಈಡೇರಿಸಬೇಕು,'' ಎಂದು ಮೆಲ್ಲಗೆ ಉಸುರಿ ಎಷ್ಟೋ ಹೊತ್ತು ನಿಂತುಕೊಂಡಳು, ನನ್ನ ನಿರುತ್ತರ ಕಂಡು ಹೋಗುವಾಗ, ''ನನ್ನದು ಅಹಂಭಾವ ಅಂತ ಅಧಿಕ ಪ್ರಸಂಗ ಅಂತ ಅರ್ಥೈಸಬೇಡ್ರಿ ನಿಮಗೆ ಸರಿ ಅನಿಸದಿದ್ರ ತಿಳಿಯದ ಕೂಸು ಅಂತ ಮರೆತು ಬಿಡ್ರಿ'' ಎಂದು ಹೇಳಿ ಹೊಸ್ತಿಲು ದಾಟಿದಳು, ಅಂದು ಪೂಜೆಯ ಕೊನೆಯ ದಿನ ಕಾಶಿ ಪಂಡಿತರು ಹೇಳಿದ ಗಡುವು ತೀರಲು ಬಂದಿತು, ತಂದೆಯ ಆಯುಷ್ಯ ಕೂಡ ಎಂದು ನಾನು ಭಾವಿಸಿಕೊಂಡೆ.

ಅಲ್ಲಿ ಪ್ರಕಟವಾಗಿ ಎದುರಿಗೆ ಯಾರೂ ಕಾಣದಿದ್ದರೂ ಬಾಗಿಲ ಮರೆಯಲ್ಲಿ ಶಿಷ್ಯರು ನಿಂತಿದ್ದರು. ಮನೆಯ ಆಳುಕಾಳುಗಳಿದ್ದರು. ಆಕಿ ಸನ್ಯಾಸಾಶ್ರಮ ಧರ್ಮದ ಮೇರೆ ಮೀರಿ ಬರಬೇಕೆಂದು ಆರ್ತಳಾಗಿ ಕೇಳಿದ್ದಳು. ಬಾಯಿಯಿಂದ ಒಂದೇ ಒಂದು ಮಾತು ಬರಲಿಲ್ಲ. ಆದ್ರ ನಾನು ನಾನಾಗಿರಲಿಲ್ಲ. ''ಲೋಕದ ಬದುಕನ್ನು ರೂಪಿಸಬೇಕು ಸರಿದಾರಿಗೆ ಒಯ್ಯಬೇಕು'' ಎಂದು ಯೋಚಿಸುತ್ತಿದ್ದೆ. ನನ್ನ ಬದುಕಿನ ದಾರಿಯ ಬಗ್ಗೆ ತಲೆಕೆಡಿಸಿಕೊಳ್ಳದೆ ಅದು ಸಾಗಿಸಿದಂತೆ ಸಾಗಿದ್ದೆ. ನನ್ನ ತನು, ಮನ, ಸಂತೈಸಿಕೊಳ್ಳದೆ ಪ್ರವಚನ, ಪುರಾಣಗಳನ್ನು ಹೇಳುತ್ತಿದ್ದೆ. ಪ್ರಪಂಚದಲ್ಲಿ ಯಾರಿಂದ

ಬೇಕಾದರು ನನ್ನತನವನ್ನು ಮುಚ್ಚಿಟ್ಟುಕೊಳ್ಳಬಹುದು, ಆದರೆ ನನ್ನಿಂದಲೆ ನನ್ನತನವ
ಮುಚ್ಚಿಟ್ಟುಕೊಳ್ಳುವುದು ಸಾಧ್ಯವೇ ?

ಈಗ ನಾನು ಬದುಕುತ್ತಿದ್ದ ಅವಸ್ಥೆ ಜೀವನಕ್ಕಾಗಿ ಮಾಡಿಕೊಂಡ ರಾಜಿ ಆಗಿತ್ತು
ಇಡೀ ಜೀವನ ಪೂರ್ತಿ ಹೀಗೆಯೆ ರಾಜಿ ಮಾಡಿಕೊಂಡು ಮುಂದುವರಿಯುವುದೆ, ಎಂ
ಪ್ರಶ್ನಿಸಿಕೊಂಡೆ, ಒಂದು ಕಡೆಗೆ, ನಾನು ನಂಬಿದ ತತ್ವ ಆದರ್ಶಗಳು. ಮತ್ತೊಂದೆಡೆ
ನನಗೆ ಒಲಿದುಬಂದ ಹೆಣ್ಣು. ಒಂದು ಕ್ಷಣ 'ಹೆಣ್ಣಾಗಿ ಕಾಡುತ್ತ ಮಾಯೆ ನನ್ನ
ವಿಚಲಿತಗೊಳಿಸುತ್ತಿದೆ' ಎನಿಸಿತು. ಮರುಕ್ಷಣ ಛಿ! ಮಾಯೆ ಅವಳಲ್ಲ ''ನನ್ನಲ್ಲಿ ಮಾ
ಅಥವಾ ಮಾಯೆಯಲ್ಲಿ ನಾನಿದ್ದೇನೆಯೆ ?'' ಎಂದು ಯೋಚಿಸತೊಡಗಿ ಹಣ್ಣಾದೆ.

ಯಾರಿಗಾದರು ಸಮಸ್ಯೆ ಬಂದರೆ, ಸಲಹೆಗೆ ನನ್ನ ಬಳಿ ಬರುತ್ತಾರೆ, ನನಗೆ
ಸಮಸ್ಯೆ ಬಂದರೆ? ಸುಮ್ಮಸುಮ್ಮನೆ ದುಃಖ ಅಳು ಬರತೊಡಗಿತು. ಪೂ
ಮುಗಿದದ್ದರಿಂದ, ತಡಮಾಡದೆ ಹಿರಿಯ ಸ್ವಾಮಿಗಳ ಹತ್ತಿರ ಹೋದೆ, ಅವರಿ
ಅಡ್ಡಬಿದ್ದೆ. ''ಏನು ಸುದ್ದಿ''? ಎಂದರು ಗುರುಗಳು.

''ವೈರಾಗ್ಯದ ಹೊರತು ಇನ್ಯಾವ ಭಾವಗಳು ಮನಸ್ಸಿನ್ಯಾಗ ಬರಬಾರದೇನು ?''

''ಅವೆಲ್ಲ ಇರುತ್ತವೆ, ಬರುತ್ತವೆ, ಹೋಗುತ್ತವೆ. ಆದ್ರೆ ಸನ್ಯಾಸಿ ಆದವ
ವೈರಾಗ್ಯವನ್ನೆ ಸ್ಥಾಯಿಭಾವವಾಗಿಸಿಕೊಳ್ಳಬೇಕು.''

''ನಮಗೆ ಮುಕ್ತಿ ಇದೊಂದೆ ಮಾರ್ಗವೇನು ?''

''ಎಂದೂ ಇಲ್ಲದೆ ವಿಚಿತ್ರವಾಗಿ ಮಾತನಾಡುತ್ತಿರುವಿ. ನಿತ್ಯ ಇಂತಹ ಅನೇ
ವಿಷಯಗಳಿಗೆ ನೀನೆ ಉತ್ತರಿಸುತ್ತಿ.''

''ನಾನು ಸಂಸಾರ-ಸನ್ಯಾಸಗಳ ಇಬ್ಬಂದಿಯಲ್ಲಿ ಸಿಲುಕೀನಿ. ಎರಡು
ನಿಲುಕದಂಗಾಗ್ಯಾವ.''

''ಪರಿಪೂರ್ಣವಾಗಿ ವೈರಾಗ್ಯ ಒಲಿಯಲಿಕ್ಕಿ ನೀನಿನ್ನು ಮಾಗಬೇಕು ಮಗ.''

''ಮಾಗುವ ಮುನ್ನ ನನ್ನನ್ನು ಪೀಠದ ಮ್ಯಾಲ ಯಾಕ ಕೂರಿಸಿದಿರಿ, ಅಯ್ಯ ?''

''ಎಂದೂ ಇಲ್ಲದ ಪ್ರಶ್ನೆ ನಿನಗ ಇವತ್ತ ಯಾಕ ಬಂತು ಹೇಳು. ಮನಸ್ಸಿನಲ್ಲಿ ಈ
ತುಮುಲಗಳು ಆಗಾಗ ಏಳುವುದು ಸ್ವಾಭಾವಿಕ. ಅದಕ್ಕೆ ಧ್ಯಾನ...''

''ಎಂಟ್ಹತ್ತು ದಿನಗಳಿಂದ ಧ್ಯಾನದಲ್ಲಿ ಏಕಾಗ್ರತೆಯೆ ಹತ್ತುತ್ತಿಲ್ಲ.''

''ಏನು ಮಾಡಬೇಕೆಂದಿರುವಿ ?''

''ಮಠವನ್ನು... ಬಿಟ್ಟು...''

''ಈ ಬೃಹನ್ಮಠವನ್ನು ನೀನು ಬಿಟ್ಟು ಎಲ್ಲಿಗೆ...?''

''ಮದುವಿ...'' ...ಮುಂದಿನ ಮಾತು ಗಂಟಲಲ್ಲಿ ಹೂತು, ಆ ಶಬ್ದವೆ ಬಹ
ಮಂದ್ರದಲ್ಲಿ ಕೇಳಿಸಿತ್ತು.

''ಸನ್ಯಾಸಿ ತಿರುಗಿ ಮದುವಿ.''

''ಯಾಕಾಗಬಾರದು ಗುರುಗಳೇ ?''

''ಜನರನ್ನು ಎದುರಿಸುವ ಧೈರ್ಯ ನಿನಗಿದೆಯೇನು ?''

''ನನ್ನ ಮನಃಸ್ಥಿತಿಯನ್ನಂತೂ ಎದುರಿಸಲಾರೆ.''

ಹಿರಿಯ ಸ್ವಾಮಿಗಳು ಒಂದು ಕ್ಷಣ ಕಣ್ಣುಮುಚ್ಚಿ... ''ವಿಧಿಯ ಚಿತ್ತ! ಎಷ್ಟೊ
ಜನ ಸನ್ಯಾಸಿಗಳು ಹೀಂಗ ಪ್ರಾಪಂಚಿಕ ಆಕರ್ಷಣೆಯಿಂದ ವ್ಯಭಿಚಾರಿಗಳಾ
ಮಠಗಳನ್ನು ಹಾಳುಗೆಡವ್ಯಾರ, ನನ್ನ ಶಿಷ್ಯ ಅಂತಹವನಾಗಲಿಲ್ಲಂತ ನಾನು ಅಭಿಮಾ
ಪಡತೀನಿ. ಆದ್ರ ಲೋಕದ ಜನ ಏನಂದಾರು ?''

''ಆತ್ಮಸಾಕ್ಷಿಗೆ ವಿರುದ್ಧವಾಗಿ, ಮನಸ್ಸೊಂದು, ಮಾರ್ಗ ಒಂದಾಗಿ ಇರಲಾರೆ.''

ಅಯ್ಯನವರಿಗೆ ಯುವಕನ ಮನಸ್ಸು ಎಲ್ಲಿಯೊ ಸಿಲುಕಿದೆ ಎಂದು ಅರಿವಾಗಿತ್ತು
ಅದನ್ನು ಕಿವಿಚಿ ಕೇಳುವುದು ತಮ್ಮ ಘನತೆಯಲ್ಲವೆಂದು ಸುಮ್ಮನಾದರು. ಸ್ವಲ್ಪ ಹೊತ್ತಿ
ಮೌನದ ನಂತರ, ''ಆದರೂ ಪೀಠದ ಗೌರವದ ಪ್ರಶ್ನೆ ಇದೆ ಮಗು. ಅದರ ಬಗ
ಯೋಚಿಸು'' ಎಂದರು.

''ನನಗೂ ಆ ಪೀಠದ ಬಗ್ಗೆ ಬಹಳ ಗೌರವ ಅದ ಮತ್ತ ಸನ್ಯಾಸತ್ವದ ಬಗ್ಗೆ ಕೂಡ
ಅದಕ್ಕಾಗಿಯೆ ಅದನ್ನ ಬಿಟ್ಟು ಹೊರಬಂದು... ತೋರಿಕೆಯ ಗೌರವ ಉಳಿಸಿಕೊಂಡು
ನನಗ ಅದರಂಗ ಬಾಳಲಿಕ್ಕಾಗದಿದ್ರ ಏನು ಫಲ ?'' ಎಂದು ಅಳತೊಡಗಿದ
ಗುರುಗಳ ಕಣ್ಣಂಚು ಒದ್ದೆಯಾದವು, ''ಇದಕ್ಕ ಸನ್ಯಾಸ ಅಂತಾರ ಮಗ! ಎಲ್ಲರಿಗೂ
ಸಲ್ಲುವುದಿಲ್ಲ!'' ಹೊರಗೆ ಹೆಜ್ಜೆ ಸಪ್ಪಳ ಕೇಳುತಿತ್ತು. ಶಿಷ್ಯರನೇಕರು ಗ್ವಾಡಿಗ
ಕಿವಿಗೊಟ್ಟು ಈ ಮಾತುಗಳನ್ನು ಕೇಳುತ್ತಿದ್ದರು. ಅನೇಕರು ತಾವು ಆ ಗೌರವ
ಹೊಂದಲಿಕ್ಕೆ ಪೈಪೋಟಿಯೊಳಗಿದ್ದರು.

# ಸಾದರ ಸ್ವೀಕಾರ

ಸಂತಾಲರ ಜಾನಪದ ಕಥೆಗಳು
ಸಂಗ್ರಹ : ಎಚ್. ಎಸ್. ಮಂಜುನಾಥ
ಪುಟ : ೮೪ ಬೆಲೆ : ರೂ. ೪೦

ವನಿತೆಯರ ವ್ಯಾಧಿಗಳು ಡಾ|| ಎಚ್. ಆರ್. ಮಣಿಕರ್ಣಿಕಾ
ಪುಟ : ೧೦೦ ಬೆಲೆ : ರೂ. ೫೫

ಗೋಹತ್ಯೆ ಒಂದು ಪರಾಮರ್ಶೆ ನಾಗೇಶ್ ಹೆಗಡೆ
ಪುಟ : ೧೬ ಬೆಲೆ : ರೂ. ೨

ಮೇಲಿನ ಮೂರು ಪುಸ್ತಕಗಳ ಪ್ರಕಾಶಕರು
ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈ. ಲಿ., ಎಂಬೆಸಿ ಸೆಂಟರ್, ನಂ. ೧೧, ಕ್ರೆಸೆಂಟ್ ರಸ್ತೆ, ಬೆಂಗಳೂರು - ೫೬೦ ೦೦೧

ಒಳ ದನಿ (ಲೇಖನ ಸಂಕಲನ) ನಾ. ದಿವಾಕರ
ಪುಟ : ೫೧೨ ಬೆಲೆ : ರೂ. ೩೦೦
ರೂಪ ಪ್ರಕಾಶನ, ೨೪೦೬/೨೪೦೭/ಕೆ-೧, ಹೊಸಬಂಡಿ ಕೇರಿ, ಮೊದಲನೇ ಅಡ್ಡರಸ್ತೆ, ಕೆ.ಆರ್. ಮೊಹಲ್ಲಾ, ಮೈಸೂರು - ೫೭೦ ೦೦೪.

ಇಲ್ಲಿ ಯಾವುದೂ ಅಮುಖ್ಯವಲ್ಲ (ಲೇಖನ ಸಂಕಲನ)
ಡಿ. ಎಸ್. ನಾಗಭೂಷಣ
ಪುಟ : ೩೦೦ ಬೆಲೆ : ರೂ. ೧೫೦
ಹಸಿರು ಪ್ರಕಾಶನ, ನಂ. ೯೦, ೧೬ನೇ ಕ್ರಾಸ್, ೪ನೇ ಹಂತ, ಜೆ.ಪಿ.ನಗರ, ಬೆಂಗಳೂರು - ೫೬೦ ೦೭೮

ಬಿಸಿಲ ಭೂಮಿಯ ಕೋಗಿಲೆ (ಕವನ ಸಂಕಲನ)
ಜೆ. ಬಿ. ಪೂಜಾರಿ
ಪುಟ : ೮೦ ಬೆಲೆ : ರೂ. ೫೫
ಸುಜಾತಾ ಪ್ರಕಾಶನ, ಹಿರೇ ವಡಗೇರಾ - ೫೮೫ ೩೫೫, ತಾಲ್ಲೂಕು ಶಹಾಪುರ, ಗುಲಬರ್ಗಾ ಜಿಲ್ಲೆ

ಆಧುನಿಕ ಕವಿತೆಗಳ ಸಂಗ್ರಹ (ಕವನ ಸಂಕಲನ)
ಸಂ : ಡಾ|| ವಿಜಯಶ್ರೀ ಸಬರದ
ಪುಟ : ೯೭ ಬೆಲೆ : ರೂ. ೬೦
ಪಲ್ಲವಿ ಪ್ರಕಾ ಶನ, ವಿಶ್ವವಿದ್ಯಾಲಯ ಅಂಚೆ, ಗುಲಬರ್ಗಾ - ೫೮೫ ೧೦೬

ಹಿರೇಮಠ ಮತ್ತು ದಲಿತೋದ್ಧಾರ
ಡಾ|| ಇಂದುಮತಿ ಪಾಟೀಲ
ಪುಟ : ೬೬ ಬೆಲೆ : ರೂ. ೮೦
ಬಸವಧರ್ಮ ಪ್ರಸಾರ ಸಂಸ್ಥೆ, ಹಿರೇಮಠ ಸಂಸ್ಥಾನ, ಭಾಲ್ಕಿ.

ನಾನು ಓದಿದ ಶಾಲೆ (ಲೇಖನ ಸಂಕಲನ) ಕೋ. ಚೆನ್ನಬಸಪ್ಪ
ಪುಟ : ೮೦ ಬೆಲೆ : ರೂ. ೪೦
ಶ್ರೀ ಶರಣಬಸವೇಶ್ವರ ವಿದ್ಯಾವರ್ಧಕ ಸಂಘ (ರಿ) ಕಾನಾಮಡುಗು, ಕೂಡ್ಲಿಗಿ ತಾ|| ಬಳ್ಳಾರಿ ಜಿಲ್ಲೆ.

ವಿಶ್ವಕನ್ನಡ ಸಮ್ಮೇಳನ ಹಾಗೂ ಇತರ ಲೇಖನಗಳು
ಯ. ರು. ಪಾಟೀಲ
ಪುಟ : ೧೯೦ ಬೆಲೆ : ರೂ. ೧೦೦
ಶರಣ ಸಾಹಿತ್ಯ ಅಕಾಡೆಮಿ, ರಾಜಗುರು ಸಂಸ್ಥಾನ ಕಲ್ಮಠ, ಚನ್ನಮ್ಮನ ಕಿತ್ತೂರು, ಬೈಲಹೊಂಗಲ ತಾಲ್ಲೂಕು.

ಜಗವು ನಿನ್ನೊಳಗೆ ಸದಾಶಿವಯೋಗಿ
ಪುಟ : ೧೦೩ ಬೆಲೆ : ರೂ. ೭೫
ಸದಾಶಿವಯೋಗ ಪ್ರತಿಷ್ಠಾನ ಭಾರತ (ರಿ), ಶ್ರೀ ಶಿವಾನಂದ ಯೋಗಾಶ್ರಮ, ಹಂಪಿ - ೫೮೩೨೩೯

ಗಾಂಧಿ ಆಗ್ಬೇಕಂದುಕೊಂಡಾಗ (ಕವನ ಸಂಕಲನ)
ವಿ. ಎಚ್. ವೀರಣ್ಣ ಮಂಠಾಳಕರ್
ಪುಟ : ೬೮ ಬೆಲೆ : ರೂ. ೪೦
ಸಾಕ್ಷಿಪ್ರತಿಷ್ಠಾನ, ಹುಮನಾಬಾದ ಬೀದರ್ ಜಿಲ್ಲೆ - ೫೮೫೩೩೦

ಅಭಿಯಾನ (ನಾಟಕ) ಜಯಪ್ರಕಾಶ ಮಾವಿನ ಕುಳಿ
ಪುಟ : ೭೪ ಬೆಲೆ : ರೂ. ೬೦
ಸ್ಫಟಿಕ ಪ್ರಕಾಶನ, ಮಾವಿನಕುಳಿ ಮನೆ ಮೂಡು ಬಿದಿರೆ - ೫೭೪೧೯೭ (ದ.ಕ.)

ಚೆನ್ನಿ ಹೊರಟು ಹೋದಳು (ಕಥಾ ಸಂಗ್ರಹ)
ಎಂ. ವಿ. ಭಟ್ (ಶ್ರೀ ಮಿತ್ತೂರು)
ಪುಟ : ೧೮೮ ಬೆಲೆ : ರೂ. ೧೦೦
ಯುಗಪುರುಷ ಪ್ರಕಟಣಾಲಯ, ಕಿನ್ನಿಗೋಳಿ - ೫೭೪೧೫೦ (ದ.ಕ.)

ಮದುವೆಗೊಂದು ನೆಪ (ಕಥಾ ಸಂಕಲನ)
ಶಾಂತಾರಾಮ ಸೋಮಯಾಜಿ
ಪುಟ : ೧೮೮ ಬೆಲೆ : ರೂ. ೯೦
ಹೇಮಂತ ಸಾಹಿತ್ಯ, ನಂ. ೯೭೨ 'ಸಿ', ನಾಲ್ಕನೇ 'ಈ' ವಿಭಾಗ, ೧೦ 'ಎ' ಮುಖ್ಯರಸ್ತೆ, ರಾಜಾಜಿನಗರ, ಬೆಂಗಳೂರು - ೫೬೦ ೦೧೦

ಕಲ್ಯಾಣ ನಾಡಿನಲ್ಲಿ ವೀರಭದ್ರ (ಲೇಖನ ಸಂಕಲನ)
ಡಾ|| ಎಂ. ಜಿ. ನಾಗರಾಜ್
ಪುಟ : ೧೯೨ ಬೆಲೆ : ರೂ. ೧೦೦
ಶ್ರೀ ಚನ್ನಬಸವೇಶ್ವರ ಸಂಸ್ಥಾನ ಹಿರೇಮಠ, ಸುಕ್ಷೇತ್ರ ಹಾರಕೂಡ - ೫೮೫೪೩೭, ತಾ|| ಬಸವಕಲ್ಯಾಣ, ಬೀದರಜಿಲ್ಲೆ.

ಅಧ್ಯಯನ (ಲೇಖನ ಸಂಕಲನ) ಸಿ. ಪಿ. ಕೆ..
ಪುಟ : ೧೬೮ ಬೆಲೆ : ರೂ. ೧೦೦

ಶೃಂಗಾರ ಚಿತ್ರಗಳು ಸಿ. ಪಿ. ಕೆ.
ಪುಟ : ೯೬ ಬೆಲೆ : ರೂ. ೫೦

ಮೇಲಿನ ಎರಡು ಪುಸ್ತಕಗಳ ಪ್ರಕಾಶಕರು
ಶ್ರೀ ಲಲಿತಾ ಬುಕ್ ಬ್ಯುರೊ, 'ಅಂಜನಾದ್ರಿ', ರೇಣುಕಾಚಾರ್ಯ ದೇವಸ್ಥಾನದ ರಸ್ತೆ, ಲಕ್ಷ್ಮಿ ಚಿತ್ರಮಂದಿರದ ಹಿಂಭಾಗ, ಮೈಸೂರು - ೫೭೦ ೦೨೪

ಅಹನ್ಯಹನಿ (ಚುಟುಕ ಕವಿತೆ) ಸಿ. ಪಿ. ಕೆ.
ಪುಟ : ೧೪೪ ಬೆಲೆ : ರೂ. ೮೦

ಕಾವ್ಯ ಕಲಾತತ್ವ: ಕೆಲವು ಮುಖಗಳು (ಲೇಖನಗಳು) ಸಿ. ಪಿ. ಕೆ.
ಪುಟ : ೧೫೨ ಬೆಲೆ : ರೂ. ೮೦

ಮೇಲಿನ ಎರಡು ಪುಸ್ತಕಗಳ ಪ್ರಕಾಶಕರು
ನಾಗಾರ್ಜುನ ಎಂಟರ್ ಪ್ರೈಸಸ್, ನಂ. ೫೮, ಅಕ್ಕಮಹಾದೇವಿ ರಸ್ತೆ, ದಾವಣಗೆರೆ.

ಕಾವ್ಯ ವಿಚಾರ ಸಾರ (ಎರಡನೇ ಮುದ್ರಣ) ಅನು : ಸಿ. ಪಿ. ಕೆ.
ಪುಟ : ೧೧೨ ಬೆಲೆ : ರೂ. ೬೦
ಶಿವರಂಜಿನಿ ಪಬ್ಲಿಕೇಷನ್ಸ್, ನಂ.೩೪೧, ಕಾಳಮ್ಮನ ಗುಡಿ ಬೀದಿ, ಮೈಸೂರು-೫೭೦ ೦೦೧

ರತ್ನತ್ರಯ (ಎರಡನೇ ಮುದ್ರಣ) ಸಿ. ಪಿ. ಕೆ.
ಪುಟ : ೧೦೦ ಬೆಲೆ : ರೂ. ೫೦
ಶ್ರೀ ರಾಜೇಂದ್ರ ಪ್ರಿಂಟರ್ಸ್ ಅಂಡ್ ಪಬ್ಲಿಷರ್ಸ್, ನಂ.೧೨/೧, ಈವನಿಂಗ್ ಬಜಾರ್ ಹಿಂಭಾಗ, ಶಿವರಾಂ ಪೇಟೆ, ಮೈಸೂರು - ೫೭೦ ೦೦೧

ದ್ವಿಬಿಂದು ವರ್ಗೀಕರಣ (ಕನ್ನಡ ಇಂಗ್ಲಿಷ್)
ಕನ್ನಡ ಅನು : ಬಿ. ಎ. ಶಾರದ
ಪುಟ : ೨೩+೫೬೪ ಬೆಲೆ : ರೂ. ೮೦೦
ಭಾರತೀಯ ಭಾಷೆಗಳ ಕೇಂದ್ರ ಸಂಸ್ಥೆ, ಮೈಸೂರು ಮತ್ತು ಶಾರದ ರಂಗನಾಥನ್ ಎಂಡೋಮೆಂಟ್ ಫಾರ್ ಲೈಬ್ರರಿ ಸೈನ್ಸ್, ೭೦೨, ಮಹಡಿ, ೪೨ನೇ ಕ್ರಾಸ್, ೩ನೇ ಬ್ಲಾಕ್, ರಾಜಾಜಿನಗರ, ಬೆಂಗಳೂರು - ೫೬೦ ೦೧೦

---

ನಾನು ಕಣ್ಣೊರಸಿಕೊಂಡು ಅಲ್ಲಿಂದ ತಿರುಗಿ ನನ್ನ ಖೋಲಿಗಿ ಹೋಗಿ ಅಲ್ಲಿಯ ಂದು ಜೊತೆ ಪಂಚೆಯಲ್ಲಿ ಒಂದ ಉಟ್ಟು ಒಂದನ್ನು ಚೀಲದಲ್ಲಿ ಹಾಕಿಕೊಂಡು ವಿಯನ್ನು ತೆಗೆದು ಮಡಿಚಿಟ್ಟು ಹೊರಬಂದೆ. ಅವು ನನ್ನ ಪೂರ್ವಾಶ್ರಮದ ಟ್ಟಿಗಳು. ಕಪಾಟಿನಲ್ಲಿ ಬಿದ್ದುಕೊಂಡಿದ್ದವು. ಈಗ ಮತ್ತೆ ಚಾಲ್ತಿಗೆ ಬಂದವು. ನಾನು ಹೊರಬಂದಾಗ ನನ್ನ ಊಹೆಗೂ ಮೀರಿ ಹೊರಗೆ ಚನ್ನವೀರಯ್ಯನವರು ಕುದುರೆ ಾಡಿ ಹಾಗೂ ಜವಾನರೊಂದಿಗೆ ಕಾದು ನಿಂತಿದ್ದರು. ಆ ಶಿವರಾತ್ರಿಯ ದಿನ ಕತ್ತಲಲ್ಲಿ ಮಠದಲ್ಲಿ ನೆರದ ಜನ ಜಾತ್ರೆಯಂಗ ಇತ್ತು, ಅವರಲ್ಲಿ ಕೆಲವರು ಬೆರಗಾಗಿ ೋಡುವಾಗ ಕತ್ತಲಲ್ಲಿ ನಾನು ಕುದುರೆಗಾಡಿ ಹತ್ತಿ ಹೊರಟೆ, ಕೆಲವರು ನೆಲದ ಮಣ್ಣು ಿಗಣಿ ತೂರಿದರು, ಕೊಡವಿಕೊಳ್ಳುತ್ತ ಗಾಡಿಯ ಓಟದ ಕಡೆಗೆ ದೃಷ್ಟಿ ಹರಿಸಿದೆ.

ಊರ ಹೊರವಲಯದ ಹೊಸದೊಂದು ಕಟ್ಟಡದ ಹತ್ತಿರ ಗಾಡಿ ನಿಂತಿತು. ಇದು ೊಸಮನೆ ಸುಮ್ಮನೆ ಕಟ್ಟಿಸುತ್ತಿದ್ದೆ ಇನ್ನು ಮುಂದೆ ನಿಮ್ಮದು, ಆ ಕಲ್ಲು ಕಟ್ಟಡ ುಪ್ಪರಿಗೆಯ ಮನೆಯಾಗಿತ್ತು. ''ಮದುವಿ ಸಂಕ್ಷಿಪ್ತ ಆಗಿ ಲಗುನ ತಯಾರ ಮಾಡ್ತಿವಿ'' ಂದು ಚನ್ನವೀರಯ್ಯನವರು ತಿಳಿಸಿಹೋದರು, ನನ್ನ ಮತ್ತು ಸುಶೀಲಳ ಮದುವಿ ೈವದ ಸನ್ನಿಧಿಯಲ್ಲಿ ಸಂಕ್ಷಿಪ್ತವಾಗಿ ನಡೆದುಹೋಯಿತು, ಚನ್ನವೀರಯ್ಯನವರು ಅರ್ಬುದ ರೋಗಪೀಡಿತರಾದ್ದರಿಂದ ಕೆಲವೇ ದಿನಗಳಲ್ಲಿ ವಿಧಿವಶರಾದರು.

* * *

ಕಾಲಾನಂತರದಲ್ಲಿ ನಮ್ಮ ಮನೆಯ ಸಾಲಿಗೆ ಕೆಲವು ಮನೆಗಳು ತಲೆ ಎತ್ತಿದವು, ನನ್ನ ಹಿಂದೆ ನನ್ನಂತೆ ಕೆಲವು ಜನ ಸನ್ಯಾಸಿಗಳು ಅದು ರುಚಿಸದೆ ಮತ್ತೆ ಸಂಸಾರಸ್ಥರಾದರು. ನಮ್ಮಂತಹ ಧೀರ ಸಂಸಾರಸ್ಥರನ್ನು ಈ ಕಲ್ಯಾಣದ ಸಮಾಜ ಬಹಿಷ್ಕರಿಸಿ 'ಗೋಸಾಯಿಗಳೆಂದು' ಕರೆಯಲಾರಂಭಿಸಿತು. ಈ ಪ್ರಥೆ ಮೊದಲಿಗೂ ಇತ್ತು, ನನ್ನಿಂದ ಈ ಪ್ರಥೆ ತನ್ನ ಕಾವು ಹೆಚ್ಚಿಕೊಂಡು ಸುದ್ದಿ ಆಯಿತು.

''ಅಭಾವದಿಂದ ಸನ್ಯಾಸಕ್ಕ ಅಡಿರಿದವ ಹ್ಯಾಂಗ ಅಲ್ಲಿಂದ ಹೊರಬಂದ ಅಂಬೊ ಶಶಿ ಕೇಳಿ ತಣ್ಣಗಾದಿರೇನು ? ಕತಿ ಆ ಕಟ್ಟಡದ ಮುಂದೊಂದು ನಮ್ಮ ಫೋಟೊ ಇರಲಿ ಬಾ ಆ ಮಂದಿ ಏನು ಬ್ಯಾಡನಾಕ್ಕಿಲ್ಲ'' ಎಂದು ನಮಿತಾ ಶಶಿಗೆ ಫೋಟೊ ಪೋಜಿಗಾಗಿ ಕರೆದಳು. ಅವರ ಅಧ್ಯಯನಕ್ಕ ಅದರ ಅವಶ್ಯಕತೆಯೂ ಇತ್ತು.

**ಜ್ಯೋತಿ ಬಿ. ಕುಲಕರ್ಣಿ**
ಕೇರಾಫ್. ಸತೀಶ ಜಿ. ದೇಶಮುಖ್, ಮನೆ ನಂ. ೧-೧೭೩/೧೩, ಅಪ್ಪರಲೇನ್
ಬ್ರಹ್ಮಪೂರ್, ಗುಲ್ಬರ್ಗಾ - ೫೮೫ ೧೦೧

# ಕಾಶಿಯಲ್ಲಿ ನೀವು ನೋಡದೇ ಬಿಟ್ಟು ಬಂದದ್ದು



■ ಡಾ|| ಎ. ಪಿ. ಭಟ್

**ಕಾ**ಶಿಗೆ ಹೋಗಬೇಕು ಎಂಬುದು ಎಲ್ಲರ ಆಸೆಯಂತೆ, 'ಕಾಶೀ ಯಾತ್ರೆ' ಮದುವೆಗಳಲ್ಲಿ ಒಂದು ಸಂಪ್ರದಾಯವಾಗಿದೆಯಂತೆ. ಇದು ಸ್ತ್ರೀವಾದಿಗಳಿಗೆ ಹಿಡಿಸಲಾರದು. ಕಾರಣ ಸ್ಪಷ್ಟ. ಅದೇನೇ ಇದ್ದರೂ ಈಗ ಕಾಶಿಗೆ ಯಾರಾದರೂ ಹೋಗಿರಬಹುದು. ಹಾಗೆಯೇ ವಿಶ್ವನಾಥನ ಮಂದಿರವನ್ನೂ ಹೊಕ್ಕು ಗುಡಿಯನ್ನು ನೋಡಿ (ಪಕ್ಕದ ಮಸೀದಿಯ ಗೋಡೆ ಕಂಡು ತ್ಸ್‌ತ್ಸ್! ಎಂದು ಲೊಚಗುಟ್ಟಿ) ''ಅಯ್ಯೋ ಇಷ್ಟೇನ'' ಎಂದುಕೊಂಡು ಬರಬಹುದು. ನಾನಂತೂ ಮೊದಲ ಬಾರಿ ಕಂಡಾಗ ನಮ್ಮೂರಿನ ಯಾವುದೋ ಪಾಳುಬಿದ್ದ ದೇವಸ್ಥಾನವಾದರೂ ಇದಕ್ಕಿಂತ ಚೆನ್ನಾಗಿದೆ ಎಂದು ಅಂದುಕೊಂಡಿದ್ದುಂಟು... ಆಗ ಸಂಜೆಯ ವೇಳೆ, ಈಗಿನ ಹಾಗೆ ಆರತಿ ಎಂಬ ದೊಡ್ಡ ಸಮಾರಂಭ ನಡೆಯುತ್ತಿರಲಿಲ್ಲ. ಪರಿಸರವಾದಿಗಳ ಕಣ್ಣು ಕೆಂಪಾಗಿಸುವಷ್ಟು ಧೂಮ, ಅಲ್ಲಿನ ಸಕಲ ಕೀಟ ಸಂಕುಲಕ್ಕೆ ಕಸಿವಿಸಿಯಾಗುವ ಬೆಳಕು, ಈ ಎಲ್ಲಾ ಸಂಭ್ರಮ ಇರಲಿಲ್ಲ. ನಾವು ಸಂಜೆ ಘಟ್ಟದ ಮೇಲೆ ನಿರಾತಂಕವಾಗಿ ನೀರೊಳಗೆ ಕಾಲು ಬಿಟ್ಟು ಕೂತಿದ್ದುಂಟು. ಈಗ ಕಾಲಿಡಲೂ ಆಗದ ಪರಿಸ್ಥಿತಿ. ಏನೇನೋ ಒಳಜಗಳದ ಪರಿಣಾಮವಾಗಿ ಈಗ ಎರಡೆರಡು ಆರತಿಗಳು - Phase difference ಅಂದರೆ ಏನು? Interference ಎಂದರೆ ಏನು? ಎಂಬಂತಹ ತರಂಗದ ಭೌತನಿಯಮಗಳನ್ನು ವಿವರಿಸಲು ಇದು ಅತ್ಯಂತ ಉತ್ತಮವಾದ ಪ್ರಾತ್ಯಕ್ಷಿಕೆ.

ಅದೇನೆ ಇರಲಿ, ಕಾಶಿ ಅತಿ ಪುರಾತನ ನಗರ. ಸುಮಾರು ೫೦೦೦ ವರ್ಷಗಳ ಇತಿಹಾಸ ಇದೆಯಂತೆ. ಆದ್ದರಿಂದ ಅನೇಕ ಉಲ್ಲಾಸ, ಉತ್ಸಾಹ, ದುಗುಡ, ದುಃಖಗಳನ್ನು ಅನುಭವಿಸಿ ಹಣ್ಣಾದ ನಗರ ಎಂಬುದು ನಿಜ. ಸುಮಾರು ೧೦೦೦ ದೇವಾಲಯಗಳಿದ್ದವು ಎಂದು ಚೀನೀ ಯಾತ್ರಿಕ ಬರೆದಿದ್ದಾನಂತೆ. ಪ್ರತಿಯೊಂದು ಮನೆಯೂ ಅವನಿಗೆ ದೇವಸ್ಥಾನದ ಹಾಗೆ ಕಂಡಿರಬಹುದು. ಏಕೆಂದರೆ ೧೫೦೦ ವರ್ಷದ ಹಿಂದೆ ಅಲ್ಲಿ ೧೦೦೦ ಮನೆಗಳಿದ್ದುವೇ, ಎಂಬುದೇ ಪ್ರಶ್ನೆ. ಕಾಶಿಯ ಹೆಸರೆತ್ತದ ಪುರಾಣವಿಲ್ಲ; ಪುಣ್ಯಕತೆಯೂ ಇಲ್ಲ, ಆದರೆ ಅವುಗಳಿದ್ದ ಮಾತ್ರಕ್ಕೆ ಕಾಶಿಯ ಇತಿಹಾಸವನ್ನು ೫೦೦೦ ವರ್ಷಗಳಿಗೂ ಹಿಂದಕ್ಕೆ ತಳ್ಳಬಹುದೇ?

ಕಾಶಿ ಅತಿ ಪುರಾತನ ನಗರ. ಸುಮಾರು 5000 ವರ್ಷಗಳ ಇತಿಹಾಸ ಇದೆಯಂತೆ. ಆದ್ದರಿಂದ ಅನೇಕ ಉಲ್ಲಾಸ, ಉತ್ಸಾಹ, ದುಗುಡ, ದುಃಖಗಳನ್ನು ಅನುಭವಿಸಿ ಹಣ್ಣಾದ ನಗರ ಎಂಬುದು ನಿಜ. ಸುಮಾರು 1000 ದೇವಾಲಯಗಳಿದ್ದವು ಎಂದು ಚೀನೀ ಯಾತ್ರಿಕ ಬರೆದಿದ್ದಾನಂತೆ. ಪ್ರತಿಯೊಂದು ಮನೆಯೂ ಅವನಿಗೆ ದೇವಸ್ಥಾನದ ಹಾಗೆ ಕಂಡಿರಬಹುದು. ಏಕೆಂದರೆ 1500 ವರ್ಷದ ಹಿಂದೆ ಅಲ್ಲಿ 1000 ಮನೆಗಳಿದ್ದುವೇ, ಎಂಬುದೇ ಪ್ರಶ್ನೆ. ಕಾಶಿಯ ಹೆಸರೆತ್ತದ ಪುರಾಣವಿಲ್ಲ; ಪುಣ್ಯಕತೆಯೂ ಇಲ್ಲ, ಆದರೆ ಅವುಗಳಿದ್ದ ಮಾತ್ರಕ್ಕೆ ಕಾಶಿಯ ಇತಿಹಾಸವನ್ನು 5000 ವರ್ಷಗಳಿಗೂ ಹಿಂದಕ್ಕೆ ತಳ್ಳಬಹುದೇ?



ಚಕ್ರಯಂತ್ರ

ಈ ಆಲೋಚನೆ ಬಂದದ್ದು ನನಗೆ ಈಚೆಗೆ. ಅದಕ್ಕೆ ಪುಷ್ಟಿ ಒದಗಿಸಬಹುದಾದ ಏನಾದರೂ ಸುಳಿವು ಕಾಣಬಹುದೇ ಎಂಬುದರತ್ತ ನನ್ನ ಗಮನ ಹರಿಯಿತು. ಆಕಾಶ ಇದಕ್ಕೆ ಉತ್ತರ ನೀಡುವುದೇ ?

ಹೀಗೆ ಹೊರಟ ಆಲೋಚನೆಗೆ ಮೊದಲು ಸಿಕ್ಕಿದ್ದು ಖಗೋಳ ವೀಕ್ಷಣೆ. ಅಲ್ಲೊಂದು ಜಂತರ್ ಮಂತರ್ ಇದೆಯಲ್ಲಾ ? ಆ ಬಗ್ಗೆ ಮಾಹಿತಿ ಕಲೆಹಾಕಿದೆ.

ಅದನ್ನು ಮಹಾರಾಜ ಜಯಸಿಂಗ್ ೧೭೧೭ರಲ್ಲಿ ಕಟ್ಟಿಸಿದನಂತೆ. ಈತನೇ ದಿಲ್ಲಿ, ಜಯಪುರ, ಉಜ್ಜಯಿನಿಗಳದ್ದನ್ನೂ ಕಟ್ಟಿಸಿದವನು. ಅವುಗಳಷ್ಟು ಇದು ದೊಡ್ಡದಾಗಿಲ್ಲವಂತೆ. ಈ ಬಾರಿ ಕಾಶಿಗೆ ಹೋದಾಗ ಇದನ್ನು ನೋಡೋಣ ಎನಿಸಿತು. ಊರಿಗೆ ಮರಳುವ ದಿನ ಬೆಳಗಿನ ಹನ್ನೊಂದರವರೆಗೂ ಕಾಲಾವಕಾಶವಿತ್ತು. ಶ್ರೀಮತಿ ವಿಭಾ ತ್ರಿಪಾಠಿಯವರನ್ನು (ಬನಾರಸ್ ವಿವಿಯ ಪ್ರಾಧ್ಯಾಪಕರು) ಕೇಳಿದೆ. ಅದು ಊರೊಳಗೇ ಇದೆ. ಬೆಳಗ್ಗೆಯೇ ಹೋಗಬಹುದು ಎಂದರು. ನಾನು ಹೊರಡುತ್ತೇನೆ ಎಂದು ತಿಳಿದ ಮೇಲೆ, ಡಾ॥ ಸತ್ಯನಾರಾಯಣ ಭಟ್ಟರು, ಡಾ॥ ದಾಸ್ ಅವರು, ಡಾ॥ ಜಯಕಿಷನ್ ಅವರು ''ನಾವೂ ಬರುತ್ತೇವೆ'' ಎಂದರು. ಟ್ಯಾಕ್ಸಿ ಹೊರಟಿತು. ಕಾಶೀ ದೇವಸ್ಥಾನದ ಪ್ರವೇಶದ್ವಾರದ ಬಳಿಯೇ ಇದೆ ಎಂದು ವಿಭಾ ಹೇಳಿದ್ದರು. ಅಲ್ಲಿಯವರೆಗೂ ಹೋಗುವಲ್ಲಿ ಏನೂ ತೊಂದರೆ ಆಗಲಿಲ್ಲ. ಮುಂದೆ ಎಲ್ಲಿ ಹೋಗಬೇಕು'' ಎಂದು ಡ್ರೈವರ್‌ಗೆ ತಿಳಿಯಲಿಲ್ಲ. ಟ್ರಾಫಿಕ್ ಪೊಲೀಸನ್ನು ಕೇಳಿದ. ಅವನು ನದಿಯತ್ತ ಕೈ ತೋರಿಸಿ ''ನೀನು ಆ ಕಡೆ ಹೋಗುವುದಾದರೆ ೫೦ ರೂಪಾಯಿ ಪಾರ್ಕಿಂಗ್ ಫೀ ಕೊಡಬೇಕು'' ಎಂದ. ಈ ಜಾಣ, ''ಜಂತರ್ ಮಂತರ್ ಎಲ್ಲಿದೆ ?'' ಎಂದ. ಟ್ರಾಫಿಕ್ ಪೊಲೀಸ್ ಕೆಂಗಣ್ಣು ಮಾಡಿಕೊಂಡು ''ದಿಲ್ಲಿಗೆ ಹೋಗು - ಇಲ್ಲಿ ಟ್ರಾಫಿಕ್ ಜಾಂ ಮಾಡಬೇಡ'' ಎಂದು ಗುಡುಗಿದ. ಸರಿ, ಟಾಕ್ಸಿ ಮರಳಿತು. ಮತ್ತೊಬ್ಬನನ್ನು ಕೇಳಿದ. ಇದೇ ಉತ್ತರ. ಬೇರೆ ದಾಟಿಯಲ್ಲಿ. ಕೊನೆಗೆ ಜಯಕಿಶನ್ ಅವರು ವಿಭಾಗೆ ಫೋನ್ ಮಾಡಿದರು. ವಿಭಾ ಅವರು ''ದಶಾಶ್ವಮೇಧ ಘಾಟ್‌ನಲ್ಲಿದೆ. ಮಾನಮಂದಿರ ಎಂದು ಕೇಳಿ'' ಎಂದರು. ಪುನಃ ಡ್ರೈವರ್ ಯಾರನ್ನೋ ಕೇಳಿದ. ಅವರು ''ಮಾನಮಂದಿರ ಅಲ್ಲ ಮಾನಸ ಮಂದಿರ. ಅದು ಎರಡು ಕಿ.ಮೀ. ದೂರ'' ಎಂದರು. ಈ ಮಧ್ಯೆ ಪೊಲೀಸ್‌ಗೆ ನಮ್ಮ ಮೇಲೆ ಅನುಮಾನ ಬಂದುಬಿಟ್ಟಿತು. ಅಲ್ಲಿ ಹೆಜ್ಜೆ ಹೆಜ್ಜೆಗೂ ಖಾಕಿ ಧಾರಿಗಳು; ಬೆಳಗಿನ ಆರು ಗಂಟೆಯಲ್ಲೂ ಅವರು ಗಸ್ತು ತಿರುಗುತ್ತಿದ್ದರು. ಪುನಃ ವಿಭಾ ಅವರಿಗೆ ತೊಂದರೆ ಕೊಟ್ಟೆವು. ಅವರು ನದಿಯ ಕಡೆಗೆ ಹೆಜ್ಜೆ ಹಾಕಲು ಹೇಳಿದರು. ಬೆಳಗಿನ ''ನಾಶ್ತಾ'' ಎಂದು ಕಾಡುತ್ತಿದ್ದವರ ನಡುವೆ ಸಣ್ಣದೊಂದು ನೀಲಿ ಬೋರ್ಡು ಕಂಡಿತು. ಅಲ್ಲಿ ಮೆಟ್ಟಿಲು ಹತ್ತಿ ಹೋಗಿ ಎಂದರು. ಅಷ್ಟು ಹೊತ್ತಿಗಾಗಲೇ ಅವರು ASI ಅಧಿಕಾರಿಗಳಿಗೆ ಸೂಚನೆ ಕೊಟ್ಟಿದ್ದರಿಂದ ಅಧಿಕಾರಿಯೊಬ್ಬರು ಕಾಯುತ್ತಾ ನಿಂತಿದ್ದರು.

ಸಣ್ಣದಾದ ಮೆಟ್ಟಿಲುಗಳ ಮೇಲೇರಿದ ಮೇಲೆ ಕಟ್ಟಡದ ತಾರಸಿಯ ಭಾಗ ತಲುಪಿದೆವು. ಆದರೆ ವಾಸ್ತವದಲ್ಲಿ ಅದೇ ನೆಲದ ಭಾಗ. ಬಲ ಭಾಗದಲ್ಲಿ ಕನ್ನಡಿಗಳಿಂದ ಅಲಂಕೃತವಾದ ಶೇಷ ಮಹಲ್ - ಅಲ್ಲಿ ನಿಂತು ನದಿಯ ಸೊಬಗನ್ನು ಆಸ್ವಾದಿಸಬಹುದು. ಶುಭ್ರವಾದ, ಅಚ್ಚುಕಟ್ಟಾದ ಪಡಸಾಲೆ. ಸುಂದರವಾದ ಭಿತ್ತಿಚಿತ್ರಗಳಿದ್ದವು.

ಇನ್ನೊಂದು ಮೂಲೆಯಲ್ಲಿ ಮೇಲೆ ಹತ್ತಲು ಸುರುಳಿ ಆಕಾರದ ಮೆಟ್ಟಿಲು ಇದ್ದಿತು.




ಹಣ, ಹೆಂಡ, ಸೀರೆ ಹಂಚಿಕೊಂಡು ತಾವು ನಿಶ್ಶಕ್ತರಾಗಿದ್ದೀರಿ ಅಂತ ಕೂಗಾಡಿ ವಿರೋಧಿಗಳು ಸುಸ್ತಾಗಿದ್ದಾರೆ.

ಅದರ ಮೇಲೇರಿದಾಗ 'ಜಂತರ್-ಮಂತರ್' ಪ್ರತ್ಯಕ್ಷವಾಯಿತು. ೧೭೧೭ರಲ್ಲಿ ಮಹಾರಾಜ ಜಯಸಿಂಗ್ ಕಟ್ಟಿಸಿದ್ದು ಎಂಬ ಫಲಕ ಅಲ್ಲಿತ್ತು.

ಇದು ದೆಹಲಿ ಅಥವಾ ಜಯಪುರದಷ್ಟು ಭವ್ಯವಾಗಿಲ್ಲ. ಮಂಕಾದ ಬಿಳಿಯ ಬಣ್ಣದ ಗೋಡೆಗಳು. ಸಾಮ್ರಾಟ್ ಯಂತ್ರ, ನಾಡಿವಲಯ, ಇವೆರಡನ್ನೂ ಸುಲಭವಾಗಿ ಗುರುತಿಸಬಹುದಾಗಿತ್ತು. ಮುಂದೊಂದು ವೃತ್ತಾಕಾರದ ಗೋಡೆ. ಅದರೊಳಗೆ ಇನ್ನೊಂದು ವೃತ್ತ. ಇದು ದಿಗಂಶಯಂತ್ರ ಎಂಬುದರ ಪೂರ್ವರೂಪ ಎಂದು ತಕ್ಷಣವೇ ಹೊಳೆಯಿತು.

ಅಲ್ಲಿದ್ದ ಪುಟ್ಟ ಯಂತ್ರವೊಂದು ಆಕರ್ಷಕವಾಗಿತ್ತು. ಇದು ಸುಮಾರು ಬೈಸಿಕಲ್ ಚಕ್ರ ಗಾತ್ರದ ಒಂದು ಚಕ್ರ. ಅದನ್ನು ಎರಡು ಗೋಡೆಗಳ ನಡುವೆ ಬಿಗಿದಿದ್ದರು. ತಿರುಗಿಸಲು ಸಾಧ್ಯವಾಗುತ್ತಿದ್ದುದು ಒಂದೇ ದಿಕ್ಕಿನಲ್ಲಿ ಮಾತ್ರ ಉರುಳಿಸುವಂತೆ. ಇದನ್ನು ನಾನು ದಿಲ್ಲಿಯಲ್ಲಿ ನೋಡಿರಲಿಲ್ಲ. ಇದಕ್ಕೆ 'ಚಕ್ರಯಂತ್ರ' ಎಂದು ಫಲಕ ಹಾಕಿದ್ದರು. ಇದು ಬಹಳ ವಿಶೇಷ ಎಂದು ನನಗನ್ನಿಸಿದ್ದು ಇನ್ನೊಂದು ಕಾರಣಕ್ಕೆ. ನಮ್ಮಲ್ಲೊಂದು ದೂರದರ್ಶಕ ಇದೆ. ಅದನ್ನೂ ಈ ಚಕ್ರದ ಹಾಗೆ ಪೂರ್ವದಿಂದ ಪಶ್ಚಿಮಕ್ಕೆ ಮಾತ್ರ ತಿರುಗಿಸಬಹುದು. ಉತ್ತರ-ದಕ್ಷಿಣಕ್ಕೆ ತಿರುಗಿಸುವಂತಿಲ್ಲ. ಈ ಬಗೆಯ ಮೌಂಟ್‌ಗಳಿಗೆ ಈಕ್ವೆಟೋರಿಯಲ್ ಮೌಂಟ್ ಎಂಬ ಹೆಸರಿದೆ. ಜಯಸಿಂಗ್‌ನ ಬಳಿ ಇಂತಹ ದೂರದರ್ಶಕ ಇತ್ತೇ - ಇದು ಅದರ ಪಳೆಯುಳಿಕೆಯೇ ಎಂಬ ಅನುಮಾನ ನನಗೆ ಬಂದಿತು.

ಯಂತ್ರದ ವಿಷಯವನ್ನು ಆ ಗೈಡ್ ಅತ್ಯುತ್ಸಾಹದಿಂದ ಇತರರಿಗೆ ವಿವರಿಸುತ್ತಿದ್ದಾಗ ನಾನು ಯಂತ್ರದ ಚಿತ್ರ ಬರೆದು ಕೊಳ್ಳುತ್ತಿದ್ದೆ. ದಾಸ್ ಅವರು ಗೈಡ್‌ಗೆ, ''ಶಾಂತಿ ರಾಖೋ'' ಎಂದು ಕೈ ಮುಗಿದು ನನ್ನ ಬಳಿ ಬಂದು ಈ ಯಂತ್ರದಿಂದ ಏನು ಪ್ರಯೋಜನ ಎಂದು ನೀವು ಹೇಳಿ ಎಂದರು. (ನಾನು ವಿವರಿಸಲು ಆರಂಭಿಸಿದಾಗ ಗೈಡ್ ಟಿಪ್ಪಣಿ ಬರೆದು ಕೊಳ್ಳತೊಡಗಬೇಕಾಯಿತು.)



ನಾಡಿವಲಯ

ಅಂತೂ ನನ್ನ ಉದ್ದೇಶ ಈಡೇರಿತು - ಭಾಷಣ ಬಿಗಿಯುವುದಲ್ಲ - ಜಂತರ್ ಮಂತರ್ ನೋಡುವುದು. ಇದಕ್ಕೆ ಜಯಸಿಂಗ್ ವೀಕ್ಷಣಾಲಯ ಎಂಬುದು ಸರಿಯಾದ ಹೆಸರು. ಜಂತರ್ ಮಂತರ್ ಎಂಬುದು ಇಂಗ್ಲಿಷಿನ 'ಹೋಕಸ್-ಪೋಕಸ್' ತರಹ ಕೇಳುತ್ತದೆಯಲ್ಲವೇ ? ಅಲ್ಲದೆ ಆ ಪದವನ್ನು ದೆಹಲಿಯಲ್ಲಿ ಮಾತ್ರ ಬಳಸುತ್ತಾರೆ.

ಜಯಕಿಶನ್ ಮತ್ತು ದಾಸ್ ಅವರು ಯಂತ್ರಗಳ ಗುಂಗಿನಲ್ಲೇ ಮುಳುಗಿಹೋದರು. ಆಗ ಬಿಸಿಲು ಮೂಡಿತು. ಏಳು ಗಂಟೆ ಎಂಬುದನ್ನು ಈ ಗಡಿಯಾರಗಳು ತೋರಿಸಿಕೊಟ್ಟವು. ಅಷ್ಟೇ ಅಲ್ಲ. ಸೂರ್ಯ ವಿಷುವವನ್ನು ಇದೀಗ ತಾನೇ ದಾಟಿ ಬಂದಿದೆ ಎಂಬುದನ್ನೂ ತೋರಿಸಬಹುದಾಗಿತ್ತು (ಏಪ್ರಿಲ್ ಮೊದಲ ವಾರ). ಅದಕ್ಕಿಂತ ಹೆಚ್ಚಿನ ವಿವರಗಳು ಇಲ್ಲಿ ಅನಗತ್ಯ.

ಊರಿಗೆ ಮರಳಿದ ಮೇಲೆ ಉಳಿದ ವಿವರಗಳನ್ನು ಒಟ್ಟುಗೂಡಿಸಿದೆ. ಮೊದಲು ಗೂಗಲ್ ಅರ್ತ್‌ನಲ್ಲಿ ಇದನ್ನು ಪತ್ತೆಮಾಡಿದೆ. ಸ್ಫುಟವಾಗಿ ಕಂಡ ಅಂಶವೆಂದರೆ ಸಾಮ್ರಾಟ್ ಯಂತ್ರ. ಅದರ ಶಂಕು ಉತ್ತರ-ದಕ್ಷಿಣವಾಗಿಲ್ಲ ಎಂಬುದು ಸಾಕಷ್ಟು ಸ್ಪಷ್ಟವಾಗಿತ್ತು. ಇದು ಅತಿ ಮಹತ್ವವಾದ ಅಂಶ. ಏಕೆಂದರೆ ಇದು ಕರಾರುವಾಕ್ಕಾಗಿ ಇರಲು ಸಾಧ್ಯವಾದ ಎಲ್ಲ ಬಗೆಯ ಎಚ್ಚರಿಕೆ ತೆಗೆದುಕೊಳ್ಳಬೇಕು. ಇಲ್ಲದಿದ್ದಲ್ಲಿ ಕೋನ ಮತ್ತು ಸಮಯಗಳ ಅಳತೆಯಲ್ಲಿ ದೋಷಗಳು ತಲೆದೋರುತ್ತವೆ.

ಇದೀಗ ಹೊಸ ಸಮಸ್ಯೆ ಎದುರಾಯಿತು. ಅಳತೆಯನ್ನು ನಿಖರವಾಗಿ ಮಾಡಬೇಕು ಎಂದು ಕೈಗೊಂಡ ಕೆಲಸದಲ್ಲಿ ಇಂತಹ ಮೂಲಭೂತ ದೋಷ ಹೇಗಿರಲು ಸಾಧ್ಯ, ಎಂದು ತಲೆಕೆಡಿಸಿಕೊಂಡೆ.

ವಾರಾಣಸಿಯ ಕುರಿತು ಅನೇಕ ಪುಸ್ತಕಗಳನ್ನು ತಿರುವಿಹಾಕಿದೆ. ಡಯಾನ ಎಕ್ ಎಂಬಾಕೆ ಬರೆದದ್ದು ಮತ್ತು ಶ್ರೀಯುತ ಚಂದ್ರಮೌಳಿ ಅವರು ಬರೆದ ಎರಡು ಪುಸ್ತಕಗಳಲ್ಲಿ ಕೆಲವೊಂದು ವಿಷಯಗಳು ಮತ್ತು ಅದರ ಮೂಲ ಸಿಕ್ಕವು. ಕಾಶಿ ನಿಜವಾಗಿಯೂ ೫೦೦೦ ವರ್ಷ ಹಿಂದಿನದು; ಅಲ್ಲಿ ಅತ್ಯುನ್ನತ ಮಟ್ಟದ ಶಿಕ್ಷಣ ದೊರೆಯುತ್ತಿತ್ತು. ವಿದೇಶಗಳಿಂದ ವಿದ್ಯಾರ್ಥಿಗಳು ಬರುತ್ತಿದ್ದರು ಎಂದಾದರೆ ಈ ವೀಕ್ಷಣಾಲಯವೂ ಹಳೆಯದೇ ಇರಬಹುದು.




೧೭೮೬ರಲ್ಲಿ ಕ್ಯಾಂಪ್‌ಬೆಲ್ ಎಂಬಾತ ರಚಿಸಿದ್ದ ತೈಲ ಚಿತ್ರದ ಪ್ರತಿಕೃತಿ

ಜಯಸಿಂಗ್ (ಅಥವಾ ಅವನ ತಂದೆ ಮಾನ್‌ಸಿಂಗ್) ಇದನ್ನು ಪುನರುತ್ಥಾನ ಗೊಳಿಸಿರಬಹುದು. ಹಾಗಾದರೆ ಎಷ್ಟು ಹಿಂದಿನದಿರಬಹುದು ?

ಇದನ್ನು ಲೆಕ್ಕ ಮಾಡಲು ನಾನು ಎರಡು ಅಂಶಗಳನ್ನು ಬಳಸಿಕೊಂಡೆ. ಮೊದಲನೆಯದು, ಸಾಮ್ರಾಟ್ ಯಂತ್ರದ ಉತ್ತರ-ದಕ್ಷಿಣ ಗೋಡೆ (ಶಂಕು) ಸ್ವಲ್ಪ ಓರೆಯಾಗಿರುವುದು. ಬೇರೆ ಗ್ರಹಗಳ ಗುರುತ್ವದ ಕಾರಣ ಭೂ ಅಕ್ಷದಲ್ಲಿ ಸಣ್ಣ ವ್ಯತ್ಯಾಸ ಉಂಟಾಗುವುದು. ಇದು ಸಾವಿರಾರು ವರ್ಷಗಳಲ್ಲಿ ಮಾತ್ರ ಗಮನಕ್ಕೆ ಬರುವಂತಹುದು. ಆದ್ದರಿಂದ ಈ ಗೋಡೆ ೫೦೦೦ ವರ್ಷಗಳ ಹಿಂದೆ ಅಕ್ಷಕ್ಕೆ ನೇರವಾಗಿ ಇತ್ತೇ ? ಅಂದರೆ ಭೂಮಿಯ ಅಕ್ಷದ ಸಣ್ಣ ವ್ಯತ್ಯಾಸಕ್ಕೆ ಇದು ಸಾಕ್ಷಿಯಾಗಿ ನಿಂತಿದೆಯೇ ?

ಎರಡನೆಯದು, ಕಾಶಿಯ ಅಕ್ಷಾಂಶ. ಸದ್ಯಕ್ಕೆ ಇದು ಕರ್ಕಾಟಕ ಸಂಕ್ರಾಂತಿ ವೃತ್ತದಿಂದ ಸುಮಾರು ಎರಡು ಡಿಗ್ರಿಗಳಷ್ಟು ಉತ್ತರಕ್ಕಿದೆ. ಇದೂ ಕೂಡ ಸಾವಿರಾರು ವರ್ಷಗಳಲ್ಲಿ ಸಣ್ಣ ಪ್ರಮಾಣದಲ್ಲಿ ವ್ಯತ್ಯಾಸವಾಗುವಂತಹುದೇ ! ಅಂದರೆ ಸುಮಾರು ೫೦೦೦ ವರ್ಷಗಳ ಹಿಂದೆ ಕರ್ಕಾಟಕ ಸಂಕ್ರಾಂತಿ ವೃತ್ತ (ಅಂದರೆ ದಕ್ಷಿಣಾಯನದಂದು ಸೂರ್ಯ ಶಿರೋಬಿಂದುವನ್ನು ತಲುಪುವ ಅಕ್ಷಾಂಶ) ಕಾಶಿಯ ಮೂಲಕ ಹಾದು ಹೋಗಿತ್ತೇ ?

ಈ ಎರಡೂ ಪ್ರಶ್ನೆಗಳ ಉತ್ತರಗಳನ್ನು ಹೋಲಿಸಲು ನನಗೆ ಇತ್ತೀಚಿನ ಅನೇಕ ಸಂಶೋಧನಾ ಪ್ರಬಂಧಗಳು ನೆರವಾದವು. ಭೂಮಿ ರಚಿತವಾದಂದಿನಿಂದ ಇಲ್ಲಿಯವರೆಗೆ ಯಾವ ಬಗೆಯಲ್ಲಿ ಅದರ ಆವರ್ತನೆಯ ಅಕ್ಷ ವ್ಯತ್ಯಾಸವಾಗುತ್ತಿದೆ ಎಂದು ಈ ಪ್ರಬಂಧಗಳು ತೋರಿಸಿಕೊಟ್ಟವು. ಇದು ಕೇವಲ ಸೈದ್ಧಾಂತಿಕ ಅಧ್ಯಯನ. ಕಂಪ್ಯೂಟರ್ ಬಳಸಿ ದೊರಕಿಸಿಕೊಂಡ ಫಲಿತಾಂಶಗಳು. ಪ್ರಾಯೋಗಿಕವಾಗಿ ಇದನ್ನು ನಿರೂಪಿಸುವಂತೆಯೇ ಇಲ್ಲ. ಹಾಗಾದರೆ ಕಾಶಿಯ ವೀಕ್ಷಣಾಲಯ ಈ ದಿಕ್ಕಿನಲ್ಲಿ ಮೊದಲ ನಿರೂಪಣೆಯಾಗುತ್ತದೆಯೇ ?

ಚಕ್ರಯಂತ್ರ – ಇದು ನನ್ನನ್ನಾಕರ್ಷಿಸಿದ ಇನ್ನೊಂದು ಯಂತ್ರ. ಈ ಕುರಿತು ಆರ್ಯಭಟ, ವರಾಹಮಿಹಿರ ಮುಂತಾದವರ ಉಲ್ಲೇಖನಗಳನ್ನು ಹುಡುಕಿದೆ. ಅವರು ವ್ಯಾಖ್ಯೆ ನೀಡುವ ಚಕ್ರಯಂತ್ರವೇ ಬೇರೆ. ಇಲ್ಲಿರುವ ಯಂತ್ರವೇ ಬೇರೆ. ಇದರ ಉದ್ದೇಶ ನನಗೆ ಅರ್ಥವಾಗಿತ್ತು. ಅದಕ್ಕೆ ಸರಿಹೋಗುವ ಯಂತ್ರದ ಹೆಸರು 'ನಾಡಿವಲಯ' ಎನ್ನಬಹುದು.

ಹೀಗೆ ಹುಡುಕುವಾಗ ಹಳೆಯದೊಂದು ತೈಲಚಿತ್ರ ಕಂಡಿತು. ಅದನ್ನು ರಚಿಸಿದವನೊಬ್ಬ (ಕ್ಯಾಂಪ್ ಬೆಲ್); ಅದರ ವಿವರಣೆ ಬರೆದವನು, ಬೇರೊಬ್ಬ (ಬಾರ್ಕರ್). ಆ ಚಿತ್ರದಲ್ಲಿ ಚಕ್ರಯಂತ್ರ ಸ್ಪಷ್ಟವಾಗಿಲ್ಲ. ವಿವರಣೆಗೂ ಚಿತ್ರಕ್ಕೂ ತಾಳೆಯಾಗುವುದಿಲ್ಲ. ಆದ್ದರಿಂದ ಆ ಹೊತ್ತಿಗಾಗಲೇ (೧೭೮೧) ಯಂತ್ರಗಳು ನಿರುಪಯೋಗಿ ಎನಿಸಿಕೊಂಡಿರಬಹುದು ಅಥವಾ ಚಿತ್ರ ಬರೆದವನಿಗೆ ಅದು ಏನು ಎಂದು ತಿಳಿದಿರಲಾರದು.



ಚೀನಾದ ಬೈಜಿಂಗ್‌ನಲ್ಲಿಯ ಒಂದು ಉಪಕರಣ - ಚಕ್ರಯಂತ್ರವನ್ನೇ ಹೋಲುವಂತಹುದು



ಸಾಮ್ರಾಟ್ ಯಂತ್ರ

ವಿ. ಎಸ್. ಶರ್ಮ ಅವರು ೧೯೮೨ರಲ್ಲಿ ಜಯಸಿಂಗನ ಎಲ್ಲ ವೀಕ್ಷಣಾಲಯಗಳನ್ನೂ ಕೂಲಂಕಷವಾಗಿ ಅಧ್ಯಯನ ಮಾಡಿದ್ದಾರೆ. ಸಾಮ್ರಾಟ್ ಯಂತ್ರದ ಶಂಕು ಉತ್ತರ-ದಕ್ಷಿಣವಾಗಿಲ್ಲ ಎಂಬ ಅಂಶವನ್ನು ಗಮನಿಸಿದ್ದಾರೆ. ೨೦ನೆಯ ಶತಮಾನದ ಕೊನೆಯಲ್ಲಿ ಕಾಶಿಯಲ್ಲಿದ್ದ ಪಂಡಿತ ಬಾಪುದೇವ ಶಾಸ್ತ್ರೀ ಇವರು ಈ ಯಂತ್ರಗಳ ಬಗ್ಗೆ ಉಲ್ಲೇಖಿಸಿರುವುದು ಅವರ ಪುಸ್ತಕದಲ್ಲಿದೆ - ಈ ಪ್ರಕಾರ ಚಕ್ರಯಂತ್ರ ಎಂಬುದರ ಪಕ್ಕ ಒಂದು ಕಂಬವಿದೆ. ಸುಮಾರು ಎರಡು ಅಡಿ ವ್ಯಾಸದ ಈ ಕಂಬದ ಮೇಲ್ಭಾಗದಲ್ಲಿ ಗೂಟವನ್ನು ಹೊಡೆದಿದ್ದ ಗುರುತಿದೆ. ಆದರೆ ಉದ್ದೇಶ ಏನು ಎಂದು ತಿಳಿದಿಲ್ಲ ಎನ್ನುತ್ತಾರೆ.

ಕಳೆದ ನೂರೈವತ್ತು ವರ್ಷಗಳಲ್ಲಿ ಕಾಶಿ ಹೊಸ ರೂಪ ತಳೆದಿದೆ. ವೀಕ್ಷಣಾಲಯದ ಸುತ್ತ ಬಹು ಅಂತಸ್ತಿನ ಕಟ್ಟಡಗಳೆದ್ದಿವೆ. ಶಿಥಿಲವಾಗುತ್ತಿದ್ದ ಯಂತ್ರಗಳನ್ನು ದುರಸ್ತಿ ಮಾಡಲಾಗಿದೆ. ೧೯೧೦ರಲ್ಲಿ ಮೊದಲಬಾರಿಗೆ ಅದನ್ನು ಜೀರ್ಣೋದ್ಧಾರ ಮಾಡಲಾಯಿತು. ಆಗ ಚಕ್ರಯಂತ್ರದ ಮುಂದಿದ್ದ ಕಂಬವನ್ನು ಸವರಿಕೊಂಡ ಹಾಗೆ ಗೋಡೆ ಕಟ್ಟಲಾಯಿತು.

ಹಾಗಾದರೆ ಈಗ ನಾನು ಕಾಣುತ್ತಿರುವುದು ಇನ್ಯಾವುದೋ ಯಂತ್ರದ ಒಂದು ಭಾಗ ಮಾತ್ರವೇ ? ಈ ಪ್ರಶ್ನೆ ಏಳುತ್ತದೆ.

ಅತ್ಯಂತ ಹಳೆಯ ವೀಕ್ಷಣಾಲಯ - ಈಗಲೂ ಸುಸ್ಥಿತಿಯಲ್ಲಿರುವುದು - ಚೀನಾದ ಬೈಜಿಂಗ್‌ನಲ್ಲಿದೆ. ಅದು ವಾರಾಣಸಿಯ ವೀಕ್ಷಣಾಲಯದ ವಿನ್ಯಾಸವನ್ನು ಹೋಲುತ್ತದೆ ಎಂಬುದು ಕಾಕತಾಳೀಯವಾಗಿರಲಾರದು. ಅಲ್ಲೊಂದು ಯಂತ್ರವಿದೆ. ಚಕ್ರಯಂತ್ರವನ್ನೇ ಹೋಲುವಂತಹುದು. ಸುಂದರವಾದ ವಿನ್ಯಾಸ. ಖ್ಯಾತ ಇತಿಹಾಸತಜ್ಞ ಜೋಸೆಫ್ ನೀಧಾಮ್ ಅವರು ಈ ಯಂತ್ರವೇ ಮುಂದೆ ದೂರದರ್ಶಕಗಳ ಈಕ್ವೆಟೋರಿಯಲ್ ಮೌಂಟಿಂಗ್ ಆಯಿತು ಎನ್ನುತ್ತಾರೆ. ನನ್ನ ಊಹೆಯೂ ಅದೇ ಆಗಿತ್ತು. ಅಂದರೆ ಅದೇ ವಿನ್ಯಾಸ ವಾರಾಣಸಿಯಲ್ಲೂ ಬಳಕೆಯಲ್ಲಿತ್ತೇ ? ಆಕಾಶ ವೀಕ್ಷಣೆ ನಡೆಸುವವರಿಗೆ ಈ ವಿನ್ಯಾಸ ಬಹಳ ಅನುಕೂಲಕರ ಎಂಬುದನ್ನು ಆಗಲೇ ಕಂಡುಕೊಂಡಿದ್ದರೇ ? – ಹೀಗೆ ಪ್ರಶ್ನೆಗಳ ಸರಮಾಲೆಯೇ ಏಳುತ್ತದೆ.

ಅದೇನೇ ಇರಲಿ, ಇದು ಕಾಶಿಯ ನೀವು ನೋಡದೆ ಬಿಟ್ಟು ಬಂದ ತಾಣವಾದರೆ, ಮತ್ತೊಮ್ಮೆ ಹೊರಡಿ. ೫೦೦೦ ವರ್ಷಗಳ ಇತಿಹಾಸವನ್ನು ಅಡಗಿಸಿ ಇಟ್ಟುಕೊಂಡಿರುವ ಈ ಪುಟ್ಟ ಕಟ್ಟಡವನ್ನು ನೋಡಿ. ಹೊರಗಿನ ಸದ್ದುಗದ್ದಲಗಳಿಂದ ತಾತ್ಕಾಲಿಕವಾಗಿ ಯಾದರೂ ನಿಮಗೆ ನೆಮ್ಮದಿ ಒದಗುವುದು. ನಮ್ಮ ಕಳೆದುಹೋದ ಪರಂಪರೆಯನ್ನು ನೆನಪಿಸುವ ತಾಣವೂ ಹೌದು.

ಡಾ|| ಬಿ. ಎಸ್. ಶೈಲಜಾ
ಜವಾಹರಲಾಲ್ ನೆಹರು ತಾರಾಲಯ, ಹೈಗ್ರೌಂಡ್ಸ್, ಬೆಂಗಳೂರು - ೫೬೦ ೦೦೧



ಶ್ರೀ ಸದಾಶಿವ ಯೋಗಿಗಳು

ಸಂಸ್ಥಾಪಕ ಅಧ್ಯಕ್ಷರು

# ಶ್ರೀ ಸದಾಶಿವ ಯೋಗ ಪ್ರತಿಷ್ಠಾನ, ಭಾರತ (ರಿ)

ಶ್ರೀ ಶಿವಾನಂದ ಯೋಗಾಶ್ರಮ, ಹಂಪಿ-583 239, ಹೊಸಪೇಟೆ ತಾ||, ಬಳ್ಳಾರಿ ಜಿಲ್ಲೆ

ಕಳೆದ ಹಲವು ವರ್ಷಗಳಿಂದ ಆಧ್ಯಾತ್ಮಿಕತೆಯ ವೈಜ್ಞಾನಿಕ ಹಿನ್ನೆಲೆಯನ್ನು ತರ್ಕಬದ್ಧವಾಗಿ ವಿಶ್ಲೇಷಣೆ ಮಾಡುತ್ತ ಬಂದಿರುವ ಶ್ರೀ ಸದಾಶಿವಯೋಗಿಗಳು ಮೂಢ ನಂಬಿಕೆಗಳ ವಿರುದ್ಧ ಅವಿರತ ಹೋರಾಟದಲ್ಲಿ ತೊಡಗಿಕೊಂಡಿದ್ದಾರೆ. ಹಂಪೆಯಲ್ಲಿ ನೆಲೆಸಿರುವ ಇವರು ಹೋಮಿಯೋ ವೈದ್ಯರಾಗಿ ಜನಸಾಮಾನ್ಯರಿಗೆ ನೆರವಾಗುತ್ತಿದ್ದಾರೆ. 'ಸದಾಶಿವ ಸೂತ್ರಗಳು' ಎಂಬ ಹೆಸರಿನಲ್ಲಿ ತಮ್ಮ ವಿಚಾರಗಳನ್ನು ಪ್ರಸ್ತುತ ಪಡಿಸುತ್ತಾರೆ. ಹಲವು ಗ್ರಂಥಗಳನ್ನು ರಚಿಸಿದ್ದಾರೆ.

## ಶ್ರೀ ಸದಾಶಿವಯೋಗಿಯವರ 'ಜಗವು ನಿನ್ನೊಳಗೆ' ಕೃತಿಯ ಕುರಿತು

ಅಧೋಮುಖವಾಗಿ ಚಲಿಸುತ್ತಿರುವ ಹೊರ ಹರಿವನ್ನು ಅಂತರ್‌ಮುಖಿ ಮನಸ್ಸಿನ ಮೂಲಕ ಊರ್ಧ್ವಮುಖಿಯಾಗಿ ಚಲಿಸುವತ್ತ ಪ್ರಯತ್ನಿಸಿ ಸಾಧಕನ ತೃಪ್ತಿ ಹೊಂದುವವನು ಶ್ರೇಷ್ಠನು. ಇದು ಶ್ರೀ ಸದಾಶಿವಯೋಗಿಗಳ ಸಿದ್ಧವೇದದ ಮೂಲತತ್ವ.

ಭಾರತೀಯ ಆಧ್ಯಾತ್ಮ ಚಿಂತನೆ ಲೋಕದ ಗಮನವನ್ನು ಸೆಳೆದಿದೆ. ಧರ್ಮ-ಅರ್ಥ-ಕಾಮ-ಮೋಕ್ಷಗಳೆಂಬ ನಾಲ್ಕು ತತ್ತ್ವಗಳಲ್ಲಿನ 'ಧರ್ಮ' ಪದವನ್ನು – ಅದರ ಅರ್ಥವ್ಯಾಪ್ತಿಯನ್ನು ನಮ್ಮಲ್ಲಿಂದು ಅಪವ್ಯಾಖ್ಯಾನ ಮಾಡಲಾಗಿದೆ. ಸತ್ಯ-ಧರ್ಮ-ನ್ಯಾಯ-ನೀತಿಗಳನ್ನರಿತು ಜೀವನದಲ್ಲಿ ಅಳವಡಿಸಿಕೊಂಡು ಬಾಳಬೇಕು. ಸ್ವಾರ್ಥಕ್ಕಾಗಿ ಅದನ್ನು ಉಪಯೋಗಿಸಬಾರದು. ವ್ಯಾವಹಾರಿಕವಾದ ಲೋಕದಲ್ಲಿ ಸ್ವಾರ್ಥ ತುಂಬಿರುತ್ತದೆ. ಪ್ರಾಪಂಚಿಕ ಬಾಹ್ಯ ಆಕರ್ಷಣೆಗಳಿಂದ ವಿಚಲಿತವಾದ ಮನಸ್ಸು ತನ್ನನ್ನು ನಿಯಂತ್ರಿಸಿಕೊಳ್ಳಲು ವಿಫಲವಾಗಿ ಎಂದಿಗೂ ತೃಪ್ತವಲ್ಲ. ಅಲ್ಲದೆ ಆಸೆಗಳನ್ನು ತೃಪ್ತಿಪಡಿಸಿ ಗೆಲ್ಲಲು ಅಸಾಧ್ಯವಾದ್ದರಿಂದ ಅವನ್ನು ಧಿಕ್ಕರಿಸಿ ಮನಸ್ಸನ್ನು ಅಂತರ್ಮುಖಗೊಳಿಸಿ ಚಿಂತನೆ ಮಾಡಿದಾಗ ಸತ್ಯ ಗೋಚರಿಸುತ್ತದೆ. ಅಂದರೆ ಒಳಗಣ್ಣಿನ ಮೂಲಕ ಮನಸ್ಸಿಗೆ ಅನುಭವವಾಗುತ್ತದೆ. ಚಿತ್ತಚಾಂಚಲ್ಯವೆಂಬ ಹೊರ ಹರಿವು ನಿಂತು ಒಳಹರಿವಿನ ಕಾರಣದಿಂದ ಸ್ಥಿರ ಚಿತ್ತ ಉಂಟಾಗುತ್ತದೆ. ಮನುಷ್ಯ ತನ್ನ ಬುದ್ಧಿಯನ್ನುಪಯೋಗಿಸಿ ಜ್ಞಾನಿಯಾದಾಗ ತನ್ನ ಅಂತರಂಗದಲ್ಲಿ ಸೂಕ್ಷ್ಮರೂಪಿಯಾದ ಜಗತ್ತನ್ನು ತನ್ನೊಳಗೇ ಕಾಣಬಲ್ಲ. ಜಗತ್ತು ಬೇರೆಯಾಗಿದ್ದು ತಾನು ಬೇರೆಯಾಗಿರಲು ಸಾಧ್ಯವಿಲ್ಲ, ಎಲ್ಲವೂ ತನ್ನೊಳಗೇ ಐಕ್ಯವಾಗಿದೆ, ತನ್ನನ್ನು ತಾನು ಕಾಣಬೇಕು ಎಂಬ ಜ್ಞಾನೋದಯ ಮಾನವನಿಗೆ ಆದರೆ ಆತನದು ಜೀವನ್ಮುಕ್ತ ಪ್ರಪಂಚ. ಬಾಹ್ಯ ಪ್ರಪಂಚಕ್ಕೂ ಅಂತರ್‌ಪ್ರಜ್ಞೆ ಕಾಣುವ ಪ್ರಪಂಚಕ್ಕೂ ಸಾಮ್ಯ ಇರುವುದು ಇಲ್ಲೇ. ವಿಶ್ವದ ವಿರಾಟ್ ತತ್ತ್ವದ ಸ್ವರೂಪವೂ ಕೂಡ ಇದನ್ನೇ ಹೋಲುತ್ತದೆ. ಇಂದ್ರಿಯಾನುಭವ ಉಂಟಾಗಲು ಪ್ರಕೃತಿ ಎಂಬ ಬಾಹ್ಯ ಜಗತ್ತು ಕಾರಣವಾದರೆ, ಮನುಷ್ಯನಿಗೆ ಬುದ್ಧಿಯ ಮೂಲಕ ಅರಿಯಲು ತನ್ನೊಳಗೇ ಅಡಕವಾಗಿರುವ ಜ್ಞಾನದ ಜಗತ್ತೊಂದು ಸೂಕ್ಷ್ಮಾತಿಸೂಕ್ಷ್ಮ ಸ್ವರೂಪದಲ್ಲಿದೆ. ಬುದ್ಧಿಯನ್ನು ವೃದ್ಧಿಸಿ, ಜ್ಞಾನದ ದೃಷ್ಟಿಯಿಂದ ಇದನ್ನು ಎಲ್ಲರೂ ಕಾಣಬಹುದು. ಹೀಗೆ ಜ್ಞಾನಿಯಾದವನು ಈ ನಶ್ವರ ಲೋಕವನ್ನೆಂದೂ ಪ್ರೀತಿಸಲಾರ. ಇಲ್ಲಿನ ತಾತ್ವಿಕ ವಿಚಾರಗಳು ಮೂಢನಂಬಿಕೆಗಳಿಂದ ಮುಕ್ತವಾದವು. ಪುಣ್ಯಪ್ರಾಪ್ತಿಗಾಗಿ ಇಹಲೋಕದಲ್ಲಿ ಮಾಡಬೇಕೆಂದು ಹೇಳಲಾದ ವಿಗ್ರಹಾರಾಧನೆ, ಯಜ್ಞ-ಯಾಗ, ಪೂಜೆ ಪುನಸ್ಕಾರ ಇವೆಲ್ಲವೂ ಬಾಹ್ಯ ಆಡಂಬರದ ವರ್ತನೆಗಳು. ಇಂದಿನ ದಿನಗಳಲ್ಲಂತೂ ಇವು ಮಿತಿಮೀರಿ ಇವನ್ನು ವ್ಯಾಪಾರಿ ದೃಷ್ಟಿ, ಲೆಕ್ಕಾಚಾರದ ದೃಷ್ಟಿಯಿಂದ ನಡೆಯುತ್ತಿವೆ. ಯೋಗಾಸನಗಳು ಕೂಡ ಇಂದು ಕೋರ್ಸ್‌ಗಳಾಗಿ ಕಲಿಸುವತ್ತ ಒಲವು ಬೆಳೆಸಿಕೊಂಡಿವೆ. ಯೋಗಾಸನದ ಬಗ್ಗೆ ಪ್ರಸ್ತಾಪಿಸುತ್ತ, ಯೋಗ ಸಾಧನೆ ಮನಸ್ಸಿಗೆ ಸಂಬಂಧಿಸಿದ್ದು, ಆಸನಗಳು ದೈಹಿಕ ಅಂಗಸಾಧನೆಗಳೆಂದೂ ತಿಳಿಸಿದ್ದಾರೆ. ಈ ಪುಸ್ತಕವೊಂದು ಅತ್ಯಂತ ತೀಕ್ಷ್ಣ ವಿಚಾರಗಳಿಂದ ಕೂಡಿದ್ದು ಎಲ್ಲರೂ ಓದಿ ತಿಳಿದುಕೊಳ್ಳಬೇಕಾದ ಪುಸ್ತಕವೆಂದು ಧಾರಾಳವಾಗಿ ಹೇಳಬಹುದು. ಇದನ್ನು ಸದಾಶಿವಯೋಗಿಗಳು ಈ ಲೋಕದ ತಮ್ಮ ಅನುಭವಗಳಿಂದ ನಿರೂಪಿಸಿದ್ದು ಓದುಗರಿಗೆ ಸತ್ಯದರ್ಶನ ಮಾಡುವ ಉದ್ದೇಶದಿಂದ ಬರೆದಿದ್ದಾರೆ.

## ಶ್ರೀ ಸದಾಶಿವ ಯೋಗಿಯವರು ರಚಿಸಿರುವ ಪ್ರಮುಖ ಗ್ರಂಥಗಳು

ರೂ. 75




ರೂ. 95




ರೂ. 30



ರೂ. 180




ರೂ. 120




**ಶ್ರೀ ಸದಾಶಿವ ಯೋಗ ಪ್ರತಿಷ್ಠಾನ, ಭಾರತ (ರಿ) ಸಂಸ್ಥೆಗೆ ನೀಡುವ ದೇಣಿಗೆಗೆ 'ಸೆಕ್ಷನ್ 80ಜಿ' ಅನ್ವಯ ಆದಾಯ ತೆರಿಗೆ ವಿನಾಯಿತಿ ಇದೆ.**

ಸಹನ



ವಿಶಾಲವಾದ ಒಳಾಂಗಣ, ಗೋಡೆಗಳ ಮೇಲೆಲ್ಲಾ ಬಣ್ಣಬಣ್ಣದ ಚಿತ್ರಗಳು. ಸಾಲು ಸಾಲಾಗಿ ಚುಕುಬುಕು ರೈಲಿನ ಬೋಗಿಗಳಂತೆ ನಿಂತ ಕಪಾಟುಗಳು, ಅವುಗಳಲ್ಲೆಲ್ಲ ಬಣ್ಣಬಣ್ಣದ ಪುಸ್ತಕಗಳು, ದೊಡ್ಡ ಪುಸ್ತಕಗಳು, ಅಂಗೈನಷ್ಟು ಅಗಲದ ಪುಟ್ಟ ಪುಸ್ತಕಗಳು; ಆಟದ ಗೊಂಬೆಗಳು, ಪುಟಾಣಿ ಮೇಜು ಕುರ್ಚಿಗಳು, ಪಿಂಗ್‌ಪಾಂಗ್ ಚೆಂಡಿನಂತೆ ಪುಟಿಯುತ್ತಿರುವ ಮಕ್ಕಳು; ನೆಲದ ಮೇಲೆ ಉರುಳಾಡಿಕೊಂಡು ಹಾಡು ಹೇಳಿಕೊಳ್ಳುತ್ತಾ ಇರುವವು ಕೆಲವು, ಮೇಜಿನ ಮುಂದೆ ಕುಳಿತು ಏನೋ ಬರೆಯುತ್ತಾ ಇರುವವು, ಅಮ್ಮನ ಬಳಿ ಕಥೆ ಹೇಳಿಸಿಕೊಳ್ಳುತ್ತಾ ಇರುವವು, ಕಪಾಟುಗಳ ಮಗ್ಗುಲಲ್ಲೇ ನೆಲದ ಮೇಲೆ ಕುಳಿತು ಪುಸ್ತಕದೊಳಗಿನ ಲೋಕದಲ್ಲಿ ಕಳೆದುಹೋದ ಮಕ್ಕಳು ಕೆಲವು... ಪಾವು, ಚಟಾಕು, ಅಚ್ಚೇರು, ಅರ್ಧ ಪಾವಿನಂತೆ ಈ ಮಕ್ಕಳ ಗಾತ್ರ, ವಯಸ್ಸಿನ ವೈವಿಧ್ಯ. ಕಿಂದರಿ ಜೋಗಿಯ ಮಾಯಾ ಗುಹೆಯೊಳಗೆ ಬಂದೆವೇನೋ ಎಂದೆನಿಸುವಂತಹ ಹಬ್ಬದ ವಾತಾವರಣ!

# ಅಮೆರಿಕಾದ ಗ್ರಂಥಾಲಯಗಳು




ಅಮೆರಿಕಾದಲ್ಲಿನ ಒಂದು ಗ್ರಂಥಾಲಯದ ಮಕ್ಕಳ ವಿಭಾಗದ ದೃಶ್ಯವಿದು.

ಈ ಪುಸ್ತಕಗಳ ಸಾಮ್ರಾಜ್ಯದಲ್ಲಿ ಏನೆಲ್ಲಾ ಇದೆ? ಏನೆಲ್ಲಾ ಸೌಲಭ್ಯಗಳನ್ನು ನಾವು ಉಪಯೋಗಿಸಿಕೊಳ್ಳಬಹುದು? ಈ ಕಿನ್ನರ ಲೋಕದೊಳಕ್ಕೆ ಯಾರಿಗೆಲ್ಲ ಪ್ರವೇಶವುಂಟು? ಒಳ ಹೋಗಲು ಟಿಕೆಟ್ಟಿನ ಬೆಲೆ ಎಷ್ಟು? ಭಾರೀ ನಿಯಮಗಳು, ಅಡ್ಡಿ ಆತಂಕಗಳೇನಾದರೂ ಉಂಟೋ? ಇಲ್ಲಿಯ ಸಲಹಾ ಮೇಜಿನ ಬಳಿ ಹೋಗಿ ನಿಂತರಾಯಿತು, ಮುಂದಿನದೆಲ್ಲಾ ತೀರಾ ಸುಲಭ.

* ಒಂದು ಊರಿನಲ್ಲಿ ನಾವು ವಾಸ ಇದ್ದಲ್ಲಿ, ಇಲ್ಲವೇ ಬೇರೊಂದು ಊರಿನಲ್ಲಿದ್ದು ಈ ಊರಿನ ಶಾಲೆಗೆ ಹೋಗ್ತಾ ಇದ್ದಲ್ಲಿ, ಇಲ್ಲವೇ ಆ ಊರಿನಲ್ಲಿ ನೌಕರಿ ಮಾಡ್ತಾ ಇದ್ದಲ್ಲಿ, ಇಲ್ಲವೇ ನಮ್ಮದೋ, ನಮ್ಮದೇ ಕುಟುಂಬದ ಯಾರಾದರೂ ಸದಸ್ಯರದೋ ಸ್ವಂತ ಇಲ್ಲವೇ ಬಾಡಿಗೆ ಮನೆ ಇದ್ದಲ್ಲಿ ಆ ಊರಿನ ಸರ್ಕಾರಿ ಗ್ರಂಥಾಲಯದಲ್ಲಿ ನಮಗೆ ಒಂದು ಗ್ರಂಥಾಲಯದ ಗುರುತಿನ ಚೀಟಿ ಕೊಡುವರು. ನಮ್ಮ ಹೆಸರು ವಿಳಾಸ ಇರುವ ಯಾವುದಾದರೂ ರಸೀದಿಯನ್ನೋ ಲಕೋಟೆಯನ್ನೋ ತೋರಿಸಿದರಾಯಿತು, ಎರಡು ನಿಮಿಷದಲ್ಲಿ ಹೊಸ ಗುರುತಿನ ಚೀಟಿ ಕೈಗಿಡುವರು. ಇದನ್ನು ಪಡೆಯಲು ವಯಸ್ಸಿನ ಮಿತಿ ಇಲ್ಲ.

* ಈ ಗುರುತಿನ ಚೀಟಿಗೆ ಆ ಊರಿನ ಮತ್ತು ಆ ಜಿಲ್ಲೆಯ (ಕೌಂಟಿ) ಎಲ್ಲಾ ಸರ್ಕಾರಿ ಗ್ರಂಥಾಲಯಗಳಲ್ಲಿ ಮತ್ತು ಕಮ್ಯುನಿಟಿ ಕಾಲೇಜು ಗ್ರಂಥಾಲಯಗಳಲ್ಲಿ ಮಾನ್ಯತೆ ಇದೆ.

* ಗ್ರಂಥಾಲಯಗಳು ಓದುವ ಕೋಣೆಗಳೂ ಆಗಿವೆ. ನಮ್ಮ ಚೀಲ ಇತರೆ ಪುಸ್ತಕಗಳನ್ನು ಗ್ರಂಥಾಲಯದ ಹೊರಗಡೆಯೇ ಕೌಂಟರಿನಲ್ಲಿ ಜಮಾಯಿಸಿ ಹೋಗಬೇಕಿಲ್ಲ. ನಮ್ಮದೇ ಪುಸ್ತಕಗಳನ್ನು ಹೊತ್ತೊಯ್ದು ಅಲ್ಲಿಯ ನಿಶ್ಶಬ್ದ ವಾತಾವರಣದಲ್ಲಿ ಕುಳಿತು ಓದಿಕೊಳ್ಳಬಹುದು.

* ಗ್ರಂಥಾಲಯದಲ್ಲಿ ಕುಳಿತು ನಮ್ಮ ಇಲ್ಲಿ ಅಲ್ಲಿನ ಪುಸ್ತಕಗಳನ್ನು ಓದಲು, ಅಲ್ಲಿ ನಡೆಯುವ ಇತರೆ ಚಟುವಟಿಕೆ, ತರಗತಿಗಳಲ್ಲಿ ಭಾಗವಹಿಸಲು ಗುರುತಿನ ಚೀಟಿಯ ಅಗತ್ಯ ಇಲ್ಲ. ಎರವಲು ತರುವಾಗ ಗುರುತಿನ ಚೀಟಿ ತೋರಿಸಬೇಕು.

* ಗ್ರಂಥಾಲಯದಲ್ಲಿ ಹಿರಿಯರಿಗೆ, ಕಿರಿಯರಿಗೆ, ಪುಸ್ತಕಗಳು, ಪತ್ರಿಕೆಗಳು, ಚಲನಚಿತ್ರ, ಹಾಡು, ನೃತ್ಯ, ಶೈಕ್ಷಣಿಕ ಸಿ.ಡಿ.ಗಳು,

ಡಿ.ವಿ.ಡಿ.ಗಳ ಬೃಹತ್ ಸಂಗ್ರಹವಿರುತ್ತೆ. ಎಲ್ಲಾ ಅಳತೆಯವರಿಗೆಂದು ದೊಡ್ಡ, ಸಣ್ಣ ಮೇಜು, ಕುರ್ಚಿಗಳು ಇಲ್ಲಿವೆ. ಓದಲು ಇಷ್ಟವಾಗದಿದ್ದಲ್ಲಿ ಆಡಲು ಆಟಿಕೆಗಳೂ ಇವೆ. ಸಮಾಧಾನದ, ಪುಸ್ತಕಗಳ ಬಗ್ಗೆ, ಮತ್ತು ಮಕ್ಕಳ ಬಗ್ಗೆ, ವಾತ್ಸಲ್ಯವಿರುವ ಗ್ರಂಥಪಾಲಕರು ಇಲ್ಲಿರುತ್ತಾರೆ. ಸಿಡುಕು ಮೋರೆಯವರನ್ನು ಇಲ್ಲಿ ಕಾಣುವುದು ವಿರಳ. ಬಹುಪಾಲು ನಗುಮೊಗದ ಸಹನಶೀಲ ಮಧ್ಯವಯಸ್ಸಿನ ಹೆಂಗಸರು. ಶಿಸ್ತಿನ ಆಡಳಿತ ಇಲ್ಲಿಲ್ಲ. ಪುಸ್ತಕಗಳ ಸಾಮೀಪ್ಯವೇ ಎಳೆಯರಲ್ಲಿ ಪ್ರಶಾಂತತೆಯನ್ನು ತಂದುಬಿಡುತ್ತೆ, ಹಾಗಾಗಿ ಗದ್ದಲ ಕೇಳಿಬರೋಲ್ಲ.

* ಪತ್ರಿಕೆಗಳು, ಸಿ.ಡಿ., ಡಿ.ವಿ.ಡಿ.ಗಳನ್ನೂ ಒಂದು ವಾರದ ಕಾಲಮಿತಿಗೆ ಎರವಲು ತರಬಹುದು. ಅಷ್ಟರೊಳಗೆ ಹಿಂದಿರುಗಿಸಲಾಗದಿದ್ದಲ್ಲಿ ಇಂಟರ್ನೆಟ್ ಮೂಲಕ ಇಲ್ಲ ದೂರವಾಣಿ ಮೂಲಕ ಸಂಪರ್ಕಿಸಿ ಇನ್ನೊಂದು ವಾರಕ್ಕೆ ಎರವಲು ಮುಂದುವರಿಸಬಹುದು. ಪುಸ್ತಕಗಳನ್ನು ಮೂರು ವಾರದಷ್ಟು ದೀರ್ಘಕಾಲಕ್ಕೆ ಕೊಡುವರು. ನಂತರ ಇನ್ನೂ ಮೂರು ವಾರಕ್ಕೆ ಕಾಲಮಿತಿಯನ್ನು ಮುಂದೂಡಬಹುದು. ಮಕ್ಕಳು ಆಟಿಕೆಗಳನ್ನೂ ಮೂರು ವಾರಕ್ಕೆ ತರಬಹುದು!




* ಗ್ರಂಥಾಲಯಕ್ಕೆ ರಜೆ ಇದ್ದ ದಿನ ನಾವು ಅತ್ತ ಕಡೆ ಹೊರಟಿದ್ದು ಎರವಲು ತಂದ ವಸ್ತುಗಳನ್ನು ಹಿಂದಿರುಗಿಸಲು ಬಯಸಿದಲ್ಲಿ ಹಾಗೆ ಮಾಡಲು ಅವಕಾಶವಿದೆ. ಗ್ರಂಥಾಲಯದ ಹೊರಗೋಡೆಯಲ್ಲಿ ಅಂಚೆ ಡಬ್ಬದಂತಹ ವ್ಯವಸ್ಥೆ ಇದೆ. ಹಾಗೆ ಡಬ್ಬಕ್ಕೆ ಹಾಕಿದ ವಸ್ತುಗಳನ್ನು ಮರುದಿನವೇ ನೋಡಿ ನಮ್ಮ ಎರವಲು ಪಟ್ಟಿಯಿಂದ ತೆಗೆಯುತ್ತಾರೆ. ದೂರವಾಣಿ ಕರೆಗಳನ್ನು ಸ್ವೀಕರಿಸಲು ಬೇರೆ ಬೇರೆ ವಿಭಾಗಗಳಿದ್ದು ಉತ್ತರಿಸುವವರು ಒಬ್ಬರಿಗಿಂತ ಹೆಚ್ಚು ಮಂದಿ ಇರುತ್ತಾರಾದ್ದರಿಂದ ಕರೆ ಮಾಡಿದವರು ಹೆಚ್ಚು ಹೊತ್ತು ಕಾಯಬೇಕಿಲ್ಲ. ದೂರವಾಣಿ ಮುಖೇನ ವ್ಯವಹರಿಸಲು ಕಿವುಡ, ಮೂಗರಿಗೂ ವ್ಯವಸ್ಥೆ ಇದೆ!

* ಒಂದು ಗುರುತಿನ ಚೀಟಿಗೆ ಇಪ್ಪತ್ತೈದು ಬೇರೆ ಬೇರೆ ವಸ್ತುಗಳನ್ನು ಒಟ್ಟಿಗೆ ಎರವಲು ತರಬಹುದು! ಬರಿಯೆ ವೀಡಿಯೊಗಳು, ಆಟಿಕೆಗಳು, ಪತ್ರಿಕೆಗಳಾದಲ್ಲಿ ಹತ್ತನ್ನು ಒಟ್ಟಿಗೆ ತರಬಹುದು. ಹಲವು ಕಥೆ ಪುಸ್ತಕಗಳನ್ನು ಒಂದು ಚೀಲದಲ್ಲಿ ಜೊತೆ ಮಾಡಿಟ್ಟು 'ಚೀಲದ ತುಂಬಾ ಕಥೆಗಳು' ಎಂಬ ವ್ಯವಸ್ಥೆ ಇದೆ. ಇಡೀ ಚೀಲವನ್ನೇ ಎರವಲು ತರಬಹುದು.

* ಮೊತ್ತಮೊದಲ ಬಾರಿಗೆ ಗ್ರಂಥಾಲಯಕ್ಕೆ ಹೋಗಿ ಹೊಸ ಗುರುತಿನ ಚೀಟಿ ಪಡೆದು ಅಂದೇ ಎರವಲು ಬೇಕೆಂದಲ್ಲಿ ಮೂರು ವಸ್ತುಗಳನ್ನು ಮಾತ್ರ ಕೊಡುವರು. ಮೂರು ದಿನಗಳೊಳಗಾಗಿ ನಾವು ಕೊಟ್ಟ ವಿಳಾಸಕ್ಕೆ ನಮ್ಮ ಹೆಸರಿಗೊಂದು ಅಂಚೆಯ ಮೂಲಕ ಪತ್ರ ಬರುವುದು. ನಾವು ಮುಂದಿನ ಸಾರಿ ಹೋಗುವಾಗ ಆ ಪತ್ರವನ್ನೂ ಜೊತೆಯಲ್ಲಿ ಕೊಂಡೊಯ್ದು ತೋರಿದರೆ ಆ ವಿಳಾಸದಲ್ಲಿ ನಾವು ಇದ್ದೇವೆಂಬುದು ಅವರಿಗೆ ಖಾತರಿಯಾಗುತ್ತೆ. ಆಮೇಲಿನಿಂದ ಇಪ್ಪತ್ತೈದು ವಸ್ತುಗಳನ್ನು ಒಟ್ಟಿಗೆ ಕೊಡುವರು.

* ಬೇಕಾದ ಪುಸ್ತಕ ಗ್ರಂಥಾಲಯದ ಪಟ್ಟಿಯಲ್ಲಿದ್ದು ಇನ್ನಾರೋ ಎರವಲು ಪಡೆದಿದ್ದಾರೆ ಎಂದಲ್ಲಿ ಅದನ್ನು ಅವರು ಹಿಂದಿರುಗಿಸಿದ ತಕ್ಷಣ ನಮಗೆ ಬೇಕೆಂದು ಕಾದಿರಿಸಬಹುದು. ಇಂಟರ್ನೆಟ್ ಮೂಲಕವೇ ಪುಸ್ತಕಗಳನ್ನು ಹುಡುಕಬಹುದು. ಮನೆಯಿಂದಲೇ ಯಾವ ಯಾವ ಗ್ರಂಥಾಲಯದಲ್ಲಿ ಎಷ್ಟೆಷ್ಟು ಪ್ರತಿಗಳಿವೆ ಯಾವ ಕಪಾಟಿನಲ್ಲಿವೆ ಎಂದೂ ತಿಳಿಯಬಹುದು. ಈ ದೇಶದಲ್ಲಿ ಇಂಟರ್ನೆಟ್ ಮತ್ತು ದೂರವಾಣಿ ಬಳಕೆ ಎಲ್ಲಾ ವ್ಯವಹಾರಗಳಲ್ಲೂ ವ್ಯಾಪಕವಾಗಿದೆ. ನಮಗೆ ಬೇಕಾದ ಪುಸ್ತಕ ದೂರದ ಊರಿನ ಗ್ರಂಥಾಲಯದಲ್ಲಿದ್ದಲ್ಲಿ ಅಲ್ಲಿಂದ ತರಿಸಿ ಕೊಡುವಂತೆ ನಮ್ಮೂರಿನ ಗ್ರಂಥಾಲಯದಲ್ಲಿ ಮನವಿ ಕೊಡಬಹುದು. ಇದಕ್ಕೆಂದೇ ಫಾರ್ಮು ಇದೆ, ಭರ್ತಿ ಮಾಡಿದರಾಯಿತು.

* ಇಲ್ಲಿ ನಿತ್ಯ ಕಲಿಕೆಯ ವಿವಿಧ ಉಚಿತ ಚಟುವಟಿಕೆಗಳು ನಡೆಯುತ್ತವೆ. ಕಥೆ ಓದುವ ಸಮಯ, ಹಾಡಿನ ಸಮಯ, ಮಣ್ಣಿನಲ್ಲಿ, ಕಾಗದದಲ್ಲಿ ಗೊಂಬೆ ಮಾಡುವ ಸಮಯ, ಚಿತ್ರ ಬರೆಯುವ ಸಮಯ, ಆಟಗಳ ಸಮಯ, ಪುರಾಣ ಕಥೆಗಳನ್ನು ಮಕ್ಕಳೇ ಪಾತ್ರವಹಿಸಿ ನಾಟಕ ಆಡುವ ಸಮಯ, ಗೊಂಬೆ ಆಟವ ಕುಳಿತು ನೋಡುವ ಸಮಯ, ಹೀಗೆ ನಿತ್ಯ ವಿವಿಧ ಕಾರ್ಯಕ್ರಮಗಳುಂಟು. ಓದುವುದು, ಉಚ್ಚಾರ, ಹೊಸ ಭಾಷೆ ಕಲಿಯಲು ತರಗತಿಗಳೂ ಸದಾ ನಡೆಯುತ್ತಲೇ ಇರುತ್ತವೆ. ಒಂದು ತಿಂಗಳ ಮುಂಚೆಯೇ ಇವುಗಳ ಸಂಪೂರ್ಣ ವೇಳಾಪಟ್ಟಿ ಸಿಗುವುದು. ಯಾವ ಯಾವ ಕಾರ್ಯಕ್ರಮ/ತರಗತಿ ಯಾವ ಯಾವ ವಯೋಮಾನದವರಿಗೆ? ಸಮಯಕ್ಕೆ ಎಷ್ಟು ನಿಮಿಷ ಮುಂಚೆ ಬರಬೇಕು? ಮೊದಲೇ ಹೆಸರು ನೋಂದಾಯಿಸಬೇಕೆ? ತರಗತಿಗೆ ಏನಾದರೂ ಅಭ್ಯಾಸದ ಸಾಮಾನು ಬೇಕೆ? ಈ ಎಲ್ಲ ಪ್ರವರ ವಿವರವು ವೇಳಾಪಟ್ಟಿಯಲ್ಲೇ ಸಿಗತ್ತೆ.

* ಶಾಲೆಗೆ ಹೋಗುವ ಮಕ್ಕಳು ಶಾಲೆಯ ನಂತರ ಗ್ರಂಥಾಲಯಕ್ಕೆ ಬಂದು ಗ್ರಂಥಪಾಲಕರ ನೆರವು ಪಡೆದು ತಮ್ಮ 'ಹೋಂ ವರ್ಕ್' ಮಾಡಿಕೊಳ್ಳಬಹುದು. ಗ್ರಂಥಪಾಲಕರು ಉಚಿತವಾಗಿ ಮಕ್ಕಳಿಗೆ ಈ ನೆರವು ನೀಡುವರು. ತಂದೆ ತಾಯಿಗಳಿಬ್ಬರೂ ಹೊರಗೆ ನೌಕರಿ ಮಾಡುವ ಮಕ್ಕಳಿಗೆ ಈ ಸೌಲಭ್ಯ ನಿಜಕ್ಕೂ ವರದಾನ. ಅಂತಹ ಮಕ್ಕಳು ಶಾಲೆಯಿಂದ ನೇರವಾಗಿ ಗ್ರಂಥಾಲಯಕ್ಕೆ ಬರಬಹುದು, ಇಲ್ಲಿ ಬೇಕಾದಷ್ಟು ಸಮಯ ಆಟ ಆಡಬಹುದು, ಹೋಂ ವರ್ಕ್ ಮಾಡಿ ಮುಗಿಸಬಹುದು, ತಂದೆ ತಾಯಿಗಳು ನೇರ ಇಲ್ಲಿಗೆ ಬಂದು ತಮ್ಮ ಮಕ್ಕಳನ್ನು ಕರೆದೊಯ್ಯಬಹುದು. ಈ ದೇಶದಲ್ಲಿ ಇಲ್ಲಿನ ಪ್ರಜೆ ಆಗಿರಲಿ ಇಲ್ಲದಿರಲಿ ಪ್ರತಿ



ಮಗುವಿಗೂ ಸರಕಾರಿ ಶಾಲೆಗಳಲ್ಲಿ ಶಿಕ್ಷಣ ಉಚಿತ. ಮಗು ಮತ್ತು ಅದರ ಪೋಷಕರು ಅದೇ ಊರಿನ ನಿವಾಸಿಗಳಾಗಿರಬೇಕು ಎಂಬುದೊಂದೇ ಕಡ್ಡಾಯದ ನಿಯಮ. ಇಲ್ಲಿಯ ಖಾಸಗಿ ಶಾಲೆಗಳು ಅತ್ಯಂತ ದುಬಾರಿ. ಊರಿನ ಎಲ್ಲ ಶಾಲೆಯ ಮಕ್ಕಳನ್ನು ಅವರವರ ಮನೆಯಿಂದ ಕರೆದೊಯ್ದು ಶಾಲೆ ತಲುಪಿಸುವುದು, ಶಾಲೆಯಿಂದ ಜೋಪಾನವಾಗಿ ಮನೆ ಮುಟ್ಟಿಸುವುದು ಸರ್ಕಾರದ ಜವಾಬ್ದಾರಿ. ಸರ್ಕಾರಿ ಶಾಲೆಯಲ್ಲಿ ಓದುವ ಮಗುವಾಗಲಿ ಖಾಸಗಿ ಶಾಲೆಯಲ್ಲಿ ಓದುವ ಮಗುವಾಗಲಿ ಅದರ ಮನೆ ಮತ್ತು ಶಾಲೆ ೩೦ ಮೈಲಿ ವಿಸ್ತೀರ್ಣದಲ್ಲಿ ಇದ್ದಲ್ಲಿ ಶಾಲಾ ಬಸ್ಸಿನ ವ್ಯವಸ್ಥೆ ಸಂಪೂರ್ಣ ಉಚಿತ.

* ಗ್ರಂಥಾಲಯದಲ್ಲಿ ಕಲಿಯುವ ವಿಚಾರ ಆಯಿತು, ಇನ್ನು ಕಲಿಸುವ ವಿಚಾರ. ಸ್ವೆಟರ್ ಹೆಣೆಯುವುದು, ಕಸೂತಿ, ಚಿತ್ರ ರಚಿಸುವುದು, ನೃತ್ಯ, ಸಂಗೀತ... ಇಲ್ಲವೇ ಚೆಸ್ ತರಹದ ಆಟ ತಿಳಿದವರು ತಮ್ಮ ವಿದ್ಯೆಯನ್ನು ಹೇಳಿಕೊಡಲು ಬಯಸಿದಲ್ಲಿ ತಮ್ಮ ಹೆಸರು, ನೈಪುಣ್ಯದ ವಿವರವನ್ನು ಗ್ರಂಥಾಲಯಕ್ಕೆ ನೀಡಬಹುದು. ಅವರು ನಮಗೆ ಕೋಣೆ, ಮೇಜು, ಕುರ್ಚಿ, ಅವರ ವೇಳಾಪಟ್ಟಿಯಲ್ಲಿ ಸ್ಥಳ ಮತ್ತು ಕಲಿಯಲು ಆಸಕ್ತಿ ಇರುವವರನ್ನು ಒದಗಿಸುವರು. ಪ್ರೌಢಶಾಲೆ ಮತ್ತು ಕಾಲೇಜು ವಿದ್ಯಾರ್ಥಿಗಳು ಅನೇಕರು ಬಂದು ಗ್ರಂಥಾಲಯಗಳಲ್ಲಿ ಕಿರಿಯ ಮಕ್ಕಳಿಗೆ ಪಾಠ ಹೇಳುವರು.

* ಮಕ್ಕಳ ಗ್ರಂಥಾಲಯದಲ್ಲಿ ಪುಸ್ತಕಗಳ ವೈವಿಧ್ಯವಂತೂ ಹೇಳತೀರದು. ಕುಳಿತುಕೊಳ್ಳಲು, ಅಂಬೆಗಾಲಿಡಲು ಈಗಷ್ಟೇ ಕಲಿತ ಹಸುಗೂಸುಗಳಿಗೂ ಅವು ಹಿಡಿದುಕೊಳ್ಳಬಹುದಾದಷ್ಟು ಪುಟ್ಟ ಅಳತೆಯ ಹರಿದು ಹೋಗದಂತಹ ದಪ್ಪ ರಟ್ಟಿನ, ಹಗುರವಾದ ಪುಸ್ತಕಗಳೂ ಇಲ್ಲಿವೆ. ಪುಸ್ತಕದ ಮೇಲೇನಾದರೂ ಚೆಲ್ಲಿದರೆ ಬಟ್ಟೆಯಲ್ಲಿ ಒರೆಸಬಹುದಾದಂತಹ ಕಾಗದದಿಂದ ಮಾಡಿರುತ್ತಾರೆ.

* ಪದಗಳೇ ಇಲ್ಲದಂತಹ ನಾಲ್ಕೇ ಹಾಳೆಯ ನಾಲ್ಕೇ ಚಿತ್ರದ ಪುಸ್ತಕಗಳು... ಉದಾಹರಣೆಗೆ, ಮೊದಲನೇ ಪುಟದಲ್ಲಿ ಒಂದು ಪುಟ್ಟ ಬೀಜ ಮಣ್ಣಿನ ಮೇಲಿರುವಂತೆ, ಎರಡನೇ ಪುಟದಲ್ಲಿ ಆ ಬೀಜ ಮೊಳಕೆಯಾದಂತೆ, ಮೂರನೇ ಪುಟದಲ್ಲಿ ಮೊಳಕೆ ಗಿಡವಾದಂತೆ, ನಾಲ್ಕನೇ ಪುಟದಲ್ಲಿ ಅದು ಹೂಬಿಟ್ಟಂತೆ... ಹೂ ನಗುತ್ತಿರುವಂತೆ; ಅಂತೆಯೇ ಕಂಬಳಿ ಹುಳುವೊಂದು ಚಿಟ್ಟೆಯಾಗುವ ಪರಿ... ಇಂತಹ ಪುಸ್ತಕಗಳು ಮಗುವಿಗೆ ಸೂಕ್ಷ್ಮವಾಗಿ ಚಿತ್ರವನ್ನು ಗಮನಿಸುವಂತೆ ಮಾಡುತ್ತವೆ. ಮಕ್ಕಳು ಹೊರಗೆ ತಾನು ನೋಡಿರಬಹುದಾದ ಬೀಜ, ಗಿಡ, ಹೂವು, ಮೊಳಕೆ – ಇವುಗಳ ಚಿತ್ರಗಳನ್ನು ಮನದಲ್ಲೇ ನೆನಪಿಸಿಕೊಂಡು ಹೋಲಿಸುವುದು, ಗುರುತಿಸುವುದು ಕಲಿಯುತ್ತವೆ. ಬೀಜಕ್ಕೂ, ಗಿಡಕ್ಕೂ, ಹೂವಿಗೂ ಸಂಬಂಧವಿದೆ, ಒಂದೇ ವಸ್ತು ಬೇರೆ ಬೇರೆ ರೂಪ ತಳೆಯುತ್ತಿದೆ ಎಂಬುದನ್ನು ಕ್ರಮೇಣ ತಾವೇ ಅರಿಯುತ್ತವೆ. ಒಂದನೇ ತರಗತಿಯಲ್ಲಿ ಅವುಗಳನ್ನು ಬಲವಂತವಾಗಿ ಹಿಡಿದು ಇದು ಬೇರು, ಇದು ಎಲೆ, ಇದು ಹೂವು ಅಂತ ಉರು ಹೊಡೆಸಬೇಕಾಗಿರೋಲ್ಲ, ಮಾತು ಬಂದ ಕೂಡಲೆ ಅವೇ ಪ್ರಶ್ನೆಗಳನ್ನು ಕೇಳಿ ತಿಳಿದುಕೊಳ್ಳುತ್ತವೆ. ಮಕ್ಕಳು ಪುಸ್ತಕವನ್ನು ಕೈಯಲ್ಲಿ ಸರಿಯಾಗಿ ಹಿಡಿಯುವುದನ್ನೂ ಕಲಿಯಬೇಕಿದೆ. ಈ ಕಲಿಕೆ ಕಂದಮ್ಮಗಳಿರುವಾಗಿನಿಂದ ನಡೆದರೆ ಉತ್ತಮ. ಪದಗಳೇ ಇಲ್ಲದ ಹಲವು ವಿಚಾರಗಳ ಪುಸ್ತಕಗಳು ಇಲ್ಲಿವೆ. ಬಣ್ಣಬಣ್ಣದ ಚಿತ್ರಗಳಿರುವ ಹಗುರವಾದ ಪುಸ್ತಕವನ್ನು ಕೈಲಿ ಹಿಡಿದಾಗ ಮಗು ತಂತಾನೆ ಅದರೊಂದಿಗೆ ಸಂಬಂಧ ಬೆಳೆಸುತ್ತೆ, ಪುಸ್ತಕವನ್ನು ಜೋಪಾನವಾಗಿ ಕಾಪಾಡಬೇಕೆಂಬ ವಾತ್ಸಲ್ಯವೂ ಹುಟ್ಟುತ್ತೆ.

* ಬೇರೆ ಬೇರೆ ವಯಸ್ಸಿನ ಮಕ್ಕಳಿಗೆ ಆಯಾ ವಯಸ್ಸಿಗೆ ಇರುವ ಗ್ರಹಿಕೆಯ ಶಕ್ತಿಗೆ ಅನುಗುಣವಾಗಿ ಪುಸ್ತಕಗಳನ್ನು ರಚಿಸಿದ್ದಾರೆ, ವಿಂಗಡಿಸಿದ್ದಾರೆ. ಸಂಶಯ, ಭೀತಿ, ಗೊಂದಲವನ್ನುಂಟುಮಾಡುವ ವಿಚಾರಗಳು ನಡೆಯುವುದು ಸಹಜ, ಇಂತಹ ವಿಚಾರಗಳನ್ನು ಮಗುವಿಗೆ ಅರ್ಥವಾಗುವಂತೆ ಪರಿಚಯಿಸುವ ಚಿತ್ರ ಪುಸ್ತಕಗಳೂ ಗಣನೀಯವಾದವು. ಉದಾಹರಣೆಗೆ : (ಅ) ತಂದೆ ತಾಯಿ ಜಗಳದಲ್ಲಿ ನಿರತರಾದಾಗ ಮಗುವಿನಲ್ಲಿ ಉಂಟಾಗುವ ಭೀತಿ. (ಆ) ಕುಟುಂಬದ ಒಳಗೋ ಹತ್ತಿರದ ಬಳಗದವರಲ್ಲೋ ಸಾವು ಸಂಭವಿಸಿದಾಗಿನ ಸಂದರ್ಭ. (ಇ) ಕಿಟಕಿಯ ಹೊರಗಿನ ಕತ್ತಲು, ಕತ್ತಲಿನಲ್ಲಿ ತೀಕ್ಷ್ಣವಾಗಿ ಕೇಳುವ ಬೆಕ್ಕುಗಳ ಚೀರಾಟ. (ಈ) ಮಗುವನ್ನು ಸಂತೈಸಬೇಕಾದ ತಾಯಿಯೇ ಸೋತು ಅಳುತ್ತ ಕೂತಾಗ ಮಗು ತಬ್ಬಿಬ್ಬಾಗುವುದು. (ಉ) ಕುಟುಂಬದ ಸದಸ್ಯರು ಯಾರಾದರೂ ಮನೋರೋಗಿಯಾಗಿದ್ದು ನಿತ್ಯ ಕೋಪ, ಹಾರಾಟ, ಚೀರಾಟ ಮಾಡುವವರಾದಲ್ಲಿ ಮತ್ತೆ ಸಮಾಧಾನದ ಸ್ಥಿತಿಯಲ್ಲಿರುವಾಗ ಮಗುವನ್ನು ಮುದ್ದಿಸಬಂದಲ್ಲಿ ಮಗುವಿನಲ್ಲಿ ಹುಟ್ಟುವ ಅಪನಂಬಿಕೆ. (ಊ) ಗಂಟುಮೂಟೆ ಕಟ್ಟಿ ಊರನ್ನೇ ಬಿಟ್ಟು ಬೇರೊಂದು ಹೊಸ ಸ್ಥಳಕ್ಕೆ ವರ್ಗಾವಣೆಯಾಗುವಾಗ ಅಪರಿಚಿತ ಸ್ಥಳಕ್ಕೆ ಮಗು ಹೊಂದಿಕೊಳ್ಳಲು ಪಡುವ ಕಷ್ಟ, ರೀತಿ. (ಋ) ತನ್ನದೇ ಸ್ವಂತ ಕುಟುಂಬದಲ್ಲಿ ಒಂದು ಮಗುವಿನ ಸಹೋದರನೋ, ಸಹೋದರಿಯೋ ಅಂಗವಿಕಲರಾಗಿದ್ದಾಗ ಮನೆಯಲ್ಲಿ ಉಂಟಾಗಬಹುದಾದ ಗೊಂದಲ, ಮುನಿಸು, ಅಳು, ಇವುಗಳ ನಿವಾರಣೆ; ಇಂತಹ ಕಥೆ ಪುಸ್ತಕಗಳು ಮಗುವಿಗೆ ಪರಿಸ್ಥಿತಿಯನ್ನು ಗ್ರಹಿಸುವ, ಸಂದರ್ಭಕ್ಕೆ ಸ್ಪಂದಿಸುವ ಶಕ್ತಿಯನ್ನು ತಂದುಕೊಡುತ್ತವೆ.

* ಪುಟ ತೆರೆದ ಕೂಡಲೆ ಅದರ ಪಾತ್ರಗಳೆಲ್ಲ ಚಂಗನೆ ಎದ್ದು ನಿಲ್ಲುವ 'ಪಾಪ್ ಅಪ್' ಪುಸ್ತಕಗಳದು ಇನ್ನೊಂದು ವಿಧ. ಹೊಸ ಪುಟ ತೆರೆದಾಗ ಹಿಂದಿನ ಪುಟದ ಚಿತ್ರಗಳು ಅವು ಇರಲೇ ಇಲ್ಲವೇನೋ ಎಂಬಂತೆ ಅಡಗಿಕೊಳ್ಳುತ್ತವೆ, ಹೊಸ ಪುಟದ ಚಿತ್ರಗಳು ಹೊರ ನೆಗೆಯುತ್ತವೆ. ಇಂತಹ ಪುಸ್ತಕಗಳು ಮಕ್ಕಳನ್ನು ಪರವಶಗೊಳಿಸುವುದಲ್ಲದೆ ಇದು ಹೇಗೆ ಸಾಧ್ಯ ಎಂಬ ಕುತೂಹಲವನ್ನು ಉಂಟುಮಾಡುತ್ತವೆ. ಬಗೆ ಬಗೆಯಲ್ಲಿ ಕಾಗದವನ್ನು ಮಡಚಿ ಆಕಾರಗಳನ್ನು ಮಾಡಲು ಪ್ರೇರೇಪಿಸುತ್ತವೆ.




* ಕಥೆ ಪುಸ್ತಕ ಬರಿ ಕಥೆ ಹೇಳಬೇಕಷ್ಟೆ ಯಾಕೆ ? ಅದು ಮಕ್ಕಳನ್ನು ತಾವೂ ಬಣ್ಣದ ಚಿತ್ರ ರಚಿಸಲು, ಕಥೆ ಹೆಣೆಯಲು ಪ್ರೇರೇಪಿಸುವಂತೆ ಇರಬೇಕು ಕೂಡ. ಇಲ್ಲಿಯ 'ಟಚ್ ಅಂಡ್ ಫೀಲ್' ಪುಸ್ತಕಗಳು ಹಾಗೆ ಮಾಡಬಲ್ಲವು. ಉದಾಹರಣೆಗೆ ಒಂದು ಪುಟದ ತುಂಬ ಮೊಲದ ದೊಡ್ಡ ಚಿತ್ರವಿದೆ. ನೋಡಿದರೆ ಮುಟ್ಟಬೇಕೆನ್ನುವಷ್ಟು ಸುಂದರವಾಗಿದೆ, ಮುಟ್ಟಿದರೆ ಏನಾಶ್ಚರ್ಯ ! ಮೊಲದ ಮೈ ಮೃದುವಾಗಿ ಕೋಮಲವಾಗಿದೆ. ಅಂತೆಯೇ ಹಲ್ಲಿಯ ಚರ್ಮ ಒರಟು ಒರಟಾಗಿದೆ, ಆಮೆಯ ಕವಚ ಕಲ್ಲಿನಂತೆ ಗಟ್ಟಿಯಾಗಿದೆ. ಆಯಾ ಪ್ರಾಣಿಯ ಹೊರಮೈಗೆ ಹೋಲುವ ಬಣ್ಣ ಮತ್ತು ಗುಣದ ಕಾಗದ ಬಳಸಿದ್ದಾರೆ. ಇಂತಹ ಪುಸ್ತಕಗಳು ಯಾವ ಚಿತ್ರ ಯಾವ ಪ್ರಾಣಿಯದು ಅಂತ ಹೇಳುವುದಲ್ಲದೆ ಗಟ್ಟಿ, ನುಣುಪು, ಕೋಮಲ,



ಒರಟು ಈ ಬೇರೆ ಬೇರೆ ಗುಣಗಳ ಪರಿಚಯ, ಅವುಗಳ ವ್ಯತ್ಯಾಸ, ಅವುಗಳು ನಮ್ಮ ಕೈಗೆ ತಗುಲಿದಾಗ ಉಂಟಾಗುವ ಅನುಭವ ಇವೆಲ್ಲವನ್ನೂ ತಿಳಿಸುತ್ತವೆ.

* ಇಷ್ಟಲ್ಲದೆ ಮಕ್ಕಳ ವಿಭಾಗದಲ್ಲಿ ಹಿರಿಯ ಮಕ್ಕಳಿಗೆಂದು ಕಿರು ಕಾದಂಬರಿಗಳೂ, ಆತ್ಮಕಥೆ, ಕ್ರೀಡೆಗಳ ಬಗ್ಗೆ, ಕ್ರೀಡಾ ತಾರೆಗಳ ಬಗ್ಗೆ ಪುಸ್ತಕಗಳು, ವಿಜ್ಞಾನ ಪುಸ್ತಕಗಳು, ಸಚಿತ್ರ ಪದಕೋಶಗಳು; ಶಿಕ್ಷಕರು ಮತ್ತು ಪೋಷಕರಿಗೆ ಮಕ್ಕಳನ್ನು ಪಾಲಿಸುವ ಬಗ್ಗೆ, ಭಾಷೆ, ಉಚ್ಚಾರ, ಓದು-ಬರಹ ಕಲಿಸುವ ಬಗ್ಗೆ, ಅವು ರಚ್ಚೆ ಹಿಡಿದಾಗ ಹೇಗೆ ಸುಧಾರಿಸಬೇಕು, ತಾವೇ ಕೋಪಾವೇಶದಲ್ಲಿದ್ದಾಗ ಮಕ್ಕಳ ಮೇಲೆ ತೀರಿಸಿಕೊಳ್ಳದೆ ನಿವಾರಿಸಿಕೊಳ್ಳೋದು ಹೇಗೆ ಎಂಬಂತಹ ಇತರೆ ಹಲವಾರು ವಿಚಾರಗಳ ಬಗ್ಗೆ ಸಲಹೆ, ಸೂಚನೆ, ಉಪಾಯ ಹೇಳಿಕೊಡುವ ಪುಸ್ತಕಗಳಿವೆ. ಸಾಮಾನ್ಯವಾಗಿ ಮರೆತುಬಿಡುವುದು ಅಂಗವಿಕಲ ಮಕ್ಕಳು, ಬುದ್ಧಿಮಾಂದ್ಯ ಮಕ್ಕಳು ಮತ್ತು ಕಲಿಯುವ ಶಕ್ತಿ ಸ್ವಲ್ಪ ಕಡಿಮೆ ಇರುವ ಮಕ್ಕಳು. ಅಂತಹ ಮಕ್ಕಳಿಗೆಂದು, ಅವುಗಳ ಪೋಷಕರಿಗೆಂದು ಹೆಚ್ಚಿನ ಪುಸ್ತಕಗಳು ಲಭ್ಯವಿರುವುದು ಪ್ರಶಂಸನೀಯ.

* ಮಕ್ಕಳ ಸಾಹಿತ್ಯ, ಶಿಕ್ಷಣ ಮತ್ತು ಪರಿಪೂರ್ಣ ಬೆಳವಣಿಗೆಯ ಸಮಗ್ರ ಅಧ್ಯಯನಗಳು ಅನೇಕ ಇಲ್ಲಿ ನಡೆಯುತ್ತಿವೆ ಮತ್ತು ಹಾಗೆ ಅಧ್ಯಯನ ಮಾಡಿದವರು ಪೋಷಕರು ಮತ್ತು ಶಿಕ್ಷಕರಿಗೆಂದು ಇದುವರೆಗೂ ಪ್ರಕಟವಾದ ಒಳ್ಳೆಯ, ಅತ್ಯಂತ ಉಪಯುಕ್ತ ಪುಸ್ತಕಗಳ ಪಟ್ಟಿ ತಯಾರಿಸಿದ್ದಾರೆ. ಇಂತಹ ಪಟ್ಟಿಗಳು, ಪಟ್ಟಿಯಲ್ಲಿನ ಪುಸ್ತಕಗಳ ಪರಿಚಯ ಇರುವ ಅನೇಕ ಹೊತ್ತಿಗೆಗಳು ಗ್ರಂಥಾಲಯದ ಮಕ್ಕಳ ವಿಭಾಗದಲ್ಲಿ ಸಿಗುತ್ತವೆ.

* ಇನ್ನು ಇಲ್ಲಿಯ ಗ್ರಂಥಾಲಯಗಳಲ್ಲಿ ಪುಸ್ತಕ ಪ್ರದರ್ಶನ, ಗ್ರಂಥಾಲಯದಲ್ಲಿ ಓದುಗರು ಉಪಯೋಗಿಸಿ ಹಣ್ಣಾದ ಪುಸ್ತಕಗಳ ೩೦-೪೦ ಸೆಂಟುಗಳಷ್ಟು ಕಡಿಮೆ ಬೆಲೆಗೆ ಮಾರಾಟ, ಕೆಲವನ್ನು ಉಚಿತವಾಗಿ ದಾನ ನೀಡುವುದು ಇಂತಹ ಕೆಲಸ ನಡೆಯುತ್ತಲೇ ಇರುತ್ತವೆ.

* ಗ್ರಂಥಾಲಯಗಳಲ್ಲಿ ನಡೆಯುವ ತರಗತಿಗಳ ಕೊನೆಯಲ್ಲಿ ಮಕ್ಕಳಿಗೆಂದು ಪುಟ್ಟ ಸ್ಪರ್ಧೆ ಏರ್ಪಡಿಸಿ ಪುಸ್ತಕಗಳನ್ನು ಬಹುಮಾನವಾಗಿ ಕೊಡುವರು.

* ನಮಗೆ ಬೇಕಿರುವ ಪುಸ್ತಕ ಇಲ್ಲವೇ ಡಿ.ವಿ.ಡಿ. ಯಾವ ಗ್ರಂಥಾಲಯದಲ್ಲೂ ಇಲ್ಲದಿದ್ದಲ್ಲಿ ಅದರ ವಿವರನ್ನು ನೀಡಿ ಗ್ರಂಥಾಲಯಕ್ಕೆ ಅದನ್ನು ಸೇರ್ಪಡಿಸಿರೆಂದು ಮನವಿ ಫಾರ್ಮ್‌ಅನ್ನು ಭರ್ತಿ ಮಾಡಿಕೊಡಬಹುದು.

ಗ್ರಂಥಾಲಯದಲ್ಲಿ ಇಷ್ಟೆಲ್ಲಾ ಅವಕಾಶಗಳು ಇವೆ. ಹಾಗಾಗಿ ಇಲ್ಲಿಯ ಎಲ್ಲ ಪೋಷಕರು ಮಗು ಎಳೆಯದಿರುವಾಗಲೇ ಗ್ರಂಥಾಲಯಕ್ಕೆ ಎತ್ತಿಕೊಂಡು ಬರುತ್ತಾರೆ. ಬಾಲ್ಯದಿಂದಲೇ ಪುಸ್ತಕಗಳೊಂದಿಗೆ ಕುಟುಂಬದ ಎಲ್ಲರಿಗೆ ಅನುಬಂಧ ಬೆಳೆಯುತ್ತೆ. ಬೇಕಾಗುವಷ್ಟು ಪುಸ್ತಕಗಳನ್ನು ಗ್ರಂಥಾಲಯವೇ ಒದಗಿಸುತ್ತಾದ್ದರಿಂದ ಕೊಂಡು ಓದಬೇಕಾದ ಅನಿವಾರ್ಯತೆ ಬರುವುದಿಲ್ಲ. ಪುಸ್ತಕಗಳಿಗಾಗಿ ಹಾತೊರೆಯುವಂತೆ ಮಾಡುವ, ಎಳೆಯ ವಯಸ್ಸಿನಿಂದಲೇ ಓದಿನ ಹಸಿವು ಬೆಳೆಸುವ ಪೂರ್ಣ ಜವಾಬ್ದಾರಿಯನ್ನು ಅಮೆರಿಕಾದ ಗ್ರಂಥಾಲಯಗಳು ಹೊತ್ತಿವೆ. ಇಲ್ಲಿಯ ಪುಸ್ತಕಗಳ ಗುಣಮಟ್ಟ ಅತ್ಯಂತ ಮುಂದುವರಿದಿದೆ. ಚಿತ್ರ ಕಲಾವಿದನೇ ಲೇಖಕನಾಗಿ ರಚಿಸಿದ

ಕ್ಕಳ ಚಿತ್ರ ಪುಸ್ತಕಗಳ ಸಂಖ್ಯೆ ಇಲ್ಲಿ ಗಣನೀಯವಾಗಿ ಚ್ಚುತ್ತಿದೆ. ಈ ಮಟ್ಟದ ಪ್ರೋತ್ಸಾಹ, ತರಬೇತಿ ನಮ್ಮ ಡಿನ ಕಲಾವಿದರಿಗೆ, ಚಿತ್ರಕಲೆಯ ಶಾಲಾ ಲೇಜುಗಳಲ್ಲಿ ದೊರೆಯುತ್ತಿಲ್ಲ. ವಿಚಾರಗಳು ಕ್ತವಾಗುವ ರೀತಿ, ಕಾಗದಗಳ ಬಳಕೆ, ಚಿತ್ರಗಳು, ಚಿತ್ರ ಚಿಸುವುದಕ್ಕೆ ಬಳಸುವ ಮಾಧ್ಯಮ – ಈ ಎಲ್ಲ ರಗಳಲ್ಲಿ ಇವರು ಸಾಧ್ಯಾಸಾಧ್ಯತೆಗಳನ್ನೆಲ್ಲ ಶೋಧಿ ದ್ದಾರೆ ಮತ್ತು ಮುಂದುವರಿಯುತ್ತಲೇ ಇದ್ದಾರೆ. ಈ ಣಮಟ್ಟದ ಪುಸ್ತಕಗಳು ಕನ್ನಡದ ಮಕ್ಕಳ ಸಾಹಿತ್ಯ ತ್ರದಲ್ಲಿ ಪ್ರಕಟವಾಗುತ್ತಿರುವುದು ತೀರ ಕಡಿಮೆ. ಈ ೊರತೆಯನ್ನು ನಿವಾರಿಸೋಣ.

ಒಂದೇ ತೆರನ ವಿಚಾರಗಳು. ಅವುಗಳನ್ನು ಪ್ರಸ್ತುತ ಡಿಸುವ ರೀತಿಯೂ ಒಂದೇ. ದೀರ್ಘ ವಾಕ್ಯಗಳು, ಂದೇ ತೆರನ ಚಿತ್ರಗಳು, ಕಾಗದ, ಸರಿ ಸುಮಾರು ಂದೇ ಆಕಾರ ಅಳತೆ – ಇವಕ್ಕೇ ನಾವಿನ್ನೂ ಗಂಟು ದ್ದಿದ್ದೀವಿ. ಅತ್ಯಂತ ಆಕರ್ಷಣೀಯವೂ, ವಿಧ್ಯಪೂರ್ಣವೂ, ಕೈಗೆಟುಕುವ ಬೆಲೆಯವೂ ಆಗಿದ್ದ ೋವಿಯತ್ ಒಕ್ಕೂಟದ ಮಕ್ಕಳ ಪುಸ್ತಕಗಳು ಪ್ರಕಟವಾಗುವುದು ನಿಂತುಹೋದ ೕಲೆ ಮಕ್ಕಳ ಸಾಹಿತ್ಯಕ್ಕೆ ಬರ ಬಂದಂತಾಗಿದೆ. ಕನ್ನಡ ಸಾಹಿತ್ಯ ಕ್ಷೇತ್ರದಲ್ಲಿ ಂಡಿತರಿಗೆ ಕೊರತೆಯಿಲ್ಲ. ಇವರುಗಳು ವರ್ಷಕ್ಕೊಂದಾದರೂ ಪುಟ್ಟ ಗುವಿಗೆಂದು ಒಂದು ಸರಳ ಭಾಷೆಯ ಕಥೆ ಹೆಣೆದರೆ ಎಷ್ಟು ಚೆನ್ನಾಗಿರುತ್ತೆ?! ಇನ್ನು ತ್ರ ಬರೆಯುವ ಕಲಾವಿದರೋ ನಮ್ಮ ನಾಡಿನಲ್ಲಿ ಅನೇಕರಿದ್ದಾರೆ. ಆದರೆ ಇವರಲ್ಲಿ ಕ್ಕಳ ಸಾಹಿತ್ಯದಲ್ಲಿ ಕಾಳಜಿ, ಅಕ್ಕರೆ ಉಳ್ಳವರು ಕಡಿಮೆ. ಎರಡೂ ಇದ್ದವರಿಗೆ ಹೇಗೆ ುಂದುವರಿಯಬೇಕೆಂಬ ಸಲಹೆ, ಪ್ರೋತ್ಸಾಹ ಇಲ್ಲ. ನಮ್ಮ ವರ್ಲಿ, ಮಧುಬನಿ, ುಂತಾದ ಜಾನಪದ ಚಿತ್ರಪ್ರಕಾರಗಳನ್ನು ಮಕ್ಕಳ ಪುಸ್ತಕದಲ್ಲಿ ಯಾಕೆ ತರುತ್ತಿಲ್ಲ? ೊದಲು ಮಾತಾಡುವ ಚಿಣ್ಣರಿಗೆ ತೊದಲು ಶಬ್ದಗಳಿರುವ ಚಿತ್ರ ಪುಸ್ತಕ ಾಕಾಗಬಾರದು? ಹಳೆಯ ಕಟ್ಟು ಕರಾರುಗಳಿಂದ ಹೊರಚಿಮ್ಮಿ ಹೊಸ ೊಳಹೊಂದನ್ನು ಪ್ರಯತ್ನಿಸುವ ಧೈರ್ಯ ಇಲ್ಲ. ಬಹುಶಃ ಇದಕ್ಕೆ ಕಾರಣ ಒಂದು ಒಳ್ಳೆಯ ಚಿತ್ರ ಪುಸ್ತಕ ಪ್ರಕಟಿಸಲು ತಗಲುವ ವೆಚ್ಚ ಹೆಚ್ಚು. ಆ ವೆಚ್ಚಕ್ಕೆ ಅನುಗುಣವಾಗಿ ಪುಸ್ತಕಕ್ಕೆ ಬೆಲೆ ಇರಿಸಿದರೆ ಆ ಬೆಲೆಯನ್ನು ತೆತ್ತು ಕೊಳ್ಳುವ ಪೋಷಕರು ಕಡಿಮೆ. ಶಾಲೆಯ ಪುಸ್ತಕಗಳಾಚೆ ಸಾವಿರಾರು ಪುಸ್ತಕಗಳಿವೆ, ಮಗುವಿನ ಪರಿಪೂರ್ಣ ಬೆಳವಣಿಗೆಗೆ ಆ ಪುಸ್ತಕಗಳೂ ಅತ್ಯಗತ್ಯ ಅಂತ ತಿಳಿದ ಪೋಷಕರು ಕಡಿಮೆ. ಈ ಸಂದಿಗ್ಧ ಪರಿಸ್ಥಿತಿಯಲ್ಲಿ ಮಧ್ಯ ಬಂದು ಓದನ್ನು ಜನಪ್ರಿಯ ಗೊಳಿಸುವ ಕಾರ್ಯ ನಮ್ಮ ಗ್ರಂಥಾಲಯಗಳೂ ವಹಿಸಬೇಕಿದೆ. ಎಲ್ಲ ಹಳ್ಳಿಗಳಲ್ಲಿ, ಪೇಟೆಗಳಲ್ಲಿ ಗ್ರಂಥಾಲಯಗಳು, ಅವುಗಳಲ್ಲಿ ಮಕ್ಕಳ ವಿಭಾಗ; ಅಲ್ಲಿ ಮನೆಯಷ್ಟೇ, ಆಟದ ಅಂಗಳದಷ್ಟೇ ಪ್ರಿಯವಾಗುವಂತಹ ಬೆಚ್ಚನೆಯ ವಾತಾವರಣ ನಿರ್ಮಾಣವಾಗಬೇಕು. ಐಷಾರಾಮಿ ಕಟ್ಟಡ, ಮೇಜು, ಕುರ್ಚಿಗಳ ವಿಚಾರದಲ್ಲಿ ಅಮೆರಿಕಾದ ಗ್ರಂಥಾಲಯ ಗಳನ್ನು ಅನುಕರಣೆ ಮಾಡಬೇಕಿಲ್ಲ. ಮಕ್ಕಳು ಓಡಿಯಾಡಲು ತುಸು ಸ್ಥಳ, ಕುಳಿತುಕೊಳ್ಳಲು ಅವಕ್ಕೆ ಪ್ರಿಯವಾದ ಚಾಪೆ, ಜಮಖಾನ, ಪುಟ್ಟ ಮಣೆಗಳು ಸಾಕು. ಅಮ್ಮನಷ್ಟೇ ವಾತ್ಸಲ್ಯದ ಗ್ರಂಥಪಾಲಕರು ಬೇಕು. ಅಂಗನವಾಡಿಗಳು ಚಿಣ್ಣರಿಗೆ ಗ್ರಂಥಾಲಯಗಳೂ ಆಗುವಂತೆ ಮಾಡಬಹುದು. ಅಂಗನವಾಡಿ ಶಿಕ್ಷಕಿಯರ ತರಬೇತಿಯನ್ನು ಈಗಿರುವ ಗ್ರಂಥಪಾಲಕರಿಗೂ ನೀಡಬಹುದು. ಅವರಲ್ಲಿ ಸಾಹಿತ್ಯದ ಅಭಿರುಚಿಯೂ ಬೆಳೆಯುವಂತೆ ಮಾಡಬಹುದು. ಆಗವರು ಆ ಅಭಿರುಚಿಯನ್ನು ಮಕ್ಕಳಲ್ಲಿ ಬಿತ್ತುವ ಪ್ರಯತ್ನ ಮಾಡುವರು. ಮಕ್ಕಳು, ಮಕ್ಕಳ ಸಾಹಿತ್ಯದ ದೃಷ್ಟಿಯಿಂದ 'ಅತ್ಯಂತ ಒಳ್ಳೆಯ ಪುಸ್ತಕಗಳಿರುವ ಗ್ರಂಥಾಲಯ', 'ಅತ್ಯಂತ ಒಳ್ಳೆಯ ವಾತಾವರಣದ ಗ್ರಂಥಾಲಯ', 'ಅತ್ಯಂತ ಶುಭ್ರವಾದ ಒಳಾಂಗಣದ ಗ್ರಂಥಾಲಯ', 'ಉತ್ತಮ ಗ್ರಂಥಪಾಲಕ' – ಹೀಗೆ ಹೊಸ ಬಹುಮಾನಗಳನ್ನು ರೂಢಿಗೆ ತರಬಹುದು. ತಮ್ಮ ಕೆಲಸದ ಮೂಲಕ ಉಳಿದವರಿಗೆ ಸ್ಫೂರ್ತಿಯಾದವರನ್ನು ಗುರುತಿಸುವುದು ಮುಖ್ಯ.

ದೂರದರ್ಶನವು ಅತ್ಯಂತ ಪ್ರಬಲ ಮಾಧ್ಯಮವಾಗಿ ಬೆಳೆಯುತ್ತಿದೆ. ಜಾಹಿರಾತುಗಳನ್ನು ನೀಡಿ ವಸ್ತ್ರ ಮತ್ತು ಆಭರಣ ಕಂಪನಿ, ಮಳಿಗೆಗಳವರು ಕಳೆದ ಐದಾರು ವರ್ಷಗಳಲ್ಲಿ ಎಷ್ಟು ಜನಪ್ರಿಯರಾಗಿದ್ದಾರೆ ಅಂತ ನೋಡುತ್ತಾ ಇದ್ದೀವಿ. ಸಾಕ್ಷರತಾ ಆಂದೋಲನವನ್ನು ಪಸರಿಸಲು ದೂರದರ್ಶನದಲ್ಲಿ ಎಷ್ಟು ಸುಂದರವಾದ ವಿಡಿಯೋಗಳು ಬರ್ತಾ ಇದ್ದವು! ಅಂತೆಯೇ ಓದನ್ನು ಜನಪ್ರಿಯಗೊಳಿಸಲು ದೂರದರ್ಶನವನ್ನು ಬಳಸಿಕೊಳ್ಳಬಹುದು. ಜಾಹಿರಾತುಗಳಲ್ಲಿ, ಚಲನಚಿತ್ರಗಳಲ್ಲಿ ಪುಸ್ತಕಗಳನ್ನು ಓದುವ ಹವ್ಯಾಸ, ಅದು ಕೊಡುವ ಆನಂದ, ವಿವೇಕ; ಪುಸ್ತಕಗಳನ್ನು ಹುಟ್ಟುಹಬ್ಬ, ಮದುವೆ, ನಾಮಕರಣ ಮುಂತಾದ ಸಮಾರಂಭಗಳಲ್ಲಿ ಕೊಡುಗೆಯಾಗಿ ಕೊಡುವುದರ ಔನ್ನತ್ಯ... ಈ ಭಾವನೆಗಳನ್ನು ಜನಮನದಲ್ಲಿ ಬಿತ್ತಬಹುದು.

ಇನ್ನು ನಾಡಿನ ಪ್ರಕಟಣಾ ಸಂಸ್ಥೆಗಳು, ಗ್ರಂಥಾಲಯಗಳು, ಸಾಹಿತ್ಯ ಪರಿಷತ್ತು, ಲೇಖಕರು, ಚಿತ್ರಕಲಾವಿದರು – ಇವರ ನಡುವಿನ ಸಂಪರ್ಕ ಬಲವಾಗುವಂತೆ ಮಾಡಬಹುದು. ಇವರೆಲ್ಲ ಒಟ್ಟಿಗೆ ಸೇರಿ, ಚರ್ಚಿಸಿ ಅತ್ಯಂತ ಸುಂದರವಾದ ಗುಣಮಟ್ಟದ ಮಕ್ಕಳ ಪುಸ್ತಕವನ್ನು ವರ್ಷಕ್ಕೊಂದಾದರೂ ತರುವ ಪ್ರಯತ್ನ ಒಗ್ಗಟ್ಟಿನಲ್ಲಿ ಮಾಡಬಹುದು. ನಿಗದಿತ ಬೆಲೆಯ, ನಿಗದಿತ ಪ್ರತಿಗಳ ಈ ಪುಸ್ತವನ್ನು ಗ್ರಂಥಾಲಯಗಳು ಕೊಂಡು ಅಲ್ಲಿಗೆ ಬರುವ ಓದುಗರಿಗೆ ಒದಗಿಸುವ ಹಾಗೆ ಮಾಡಬಹುದು. ನಮ್ಮ ಶಾಲೆಗಳಲ್ಲಿ ನಡೆಯುತ್ತಿರುವ ಬಿಸಿಯೂಟದ ವ್ಯವಸ್ಥೆಯನ್ನು ಇಲ್ಲಿ ಬಹುವಾಗಿ ಮೆಚ್ಚಿಕೊಂಡಿದ್ದಾರೆ, ತಮ್ಮ ಶಾಲೆಗಳಲ್ಲೂ ಅಳವಡಿಸಿಕೊಳ್ಳುವ ಯೋಚನೆ ಕೆಲವರಲ್ಲಿ ಮೂಡಿದೆ. ಬಿಸಿಯೂಟದ ಯೋಜನೆ ತಂದು ನಾವು ಇವರಿಗೆಲ್ಲ ಮಾದರಿಯಾಗಿದ್ದೀವಿ. ಬೇಗ ಎಚ್ಚೆತ್ತುಕೊಂಡಲ್ಲಿ ಮಕ್ಕಳ ಸಾಹಿತ್ಯ ಕ್ಷೇತ್ರದಲ್ಲಿ ಏಳಿಗೆ ಹೊಂದಲು ನಮ್ಮಿಂದ ಖಂಡಿತ ಸಾಧ್ಯವಿದೆ. ಹೊಸ ವರ್ಷದ 'ಹೊಸತು' ಸಂಚಿಕೆ ಎಲ್ಲರಲ್ಲಿ ಈ ಆಶಾಕಿರಣವನ್ನು ಮೂಡಿಸಲಿ.


ಸಹನ

೧೧-ಇ, ನಾರ್ತ್ ಟವರ್ಸ್, ೧೨೫, ಲೇಕ್ ರಸ್ತೆ, ವೈಟ್ ಪ್ಲೇನ್ಸ್, ನ್ಯೂಯಾರ್ಕ್





ಸಭೆಯಲ್ಲಿ ಸಾಕಷ್ಟು ಮಂದಿ ನಿದ್ರೆಯಿಂದ ತೂರಾಡುತ್ತಿದ್ದರೆ, ಇವರೊಬ್ಬರೇ ಕಾರ್ಯಮಗ್ನರಾಗಿದ್ದರಿಂದ ಸಿಕ್ಕಿಬಿದ್ದರು.




*ಗುಂಡ್ಲುಪೇಟೆಯ ಶಿಕ್ಷಕರ ಭವನದಲ್ಲಿ ತಾರೀಖು : ೨೬-೧೧-೨೦೧೦ರಂದು ನವಕರ್ನಾಟಕ ಪುಸ್ತಕ ಪ್ರದರ್ಶನವನ್ನು ವಿಧಾನಸಭಾ ಸದಸ್ಯ ಶ್ರೀ ಎಚ್. ಎಸ್. ಮಹದೇವ ಪ್ರಸಾದ್ ಉದ್ಘಾಟಿಸಿದರು. ಕ್ಷೇತ್ರ ಶಿಕ್ಷಣಾಧಿಕಾರಿ ಶ್ರೀ ಮಲ್ಲಿಕಾರ್ಜುನ, ಪ್ರೌಢಶಾಲಾ ಶಿಕ್ಷಕರ ಸಂಘದ ತಾಲ್ಲೂಕು ಸಂಚಾಲಕ ಶ್ರೀ ರಮೇಶ್ ಕುಮಾರ್, ಮುಖ್ಯೋಪಾಧ್ಯಾಯರಾದ ಶ್ರೀ ಪ್ರಸನ್ನ ಶಂಕರ ಮೂರ್ತಿ, ಜಿಲ್ಲಾ ಶಿಕ್ಷಕರ ಸಂಘದ ಅಧ್ಯಕ್ಷರಾದ ಶ್ರೀ ಎನ್. ಮಂಜುನಾಥ್ ಹಾಗೂ ಇತರರು ಉಪಸ್ಥಿತರಿದ್ದರು.*

# ಖಾಲಿ ಬೀದಿಯಲ್ಲೊಂದು ವಸಂತನ ಭಿಕ್ಷಾಪದ

೧

**ಹ**ಸಿರ ಬಸಿರು ಸತ್ತ ನೆಲದಲ್ಲಿ
ಹೊರೆ ಹೊತ್ತವಳ ಕಣ್ಣಹನಿ ಕೆಂಡದ ಮೋಡ
ಸುಡುಸುಡು ಸೂರ್ಯನಿಗೆ ಮುತ್ತು ಕೊಟ್ಟ ತಪ್ಪಿಗೆ
ಕಿಡಿಯಾಗಿ ಉದುರುತಿವೆ
ಡೊಕ್ಕೆಯಲ್ಲಿ ಡೊಕ್ಕೆ ಸೇರಿದ ಎತ್ತಿನಂತೆ
ನೇಗಿಲು ಹೊತ್ತವನ ಬಲಿ ಬೇಡುವ
ಭುವಿಯೊಡಲ ಬಾಯಾರಿಕೆಗೆ
ಕೊಡಪಾನ ಕಣ್ಣೀರು ಕಡ ತಂದು ಸುರಿದು ನೋಡಬೇಕು



ಬೋರ‍್ಯಾಡುತ್ತದೆ ಆಡು
ಕಟ್ಟುವ ಹಗ್ಗವೇ ಸಾಕುತಂದೆಯ ಗೋಣು ಮುರಿದದ್ದಕ್ಕೆ
ಕಣ್ಣಕೊಳ ಬತ್ತಿ ಹೋದ ಊರಲ್ಲಿ
ಎಲ್ಲಿಂದ ಬರಬೇಕು ತಾಕತ್ತು ಬರಗಾಲವೆಂಬ ಬೆಂಕಿಪದಕ್ಕೆ
ಸಾವನ್ನೇ ಸಾಯಿಸುವ ಮಂದಿ ಯಾವಾಗ ಸಾಯುವರೆಂದು
ಕಣಿ ಕೇಳುತ್ತಿದ್ದಾರೆ ಸುಮಾರು ಮಂದಿ
ಬರದಲ್ಲಿ ಉರಿದು ನೆರೆಯಲ್ಲಿ ತೇಲಿ ಮತ್ತೂ ಬದುಕಿದ್ದಕ್ಕೆ
ಸಾಕ್ಷಿ ತೋರುತ್ತದೆ ಭಂಡ ಬದುಕು
ಹಸಿವಿಲ್ಲದ ಉದರ ಖರೀದಿಯಾಗಿದೆ
ಕೆಂಪುಹಸಿರು ನೋಟಿಗೆ ನಿರಾಸೆಯ ಮಾತಲ್ಲಿ
ಬಡಪಾಯಿ ಕಣ್ಣೀರು ತುಂಬಾ ಸೋವಿ
ಹಂಚಿಕೊಳ್ಳಬೇಕು ನಮಗೆ ನಾವೇ
ಊರುಳುವವರಿಗೆ ತೆವಳುವವರಿಗೆ

ಮೊದಲು ನಮ್ಮ ನಮ್ಮ ಮಕ್ಕಳಿಗೆ
ಹುಟ್ಟಿ ಬಂದ ಹೊಟ್ಟೆಬಗೆಯುವ ಹಜಾರು ಮಂದಿ
ಕದವಿಲ್ಲದೂರ ಕನ್ನಾ ಹೊಡೆಯುವುದೀಗ ಮಾಮೂಲು
ಉಪ್ಪು ತಿಂದ ಮನೆಯ ಜಂತಿ ಎಣಿಸಿದಷ್ಟೇ ಸಲೀಸು
ಕಾಲಿಗೆ ಚಕ್ರ ಕಟ್ಟಿ ಬಗಲಿಗೆ ರೆಕ್ಕೆ ಬರೆದು
ತಂಗಾಳಿಯ ಒಳಕೋಣೆಯಲ್ಲಿ ಕಟ್ಟಿಹಾಕಿ
ಅಷ್ಟೆತ್ತರಲಿ ನೋಡುತಿರುವ ಹದ್ದುಗಣ್ಣಿನಲಿ
ಬಾಯಿ ತೆರೆದು ಬಿದ್ದಿರುವ ಹೆಣದ ಹಸಿಮಾಂಸವ
ಬೆಂದು ಬಸವಳಿದು ಕಂಗಾಲಾಗಿದ್ದಾಳೆ ಚೈತ್ರ
ನವಿಲು ನಲಿವ ನೆಲವ ತೊರೆದು
ಇಲ್ಲೆ ಎಲ್ಲೊ ಹಾಳಾಗಿ ಹೋಗಿದ್ದಾನೆ ವಸಂತ

೨

**ಅ**ಳುಮುಂಜಿ ಮುಂಜಾನೆ
ಹಾಡ್ಯಾಡಿ ಅಳುತ್ತದೆ ನಡುಮಧ್ಯಾಣ
ಸಂಜೆಗೆ ಭರಪೂರ ಉಮ್ಮಳದ ಬಿಕ್ಕು
ಕ್ಷಣ ಹುಟ್ಟಿದ ಕ್ಷಣದಿಂದಲೂ ಕಗ್ಗತ್ತಲಿಗೆ ಬೆಳಕಿನದೇ ಧ್ಯಾನ
ಕಾಲನ ಕಾಲಿಗೆ ಹಸಿಗಾಯ
ಒಸರುತ್ತದೆ ಬಿಸಿರಕ್ತ ಎಷ್ಟು ಹೇಳಿದರೂ ಕೇಳದೆ



ಸುಪ್ಪತ್ತಿಗೆಯಲಿ ಬೇಕಾಬಿಟ್ಟಿ ತೊಡೆಸಂದಿ ಸುಖ ಮುಳ್ಳುಹಾಸಿದವ
ಊರ ಸುತ್ತಿ ಬಂದ ಹಸಿದ ಶರೀಫನ ಅಡ್ನಾಡಿ ಜೋಳಿಗೆ ಖಾಲಿ
ಯಾರ ಹಿಕ್ಮತ್ತೋ ತಿಳಿಯದು
ಚೂಪುಗಲ್ಲಿನ ಕಾಲುದಾರಿಯ ಅಪರಂಪರಾಗತ ಅವಘಡಕ್ಕೆ ಸಿಕ್ಕ
ಕಪ್ಪು ಗುಡಾರದಲಿ ಸತ್ತಂತೆ ಬಿದ್ದ ಬಿಳಿ ಹೆಬ್ಬಾವಿನ ಬೆನ್ನ ಮೇಲೆ
ಕಂಬನಿಯ ಬೊಂಬೆ ಮುರಿದು ಬೀಳುತಿವೆ
ಹುಟ್ಟಿಬಂದೇ ಇಲ್ಲವೆಂಬಂತೆ
ಗಂಜಿ ಮಾಡಲು ಗೀರಿದ ಕಡ್ಡಿ ಜೋಪಡಿಯ ಸುಡುತ್ತದೆ
ಯಾರಿಗೋ ಸಿಗರೇಟಿನ ಮದ ಅಲ್ಲ ಅಲ್ಲ ಮುದ
ಉದಯ ರವಿಯ ಉರಿಪಾದದ ಕೆಳಗೆ
ಬಕಬರಲೆ ಬಿದ್ದಿದ್ದಾನೆ ವಸಂತ ಎತ್ತುವವರಿಲ್ಲದೆ



೩

**ಕೋ**ವಿಯೊಂದಿಗೆ ಕೊಳಲ ಮದುವೆ
ಅಘೋಷಿತ ನಿಯಮ
ಜೀವಪೊರೆವ ತಾಣವೀಗ ಕೊಲುದಾಣ
ಕಣ್ಣೀರು ಅಳುತ್ತಿದೆ ಕಣ್ಣಿನ ಕಷ್ಟಕ್ಕೆ
ಹೂ ಮುನಿಸಿಕೊಂಡಿದೆ ನೋಡದೆ ಹೋದದ್ದಕ್ಕೆ
ಚೈತ್ರಳದು ಹೂ ಮುನಿಸು ವಸಂತನದು ಕಣ್ಣಿನ ಕಷ್ಟ

. ಹಳ್ಳಿಯಲ್ಲೀಗ ಮತ್ತದೆ ರುದ್ರಭೂಮಿಯ ವಾಸನೆ
ಬರಸ್ತಾನದ ಕಳೆ ಬಣವಿಗೆ ಬೆಂಕಿ ಕುರಿಗೆ ವಿಷ
ನುಗೂಸಿಗೆ ಕೇರು ಜೀತದಾಳಿನ ಕಾಲಿಗೆ ಸರಪಳಿ
ಭೂಯೆಲ್ಲಾ ಹುಣ್ಣು ಮಾಡಿಕೊಂಡ ಹಳ್ಳಿ
ಳ್ಳದಗುಂಟ ಕಣ್ಣೀರು ಹರಿಸುತ್ತಿದೆ
ಅತಾಳದ ಜೊತೆ ಪೈಪೋಟಿಗಿಳಿದಿದೆ ಕ್ರೂರತೆಯ ಆಳ
ಜುವಾತು ಮಾಡಲಾಗದು ಏನನ್ನೂ
ಯಾರು ಹೆತ್ತರೇನು ಹುಟ್ಟಬಂದಿಲ್ಲವೆ ನಿಮ್ಮ ಹಾಗೆ
ಾದರದ ಮಾತೇಕೆ
ಾದಿದ್ದೇ ಹಾದಿದ್ದು ಕೊಂಡದ ಮೇಲೆ
ಂಗಿ ಬಿಡಬೇಕೆನ್ನುವ ಕೆಂಡಕೆ ರೇಸಿಗೆ ಹುಟ್ಟುವ ಹಾಗೆ
ಕೊಲ್ಲುವ ಕೈ ಸೋಲುವಂತೆ ಜೀವಸಮಾಧಿ
ಲೆಮಾರು ಹೂತುಹೋಗಿದೆ
ಯಾರಯಾರದೋ ಕಾಲ್ತುಳಿತದ ಮೋಜಿಗೆ
ಲದ ಪಾಲಾಗಿದೆ ನಮ್ಮ ತುತ್ತು
ಹಸಿವಿಗೆ ಅನ್ನವೊಂದೆ ಸಾಲದು
ುತ್ತಲೂ ಹೆಡೆಯೆತ್ತಿದ ನಾಗರಗಳಡಿ ನಿತ್ಯ ಪವಡಿಸಬೇಕು
ಾವಿಗೆಲ್ಲಿಯ ಅರ್ಥ ಖಾತರಿಯಾಗಿದೆ ಯಾವಾಗಲೊ
ಮೊನ್ನೆ ಹೇಮಂತ ನಿನ್ನೆ ಶಿಶಿರ
ಇನ್ನೂ ಉಸಿರು ಹಿಡಿದಿದ್ದಾನೆ ವಸಂತ




೪

**ಬ**ಯಲು ರಂಗಮಂದಿರದ ನಿಜ ನಾಟಕದಲಿ
ಕಣ್ಣತ್ತೇವ ತೋರುವುದು ಮಹಾಪರಾಧ
ಈ ಹಾಳು ಮಣ್ಣಿನಲಿ
ಶತಶತಮಾನದಿಂದಲೂ ನಗು ಬೆಳೆಯುತಿಲ್ಲ
ಹೊಸಹೊಸ ರಾಸಾಯನಿಕ ಕೆಲಸ ಮಾಡುತಿಲ್ಲ
ಜಾಗತಿಕ ವಹಿವಾಟಿನಲಿ
ಮನುಷ್ಯ ಇತಿಹಾಸದ ಸತ್ಯ ಬಿಕರಿಗಿಟ್ಟರೆ
ಪೈಸೆಗೊಂದೆಂದರೂ ಮೂಸಿ ನೋಡುವವರಿಲ್ಲ
ದಿಢೀರ್ ಸಿರಿವಂತಿಕೆ ತರಿಸುವ ಸೌಮ್ಯ ವಂಚನೆಗಳಿಗೆ
ವಿಪರೀತ ಬೇಡಿಕೆ
ನಾಡಪ್ರಭುವಿನ ಆದೇಶ ಗುಡಿಸಲಿಲ್ಲದ ರಾಜ್ಯಕ್ಕೆ
ದೊಡ್ಡಯಂತ್ರದ ಚೂಪು ಹಲ್ಲಿಗೆ ಬಿಡುವಿಲ್ಲದ ಕೆಲಸ
ಹಳ್ಳಕ್ಕೆ ಬಿದ್ದ ತೋಳದೆಡೆ ತೂರಿ ಬರುವ
ಕಲ್ಲುಗಳಿಗೆ ಕರುಣೆಯೆಲ್ಲಿ
ಯಾರ ಮರಜಿಗೂ ಕಾಯುವ ಕಾಲವಿದಲ್ಲ
ರಣಾಂಗಣದಲಿ ನಿಂತಾಗಿದೆ
ಹೂಡಿ ಹೊಡೆಯುವುದೊಂದೆ ಬಾಕಿ
ಏನು ಮಾಡುವುದು ಎದುರಲ್ಲಿಯೂ ನಾವೇ
ನಿಂತಿರುವಾಗ
ಮಣ್ಣು ಸೇರಿದ ಪ್ರತಿ ಹೆಣದ ಹಣೆಯ ಮೇಲೆ
ಯಾರ ಹೆಸರೂ ಬರೆಯುವಂತಿಲ್ಲ
ಖಾಲಿ ಬೀದಿಯಲಿ ವಸಂತನ ಭಿಕ್ಷಾಪದದ ರಾಗ
ಹೊಗಳುವವರೇ ಹೆಚ್ಚು
ಉದುರಿ ಬಿದ್ದಿವೆ ರೆಕ್ಕೆ ಹಾರಬೇಕು
ಸುಟ್ಟು ಹೋಗಿದೆ ನಾಲಿಗೆ ಹಾಡಬೇಕು
ಕಾಲನ ಜೀತಕ್ಕಿಟ್ಟುಕೊಂಡು
ಕಣ್ಣಲಿ ಖಾರ ತುಂಬಿದ ಮಾಲಿಕನ ಎದೆಹೊಲದಲ್ಲಿ
ಕೆಂಗುಲಾಬಿ ಅರಳಿಸಬೇಕು
ಮುಗಿಲ ಅಳು ಒಂದೇ ಸಮನೆ ಆದಿಯಿಂದಲೂ
ಮಲಿನಗೊಂಡ ಮನುಷ್ಯಲೋಕ ಶುದ್ಧೀಕರಿಸಿದ ದಿನ
ಯಾವಾಗ ಬರುವುದೋ
ಊರ ಕೆರೆಯ ತುಂಬ ಕೇರಿಯ ಕಣ್ಣೀರು
ಪರಂಪರೆಯ ಬತ್ತಳಿಕೆ ಖಾಲಿಯಾಗಿರಬಹುದೆ
ಈಗ ವಸಂತನ ಕೈಯಲಿ ಹೊಸ ಹಾಡಿನ ಹತಿಯಾರ



೫

**ಮೊ**ದಲ ಬಾರಿಗೆ ಲೋಕದ ಅದಾಲತ್ತಿನಲ್ಲಿ ನ್ಯಾಯ ಕೇಳಬೇಕು
ಸಕಲ ದೇವರ ವಿಕಾರಗಳ ಒತ್ತೊತ್ತಿ ಹೇಳಿ
ಹರತಾಳ ಹೂಡಬೇಕು
ಸಾಧ್ಯವಾದರೆ
ನಮಗೆ ಸಿಗದಿರುವ ರೊಟ್ಟಿಯಲಿ
ಕೋಟ್ಯಾನುಕೋಟಿ ದೇವತೆಗಳಿಗೆ ಪಾಲು ನೀಡಬೇಕು
ಅನಾಮಿಕರ ತೀರ್ಪು
ಯಾವಾಗಲೂ ಉಳ್ಳವರ ಪರವೆಂದು ಗೊತ್ತಿದ್ದೂ
ಹರಕತ್ತು ಮಾಡಬೇಕು
ಬಿಕ್ಕುವ ಗುಬ್ಬಚ್ಚಿಗಳ ಒಡಲಲಿ ಬಚ್ಚಿಟ್ಟುಕೊಂಡು
ರೋದನ ಕೇಳಿಸದಂತೆ ತುಟಿಕಚ್ಚಿ ನುಂಗಬೇಕು
ತರಹೇವಾರಿ ತರ್ಕಕ್ಕೆ ತಕ್ಕ ಉತ್ತರ ನೀಡಿ ತೆಪ್ಪಗೆ ಮಾಡಬೇಕು
ಎಳೆಯ ಹೂಗಳ ಅಳು ದನಿ ಕೇಳಲು ಕಿವಿಗಳಿಲ್ಲವಾದರೇನು
ವಸಂತನನ್ನೊಮ್ಮೆ ಮತ್ತೆ ಹಡೆದು ನೋಡಬೇಕು
ಸಾಕಪ್ಪಾ ಸಾಕು ಭಂಡ ಬದುಕು ಇನ್ನಾದರೂ ಮರೆಯಬೇಕು
ಆದಿಯ ಅಳುದನಿಗೆ ಕೊನೆಯ ವಿದಾಯ ಹೇಳಬೇಕು.


ವೀರಣ್ಣ ಮಡಿವಾಳರ
ಶಿಕ್ಷಕರು, ಕನ್ನಡ ಸರಕಾರಿ ಹಿರಿಯ ಪ್ರಾಥಮಿಕ ಶಾಲೆ
ಗಾವಡ್ಯಾನವಾಡಿ, ಅಂಚೆ : ಕೇರೂರ
ಚಿಕ್ಕೋಡಿ ತಾಲ್ಲೂಕು, ಬೆಳಗಾವಿ ಜಿಲ್ಲೆ

## ಸೀಯಾರ್ಕ್ಡ್



## ಭರವಸೆಗಳಲ್ಲೇ ಮುಗಿದ ಕಾನ್ಕುನ್ ಸಮಾವೇಶ

ಆಧುನಿಕ ಜಗತ್ತಿನಲ್ಲಿ ಮಾನವಕುಲ ಎದುರಿಸುತ್ತಿರುವ ಸಮಸ್ಯೆಗಳ ಪೈಕಿ ಪರಿಸರ ಂರಕ್ಷಣೆ ಬಹುಮುಖ್ಯವಾದುದು. ಮುಂದಿನ ಪೀಳಿಗೆಗಳು ಆರೋಗ್ಯದಿಂದ ೀವಿಸಲು, ಪರಿಸರ ಮಾಲಿನ್ಯವನ್ನು ತಡೆಗಟ್ಟುವುದಕ್ಕೆ ಅಗತ್ಯವಾದ ಕ್ರಮಗಳನ್ನು ಗಲೇ ಕೈಗೊಳ್ಳದಿದ್ದರೆ ಅನಾಹುತ ಕಟ್ಟಿಟ್ಟ ಬುತ್ತಿ. ವಿಜ್ಞಾನಿಗಳು ಭೂಮಂಡಲದ ಾಪ ನಿಧಾನವಾಗಿ ಏರುತ್ತಿರುವುದರ ಬಗ್ಗೆ, ಇದರಿಂದಾಗಬಹುದಾದ ಜಲಪ್ರಳಯ ುಂತಾದ ಅನಾಹುತಗಳ ಕುರಿತು ಎಚ್ಚರಿಸಿದ್ದಾರೆ. ಪರಿಸರ ಂರಕ್ಷಣೆಗಾಗಿ ಪ್ರಪಂಚದಾದ್ಯಂತ ದೊಡ್ಡ ಚಳವಳಿಯೇ ಡೆಯುತ್ತಿದೆ. ಇದು ಭೂಮಂಡಲದ ಎಲ್ಲ ದೇಶಗಳಿಗೂ ನ್ವಯಿಸುವ ಪ್ರಶ್ನೆಯಾಗಿರುವುದರಿಂದ ವಿಶ್ವಸಂಸ್ಥೆ ಗಂಭೀರವಾಗಿ ಸಮಸ್ಯೆ ಕೈಗೆತ್ತಿಕೊಂಡಿದೆ. ಹತ್ತಾರು ವರ್ಷಗಳಿಂದ ಅದು ದಕ್ಕಾಗಿ ಬೇರೆ ಬೇರೆ ವೇದಿಕೆಗಳನ್ನು ನಿರ್ಮಿಸಿದೆ, ಸದಸ್ಯ ಾಷ್ಟ್ರಗಳ ಶೃಂಗಸಭೆಗಳನ್ನು ನಡೆಸಿದೆ. ಈ ಎಲ್ಲ ಸಭೆ, ಮಾವೇಶಗಳೂ ಸದಾಶಯಗಳನ್ನು ವ್ಯಕ್ತಗೊಳಿಸಿವೆಯೇ ೊರತು ನಿರ್ದಿಷ್ಟವಾದ ಕ್ಷೇಮಕ್ರಮಗಳನ್ನು ಕೈಗೊಂಡಿರುವುದು ಡಿಮೆ. ಭೂಖಂಡದ ಉತ್ತರ, ದಕ್ಷಿಣಗಳು, ಎಂದರೆ ಭಿವೃದ್ಧಿಹೊಂದಿರುವ ದೇಶಗಳು ಮತ್ತು ಅಭಿವೃದ್ಧಿಶೀಲ ದೇಶಗಳ ಮಧ್ಯೆ ರ್ವಸಮ್ಮತ ಒಪ್ಪಂದಕ್ಕೆ ಬರಲು ಸಾಧ್ಯವಾಗಿಲ್ಲ. ಇದಕ್ಕೆ ಮುಖ್ಯವಾದ ಕಾರಣ ಭಿವೃದ್ಧಿ ಹೊಂದಿರುವ ದೇಶಗಳು ತಳೆದಿರುವ ಮೊಂಡುತನದ ಧೋರಣೆ. ದುವರೆಗೆ ನಡೆದಿರುವ ಸಂಧಾನಗಳೆಲ್ಲವೂ 'ನೀ ಕೊಡೆ, ನಾ ಬಿಡೆ' ಎನ್ನುವಂತೆ ಗ್ಗಂಟಾಗಿದೆ. ಕರಾರುವಾಕ್ಕಾದ ಕಾರ್ಯಸೂಚಿ ಇಲ್ಲದೆ ಭರವಸೆಗಳ ುಹಾಪೂರವಾಗಿಯೇ ಪರಿಣಮಿಸಿದೆ.

ಈಚೆಗೆ ಅಮೆರಿಕದ ದಕ್ಷಿಣಕ್ಕಿರುವ ಮೆಕ್ಸಿಕೊ ದೇಶದ ಕಾನ್ಕುನ್ ನಗರದಲ್ಲಿ ಶ್ವಸಂಸ್ಥೆಯ ಆಶ್ರಯದಲ್ಲಿ ಸಮಾವೇಶವೊಂದು ಜರುಗಿತು. ಇದು ವಿಶ್ವಸಂಸ್ಥೆಯ ೌಕಟ್ಟಿನೊಳಗೆ ಪರಿಸರ ಕುರಿತು ನಡೆದ ಹದಿನಾರನೆಯ ಸಮಾವೇಶ. ಒಂದು ರ್ಷದ ಹಿಂದೆ ಡೆನ್ಮಾರ್ಕ್‌ನ ರಾಜಧಾನಿ ಕೋಪನ್‌ಹೇಗನ್‌ನಲ್ಲಿ ಇಂಥದೇ ಶೃಂಗ ಮಾವೇಶ ನಡೆದಿತ್ತು. ಇದರಲ್ಲಿ ಅಭಿವೃದ್ಧಿಹೊಂದಿದ ದೇಶಗಳದ್ದೇ ಮೇಲುಗೈ ಗಿದ್ದು ಅಭಿವೃದ್ಧಿಶೀಲ ದೇಶಗಳ ಮೇಲೆ ಬಲವಂತವಾಗಿ ಕೆಲವು ಒಪ್ಪಂದಗಳನ್ನು ೇರಲು ಪ್ರಯತ್ನಿಸಿದುವು. ಯಾವುದೇ ಬಗೆಯ ಸರ್ವಸಮ್ಮತವಾದ ತೀರ್ಮಾನಗಳಿಗೆ ರಲು ಅದು ವಿಫಲಗೊಂಡಿತು. ಇದಕ್ಕೂ ಮುನ್ನ ಜಪಾನಿನ ಕ್ಯೋಟೋ ನಗರದಲ್ಲಿ ುರುಗಿದ ಸಮಾವೇಶದಲ್ಲಿ ಕೆಲವು ಒಪ್ಪಂದಗಳಿಗೆ ಬರಲಾಗಿತ್ತು. ಇವು ಪರಿಸರ ಮಾಲಿನ್ಯವನ್ನು ತಗ್ಗಿಸಲು, ಮುಖ್ಯವಾಗಿ ವಾತಾವರಣದಲ್ಲಿ ಕಾರ್ಬನ್ ಡೈ ಆಕ್ಸೈಡ್‌ನ ಪ್ರಮಾಣವನ್ನು ತಗ್ಗಿಸಲು ಕೆಲವು ಕ್ರಮಗಳನ್ನು ಕೈಗೊಳ್ಳಲು ಭಾಗವಹಿಸಿದ್ದ ದೇಶಗಳು ಸಮ್ಮತಿಸಿದ್ದುವು. ಕ್ಯೋಟೋ ಒಪ್ಪಂದ ಎಂದೇ ಹೆಸರಾಗಿರುವ ಇದರಲ್ಲಿ ಮುಖ್ಯವಾಗಿರುವುದು ಒಪ್ಪಿಗೆಯಾಗಿರುವ ಕರಾರುಗಳನ್ನು ಕಾರ್ಯರೂಪಕ್ಕೆ ತರಲು ಒಂದು ವ್ಯವಸ್ಥೆ ಹಾಗೂ ನಿಧಿಯನ್ನು ಸ್ಥಾಪಿಸುವುದು. ಈ ಒಪ್ಪಂದ ೨೦೧೨ರಲ್ಲಿ ಮುಗಿಯುತ್ತದೆ. ಆದರೆ ಈ ವಿಷಯದಲ್ಲಿ ಆಗಿರುವ ಪ್ರಗತಿ ಮಾತ್ರ ಅತ್ಯಲ್ಪ. ೨೦೨೦ರ ವೇಳೆಗೆ ಪರಿಸರಮಾಲಿನ್ಯ ತಡೆಗೆ ನೆರವಾಗಲು ೧೦೦ ಬಿಲಿಯ ಡಾಲರುಗಳ ನಿಧಿಸ್ಥಾಪನೆಗೆ ಅಂಗೀಕಾರವಾಗಿತ್ತು. ೨೦೧೨ರಲ್ಲಿ ೩೦ ಬಿಲಿಯ ಡಾಲರುಗಳು ಸಂಗ್ರಹವಾಗಬೇಕು. ಅಭಿವೃದ್ಧಿಹೊಂದಿದ ದೇಶಗಳು ಆರ್ಥಿಕ ಬಿಕ್ಕಟ್ಟಿನಿಂದಾಗಿ ಕೈಚೆಲ್ಲಿ ಕುಳಿತಿವೆ. ಅಮೆರಿಕ ಈಗ ೧.೭ ಬಿಲಿಯ ಡಾಲರುಗಳನ್ನು ನೀಡುವ ವಾಗ್ದಾನ ಮಾಡಿದೆ. ವಾಸ್ತವ ಸ್ಥಿತಿ ಇರುವುದು ಹೀಗೆ.

ಕಾನ್ಕುನ್ ಸಮಾವೇಶದ ಬಗ್ಗೆ ಈಗ ಸಾಕಷ್ಟು ಚರ್ಚೆಯಾಗುತ್ತಿದೆ. ಮಾತುಕತೆಗಳು ಮುರಿದುಬೀಳದೆ ಇನ್ನೂ ಜೀವಂತವಾಗಿವೆ ಎನ್ನುವುದೇ ಸಮಾಧಾನದ ಸಂಗತಿ. ಅಭಿವೃದ್ಧಿ ಹೊಂದಿರುವ ದೇಶಗಳು, ಮುಖ್ಯವಾಗಿ ಯೂರೋಪಿಯನ್ ಯೂನಿಯನ್ನಿಗೆ ಸೇರಿದ ದೇಶಗಳು, ಅಮೆರಿಕ ಮತ್ತು ಜಪಾನ್ ದೇಶಗಳು ಯಾವುದೇ ಬಗೆಯ ದಿಟ್ಟ ನಿಗದಿತ ಕ್ರಮಗಳನ್ನು ಅನುಷ್ಠಾನಗೊಳಿಸಲು ಒಪ್ಪಿಗೆ ನೀಡಲಿಲ್ಲ, ಬದಲಾಗಿ ಆಶ್ವಾಸನೆಗಳನ್ನು ನೀಡಿದವು ಅಷ್ಟೆ. ಈ ಸಮಾವೇಶದಲ್ಲಿ ಭಾರತ, ಚೀಣಾ, ದಕ್ಷಿಣ ಆಫ್ರಿಕಾ ಮತ್ತು ಬ್ರೆಜಿಲ್‌ಗಳು ಪ್ರಮುಖ ಪಾತ್ರ ವಹಿಸಿದ್ದು ಸಂಧಾನಗಳನ್ನು ನಡೆಸಿದವು. ಯಾವುದೇ ಪ್ರಮಾಣಗಳನ್ನು ನಿಗದಿಪಡಿಸದೆ ಸ್ವಯಂಪ್ರೇರಣೆಯಿಂದ ವಾತಾವರಣದಲ್ಲಿ ಕಾರ್ಬನ್ ಡೈ ಆಕ್ಸೈಡ್ ಪ್ರಮಾಣವನ್ನು ತಗ್ಗಿಸಲು ಕ್ರಮಕೈಗೊಳ್ಳಬೇಕೆಂದು ಸಮ್ಮತಿಸಲಾಯಿತು. ಹಾಗೆಯೇ ಕ್ಯೋಟೋ ಸಮಾವೇಶದಲ್ಲಿ ಕೈಗೊಂಡಂಥ ತೀರ್ಮಾನಗಳನ್ನು ೨೦೧೨ರ ಆಚೆಗೂ ವಿಸ್ತರಿಸುವ ಇಂಗಿತವನ್ನು ವ್ಯಕ್ತಗೊಳಿಸಿತು. ಮುಂದಿನ ವರ್ಷ ದಕ್ಷಿಣ ಆಫ್ರಿಕಾದ ಡರ್ಬಾನ್‌ನಲ್ಲಿ ನಡೆಯುವ ಸಮಾವೇಶದಲ್ಲಿ ಈ ಬಗ್ಗೆ ಅಂತಿಮ ತೀರ್ಮಾನವನ್ನು ಕೈಗೊಳ್ಳಬೇಕಾಗಿದೆ.

ಒಟ್ಟಿನಲ್ಲಿ ಕಾನ್ಕುನ್‌ನಲ್ಲಿ ಪರಿಸರ ಕುರಿತು ನಡೆದ ಸಮಾವೇಶ ದೃಢವಾದ ನಿರ್ಧಾರಗಳನ್ನು ಕೈಗೊಳ್ಳದೆ ಸಮಸ್ಯೆಯನ್ನು ಹಾಗೇ ಮುಂದುವರಿಯಲು ಬಿಟ್ಟಿದೆ. ಅನಿಶ್ಚಿತತೆ ಹಾಗೆಯೇ ಮುಂದುವರಿಯಲಿದೆ. ಅಭಿವೃದ್ಧಿಶೀಲ ರಾಷ್ಟ್ರಗಳು ಒಂದು ಹೆಜ್ಜೆ ಮುಂದೆ ಹೋಗಿ ವಾತಾವರಣದಲ್ಲಿ ಕಾರ್ಬನ್ ಪ್ರಮಾಣವನ್ನು ತಗ್ಗಿಸಲು ಕ್ರಮಗಳನ್ನು ಪರಿಶೀಲಿಸಲು ಸಮ್ಮತಿಸಿವೆ. ವಾತಾವರಣವನ್ನು ಕಲುಷಿತಗೊಳಿಸುವುದರಲ್ಲಿ ಅಗ್ರಸ್ಥಾನದಲ್ಲಿರುವ ಶ್ರೀಮಂತ ರಾಷ್ಟ್ರಗಳೂ ಎಲ್ಲಿಯವರೆಗೆ ಮುಂದೆ ಬಂದು ಖಚಿತವಾದ ಕ್ರಮಗಳನ್ನು ಕೈಗೊಳ್ಳುವುದಿಲ್ಲವೋ ಅಲ್ಲಿಯವರೆಗೆ ಸಮಸ್ಯೆ ಹಾಗೆಯೇ ಉಳಿದಿರುತ್ತದೆ. ಅಗತ್ಯವಾದ ತಂತ್ರಜ್ಞಾನ ಮತ್ತು ಸಂಪನ್ಮೂಲಗಳನ್ನು ಅಭಿವೃದ್ಧಿಶೀಲ ದೇಶಗಳಿಗೆ ವರ್ಗಾಯಿಸಲು ಅಭಿವೃದ್ಧಿ ಹೊಂದಿದ ದೇಶಗಳು ಮುಂದೆ ಬರುವವರೆಗೆ ಪ್ರಶ್ನೆ ಬಗೆಹರಿಯದು.

## ಚೀಣಾದ ಒತ್ತಡ ಹೇರುವ ತಂತ್ರ ಸಲ್ಲ

ಒಂದಲ್ಲ ಒಂದು ಕಾರಣದಿಂದ ಪ್ರತಿಷ್ಠಿತ ನೊಬೆಲ್ ಪುರಸ್ಕಾರ ವಿವಾದಗಳ ಸುಳಿಯಲ್ಲಿರುತ್ತದೆ. ಇದು ಎಲ್ಲ ಬಗೆಯ ಪ್ರಶಸ್ತಿಗಳಿಗೂ ಅನ್ವಯವಾಗುತ್ತದೆ ಎಂದು ಹೇಳುವುದು ರೂಢಿಯ ಮಾತಾಗುತ್ತದೆ. ಆದರೆ ನೊಬೆಲ್ ಪುರಸ್ಕಾರಗಳನ್ನು ಕುರಿತಂತೆ ಹೆಚ್ಚಿನ ವಿವಾದಗಳಿಲ್ಲ ಎನ್ನಬೇಕು. ಸಿಗಬೇಕಾಗಿದ್ದ ಕೆಲವರಿಗೆ ಸಿಗದೆ ಹೋಯಿತು ಎನ್ನುವ ಆಕ್ಷೇಪ ಬಿಟ್ಟರೆ ಉಳಿದಂತೆ ವಿಜ್ಞಾನ ಕ್ಷೇತ್ರದಲ್ಲಿ ಸಾಧಕರಿಗೆ ಪ್ರಶಸ್ತಿ ಲಭಿಸಿದೆ ಎನ್ನಬಹುದು. ಒಂದು ಶತಮಾನಕ್ಕೂ ಹೆಚ್ಚು ವರ್ಷಗಳಿಂದ ನೀಡುತ್ತ ಬಂದಿರುವ ಈ ನೊಬೆಲ್ ಪುರಸ್ಕಾರಗಳಿಗೆ ಪ್ರಪಂಚದಲ್ಲಿ ತನ್ನದೇ ಆದ ಪ್ರತಿಷ್ಠೆ ಇದೆ, ಮನ್ನಣೆ ಇದೆ. ಆದರೆ ಸಾಹಿತ್ಯ ಮತ್ತು ಶಾಂತಿಯ ಕ್ಷೇತ್ರಗಳಲ್ಲಿ ನೀಡುತ್ತ ಬಂದಿರುವ ಪ್ರಶಸ್ತಿಗಳು ಅನೇಕ ಬಾರಿ ವಿವಾದಗಳನ್ನು ಸೃಷ್ಟಿಸಿವೆ. ರಷ್ಯಾದಲ್ಲಿ ಕ್ರಾಂತಿಯಾಗಿ ಸೋವಿಯೆತ್ ಒಕ್ಕೂಟ ಅಸ್ತಿತ್ವಕ್ಕೆ ಬಂದಮೇಲೆ, ಶೀತಯುದ್ಧ ಪ್ರಾರಂಭವಾದ ಮೇಲೆ ಈ ವಿವಾದ ಹೆಚ್ಚಿದ್ದು, ಗಮನಿಸಬೇಕಾದ ಸಂಗತಿ. ಆದರೆ ಈಗಲೂ, ಅಂದರೆ ಶೀತಯುದ್ಧ ಅಂತ್ಯಗೊಂಡಮೇಲೂ ಇದೇ ಬಗೆಯ ವಿವಾದಗಳು ಉದ್ಭವಿಸುತ್ತಿವೆ.






ಸಾಹಿತ್ಯ ಮತ್ತು ಶಾಂತಿ ಕ್ಷೇತ್ರಗಳಲ್ಲಿ ನೀಡುತ್ತಿರುವ ನೊಬೆಲ್ ಪುರಸ್ಕಾರಗಳು ಅನೇಕ ವೇಳೆ ರಾಜಕೀಯದಿಂದ ಪ್ರೇರಿತವಾಗಿರುತ್ತವೆ ಎನ್ನುವ ಆಕ್ಷೇಪಗಳನ್ನು ತಳ್ಳಿಹಾಕಲಾಗದು. ಮಹಾತ್ಮಾ ಗಾಂಧಿಯವರಿಗೆ ನೊಬೆಲ್ ಪುರಸ್ಕಾರವನ್ನು ನೀಡದಿರುವುದರ ಹಿಂದೆ ಇದ್ದ ರಾಜಕೀಯದ ಕೈವಾಡವನ್ನು ಇಲ್ಲಿ ವಿವರಿಸುವುದು ಅನಗತ್ಯ. ಹಾಗೆಯೇ ಈಚಿನ ವರ್ಷಗಳಲ್ಲಿ ಸೋವಿಯೆತ್ ಒಕ್ಕೂಟದ ವಿಘಟನೆಗೆ ರೂವಾರಿಯಾಗಿದ್ದ ಗೊರ್ಬಚೆವ್‌ಗೆ ನೀಡಿದ ನೊಬೆಲ್ ಪುರಸ್ಕಾರ ಯಾವ ಸಾಧನೆಗೆ ? ಇದರ ಹಿಂದೆ ಇದ್ದ ರಾಜಕೀಯ ಎಲ್ಲರಿಗೂ ಗೊತ್ತಿದೆ. ಹಾಗೆಯೇ ಹೆ ಕಿಸಿಂಜರ್ ಮತ್ತು ಇಸ್ರೇಲಿನ ಪ್ರಧಾನಿ ಯಿಜಾಕ್ ರ್‍ಯಾಬಿನ್‌ಗೆ ನೀಡಿದ ಶಾಂತಿ ಪುರಸ್ಕಾರ ಎಷ್ಟು ಸಮರ್ಥನೀಯ ? ಕಳೆದ ವರ್ಷ ಅಮೆರಿಕದ ಅಧ್ಯಕ್ಷ ಬರಾಕ್ ಒಬಾಮಾಗೆ ಶಾಂತಿ ಪುರಸ್ಕಾರ ನೀಡಿದ್ದು ಸರಿಯೆ ? ಈ ಪ್ರಶ್ನೆಗಳೂ ಪ್ರಶ್ನೆಗಳಾಗಿಯೇ ಉಳಿದಿವೆ.

ಈ ವರ್ಷ ಚೀಣಾದ ಭಿನ್ನಮತೀಯ ರಾಜಕಾರಣಿ ಲಿಯು ಕ್ಸಿಯಾಬೋಗೆ ನೀಡಿದ ನೊಬೆಲ್ ಶಾಂತಿ ಪಾರಿತೋಷಕ ರಾಜಕೀಯ ಪ್ರೇರಿತ ಎನ್ನುವುದರಲ್ಲಿ ಸಂದೇಹವಿಲ್ಲ. ಈತ ಚೀಣಾದಲ್ಲಿ ವಿದ್ರೋಹದ ಆಪಾದನೆಯಲ್ಲಿ ಶಿಕ್ಷೆಗೀಡಾಗಿ ಕಾರಾಗೃಹದಲ್ಲಿದ್ದಾನೆ. ಇದು ಚೀಣಾದ ಆಂತರಿಕ ವಿಷಯ. ಈತ ಭಿನ್ನಮತೀಯ ಎನ್ನುವುದನ್ನು ಬಿಟ್ಟರೆ ಬೇರಾವ ಅರ್ಹತೆಯೂ ಇರುವಂತೆ ಕಾಣುವುದಿಲ್ಲ. ಚೀಣಾಕ್ಕೆ ಇರಿಸುಮುರಿಸು ಉಂಟುಮಾಡುವುದಷ್ಟೇ ನೊಬೆಲ್ ಪ್ರಶಸ್ತಿಗೆ ಸಮರ್ಥನೆಯಾದೀತೆ ? ಚೀಣಾದ ಸರಕಾರ ನೊಬೆಲ್ ಶಾಂತಿ ಪುರಸ್ಕಾರ ಸಮಿತಿಯ ನಿರ್ಧಾರಕ್ಕೆ ತನ್ನ ಆಕ್ರೋಶವನ್ನು ವ್ಯಕ್ತಪಡಿಸಿದೆ. ಲಿಯುಗೆ ಪುರಸ್ಕಾರ ನೀಡಿಕೆಯನ್ನು ರಾಜಕೀಯ ದುರುದ್ದೇಶದಿಂದ ಕೂಡಿದ್ದು ಎಂಬುದಾಗಿ ಖಂಡಿಸಿದೆ. ಇದು ಚೀಣಾ ಸರ್ಕಾರದ ಹಕ್ಕು ಹಾಗೂ ಪ್ರತಿಕ್ರಿಯೆ ಅದಕ್ಕೆ ಸಂಬಂಧಿಸಿದ ವಿಷಯ. ಆದರೆ ಮೊನ್ನೆ ಆಸ್ಲೋ ನಗರದಲ್ಲಿ ಪ್ರಶಸ್ತಿ ಪ್ರದಾನ ಸಮಾರಂಭಕ್ಕೆ ಯಾವ ದೇಶದ ಪ್ರತಿನಿಧಿಯೂ ಹೋಗಬಾರದು ಎಂದು ಚೀಣೀ ಸರಕಾರ ತಾಕೀತು ಮಾಡಿದ್ದು ಅತಿಯಾದ ಪ್ರತಿಕ್ರಿಯೆ ಹಾಗೂ ಆಕ್ಷೇಪಾರ್ಹ. ಚೀಣೀ ಸರಕಾರದ ನಿಲುವು ಯಾವುದೇ ಇರಲಿ, ಅದು ಆ ಸರಕಾರದ ನೀತಿಗೆ ಸಂಬಂಧಿಸಿದ್ದೇ ಹೊರತು ಇತರ ದೇಶಗಳ ಮೇಲೆ ಒತ್ತಡ ತರುವುದು ಸಲ್ಲದು. ಈ ಬಗೆಯ ವರ್ತನೆ ಚೀಣಾ ಸರಕಾರಕ್ಕೆ ಗೌರವ ತರುವುದಾಗಿಲ್ಲ.

ಸೀಯಾರ್ಕೆ
'ಚೌಬೀನ', ೭೮೫, ೬ನೇ ಕ್ರಾಸ್, ಬನಶಂಕರಿ ೩ನೇ ಹಂತ, ೩ನೇ ಬ್ಲಾಕ್
ಕತ್ರಿಗುಪ್ಪೆ, ಬೆಂಗಳೂರು - ೫೬೦ ೦೮೫

# ಪ್ರಜಾಪ್ರಭುತ್ವ, ಸಾಮಾಜಿಕ ನ್ಯಾಯ ಮತ್ತು ಶಾಂತಿ: ಸಾಂಸ್ಕೃತಿಕ ಚಳುವಳಿಗಳಿಗೆ ಒಂದು ಕಾರ್ಯಸೂಚಿ

ಕೆಲವರಿಗೆ ಮಾತ್ರ ಅಭಿವೃದ್ಧಿ ದಕ್ಕುವ ಈ ಪ್ರಜಾಪ್ರಭುತ್ವ ವ್ಯವಸ್ಥೆಯನ್ನು ಏನೆಂದು ಕೊಂಡಾಡುವುದು? ಪ್ರಜಾಪ್ರಭುತ್ವವೆಂಬುದು ಕೇವಲ ಮತದಾನ ಮಾಡುವ ರಾಜಕೀಯದ ಹೊರಪದರವಲ್ಲ, ಸಾಮಾಜಿಕ, ಸಾಂಸ್ಕೃತಿಕ ಮತ್ತು ಆರ್ಥಿಕ ನ್ಯಾಯಗಳೇ ಅದರ ತಿರುಳು. ಇವುಗಳನ್ನು ನಮ್ಮ ಸಂವಿಧಾನ ಒಂದು ನೈತಿಕತೆಯ ಅಡಿಪಾಯದ ಮೇಲೆ ನಿರ್ಮಿಸಿದೆ. ಅಂದರೆ ಸಾರ್ವತ್ರಿಕವಾಗಿ, ಎಲ್ಲರಿಗೂ ಒಂದು ಕನಿಷ್ಠ ಆರ್ಥಿಕ ಜೀವನಮಟ್ಟವನ್ನು ಸಾಧಿಸುವುದನ್ನು ರಾಜ್ಯಾಂಗದ ಕರ್ತವ್ಯವೆಂದು ಹೇಳುತ್ತದೆ. ಆರ್ಥಿಕ ವ್ಯವಸ್ಥೆಯಲ್ಲಿ ಕಾಲಕಾಲಕ್ಕೆ ಆಗುವ ಏರುಪೇರುಗಳಿಂದ ತತ್ತರಿಸುವ ವರ್ಗಕ್ಕೆ, ಅವರು ಸಶಕ್ತರಾಗುವವರೆಗೆ, ಪ್ರಭುತ್ವ ಆಗಾಗ ನೆರವು ನೀಡಿ ರಕ್ಷಿಸಬೇಕು ಎನ್ನುವುದು ಪ್ರಜಾಪ್ರಭುತ್ವದ ತತ್ವದಲ್ಲಿ ಪ್ರಣೀತವೆಂದು ಪ್ರಸಿದ್ಧ ನ್ಯಾಯವಾದಿ ಜೂಲಿಯಸ್ ಸ್ಟೋನ್ ೧೯೪೬ರಲ್ಲೇ ಹೇಳಿದ.

**ಡಾ|| ವಿ. ಕೃಷ್ಣ ಅನಂತ್**

ನಮ್ಮ ಇಂದಿನ ಪರಿಸ್ಥಿತಿ ಬಹಳ ಹದಗೆಟ್ಟಿದೆ ಎಂದು ಯಾರಾದರೂ ಒಪ್ಪುತ್ತಾರೆ. ಇದನ್ನು ತುರ್ತಾಗಿ ಬದಲಾಯಿಸಬೇಕು ಎಂದು ಎಲ್ಲರೂ ಬಯಸುತ್ತೇವೆ. ಅದು ಅಗತ್ಯ ಮಾತ್ರವಲ್ಲ; ಅದು ಅನಿವಾರ್ಯ. ಆ ಪರ್ಯಾಯ ಮಾರ್ಗವೇನು, ಎಂಥದು ಎಂಬ ತಡಕಾಟದಲ್ಲಿ 'ಸಮುದಾಯ'ದಂಥ ಸಾಂಸ್ಕೃತಿಕ ಚಳುವಳಿಗಳಿಗೆ ಮಹತ್ವದ ಪಾತ್ರವಿದೆ ಎಂದು ನನಗೆ ಅನ್ನಿಸುತ್ತದೆ. ಇಂಥ ಸಂದರ್ಭಗಳಲ್ಲೇ, ಬೌದ್ಧಿಕ-ವಿಚಾರಶೀಲ ಚಿಂತನಶೀಲ ವ್ಯಕ್ತಿಗಳಾದವರಿಗೆ ತಟಸ್ಥ ಪ್ರೇಕ್ಷಕರಾಗಿ ಕುಳಿತಿರುವುದು ಸಾಧ್ಯವಾಗುವುದಿಲ್ಲ. ಅದು ಅವರ ಸ್ವಭಾವ. ಇಂಥ ದುರ್ಭರ ಪರಿಸ್ಥಿತಿಗಳೇ ಒಂದು ರೀತಿ ಪರ್ಯಾಯ ಮಾರ್ಗವನ್ನು ಶೋಧಿಸಿ, ಅಳವಡಿಸಲು ಒಂದು ಅವಕಾಶಕ್ಕೂ ತೆರೆದುಕೊಂಡಿರುತ್ತವೆ. ಹೆಗೆಲ್ಲನ ಚಿಂತನೆಯ ಕೇಂದ್ರ ಬಿಂದುವನ್ನು ಹೆಕ್ಕಿ ಹೊರಗೆಡವಿ, ಮುಂದುವರಿದು ಮಾರ್ಕ್ಸ್ ಹೇಳುವುದೂ ಅದನ್ನೆ: ''ಮಾನವ (ಹೀಗೆ) ಅನಿವಾರ್ಯವಾಗಿ, ಸಹಜವೆಂಬಂತೆ ತನ್ನಿಂದ ಪರಿಹರಿಸಲು ಸಾಧ್ಯವಾದ ಸಮಸ್ಯೆಗಳನ್ನು ಮಾತ್ರ ಕೈಗೆತ್ತಿಕೊಳ್ಳುತ್ತಾನೆ. ಅದೇಕೆ ಹಾಗೆ ಎಂದರೆ, ಸೂಕ್ಷ್ಮವಾಗಿ ಪರಿಸ್ಥಿತಿಯನ್ನು ಅವಲೋಕಿಸಿದಾಗ ಉದ್ಭವವಾಗಿರುವ ಸಮಸ್ಯೆಗೆ ಪರಿಹಾರವೂ ಆ ಸಂದರ್ಭದ ಭೌತಿಕ ಬೆಳವಣಿಗೆಯ ಹಾದಿಯಲ್ಲೇ ಈಗಾಗಲೆ ಹುದುಗಿರುವುದು ಕಂಡುಬರುತ್ತದೆ ಅಥವಾ ಅದು ಇಷ್ಟರಲ್ಲೇ ಸ್ಪಷ್ಟವಾಗುವ ಸ್ಥಿತಿಯನ್ನು ತಲಪಿರುತ್ತದೆ.'' ಇದನ್ನೆ ''ಪ್ರತಿಯೊಂದು ಬಿಕ್ಕಟ್ಟೂ, ಒಂದು ಅವಕಾಶ'' ಎನ್ನುವುದು. ಇಂದು ಪರಿವರ್ತನೆಗೆ ಅಗತ್ಯವಾದ ಭೌತಿಕ ಪರಿಸ್ಥಿತಿ ಪಕ್ವವಾಗಿದೆ. ಆದರೆ ಅದು ಸಾಮಾಜಿಕ ಪರಿವರ್ತನೆಯಾಗಿ ಇನ್ನೂ ಪರಿಣಮಿಸಿಲ್ಲವೆಂಬ ಪರಿಸ್ಥಿತಿ. ಸಾಕಷ್ಟು ಸಂಪತ್ತಿನ ಸೃಷ್ಟಿಯಾಗಿದೆ, ಆದರೆ ಬಡತನ ಹೋಗಿಲ್ಲ. ಆಗ ಬಿಕ್ಕಟ್ಟಿನ ಪರಿಹಾರವಾಗುವುದು ಅನಿವಾರ್ಯವೆಂದೆನಿಸಿ ಒತ್ತಡ ಉಂಟಾದಾಗ ಚಿಂತನಶೀಲರು ಅದನ್ನು ಗ್ರಹಿಸಿ, ಗೋಪುರ ಹತ್ತಿ ಜಗತ್ತಿಗೇ ಅದರ ಆಗಮನವನ್ನು ಸಾರಲು, ತಾನೇ ಅದನ್ನು ಉಂಟುಮಾಡಿದೆನೋ ಎಂಬಂತೆ, ಸಂಭ್ರಮದಿಂದ ಸಾರಿ ಹೇಳುತ್ತಾರೆ. ಪರಿವರ್ತನೆಯ ಹಂಬಲದ ಚಳುವಳಿಗಳ ಸಂಘಟನೆಗೆ ಇದು ಅಗತ್ಯ. ಸ್ವಾಭಾವಿಕವಾಗಿ ಸಾಹಿತ್ಯ, ನಾಟಕ ಮುಂತಾದ ಕಲಾಪ್ರಕಾರದ ಸೃಜನಶೀಲ ಕ್ಷೇತ್ರಗಳ ಕ್ರಿಯಾಶೀಲರು ಈ ಕೆಲಸವನ್ನು ನಿರ್ವಹಿಸುತ್ತಾರೆ. ಆದ್ದರಿಂದ ಕಲಾಕ್ಷೇತ್ರಕ್ಕೆ ಸಂಬಂಧಿಸದ ನಾನು ಇದನ್ನು ಕುರಿತು ಆಲಂಕಾರಿಕವಾಗಿ, ಬಣ್ಣಕಟ್ಟಿ, ರಸಪೂರ್ಣವಾಗಿ ಹೇಳಲು ಸಮರ್ಥನಲ್ಲ. ಆದರೆ ನಾನು ಒಂದು ಮಾತು ಹೇಳಲು ಬಯಸುತ್ತೇನೆ. ಗತಕಾಲದ ಸಂಚಿತ ವೈಭವ ವೈಭೋಗಗಳೆಲ್ಲ ಸವಕಲಾಗಿ, ನೈರಾಶ್ಯ ಅಪ್ಪಿಕೊಂಡು, ಕಳೆಗುಂದಿದ್ದೇವೆ ಎಂದು ಕೆಲವರು ಪ್ರಲಾಪ-ಪ್ರಚಾರ ಮಾಡುವುದು ಸರಿ ಎಂದಾದರೆ, ಆಗ, ನಾವು ಒಂದು ರಾಷ್ಟ್ರವಾಗಿ, ಏನಾದರೂ ಹುರುಪು ಹುಟ್ಟಿಸುವ, ಆಶಾಭಾವ ಉಂಟುಮಾಡುವ, ಹೊಸದೇನಾದರೂ ಸಿಕ್ಕೀತೆ ಎಂದು ಕಾತರದಿಂದ ತಡಕಾಡುವುದೂ ಸಹಜವಾಗಬೇಕು. ನಮ್ಮ ಒಬ್ಬ ಕೈಗಾರಿಕೋದ್ಯಮಿ ಫ್ರಾನ್ಸ್ ದೇಶದ ಉದ್ಯಮವೊಂದನ್ನು ತನ್ನದಾಗಿಸಿಕೊಂಡರೆ ಅಥವಾ ಮಾಹಿತಿ ತಂತ್ರಜ್ಞಾನದ ಕ್ಷೇತ್ರದಲ್ಲಿ ಒಂದಿಷ್ಟು ಹೆಚ್ಚುಗಾರಿಕೆಯನ್ನು ಸಾಧಿಸಿದ್ದೇವೆಂದೋ – ಅವೆಲ್ಲ ಎಷ್ಟು ವಾಸ್ತವ, ಎಷ್ಟು ಊಹಾಪೋಹ ಎನ್ನುವುದು ಗೌಣ – ಅಂತೂ ಏನಾದರೂ ಒಂದು ಯಾರದೋ, ವೈಯಕ್ತಿಕ ಸಾಧನೆಯ ದೊಡ್ಡಸ್ತಿಕೆಯನ್ನು ನಮಗೇ ಆರೋಪ ಮಾಡಿಕೊಂಡು, ಅದಕ್ಕೆ ಸಂಬಂಧಪಡದವರೂ ಒಂದಿಷ್ಟು ಬೆಚ್ಚನೆಯ ಅನುಭವವನ್ನು ಗಿಟ್ಟಿಸಿಕೊಳ್ಳಬಹುದು. ಅಣುಕ್ಷೇತ್ರದಲ್ಲಿ ನಮ್ಮದೇನೂ ಹೇಳಿಕೊಳ್ಳುವಷ್ಟು ಸಾಧನೆಯಿಲ್ಲದಿದ್ದರೂ, ಏನೂ ಇಲ್ಲದವರೊಡನೆ ಹೋಲಿಸಿಕೊಂಡು ಜಂಭ ಪಡಬಹುದು. ಹತಾಶ ಮಾನಸಿಕ ಪರಿಸ್ಥಿತಿಯ ಅಗತ್ಯ ಅದು. ಆದರೆ ಹೀಗೆ ಪಡೆದುಕೊಳ್ಳುವ ಪ್ರಚೋದನೆಯ ಸುಖ ಕ್ಷಣಿಕವೆಂದು, ನಿಷ್ಪ್ರಯೋಜಕವೆಂದು ಯಾರಿಗಾದರೂ ತಿಳಿದೀತು. ಆದರೆ ಹಾಗೆಂದು ನಾವು ಹೇಳಿದರೆ, ಅದು ''ಭಾರತ ಪ್ರಕಾಶಿಸುತ್ತಿದೆ'', ''ಭಾರತ ಭರದಿಂದ ಮುಂದೋಡುತ್ತಿದೆ'' ಎಂದು ಹೇಳುವವರಿಗೆ ಪಥ್ಯವಾಗುವುದಿಲ್ಲ. ಮಾನವ ಅಭಿವೃದ್ಧಿ ಸೂಚ್ಯಂಕದಂತೆ ನಾವು ರಾಷ್ಟ್ರಗಳ ಪಟ್ಟಿಯ ಕೊಟ್ಟಕೊನೆಯಲ್ಲಿದ್ದೇವಲ್ಲ ಅಂದರೆ ಅದನ್ನು ಕಂಡೂಕಾಣದಂತೆ ಇರಬಯಸುತ್ತಾರೆ. ಹಾಗೆ ಹೇಳುವವರ ವಿರುದ್ಧ ಹರಿಹಾಯುತ್ತಾರೆ.

''ಮಾನವೀಯ ಅಭಿವೃದ್ಧಿ ಸೂಚ್ಯಂಕ''ದ ಪ್ರೇರಣೆ ಸಾಮಾಜಿಕ ನ್ಯಾಯಕ್ಕೆ ಸಂಬಂಧಪಟ್ಟದ್ದು. ಇತ್ತೀಚೆಗೆ ಲಕ್ನೋದ ಉಚ್ಚ ನ್ಯಾಯಪೀಠ ಅಯೋಧ್ಯೆಯ ವಿವಾದವನ್ನು ಕುರಿತು ನೀಡಿದ ತೀರ್ಪಿನ ಸಂದರ್ಭದಲ್ಲಿ ನಮ್ಮ ಮಾಧ್ಯಮಗಳು ಪ್ರತಿಕ್ರಿಯಿಸಿದ ರೀತಿಯನ್ನು ಗಮನಿಸಿದರೆ ಅವು ಈ ಸಾಮಾಜಿಕ ನ್ಯಾಯ ಕುರಿತ ಬದ್ಧತೆಯನ್ನು

ಕಡೆಗೆಣಿಸಿದ್ದು ಸ್ಪಷ್ಟ. ಆ ಪೀಠದ ಮುಂದೆ ಇದ್ದ ವಿವಾದದ ಕೇಂದ್ರ ವಿಷಯವೆಂದರೆ ೧೯೯೨ರ ಡಿಸೆಂಬರ್ ೬ರಂದು ನೆಲಸಮ ಮಾಡಿದ ಮಸೀದಿ ನಿಂತಿದ್ದ ನಿವೇಶನದ ಹಕ್ಕುದಾರರು ಯಾರು ಎನ್ನುವ ಪ್ರಶ್ನೆ. ತೀರ್ಪು ಹೊರಬೀಳುವ ಮೊದಲೇ, ಆ ತೀರ್ಪಿನ ಪರಿಣಾಮವಾಗಿ, ಬರದೆಯೂ ಇರಬಹುದಾದ ಪ್ರತಿಕ್ರಿಯಾತ್ಮಕ ಹಿಂಸೆಯನ್ನು ಅದು 'ಬಂದರೆ' ಎಂದು ಊಹಿಸಿಕೊಂಡು, ವಿವಾದದ ಎರಡೂ ಪಕ್ಷಗಳಿಗೆ ಎಚ್ಚರ ನೀಡಿ, ತೀರ್ಪು ಹೇಗೇ ಇದ್ದರೂ, ಅದನ್ನು ಇಬ್ಬರೂ ಗೌರವಿಸಬೇಕೆಂದು ಒತ್ತಾಯಿಸುವ ಬಿರುಸಿನ ಪ್ರಚಾರ ಪ್ರಾರಂಭಿಸಿದ್ದುವು. ಈ ಹಿಂದೆ ಇಂಥ ಪ್ರಸಂಗಗಳಲ್ಲಿ ಆದಂತೆ ಈಗಲೂ ತೀರ್ಪು ಹೊರಬಿದ್ದ ನಂತರ ಯಾವುದೇ ಅಹಿತಕರ ಘಟನೆಗಳು ಆಗಲೇ ಇಲ್ಲ. ಆಗ ಅದೇ ಮಾಧ್ಯಮ ಇದನ್ನು ಅರ್ಥೈಸಿದ್ದು ನಾವು ಒಂದು ಪ್ರೌಢ ರಾಷ್ಟ್ರವಾಗಿ ಹಳೆಯದನ್ನು ಮರೆತು ಭರದಿಂದ ಮುಂದೆ ಸಾಗುತ್ತಿರುವುದೇ ಕಾರಣವೆಂದು! ಅಂಥ ಹಿಂಸೆಯ ಪ್ರತಿಕ್ರಿಯೆ ಉಂಟಾಗಲಿಲ್ಲವೆಂದು ನಮಗೂ ಸಮಾಧಾನ. ಆದರೆ "ಭಾರತ ಭರದಿಂದ ಮುಂದೆ ಸಾಗುತ್ತಿದೆ" ಎಂಬುದೆ ಅದಕ್ಕೆ ಕಾರಣವೆಂಬ ವಾದವನ್ನು ನಮಗೆ ಒಪ್ಪಿಕೊಳ್ಳುವುದಕ್ಕೆ ಆಗುವುದಿಲ್ಲ. ಹಾಗೆ ಹೇಳುವವರು ಅದರೊಂದಿಗೇ ಮತ್ತೂ ಒಂದು ಮಾತು ಹೇಳುತ್ತಾರೆ. ಗತಕಾಲವನ್ನು ಮರೆಯುವುದು "ಮುಂದೆ ಸಾಗುವುದಕ್ಕೆ" ಒಂದು ಅಗತ್ಯವಾದ ತಯಾರಿ ಎನ್ನುತ್ತಾರೆ ಅವರು. "ಭಾರತ ಭರದಿಂದ ಮುಂದೆ ಸಾಗುತ್ತಿದೆ" ಎಂದರೆ ಏನು ಅರ್ಥ ಎಂಬುದನ್ನು ಪ್ರತ್ಯೇಕವಾಗಿ ಚರ್ಚಿಸೋಣ.

**ಅತಿಕ್ರಮಣ ಸಮಸ್ಯೆ ಮತ್ತು ರಾಜಕೀಯ**



ಎಲ್ಲಿ 'ಕುರ್ಚಿ' ಅತಿಕ್ರಮಣ ಮಾಡಿ ಬಿಟ್ಟೀರೋ ಅಂತ ಭಯ, ಅದ್ಕೇ ನಿಮಗೆ ನಾನೇ ನಾಯಕತ್ವ ವಹಿಸಿದ್ದೇನೆ!

ಅದಕ್ಕೆ ಮುಂಚೆ ಗತಕಾಲದ ಸಂಗತಿಗಳನ್ನು ಮರೆಯಬೇಕೇ ಅಥವಾ ಸ್ವೀಕರಿಸಬೇಕೇ, ಹೇಗೆ ಎಂಬುದನ್ನು ಚರ್ಚಿಸುವುದು ಅಗತ್ಯ. ಕಾರಣ ಇತಿಹಾಸದ ಅಭ್ಯಾಸವೆಂದರೆ ಗತಕಾಲವನ್ನು ಮರೆಯುವುದಲ್ಲ; ಅದರಿಂದ ಏನು ಪಾಠ ಕಲಿಯಬೇಕು ಎಂಬುದು. ಇಂಥ ತಿಳಿವು ನೀಡುವ ಪುರಾವೆಗಳು ಆ ಪಠ್ಯದಲ್ಲಿ ಸಮೃದ್ಧವಾಗಿ ದೊರೆಯುತ್ತವೆ. ಅವು ಕಲಿಸುವ ಪಾಠಗಳನ್ನು ಕಲಿತಲ್ಲದೆ ಮುಂದುವರಿಯುವುದು ಸುಗಮವಾಗುವುದಿಲ್ಲ. ಇಲ್ಲದಿದ್ದರೆ ಮುನ್ನುಗ್ಗುವವರಿಗೆ ಅವೆ ಅಡಚಣೆಗಳಾಗುತ್ತವೆ. ಜಾರ್ಜ್ ಸಾಂತಾಯನ ಹೇಳುವಂತೆ "ಗತಕಾಲವನ್ನು ಸ್ಮರಿಸದವರು ಅದನ್ನೇ ಪುನಃ ಅನುಭವಿಸಬೇಕಾಗುತ್ತದೆ." ಹಿಂದಿನದನ್ನು ಸ್ಮರಿಸಿಕೊಳ್ಳುವುದು ಅಗತ್ಯ. ಹಳೆಯ ಕೆಟ್ಟ ಸಂಗತಿಗಳನ್ನು ಇಂದಿನ ಸಂಕೇತವಾಗಿಸಿಕೊಳ್ಳುವುದು ಸಲ್ಲ. ಅವುಗಳು ತಿಳಿಸುವ ಸಂದೇಶಗಳನ್ನು ಆಲಿಸಿ, ಇಂದಿನ ಪರಿಸ್ಥಿತಿಯೊಡನೆ ಅವನ್ನು ಸಮನ್ವಯಿಸಿ, ಅಂದಿನ ತಪ್ಪುಗಳನ್ನು ಒಪ್ಪಿಕೊಳ್ಳುವ ಧೈರ್ಯ ಸೂಸಿ, ಅದು ಪುನರಾವೃತ್ತಿಯಾಗುವುದನ್ನು ತಪ್ಪಿಸುವ ಕೆಲಸ ಆಗಬೇಕು. ರಾಷ್ಟ್ರೀಯ ಸ್ವಯಂಸೇವಕ ಸಂಘ ಮತ್ತು ಅದರ ಪರಿವಾರದವರು ಲಕ್ನೋ ನ್ಯಾಯಾಲಯದ ತೀರ್ಪಿಗೆ ಸೆಟೆದು ನೀಡಿದ ಪ್ರತಿಕ್ರಿಯೆಗಳನ್ನು ಗಮನಿಸಿದರೆ ಅದು ಯಾವುದೇ ಸೂಕ್ಷ್ಮ ರೀತಿಯಲ್ಲೂ ರಾಜಿ ಮಾಡಿಕೊಳ್ಳುವ ಪ್ರವೃತ್ತಿಯಾಗಿರಲಿಲ್ಲ. ಅದೇ ರೀತಿ ಅಲ್ಪಸಂಖ್ಯಾತರಲ್ಲಿ ಕೆಲವರು ನೀಡಿದ ಪ್ರತಿಕ್ರಿಯೆ ಆ ತೀರ್ಪನ್ನು ಒಪ್ಪಿಕೊಂಡಂತೆಯೂ ಇರಲಿಲ್ಲ. 'ಶಾಂತಿ,ಶಾಂತಿ' ಎಂದು ಗುಲ್ಲೆಬ್ಬಿಸಿದ ಮಾಧ್ಯಮಗಳ

ದ್ದಲದಲ್ಲಿ, ಈ ನ್ಯಾಯಸ್ಥಾನ ನೀಡಿದ ನ್ಯಾಯದ ನ್ಯಾಯ ಸ್ವರೂಪವನ್ನು ಗಮನಿಸದೆ ಇರಲೂ ಧ್ಯವಿಲ್ಲ. ಚಿದಂಬರಂ ಅವರು ೧೯೯೨ರಿಂದ ಚಿಗೆ ದೇಶ ಮುಂದೆ ಸಾಗಿದೆ; ಆದ್ದರಿಂದ ಈ ರ್ಮಾನದಿಂದ ಯಾವುದೇ ಅಹಿತಕರ ಘಟನೆ ಗಾಗದು ಎಂದರು. ಮಾಧ್ಯಮಗಳೂ ಅವರೊಂದಿಗೆ ನಿಗೂಡಿಸಿ ಸಂಪಾದಕೀಯಗಳನ್ನು ಬರೆದುವು. ಈ ರ್ಪಿನಲ್ಲಿ ಒಂದಿಷ್ಟು ಅನ್ಯಾಯದ ಸೆಲೆ ಇದ್ದರೂ ರವಾಗಿಲ್ಲ, ಅದನ್ನು ಒಪ್ಪಿಕೊಂಡು ದೇಶ ಮುಂದುವರಿಯ''ಬೇಕು!

ವಾಣಿಜ್ಯಲೋಕದ ಕಾರ್ಪೊರೇಷನ್‌ಗಳು, ಜಕೀಯ ವ್ಯಕ್ತಿಗಳು ಲಂಚಗುಳಿ ಪ್ರಕರಣಗಳನ್ನು, ಹಮದಾಬಾದ್‌ನ ಮುಸ್ಲಿಮರ ವಿರುದ್ಧ ಮೋದಿಯ ತ್ಯಾಚಾರವನ್ನು, ೧೯೮೪ರ ಸಿಖ್ಖರ ತ್ಯಾಕಾಂಡವನ್ನು, ''ದೇಶ ಮುಂದು ರಿಯುತ್ತಿದೆ'' ಎಂಬ ಅಬ್ಬರದಲ್ಲಿ, ರೆತುಬಿಡಬೇಕೆಂಬ ವಾದವನ್ನು ಮುಂದಿಟ್ಟಿದ್ದಾರೆ. ಹಿಂದಿನ 'ತುರ್ತು ರಿಸ್ಥಿತಿ'ಯ ಬಗೆಗೂ ಇದೇ ಭಿಪ್ರಾಯವಿದೆ. ಆದರೆ ಇದೇ ಜನ ಶವಿಭಜನೆಯ ಸಂದರ್ಭದ ಅಹಿತ ಟನೆಗಳನ್ನು ಮರೆತು, ಮುಂದುವರಿಯಲು ಷ್ಟಪಡುವುದಿಲ್ಲ. ಅದನ್ನು ಪುನಃ ಪುನಃ ನಪಿಸಿಕೊಳ್ಳುವುದು ನಮ್ಮ 'ರಾಷ್ಟ್ರೀಯತೆ' ನ್ನು ಪೋಷಿಸಲು ಅಗತ್ಯವೆಂದು ಹೇಳುತ್ತಾರೆ. ಅವರಿಗೆ ಪಾಕಿಸ್ತಾನವನ್ನು ದ್ವೇಷಿಸುವುದು 'ಭಾರತವನ್ನು ಪ್ರೀತಿ'ಸುವುದಕ್ಕೆ ಗತ್ಯ. ಇದು ದೇಶಭಕ್ತಿಯ ಕೆಲವು ಅಂಶಗಳನ್ನು ಮಾತ್ರ ಆರಿಸಿಕೊಳ್ಳುವ ಚಾಲಾಕಿ. ದೇಶದ ಎಲ್ಲ ಜನರನ್ನು ಪ್ರೀತಿಸದೆಯೇ ದೇಶಪ್ರೇಮ ಸಾಧ್ಯ ಈ ನಾದಕ್ಕೆ. ಟೆಫ್ಲಾನ್ ಎಂಬ ರಸಾಯನ ವಸ್ತುವನ್ನು ಸವರಿದ ಕಾವಲಿಕಲ್ಲಿನ ಮೇಲೆ ದೋಸೆ ಅಂಟಿ ಕೊಳ್ಳುವುದಿಲ್ಲ. ಇವರ ದೇಶಭಕ್ತಿಯನ್ನು, ಮೌಲ್ಯಗಳನ್ನು ಅಂಟಿಸಿಕೊಳ್ಳದ ಟೆಫ್ಲಾನ್ ದೇಶಭಕ್ತಿ ಎಂದರೆ ಹೇಗೆ? ಪಾಕಿಸ್ತಾನ, ಭೂತಾನ, ಮಿಯಾನ್ಮಾರ್ ನಮಗಿಂತ ಕೆಳಗಿವೆ ಮಾನವವಿಕಾಸ ಸೂಚ್ಯಂಕದಲ್ಲಿ, ಇವೆಲ್ಲ ಪಟ್ಟಿಯ ಕೊನೆಯಲ್ಲಿವೆ. ಆದರೂ ಪಾಕಿಸ್ತಾನಕ್ಕಿಂತ ಒಂದು ಹಂತ ಮೇಲಿದ್ದೇವಲ್ಲಾ ಎಂದು ಮೀಸೆ ತಿರುವುತ್ತಾರೆ ಈ ದೇಶಭಕ್ತರು!

ನ್ಯಾಷನಲ್ ಸ್ಯಾಂಪಲ್ ಸರ್ವೆ ಕಾಲಕಾಲಕ್ಕೆ ಪ್ರಕಟಿಸುವ ಅಂಕಿ-ಅಂಶಗಳನ್ನು ಗಮನಿಸಿದರೆ ಉದ್ಯೋಗ ನಿರ್ಮಾಣ ಕಳೆದ ಹತ್ತು ವರ್ಷಗಳಲ್ಲಿ, ಶೇಕಡ ೯-೧೦ರ ಜಿಡಿಪಿ ಅಭಿವೃದ್ಧಿಯ ಕಾಲದಲ್ಲಿ ಸ್ಥಗಿತವೇ ಎನಿಸುವಷ್ಟು ಕಡಿಮೆ ಇದೆ. ಈ ಉದ್ಯೋಗ ರಹಿತ ಬೆಳವಣಿಗೆಯನ್ನೇ ''ನಾವು ಮುಂದುವರಿಯು ತ್ತಿದ್ದೇವೆ'' ಎಂದು ವರ್ಣಿಸುವುದು ಹೇಗೆ? ಆ 'ನಾವು'' ಅಂದರೆ ಯಾರು? ಯಾರೂ ಹಸಿವಿನಿಂದ ಸಾಯುತ್ತಿರುವ ವರದಿಗಳು ಇತ್ತೀಚೆಗೆ ಬರುತ್ತಿಲ್ಲ ಅಲ್ಲವೆ ಎನ್ನುತ್ತೀರಾ? ನ್ಯಾಷನಲ್ ನ್ಯೂಟ್ರಿಷನ್ ಮಾನಿಟರಿಂಗ್ ಬ್ಯೂರೋದ ವರದಿಯಂತೆ ಶೇಕಡ ೩೩ರಷ್ಟು ಯುವಜನರ ಶರೀರದ ಗಾತ್ರ ಕ್ಷೀಣಿಸಿದೆ ಹಾಗೂ ಮೂರನೆಯ ಒಂದರಷ್ಟು ಜನರು ನಿಶ್ಶಕ್ತಿಯಿಂದ ಬಳಲುತ್ತಾರೆ. ಪರಿಶಿಷ್ಟ ಜಾತಿ ಮತ್ತು ಜನಾಂಗದವರ ಪರಿಸ್ಥಿತಿ ಇದಕ್ಕೂ ಹೀನಾಯವಾಗಿದೆ. ವಿಶ್ವ ಆರೋಗ್ಯ ಸಂಸ್ಥೆ ಹೇಳುತ್ತದೆ: ಯಾವುದೇ ದೇಶದ ಜನಸಂಖ್ಯೆಯ ಶೇಕಡ ೪೦ರಷ್ಟು ಜನ ನಿಶ್ಶಕ್ತಿ, ಸವಕಲು ಶರೀರದ ಅನಾರೋಗ್ಯಕ್ಕೆ ಪಕ್ಕಾಗಿದ್ದರೆ, ಆಗ ಅಲ್ಲಿ ಕ್ಷಾಮದ ಪರಿಸ್ಥಿತಿ ಇದೆ ಎಂದು ಪರಿಗಣಿಸಬೇಕು, ಎಂದು. ಈ ಲೆಕ್ಕದಲ್ಲಿ ಒರಿಸ್ಸಾದ ಪರಿಶಿಷ್ಟ ಜನಾಂಗ ಹಾಗೂ ದೇಶದ ಪರಿಶಿಷ್ಟ ಜಾತಿಯವರು ಶಾಶ್ವತವಾಗಿ ಕ್ಷಾಮದ ಪರಿಸ್ಥಿತಿಯಲ್ಲಿದ್ದಾರೆ ಎಂದಾಗುತ್ತದೆ. ಹೀಗಿರುವಾಗ ಇಡೀ ಭಾರತ ಮುಂದುವರಿಯುತ್ತಿದೆ, ಪ್ರಕಾಶಿಸುತ್ತಿದೆ ಎನ್ನಬಹುದೆ? ಅಥವಾ ಈ ಮುಂದುವರಿಕೆಯಲ್ಲಿ



ಏನಾದರೂ ದೋಷವಿದೆಯೇ ಎಂದು ಪರೀಕ್ಷಿಸಬೇಕೆ? ಯಾರೋ ಮುನ್ನುಗ್ಗಲು ಇವರು ದಾರಿಬಿಡಬೇಕೆ? ರಾಷ್ಟ್ರೀಯ ಕೌಟುಂಬಿಕ ಆರೋಗ್ಯ ಸರ್ವೇಕ್ಷಣದ ವರದಿಯ ಪ್ರಕಾರ (೧) ದೇಶದ ಐದು ವರ್ಷದ ಒಳಗಿನ ಮಕ್ಕಳಲ್ಲಿ ಶೇಕಡ ೪೮ರಷ್ಟು ಮಕ್ಕಳು ಪೌಷ್ಟಿಕಾಂಶದ ಕೊರತೆಯಿಂದ ಕೃಶವಾಗಿದ್ದಾರೆ. (೨) ಶೇಕಡ ೨೪ರಷ್ಟು ಮಕ್ಕಳು ಕೃಶ ಶರೀರದವರು, ಮತ್ತು (೩) ಶೇಕಡ ೧೬.ರಷ್ಟು ಎತ್ತರಕ್ಕೆ ತಕ್ಕಂತೆ ಭಾರವಿಲ್ಲದವರು, ಕುಂಠಿತ ಬೆಳವಣಿಗೆಯವರು. ಇದರಲ್ಲಿ ಶೇಕಡ ೨೦ರಷ್ಟು ೦-೫ ವರ್ಷದ ಮಕ್ಕಳಲ್ಲಿ ಹೆಚ್ಚು ಕಂಡುಬಂದಿದೆ. ಶೇಕಡ ೭೦ರಷ್ಟು ಪುಟ್ಟ ಮಕ್ಕಳು ರಕ್ತಹೀನತೆಯನ್ನು ಅನುಭವಿಸುತ್ತಿದ್ದಾರೆ. ಆರ್ಥಿಕ ಸುಧಾರಣೆ ಪ್ರಾರಂಭವಾದಂದಿನಿಂದ ಇವುಗಳಲ್ಲಿ ಒಂದಿಷ್ಟು ಉತ್ತಮ ಬೆಳವಣಿಗೆಗಳಾಗಿದ್ದರೂ, ಅದು ಸಾಕಷ್ಟು ಎನ್ನುವಂತಿಲ್ಲ.

ದೇಶ ಮುನ್ನುಗ್ಗುತ್ತಿದೆ ಎಂದು ಸಮಾಧಾನದಿಂದ ಹೇಳಿಕೊಳ್ಳುವಂತಿಲ್ಲ ಈ ಪರಿಸ್ಥಿತಿ. ಈ ಉತ್ತಮವೆನಿಸುವ ಬೆಳವಣಿಗೆಗಳೂ ಕೂಡ ಸಾರ್ವತ್ರಿಕ, ಶಾಶ್ವತ ಎಂದು ಹೇಳುವಂತಿಲ್ಲ. ಮತ್ತೊಂದು ಸ್ವಾರಸ್ಯದ ಸಂಖ್ಯೆ ಎಂದರೆ ಕಳೆದ ಎರಡು ದಶಕಗಳಲ್ಲಿ ಮೇಲುವರ್ಗದವರು ಅಕ್ಕಿ, ಗೋಧಿ ಮುಂತಾದ ಹಿಟ್ಟಿನ ಧಾನ್ಯಗಳನ್ನು ಬಳಸುವುದು ಹೆಚ್ಚಿದೆ ಮತ್ತು ಕೆಳವರ್ಗದವರದ್ದು ತೀರ ಕಡಿಮೆಯಾಗಿದೆ. ಹೀಗೆ ಒಳಪದರದಲ್ಲಿ ಅಂತರ್ಗತವಾದ ಕ್ಷಾಮದ ಪರಿಸ್ಥಿತಿಯು ದೇಶದ ಬಹುಪಾಲು ಜನರನ್ನು ಪೀಡಿಸುತ್ತಿರುವಾಗ 'ದೇಶ ಮುಂದೆ ಸಾಗಿದೆ' ಎನ್ನುವ ಪ್ರಚಾರದಲ್ಲಿ ಏನೋ ಕೆಟ್ಟ ಉದ್ದೇಶ ಅಡಗಿರುವ ಸಂಶಯ ಬರುತ್ತದೆ. ಇದು ಸುಳ್ಳು ಮತ್ತು ಅನೈತಿಕವಾದುದು. ಮೋಸಗಾರಿಕೆಯ ಈ ಪ್ರಚಾರ ಇದು ಏನನ್ನೋ ಮುಚ್ಚಿಡುವ ಪ್ರಯತ್ನವೆನಿಸುತ್ತದೆ.

ಈ ಥರದ ಸುಳ್ಳು ಪ್ರಚಾರದ ಮತ್ತೊಂದು ಉದಾಹರಣೆ, ಬಡತನರೇಖೆಯ ಕೆಳಗಿರುವವರೆಷ್ಟು ಎನ್ನುವ ವಿಷಯ. ಸ್ವಾತಂತ್ರ್ಯ ಬಂದು ೬೦ ವರ್ಷಗಳಾದರೂ ಇನ್ನೂ ಅಷ್ಟೊಂದು ಜನ ಬಡಜನ ಇದ್ದಾರೆ ಎನ್ನುವ ಒಂದು ಹೀನಾಯ ಪರಿಸ್ಥಿತಿ ಹಾಗಿರಲಿ; ಸರ್ಕಾರ ಹೇಳುತ್ತದೆ: ಉದಾರೀಕರಣ ಪ್ರಾರಂಭ ವಾದಾಗ ಈ ಸಂಖ್ಯೆ ಶೇಕಡ ೩೬.೩ ಇದ್ದದ್ದು ೨೦೦೪-೦೫ರಲ್ಲಿ ಶೇಕಡ ೨೮.೩ಕ್ಕೆ ಇಳಿಯಿತು ಎಂದು ಹೇಳುತ್ತಾ ಬೆನ್ನು ತಟ್ಟಿಕೊಳ್ಳುತ್ತದೆ. ವಾಸ್ತವವೆಂದರೆ ಈ ಅಂಕಿಸಂಖ್ಯೆಗಳ ಲೆಕ್ಕಾಚಾರದಲ್ಲೇ ಮೋಸ ಅಡಗಿರುವುದು. ಧಾರಣೆವಾಸಿಯ ಸೂಚ್ಯಂಕದ ಆಧಾರದ ಮೇಲೆ ಸರ್ಕಾರದ ಈ ಲೆಕ್ಕ ನಿಂತಿದೆ. ಆದರೆ ಇದು ಆಗಬೇಕಾದದ್ದು ಬರುವ ಆದಾಯ, ಅದರಿಂದ ಕೊಳ್ಳಬಹುದಾದ ಆಹಾರದ ಪ್ರಮಾಣ, ಅಂದರೆ ವ್ಯಕ್ತಿಗೆ ದೊರಕುವ ಕ್ಯಾಲೊರಿ ಶಕ್ತಿ ಇವುಗಳನ್ನು ಆಧರಿಸಿ ಬಡತನವನ್ನು ಲೆಕ್ಕ ಹಾಕಬೇಕು. ಹಳ್ಳಿಯ ಜನಕ್ಕೆ ೨೪೦೦ ಕ್ಯಾಲರಿಗಳು ಮತ್ತು ನಗರ ಪ್ರದೇಶದವರಿಗೆ ೨೧೦೦ ಕ್ಯಾಲರಿಗಳು ಸಿಗುವಷ್ಟು ಆಹಾರ ಮತ್ತು ಅದಕ್ಕೆ ತಕ್ಕ ಆದಾಯ ಇರಬೇಕು. ಈ ಆದಾಯಾಧಾರಿತ ಬಡತನದ ಅಳತೆ ಬಡತನದ ರೇಖೆಯನ್ನು ನಿರ್ಧರಿಸಬೇಕು. ತಲಾ ಆದಾಯ ಹೆಚ್ಚಾದರೂ, ಆ ಹಣಕ್ಕೆ ದೊರಕುವ ಆಹಾರ ಹಿಂದಿನದಕ್ಕಿಂತ ಕಡಿಮೆಯೇ ಆದರೆ, ಕೇವಲ ತಲಾ ಆದಾಯ ಹೆಚ್ಚಾಯಿತು ಎಂದು ಬಡತನ ಕಡಿಮೆಯಾಯಿತು ಎಂದು ಹೇಗೆ ಹೇಳುವುದು? ಇಂದಿನ ಆದಾಯ ಇಂದಿನ ಧಾರಣೆಯಂತೆ ಕೇವಲ ೧೮೨೦ ಕ್ಯಾಲರಿಯನ್ನು ಮಾತ್ರ ಒದಗಿಸುತ್ತದೆ ಎಂದು ಸಾಬೀತಾಗಿದೆ. ಅಂದರೆ ಬಡವ ಮತ್ತಷ್ಟು ಬಡವನಾಗಿದ್ದಾನೆ. ಈಗ ಆಗಿರುವುದೇನೆಂದರೆ ಹೆಚ್ಚು ಅನುಕೂಲಸ್ಥರು ಹೆಚ್ಚು ಕ್ಯಾಲರಿ ಪಡೆಯುತ್ತಿದ್ದಾರೆ, ಕಡಿಮೆ ಆದಾಯದವರು ಮೊದಲಿಗಿಂತ ಇನ್ನೂ ಕಡಿಮೆ ಕ್ಯಾಲರಿ ಪಡೆಯುತ್ತಿದ್ದಾರೆ. ಈ ಆದಾಯದ ಕೇಂದ್ರೀಕರಣ ಮೇಲಿನ ಸ್ತರದಲ್ಲಿ ಆಗಿದೆ. ಆದಾಯದ ಕಂದಕ, ಬಡತನ ಇನ್ನೂ ಹೆಚ್ಚಿರುವುದನ್ನು ಸ್ಪಷ್ಟಪಡಿಸಿದೆ. ಆದರೂ ಅಂಕಿ-ಅಂಶಗಳನ್ನು ತಿರುಚಿ ಪ್ರಚಾರ ಮಾಡಲಾಗುತ್ತಿದೆ ''ದೇಶ ಮುನ್ನುಗ್ಗುತ್ತಿದೆ'' ಮುಂದುವರಿಯುತ್ತಿದೆ ಎಂದು. ಬಹುಪಾಲು ಮಾಧ್ಯಮಗಳು ಇದಕ್ಕೆ ದನಿಗೂಡಿಸಿವೆ. ಇದು ಚೋಮ್‌ಸ್ಕಿ ಮತ್ತು ಎಡ್ವರ್ಡ್ ಎಸ್. ಹೆರ್‌ಮನ್ ಹೇಳುವಂತೆ ಜನಭಿಪ್ರಾಯವನ್ನು ರೂಪಿಸಿ ಒಪ್ಪಿಗೆಯನ್ನು ತಯಾರಿಸುವ ಪ್ರಚಾರ ವೈಖರಿ; ಮಾಧ್ಯಮಗಳ

ೕಲಿನ ಹಿಡಿತ ಮತ್ತು ವಿರೋಧ ಅಭಿಪ್ರಾಯಗಳನ್ನು ತೆಗಾಣಿಸುವ ತಂತ್ರಗಾರಿಕೆ. ಒಂದು ಫಿಲ್ಟರ್ ಥರ ಸ ಮಾಡಿ, ಉತ್ತಮಮಟ್ಟದ ವಸ್ತುನಿಷ್ಠ ತ್ರಿಕಾಕರ್ತರೂ ಪ್ರಚಾರವನ್ನು ನಂಬುವಂತೆ ಮುಸುಕು ೂಡಿಕೊಳ್ಳುತ್ತದೆ ಎನ್ನುತ್ತಾರೆ ಅವರು. ಹೀಗಾಗಿ, ವರಿಗೆ ಅರಿವಿಲ್ಲದೆಯೇ ''ಭಾರತ ಪ್ರಕಾಶಿಸುತ್ತಿದೆ'' ಂದು ನಂಬುವಂತಾಗಿದೆ.

ವಸ್ತುಸ್ಥಿತಿ ಒಂದೇ ತರಹ ಇರುವುದಿಲ್ಲ; ದು ಬದಲಾಯಿಸಲೇಬೇಕು ಎಂದು ಕೆಲವರು ್ರಮಾಣಿಕವಾಗಿ ನಂಬಿ, ಅದಕ್ಕಾಗಿ ಖುದ್ದು ತಾವೇ ನೂ ಮಾಡಬೇಕಾಗಿಲ್ಲ ಎನ್ನುತ್ತಾರೆ. ಇದು ಸಿದ್ಧಾಂತದ ೕವಲ ಯಾಂತ್ರಿಕಪಠನ ಅನ್ನುತ್ತಾನೆ ಗ್ರಾಮ್‌ಶಿ. ನಾವು ಯಸುವ ಬದಲಾವಣೆಯನ್ನು ತರಲು ಮನುಷ್ಯನ ಧ್ಯಪ್ರವೇಶ ಬೇಕೆಬೇಕು ಎಂದು ಹೆಗೆಲ್, ಮಾರ್ಕ್ಸ್, ್ರಮ್‌ಶಿ ಮುಂತಾದ ಮಾನವನ ಸಾಮಾಜಿಕ ರಿತ್ರೆಯನ್ನು ಅಭ್ಯಸಿಸಿದವರೆಲ್ಲ ಹೇಳಿದ್ದಾರೆ. ಹಾಗೆ ನಗಂಡಾಗಲೆ ಆ ಮಧ್ಯಪ್ರವೇಶದ ಸ್ವರೂಪ, ್ಕ್ತಿಯ, ಸಂಸ್ಥೆಗಳ, ಚಿಂತನೆಯ, ಕ್ರಿಯೆಯ ರೀತಿಯೂ ಷ್ಟವಾಗಿ ಬಿಚ್ಚಿಕೊಂಡು, ನಾವು ಕಾರ್ಯೋನ್ಮುಖ ಗುವುದು ಸಾಧ್ಯ. ಈ ಮಾರ್ಗಕ್ಕೆ ''ಕ್ರಾಂತಿಕಾರಕ ಯೆ'' ಎಂದೇ ಹೆಸರಿಸಬೇಕಿಲ್ಲ. ಗ್ರಾಮ್‌ಶಿ ಅವನು ದುಕಿದ್ದ ಕಾಲದಲ್ಲಿ ಇದು ''ಕ್ರಾಂತಿಕಾರೀ ಕ್ರಿಯೆ''ಯೇ ಂದು ತನ್ನ 'ಪ್ರಿಸನ್ ನೋಟ್ಸ್' ಪುಸ್ತಕದಲ್ಲಿ ರೆದಿದ್ದರೂ, ನಾವು ಈ ಕಾಲದಲ್ಲಿ ಅದನ್ನು ನರಾಲೋಚಿಸಬಹುದು. ಕ್ರಾಂತಿಕಾರ ಪರಿವರ್ತನೆಯೇ ದಲಾವಣೆಯ ಏಕೈಕ ಮಾರ್ಗವಲ್ಲದಿದ್ದರೆ ಬೇರೆ ನು ಮಾರ್ಗ ಸಾಧ್ಯ ಎಂದು ಚಿಂತಿಸಬೇಕು. ೊದಲಿಗೆ, ಬಡತನದ ವಸ್ತುಸ್ಥಿತಿಯನ್ನು ರೆಮಾಚುವ ಇಂದಿನ ಹುನ್ನಾರವನ್ನು ಹಿರಂಗಪಡಿಸುವುದು ಅನಿವಾರ್ಯ. ಈ ಸಂಚು ನೀತಿಯುತವಾದುದು; ಇದು ಪ್ರಜಾಪ್ರಭುತ್ವದ

## ಭಾರತದ ಸಂವಿಧಾನ ತನ್ನ ಪ್ರಜೆಗಳಿಗೆ ನೀಡಿರುವ ಮೂಲಭೂತ ಹಕ್ಕುಗಳು

೧. ಸಮಾನತೆಯ ಹಕ್ಕು

೨. ಸ್ವಾತಂತ್ರ್ಯದ ಹಕ್ಕು

೩. ಶೋಷಣೆಯ ವಿರುದ್ಧ ಹಕ್ಕು

೪. ಧಾರ್ಮಿಕ ಸ್ವಾತಂತ್ರ್ಯದ ಹಕ್ಕು

೫. ಸಾಂಸ್ಕೃತಿಕ ಮತ್ತು ಶೈಕ್ಷಣಿಕ ಹಕ್ಕು

೬. ಸಂವಿಧಾನಾತ್ಮಕ ಪರಿಹಾರಗಳ ಹಕ್ಕು

ಮೇಲಿನ ಹಲ್ಲೆ. ಈ ದೇಶದಲ್ಲಿ ಇಂದು ಶೇಕಡ ೫೭ರಷ್ಟು ಮಕ್ಕಳಿಗೆ ಶೈಶವದ ಆರೋಗ್ಯ ರಕ್ಷಣೆಗೆ ಅಗತ್ಯವಾದ ಟಿಬಿ, ಡಿಫ್ತೀರಿಯಾ, ಪರ್ಟ್ಸಿಸ್, ಟೆಟನಸ್, ಪೋಲಿಯೋ, ಮೀಸಲ್ಸ್ ಮುಂತಾದ ಕಾಯಿಲೆಗಳ ವಿರುದ್ಧದ ಲಸಿಕೆ ಸಿಗುತ್ತಿಲ್ಲ. ೫ ವರ್ಷದೊಳಗಿನ ಮಕ್ಕಳಲ್ಲಿ ಶೇಕಡ ೭೮ರಷ್ಟು ಮಕ್ಕಳು ರಕ್ತಹೀನತೆಯಿಂದ ಬಳಲಿವೆ. ಹೀಗಿರುವಾಗ ಕೆಲವರಿಗೆ ಮಾತ್ರ ಅಭಿವೃದ್ಧಿ ದಕ್ಕುವ ಈ ಪ್ರಜಾಪ್ರಭುತ್ವ ವ್ಯವಸ್ಥೆಯನ್ನು ಏನೆಂದು ಕೊಂಡಾಡುವುದು? ಪ್ರಜಾಪ್ರಭುತ್ವವೆಂಬುದು ಕೇವಲ ಮತದಾನ ಮಾಡುವ ರಾಜಕೀಯದ ಹೊರಪದರವಲ್ಲ. ಸಾಮಾಜಿಕ, ಸಾಂಸ್ಕೃತಿಕ ಮತ್ತು ಆರ್ಥಿಕ ನ್ಯಾಯಗಳೇ ಅದರ ತಿರುಳು. ಇವುಗಳನ್ನು ನಮ್ಮ ಸಂವಿಧಾನ ಒಂದು ನೈತಿಕತೆಯ ಅಡಿಪಾಯದ ಮೇಲೆ ನಿರ್ಮಿಸಿದೆ ಅಂದರೆ ಸಾರ್ವತ್ರಿಕವಾಗಿ, ಎಲ್ಲರಿಗೂ ಒಂದು ಕನಿಷ್ಠ ಆರ್ಥಿಕ ಜೀವನಮಟ್ಟವನ್ನು ಸಾಧಿಸುವುದನ್ನು ರಾಜ್ಯಾಂಗದ ಕರ್ತವ್ಯವೆಂದು ಹೇಳುತ್ತದೆ. ಆರ್ಥಿಕ ವ್ಯವಸ್ಥೆಯಲ್ಲಿ ಕಾಲಕಾಲಕ್ಕೆ ಆಗುವ ಏರುಪೇರುಗಳಿಂದ ತತ್ತರಿಸುವ ವರ್ಗಕ್ಕೆ, ಅವರು ಸಶಕ್ತರಾಗುವವರೆಗೆ, ಪ್ರಭುತ್ವ ಆಗಾಗ ನೆರವು ನೀಡಿ ರಕ್ಷಿಸಬೇಕು ಎನ್ನುವುದು ಪ್ರಜಾಪ್ರಭುತ್ವದ ತತ್ವದಲ್ಲಿ ಪ್ರಣೀತವೆಂದು ಪ್ರಸಿದ್ಧ ನ್ಯಾಯವಾದಿ ಜೂಲಿಯಸ್ ಸ್ಟೋನ್ ೧೯೪೬ರಲ್ಲೇ ಹೇಳಿದ. ಇದು ಮುಕ್ತಮಾರುಕಟ್ಟೆಯು ಉಂಟು ಮಾಡುವ ದುಷ್ಪರಿಣಾಮದಿಂದ ಬಡವರಿಗೆ ರಕ್ಷಣೆಯ ಸ್ವರೂಪದವು. ಈ ತತ್ವದಿಂದಲೇ ಕಾರ್ಮಿಕ ಸಂಘ ಕಟ್ಟಿಕೊಳ್ಳುವ ಹಕ್ಕು, ಸಾಮೂಹಿಕ ಹಕ್ಕೊತ್ತಾಯ, ಕಲ್ಯಾಣ ರಾಜ್ಯ ಸ್ಥಾಪನೆ ಮುಂತಾದ ಕಲ್ಪನೆಗಳು ಬೆಳೆದುಬಂದದ್ದು. ಜವಾಹರಲಾಲ್ ನೆಹರೂ ರಾಜ್ಯಾಂಗ ರಚನೆಯ ಶಾಸನಸಭೆಯಲ್ಲಿ ೧೯೪೬ರಲ್ಲಿ ನಾವು 'ರಿಪಬ್ಲಿಕ್' ಎಂದು ಹೇಳಿರುವುದರ ಅರ್ಥವೇ 'ಆರ್ಥಿಕ ಪ್ರಜಾಪ್ರಭುತ್ವ' ಎಂದು ಸಾರಿದರು. ನಮ್ಮ ಸಂವಿಧಾನ ಹಸಿವು, ಅಸಮಾನತೆ, ಶೋಷಣೆ ಇವುಗಳನ್ನು ಸ್ಪಷ್ಟವಾಗಿ ವಿರೋಧಿಸುತ್ತದೆ ಮತ್ತು ಇವುಗಳ ವಿರುದ್ಧ ರಕ್ಷಣೆ ನೀಡುವುದು ಪ್ರಭುತ್ವದ ಕರ್ತವ್ಯವೆಂದು ಸ್ಪಷ್ಟಪಡಿಸುತ್ತದೆ. ಸಂವಿಧಾನದ ವಿಧಿ ೨೧ ಮೂಲಭೂತ ಹಕ್ಕುಗಳನ್ನು ಪಟ್ಟಿಮಾಡುವಾಗ, ಬದುಕುವ ಹಕ್ಕು, ಸ್ವಾತಂತ್ರ್ಯದ ಹಕ್ಕು ಎಂದೂ ಸೇರಿಸಿದೆ. ಬದುಕುವ ಎಂದರೆ ಪ್ರಾಣಿಮಟ್ಟದ ಉಸಿರಾಡುವುದಲ್ಲ, ಮಾನವನ ಗೌರವಯುತ ಜೀವನದ ಹಕ್ಕು ಎಂದು ನ್ಯಾಯಾಲಯ ವ್ಯಾಖ್ಯಾನಿಸಿದೆ. ಅಂದರೆ ದೇಶದ ಕೊಟ್ಟಕೊನೆಯ ಪ್ರಜೆಯೂ ತನಗೆ ಸಾಕಷ್ಟು ಪೌಷ್ಟಿಕಾಂಶದ ಆಹಾರದ ಅಗತ್ಯವನ್ನು ಮೂಲಭೂತ ಹಕ್ಕೆಂದು ಒತ್ತಾಯಿಸುವ ಹಕ್ಕು ಪಡೆದಿದ್ದಾನೆ.

ಹೌದು, ಸ್ವಾತಂತ್ರ್ಯಾನಂತರ ನಾವು ಸಾಕಷ್ಟು ಪ್ರಗತಿ ಸಾಧಿಸಿದ್ದೇವೆ ಎಂದು ಒಪ್ಪಬಹುದು. ಇನ್ನೂ ಮುಂದುವರಿಯಬೇಕು, ಹಾಗೆ ಖಂಡಿತ ಮುಂದು ವರಿಯುತ್ತೇವೆ ಎಂದು ಭರವಸೆ ನೀಡುವ ಸಾಂಸ್ಥಿಕ




ಅಪ್ಪಾ, ನೀನೆಷ್ಟು ದೊಡ್ಡವನು
ಮಗ ಕೇಳಿದ
ಬಹಳ ದೊಡ್ಡವನು ಅಂದೆ
ಅಜ್ಜ, ದೊಡ್ಡಪ್ಪನಿಗಿಂತಾ? ಮತ್ತೊಂದು ಪ್ರಶ್ನೆ
ಅಲ್ಲ... ಅವರಷ್ಟು ಅಲ್ಲ...!
ಮತ್ತೆ...?
ಹಣ, ಅಧಿಕಾರ, ದೊಡ್ಡಮನೆ...
ಇದನ್ನೆಲ್ಲಾ ಒಪ್ಪಲ್ಲ ಅಂತಾ ''ನಾ ಓದಿದ್ದೇನೆ'' ಅಂದೆ.
ಓ... ಓದ್ದೋರೆಲ್ಲಾ ದೊಡ್ಡೋರಾ? ಬಾಣದ ಪ್ರಶ್ನೆ
ಹೌದು ಮತ್ತೆ... ದಿಟ್ಟಿಸಿದೆ ಮಗನನ್ನೇ!
ನಮ್ ಮೇಷ್ಟ್ರು ''ಎಲ್ಲಾ ಇದ್ದೂ ಏನೂ ಇಲ್ದಂಗ್ ಇರೋನೇ
– ದೊಡ್ಡೋನಂದ್ರು'' – ಮಗನ ರಾಗ.
ಇರಬಹುದು ಏನೀಗ? ನನ್ನ ರೇಗು
ನಿನ್ನಲ್ಲೇನಿದೆ? ... ಕುತೂಹಲ ಅಷ್ಟೆ... ಮಗ ನಿಧಾನವಾಗಂದ!
ಹೌದು, ನನ್ನಲ್ಲೇನಿದೆ?
ಹೆಸರಿಲ್ಲ
ಹಣ-ಅಧಿಕಾರ-ನನ್ನದಲ್ಲ
ಒಳಗೊಂದು ಕಥೆ ಇಲ್ಲ, ನನ್ನದೆಂಬ ಕವಿತೆ ಇಲ್ಲ
'ಎಲ್ಲಾ' ಏನಿದೆ ನನ್ನಲ್ಲಿ? ಉತ್ತರ ಸಿಗಲಿಲ್ಲ
ನಾಳೆ ಹೇಳು – ಎಂದು ಹೊರಗಾಡಲೋಡಿದ ಮಗ
ನಾನಿನ್ನೂ ಇಲ್ಲೇ ಇದ್ದೇನೆ
ಕೂತಿದ್ದೇನೆ
ನಾನು ಏನು?
ಎಷ್ಟು ದೊಡ್ಡವನು?
ನಾಳೆ ಮತ್ತೆ ಮಗನ ಪ್ರಶ್ನೆ
ಉತ್ತರ ಈಗಲೂ ಇಲ್ಲ... ನಾಳೆಯೂ!

ಸಂತೇಬೆನ್ನೂರು ಫೈಜ್ನಟ್ರಾಜ್
ಬ್ರಾಹ್ಮಣಕೇರಿ, ಮಿನಿಟ್ಯಾಂಕ್ ಹತ್ತಿರ, ಸಂತೇಬೆನ್ನೂರು ಅಂಚೆ
ಚನ್ನಗಿರಿ ತಾಲ್ಲೂಕು, ದಾವಣಗೆರೆ ಜಿಲ್ಲೆ - ೫೭೭ ೫೫೨

ವ್ಯವಸ್ಥೆಗಳೂ ಸ್ಥಾಪನೆಯಾಗಿವೆ. ಆದರೆ ಕೇವಲ ಈ ಸಾಂಸ್ಥಿಕ ವ್ಯವಸ್ಥೆಗಳೇ ಬೇಕಾದ ನ್ಯಾಯವನ್ನು ತಂತಾನೆ ಒದಗಿಸುತ್ತವೆ ಎಂದು ಹೇಳಲು ಬರುವುದಿಲ್ಲ.

ವಿಶ್ವಸಂಸ್ಥೆ ಇದೆ. ಆದರೂ ಅದು ಇರಾಕಿನ ವಿರುದ್ಧ, ಅಫ್ಘಾನಿಸ್ತಾನದ ವಿರುದ್ಧ ಅನ್ಯಾಯಗಳು ನಡೆಯುತ್ತಿವೆ; ಅದು ಜಗತ್ತಿನ ಅತಿ ಪ್ರಬಲ ಅಮೆರಿಕಾ ಸಂಯುಕ್ತ ಸಂಸ್ಥಾನದಿಂದ ಎಂಬುದೂ ನಿಜ. ಪ್ಯಾಲೆಸ್ತೈನಿನ ವಿರುದ್ಧ ಇಸ್ರೇಲ್ ದಬ್ಬಾಳಿಕೆ ಮುಂದುವರಿದಿದೆ. ಅಂದರೆ ನ್ಯಾಯದ ಪ್ರಜಾಪ್ರಭುತ್ವದ ಹೋರಾಟಗಳನ್ನು ಸಂಸ್ಥೆಗಳ ನಿರ್ಮಾಣ ಮಾಡುವ ಹಂತದಿಂದ ಮುಂದಿನ ಹಂತಕ್ಕೆ ಮತ್ತಷ್ಟು ಹೋರಾಟಗಳ ಮೂಲಕ ಒಯ್ಯಬೇಕು. ಇದನ್ನೇ ಅಮರ್ತ್ಯ ಸೇನ್ ಹೇಳುವುದು: ಸಂಸ್ಥೆ ಕಟ್ಟಿ ವಿರಮಿಸಿದರೆ ನ್ಯಾಯದ ಹುಡುಕಾಟ ನಿಲ್ಲದು. ಅವುಗಳನ್ನು ಸಮರ್ಪಕವಾಗಿ ಕೆಲಸ ಮಾಡುವಂತೆ ಎಡೆಬಿಡದೆ ಒತ್ತಾಯಿಸುತ್ತಲೇ ಇರಬೇಕು, ನಿಗಾ ಇಡಬೇಕು, ಅವುಗಳ ಕಾರ್ಯವಿಸ್ತಾರ ಮಾಡಿಸಬೇಕು, ಉತ್ತಮಪಡಿಸುತ್ತಿರಬೇಕು.

ಈ ಮೇಲೆ ಪಟ್ಟಿ ಮಾಡಿದ ನಮ್ಮ ರಾಷ್ಟ್ರ ಜೀವನದಲ್ಲಿ ಅಡಗಿರುವ ಹಸಿವು, ಅನಾರೋಗ್ಯದ, ಸಾಮಾಜಿಕ ಅನ್ಯಾಯಗಳ ಹಲವಾರು ದಾರುಣ ಪರಿಸ್ಥಿತಿಗಳನ್ನು ಗಮನಿಸಿ, ಕಾನೂನು ತನ್ನ ಕೆಲಸ ಮಾಡುತ್ತದೆ ಎಂದು ನಿರಾಳವಾಗಿರದೆ, ಅವುಗಳಿಂದ ನಿಜವಾಗಿಯೂ ಆ ಕೆಲಸ ಮಾಡಿಸುವಂತಹ ಒತ್ತಡಗಳನ್ನು ತರಬಲ್ಲ ಹೋರಾಟಗಳನ್ನು ಹೆಣೆಯಬೇಕು. ನ್ಯಾಯಕ್ಕೆ ಹೋರಾಟ ಸರಿ; ಆದರೆ ಕಾನೂನು ವ್ಯವಸ್ಥೆಯ ಪರಿಧಿಯನ್ನು ಗೌರವಿಸಿ ಎಂದು ಹೇಳುವ ಜಾಣ ಕಿವುಡರಿಗೆ ಕೇಳಿಸುವಂತೆ ಸಕಾರಣವಾಗಿ ಅನ್ಯಾಯದ ವಿಶ್ಲೇಷಣೆಯನ್ನು ಅವರ ಮುಂದೆ ಹೇಳಬಲ್ಲವರು ಹೋರಾಟಗಾರರು ಮಾತ್ರ. ಗ್ರಾಮೀಣ ಉದ್ಯೋಗ ಯೋಜನೆಯಂಥವು ಸರಿಯಾಗಿ ನಡೆಯುತ್ತಿಲ್ಲ ಎಂದು ಹೇಳುವುದು ಸುಲಭ. ಅಂಥ ಯಾವ ಶಿಥಿಲತೆಯೂ ಇಲ್ಲದ ಯೋಜನೆಗಳನ್ನು ಇಂದಿನ ಪರಿಸ್ಥಿತಿಯಲ್ಲಿ ಮಾಡುವುದು ಸುಲಭವಲ್ಲ. ಆದರೆ ಈ ಅನ್ಯಾಯದ ವ್ಯವಸ್ಥೆಯಲ್ಲಿ ಅಸಮರ್ಪಕವಾದರೂ ಇಂಥ ಯೋಜನೆಗಳು ಅಗತ್ಯವೆನ್ನುತ್ತಾರೆ ಅಮರ್ತ್ಯ ಸೇನ್. ನೂರಕ್ಕೆ ನೂರು ನ್ಯಾಯಯುತವಾದ ಸಮಾಜ, ಎಲ್ಲರೂ ಒಪ್ಪುವ ಸಿದ್ಧಾಂತ ಇನ್ನೂ ದಕ್ಕಿಲ್ಲದಿದ್ದರೂ, ಅಂಥದೊಂದು ಮಾದರಿ ಸಿದ್ಧವಾಗುವವರೆಗೂ ಕಾಯಬೇಕು ಎನ್ನಲಾದೀತೆ? ಗುಲಾಮಗಿರಿಯ ವಿರುದ್ಧ ೧೮ ಮತ್ತು ೧೯ನೆಯ ಶತಮಾನಗಳ ಹೋರಾಟಗಳನ್ನು ಅಂದು ಮಾಡದೆ, ಇಂದಿಗೆ ಮುಂದೂಡಬೇಕಾಗಿತ್ತು ಎಂದು ಹೇಳಲಾದೀತೆ, ಎನ್ನುತ್ತಾರೆ ಸೇನ್. ನಮ್ಮ ಮಾಧ್ಯಮಗಳು ಇನ್ನೂ ಈ ಹೋರಾಟಗಳಿಗೆ ಇಂಬುಗೊಡುವ ಕೆಲಸಮಾಡಲು ಸಿದ್ಧವಿಲ್ಲ. 'ತಿಳಿದವರು' ಎನ್ನುವವರೂ ಕ್ರಿಯಾಶೀಲರಾಗಿ ಈ ಅನ್ಯಾಯಗಳ ವಿರುದ್ಧ ಮುನ್ನುಗ್ಗಲು ಸಿದ್ಧರಿಲ್ಲ. ಈ ಪರಿಸ್ಥಿತಿಯಲ್ಲಿ ಪ್ರಜಾಪ್ರಭುತ್ವ, ನ್ಯಾಯ, ಮತ್ತು ಶಾಂತಿ ಎಂಬ ವೇದಿಕೆಯ ಮೇಲೆ ನಮ್ಮ ಸಾಮೂಹಿಕ ಚಳುವಳಿಗಳನ್ನು ನಿರ್ಮಿಸಿ ಅದಕ್ಕೆ ಸಂಬಂಧಪಟ್ಟ ಹೋರಾಟಕ್ಕೆ ಪ್ರೇರಣೆ ನೀಡುವ ಪ್ರಮುಖ ದನಿಯಾಗಲು ನಮ್ಮ ಸಾಂಸ್ಕೃತಿಕ ಚಳುವಳಿಗಳಿಗೆ ಮಾತ್ರ ಸಾಧ್ಯವಿದೆ. ಅದರ ರೂಪುರೇಷೆ ಸರಳವೆಂದರೆ ಹೀಗಿರಬಹುದು: (೧) ಜನಸಮುದಾಯದಲ್ಲಿ ಇರುವ ಮುಖ್ಯ ಸಂವೇದನೆಗಳನ್ನು ಗುರುತಿಸಿ ಅವಕ್ಕೆ ದನಿಗೂಡಿಸುವುದು, (೨) ಈ ಸಂಬಂಧ ಜನರಲ್ಲಿ ಅನುಮೋದನೆಯ ಒಲವನ್ನು ಸಂಘಟಿಸಿ ಬಲಪಡಿಸುವುದು, (೩) ಜನಸಮೂಹದಲ್ಲಿ ಅಡಗಿರಬಹುದಾದ ದೋಷಗಳನ್ನು ಎತ್ತಿ ತೋರಿಸುವುದು; ವಸ್ತುಸ್ಥಿತಿಯನ್ನು ಚಾಪೆಯ ಕೆಳಗೆ ತೂರಿಸಿರುವುದನ್ನು ಬಹಿರಂಗಪಡಿಸಿ, ಅದನ್ನು ಚರ್ಚೆಯಲ್ಲಿ ಪ್ರಮುಖವಾಗಿಸುವುದು. ಹೀಗಾದಾಗಲೇ ಸಾಮಾಜಿಕ ನ್ಯಾಯವೆಂಬುದಕ್ಕೆ ಅರ್ಥಕೊಡುವ ಚಳುವಳಿಗಳು ಸಾಧ್ಯ. ಸಾಮಾಜಿಕ ಶಾಂತಿಯ ಸಾಧನೆ ಸಾಮಾಜಿಕ ನ್ಯಾಯವಿಲ್ಲದೆ ಸಾಧ್ಯವಿಲ್ಲ. ಇದಕ್ಕೆ ಪ್ರಜಾಪ್ರಭುತ್ವವೇ ಏಕೈಕ ಮಾರ್ಗ. ಪ್ರಜಾಪ್ರಭುತ್ವವೆಂಬುದು ಒಂದು ರಾಜಕೀಯ ಕೂಗಲ್ಲ, ಅದು ಒಂದು ವಿಶ್ವಾಸ ಹಾಗೂ ನೈತಿಕ ಚಚ್ಚರ.

(ಕಳೆದ ಅಕ್ಟೋಬರ್‌ನಲ್ಲಿ ಉಡುಪಿಯಲ್ಲಿ 'ಸಮುದಾಯ' ನಡೆಸಿದ ವಿಚಾರ ಸಂಕಿರಣದಲ್ಲಿ ಮಂಡಿಸಿದ ಇಂಗ್ಲಿಷ್ ಪ್ರಬಂಧದ ಭಾವಾನುವಾದ – ಅನುವಾದ: ಕೆ. ಎಸ್. ಪಾರ್ಥಸಾರಥಿ)

**ಡಾ|| ವಿ. ಕೃಷ್ಣ ಅನಂತ್**
ಫೆಲೋ, ನೆಹರು ಮೆಮೋರಿಯಲ್ ಮ್ಯೂಸಿಯಂ ಮತ್ತು ಲೈಬ್ರರಿ, ನವದೆಹಲಿ
e-mail : Krishnaananth@gmail.com

# ತಮೋದೀಕ್ಷೆ



**ಧರ್ಮಾಂಧತೆ, ಮತಾಂಧತೆ, ಭಾಷಾಂಧತೆ, ಜಾತ್ಯಂಧತೆ ಇತ್ಯಾದಿ ಪದಗಳೆಲ್ಲವೂ ನಾವು ಸಾಮಾನ್ಯವಾಗಿ ಬಳಸುವಂಥವೇ. ಈಗಿನ ಮತಾಂತರ, ಧರ್ಮಾಂತರ, 'ಊರು - ಕೇರಿ'ಗಳಲ್ಲಿ ದೀಕ್ಷೆಗಳ ನಾಟಕದ ಸಂದರ್ಭದಲ್ಲಿ ಈ ಕತೆ ತುಂಬ ಮಹತ್ವಪೂರ್ಣವಾದುದು. ದೇವರು, ಧರ್ಮ, ಜಾತಿ, ಪ್ರೀತಿ, ಸಂಪ್ರದಾಯ, ಹಣ ಇತ್ಯಾದಿಗಳ ಆಮಿಷಗಳನ್ನೊಡ್ಡಿ ನಮ್ಮನ್ನು ಗೊಡ್ಡಾಗಿಸುವ, ಮೂಢರನ್ನಾಗಿಸುವ, ಕುರುಡಾಗಿಸುವ ಶಕ್ತಿಗಳನ್ನು ಕುರಿತು ಈ ಕತೆ ಎಚ್ಚರಿಸುತ್ತದೆ. ಮತ್ತೆ ಅದೇ ಕಾರಣಗಳಿಗಾಗಿ ಕುರುಡಾಗುವ ಬೆಪ್ಪುತಕ್ಕಡಿಗಳನ್ನೂ ತೋರಿಸುತ್ತದೆ. ಈ ಕತೆಯ ವ್ಯಕ್ತಿಗಳು, ಅವರ ಪ್ರಪಂಚ ನಮ್ಮ ಈ ಹೊತ್ತಿನ ಆಗುಹೋಗುಗಳಿಗೆ ಕನ್ನಡಿ ಹಿಡಿಯುತ್ತಾರೆ. ಇಲ್ಲಿಯ ಐ, ವೈ, ಶೈ ಗಳು ಇಂದಿನ ಮುಲ್ಲಾ, ಪಾದ್ರಿ, ಪೇಜಾವರಗಳ ಪ್ರತಿಬಿಂಬಗಳಂತೆ ತೋರುತ್ತವೆ.**

**ವಿಜಯವಾಮನ**

**ಚ**ನ್ನ ಒಬ್ಬ ಉತ್ಸಾಹಿ, ಸಾಹಸಿ ತರುಣ. ದೊಡ್ಡಬೆಟ್ಟದ ಅತ್ಯಂತ ದುರ್ಗಮವಾದ ಕಣಿವೆಗಳು, ಕೋಡುಗಲ್ಲುಗಳು, ಪ್ರಪಾತಗಳು, ಅಭೇದ್ಯ ಅರಣ್ಯಗಳು, ಅಪಾಯಕಾರಿ ಮಡುಗಳು, ನಿಷ್ಕರುಣ ನದಿಗಳು ಎಲ್ಲವನ್ನು ಅಂಗೈ ಮೇಲಿನ ನೆಲ್ಲಿಕಾಯಿಯ ಹಾಗೆ ತಿಳಿದವನಾಗಿದ್ದ. ದೊಡ್ಡಬೆಟ್ಟದ ಮುಂದೆ ಹಿಮಾಲಯವೂ 'ಠುಸ್' ಎನ್ನುತ್ತಿದ್ದ, ಬೆಟ್ಟ ನೋಡಲು ಬರುತ್ತಿದ್ದ ಟೂರಿಸ್ಟ್‌ಗಳಿಗೆ ಇದು ಅತಿರೇಕವೆನಿಸಿದರೂ ಅವನು ಕರೆದೊಯ್ದು ತೋರಿಸುತ್ತಿದ್ದ ದೃಶ್ಯಗಳು ಅವರನ್ನು ತೆಪ್ಪಗಾಗಿಸುತ್ತಿದ್ದವು.

ಒಂದು ದಿನ ಯಥಾಪ್ರಕಾರ ಕೋಡುಗಲ್ಲಿನ ತುಟ್ಟ ತುದಿ ಹತ್ತಿ ಪ್ರವಾಸಿಗರನ್ನು ಅಣಕಿಸುತ್ತಾ, ''ಹೆದರಿಕೇನಾ ? ಮೈ ಹ್ಲೂ ನ ?'' ಎಂದು ಸಿನೆಮಾ ಡಯಲಾಗನ್ನು ಹೊಡೆಯುತ್ತಿದ್ದವನೇ ಕೋಡುಗಲ್ಲಿನ ತುದಿಯಿಂದ ಆಚೆ ಪ್ರಪಾತಕ್ಕೆ ಬಿದ್ದುಹೋದ. ಬಂದಿದ್ದ ಪ್ರವಾಸಿಗರು ದಿಕ್ಕೆಟ್ಟು, ಕಂಗಾಲಾಗಿ ಅಸಹಾಯಕರಾಗಿ ನಿಂತೇ ಇದ್ದರು. ಯಾರೂ ಆ ಕೋಡುಗಲ್ಲನ್ನು ಹತ್ತುವ ಧೈರ್ಯ ಮಾಡಲಿಲ್ಲ. ''ಹಲೋ... ಚನ್ನಾ... ಚನ್ನಾ. ಕಮ್ ಬ್ಯಾಕ್''... ಮುಂತಾಗಿ ನಿಂತಲ್ಲೇ ಕೂಗುವುದರ ಹೊರತಾಗಿ ಅವರಿಗೆ ಮತ್ತೇನೂ ಮಾಡಲಾಗಲಿಲ್ಲ. ತಂಡದಲ್ಲಿದ್ದ ಹುಡುಗಿಯರು ಹೆದರಿಕೆಯಿಂದ ಮುಸಿ ಮುಸಿ ಅಳಲು ಪ್ರಾರಂಭಿಸಿದ್ದು, ನಿಧಾನವಾಗಿ ಸಂಜೆಯಾಗಿ ಕತ್ತಲಾವರಿಸಿದ್ದು ಅವರೆಲ್ಲರನ್ನೂ ಮತ್ತೆ ಬೇಸ್ ಕ್ಯಾಂಪ್ ಕಡೆಗೆ ಹೊರಡುವಂತೆ ಮಾಡಿತು.

ನೂರಾರು ಅಡಿಗಳಿಂದ ಕೆಳಗೆ ಉರುಳಿದ್ದರೂ ಅವನಿಗೆ ಅಂಥಾ ಪೆಟ್ಟೇನೂ ಆಗಿರಲಿಲ್ಲ. ಒತ್ತೊತ್ತಾಗಿ ಬೆಳೆದು ಮೆತ್ತಗಾಗಿದ್ದ ಹಸಿರು ಹುಲ್ಲಿನ ಮೇಲೆ ಬಿದ್ದಿದ್ದರಿಂದ ಬಚಾವಾಗಿದ್ದ. ಯಾರಿಗೂ ಹೆದರದಿದ್ದ ಅವನು ನಂಬಿಕೆಯೇ ಬರದೆ ಮೈಕೈಗಳನ್ನೆಲ್ಲ ತಡವಿ ಸವರಿಕೊಳ್ಳುತ್ತಾ ಯಾವ ಮೂಳೆಯೂ ಮುರಿದಿಲ್ಲವೆನ್ನುವುದನ್ನು ಖಾತ್ರಿ ಪಡಿಸಿಕೊಂಡ. ಸಣ್ಣಗಾಯಗಳಿಂದಾಗಿ ಕುಂಯ್‌ಗುಡುತ್ತಾ ಹೊತ್ತು ಮೂಡುವವರೆಗೂ ಹಾಗೇ ಬಿದ್ದಿದ್ದ.

ಬೆಳಕು ಹರಿಯುವುದಕ್ಕೂ ಮುಂಚೆ ಮೆಲ್ಲಗೆ ಕಣ್ಣುಬಿಟ್ಟ ಅವನಿಗೆ ಕಂಡಿದ್ದು ಮೋಡಗಳ ರಾಶಿ ಅಲೆಅಲೆಯಾಗಿ ನುಗ್ಗಿ ಬೆಟ್ಟಕ್ಕೆ ಢಿಕ್ಕಿ ಹೊಡೆಯುತ್ತಿದ್ದ ದೃಶ್ಯ. ತುಂಬ ಕೆಳಗೆ, ಅವನು ಮುಗ್ಗರಿಸಿದ್ದ ಕೋಡುಗಲ್ಲಿನ ಥರದ್ದೇ ಇದ್ದ ಇನ್ನೊಂದು ಕೋಡುಗಲ್ಲಿಗೆ ಆ ಮೋಡಗಳು ಢಿಕ್ಕಿ ಹೊಡೆಯುತ್ತಾ ಇದ್ದಿದ್ದು.

ಅದೇನು ಆಕರ್ಷಣೆಯೋ, ನಿಧಾನವಾಗಿ ಉಸಿರೆಳೆದುಕೊಂಡು ಅವನು ಆ ಕೋಡುಗಲ್ಲಿನ ಕಡೆ ಇಳಿಯತೊಡಗಿದ. ಆ ಕೋಡುಗಲ್ಲು ಅವನನ್ನು ಸೂಜಿಗಲ್ಲಿನ ಹಾಗೆ ಸೆಳೆಯುತ್ತಿತ್ತು. ಸ್ವಲ್ಪ ದೂರ ಇಳಿದು ಮತ್ತೆ ಆ ಕೋಡುಗಲ್ಲನ್ನು ಹತ್ತುವುದು ಕಷ್ಟವೆಂದೇನೂ ಅವನಿಗೆ ಅನ್ನಿಸಲಿಲ್ಲ. ಆ ಕೋಡುಗಲ್ಲಿನ ತುದಿಯೇರಿ ನಿಂತ ಅವನಿಗೆ ಕಂಡಿದ್ದು ಸಾವಿರಾರು ಅಡಿಗಳ ಪ್ರಪಾತ. ಹಸಿರು ಇಳಿಜಾರು. ಕಡುಹಸಿರಿನ ಕಾನು. ಬೆಳ್ಳಿ ದಾರದಂತೆ ಹೊಳೆಯುತ್ತಿದ್ದ ಹೊಳೆ. ಹಿಂಜಿದ ಹತ್ತಿಯಂತೆ ತೇಲಿತೇಲಿ ಬರುತ್ತಿದ್ದ ಮೋಡಗಳು. ಅವು ಇವನ ಬಳಿಗೂ ಬಂದು ಮೈ ಸೋಕಿ ಮುಂದೆ ಸಾಗಿದಾಗ ಅವನಿಗೆ ಗೊತ್ತಿಲ್ಲದೇ ''ಆಹ್'' ಎಂದ. ಮುಂಚೆ ಈ ಜಾಗವನ್ನು ನೋಡೇ ಇರಲಿಲ್ಲವಲ್ಲ ಎನ್ನಿಸಿತು. ದಟ್ಟಕಾನನದ ನಡು ನಡುವೆ ಹಸಿರು ಗದ್ದೆಗಳು. ಅವುಗಳ ಆಸುಪಾಸಿನಲ್ಲೇ ವಿಚಿತ್ರವೆನ್ನಿಸುವಂಥಾ ಕಲ್ಲುಗೂಡುಗಳು! ಇವೆಲ್ಲವನ್ನೂ ಸುತ್ತುವರಿದು ನಿಂತಿದ್ದ ಕೋಟೆಯಂಥ ಗೋಡೆ!

ಸಾಕಷ್ಟು ದೂರ ಹೋದ ನಂತರ ಅವನು ಬಿಸಿಲಾಡುತ್ತಿದ್ದ ಗದ್ದೆಗಳು ಹಾಗೂ ವಿಚಿತ್ರವಾಗಿದ್ದ ಕಲ್ಲುಗೂಡುಗಳ ಬಳಿ ಬಂದಿದ್ದ. ಅವು ಇವನೆಂದು ಕೊಂಡಂತೆ ಗೂಡುಗಳಾಗಿರದೆ ಮನೆಗಳಾಗಿದ್ದು, ಒಂದೇ ಸಾಲಿನಲ್ಲಿ ಉದ್ದಕ್ಕೆ, ನಡುವೆ ಅಂತರವೇ ಇಲ್ಲದೆ ಕಟ್ಟಿದ ಜೈಲುಖಾನೆಗಳ ಥರ ಇದ್ದುವು. ಅವನಿಗೆ ಅಚ್ಚರಿ ಎನಿಸಿದ್ದು ಈ ಸಾಲು ಬಂದೀಖಾನೆಗಳಿಗಿಂತ ಸಾಲುಗಳ ನಡುವಿದ್ದ ಆ ರಸ್ತೆ. ನಂಬಲಸಾಧ್ಯವಾದಷ್ಟು ಕ್ಲೀನಾಗಿತ್ತು ಅದು! ಆ ಬಂದಿಖಾನೆಗಳಂಥಾ ಸಾಲು ಮನೆಗಳಿಗೆ ಅಲ್ಲೊಂದು- ಇಲ್ಲೊಂದು ಬಾಗಿಲುಗಳು ಕಂಡವೇ ಹೊರತು ಯಾವುದಕ್ಕೂ ಕಿಟಕಿಗಳೇ ಇರಲಿಲ್ಲ.




ಮೂವರು ವ್ಯಕ್ತಿಗಳು ಆ ಕ್ಷೀಣವಾದ ರಸ್ತೆಯಲ್ಲಿ, ಕಾವಡಿಗಳನ್ನು ಹೊತ್ತು ಇವನೆಡೆಗೆ ಬಂದರು. ಕಾವಡಿಯಲ್ಲಿ ನೀರು ತುಂಬಿದ ಕೊಡಗಳಿದ್ದವು. ಅವರನ್ನು ಕಂಡವನೇ ಇವನು ಸಹಾಯಕ್ಕಾಗಿ ಜೋರಾಗಿ ಕೂಗಿಕೊಂಡ. ಇವನೆಡೆಗೇ ಬರುತ್ತಿದ್ದ ಆ ವ್ಯಕ್ತಿಗಳು ಥಟ್ಟನೆ ನಿಂತು ತಂತಮ್ಮ ಮುಖಗಳನ್ನು ಆ ಕಡೆಗೊಮ್ಮೆ ಈ ಕಡೆಗೊಮ್ಮೆ ಹೊರಳಿಸಿದರು. ಅವರಿಗೆ ಅವನು ಕಾಣಲೇ ಇಲ್ಲ. ಅವನು ಮತ್ತೊಮ್ಮೆ ಅರಚಿದ.

'ಥೂ... ಕುರುಡ ನನ್ಮಕ್ಕಳು' ಅಂದುಕೊಂಡ. ಕೊನೆಗೆ ತೀರಾ ಅವರ ಹತ್ತಿರವೇ ಹೋಗಿ ನೋಡಿದಾಗ ಆ ಮೂವರೂ ಒಬ್ಬರ ಪಕ್ಕ ಒಬ್ಬರು ನಿಂತು, ಕಿವಿ ನಿಗುರಿಸಿಕೊಂಡು, ಸಟ್ಟನೆ ಇವನ ಕಡೆ ತಿರುಗಿದರು. ಅವರಿಗೆ ಕಣ್ಣುಗಳೇ ಇರಲಿಲ್ಲ! ಕಣ್ಣುಗುಡ್ಡೆಗಳೇ ಇರದೆ ಅಲ್ಲಿಯೂ ಚರ್ಮ ಬೆಳೆದುಕೊಂಡುಬಿಟ್ಟಿತ್ತು. ರೆಪ್ಪೆಯೂ ಇರಲಿಲ್ಲ!

''ಯಾರೋ ಮನುಷ್ಯ ಇದ್ದ ಹಾಗಿದೆ'' ಅವರ ಪೈಕಿ ಒಬ್ಬ ಮಾತಾಡಿದ. ಅದು ಕನ್ನಡದ ಹಾಗೇ ಇದ್ದರೂ ಇವನು ಮಾತಾಡುವ ಕನ್ನಡವಾಗಿರಲಿಲ್ಲ! ''ಮನುಷ್ಯನೋ ದೆವ್ವಾನೋ... ಆ ಕೋಡುಗಲ್ಲಮ್ಮನ ಕಡೇಯಿಂದ ಇಳಿದು ಬಂದ ಹಾಗಿದೆ'', ಇನ್ನೊಬ್ಬ ಮಾತಾಡಿದ. ಇವನಿಗೋ ವಿಚಿತ್ರವಾದ ಧೈರ್ಯ, ಖುಷಿ! 'ಕುಲ್ಡ ಬಡ್ಡೀಮಕ್ಳು. ಕುಲ್ಡರ ರಾಜ್ಯದಲ್ಲಿ ಒಕ್ಕಣ್ಣನೇ ರಾಜಾ' ಅಂದುಕೊಂಡ. ಅವನು ಅವರತ್ತ ಸಾಗಿ ''ನಮಸ್ಕಾರ ಚೆನ್ನಾಗಿದೀರಾ ?'' ಅಂದ.

''ಎಲ್ಲಿಂದ ಬಂದಿದ್ದಂತೆ ಅವನು, ಅಣ್ಣ ಶೈ ?'' ಅಂತ ಒಬ್ಬ ಕೇಳಿದ. ''ಅಗೋ... ಅಲ್ಲಿ... ಆ ದೊಡ್ಡ ಬೆಟ್ಟದ... ಆ... ಕಡೆಯಿಂದ ಬಂದಿರೋದು ಸ್ವಾಮಿ ನಾನು. ನಮ್ಮೂರು ತುಂಬ ದೊಡ್ಡದು. ಸಾವಿರಾರು ಜನ ಇದಾರೆ ಅಲ್ಲಿ. ಎಲ್ಲಿಂದ ಎಲ್ಲಿಗೆ ನೋಡಿದರೂ ಊರು ಕಾಣಿಸ್ತಾನೇ ಇರತ್ತೇ ಸಾರ್.''

''ಕಾಣಿಸತ್ತೆ ?'' ಗೊಣಗಿದ ಶೈ.

ಆ ಮೂವರು ಅರೆಕ್ಷಣದಲ್ಲಿ ಛಕ್ ಅಂತ ಒಟ್ಟಿಗೆ ಇವನ ಕಡೆ ತಿರುಗಿ ಮಿಲಿಟರಿಯವರ ಥರಾ ಬಂದರು. ಇವನು ಬೆಚ್ಚಿ ಎರಡು ಹೆಜ್ಜೆ ಹಿಂದೆ ಹಾರಿದರೂ ಅವರ ಈಟಿ ಥರದ ಕೈಗಳಿಂದ ತಪ್ಪಿಸಿಕೊಳ್ಳಕ್ಕೇ ಆಗಲಿಲ್ಲ. ಒಬ್ಬೊಬ್ಬರೂ ಇವನ ಮೈದಡವಿ, ಮುಖ ಸವರಿ, ಹೆದರಿ ಪರಗುಟ್ಟುತ್ತಿದ್ದ ಇವನ ಕಣ್ಣುಗಳ ಮೇಲೆಲ್ಲ ಬೆರಳಾಡಿಸಿದರು.

''ಯಾವ್ದೋ ವಿಚಿತ್ರ ಪ್ರಾಣಿ ಕಣಾ ವೈ'' ಅಂದ ಶೈ.

''ದೊಡ್ಡೋರ್ ಹತ್ರಾ ಕರ್ಕೊಂಡ್ ಹೋಗಣ್ವಾ ?'' ಅಂದ ಐ.

ಇವನ ತಲೆ ಕೆಟ್ಟೋಯ್ತು. ಇದೇನು ವಿಚಿತ್ರ ಜನ. ಇವರ ಹೆಸರುಗಳೋ ಐ, ವೈ, ಶೈ. ನಗು ಬಂತು ಇವನಿಗೆ. ನಗು ತಡಕೊಂಡೇ ''ನನಗೆ ಎಲ್ಲ ಕಾಣಿಸತ್ತೆ'' ಅಂದ.

''ಕಾಣಿಸತ್ತೆ ?!''

''ಹೂ ಕಣ್ರೀ. ಕಾಣಿಸತ್ತೆ'' ಅಂತ ಹೇಳ್ತಾ ತಿರುಗಿದಾಗ ಅವರು ಹೊತ್ತು ನಿಂತಿದ್ದ ಕಾವಡಿಗಳಿಗೆ ಮಂಡಿ ತಾಗಿಸಿಕೊಂಡು ಎಡವಿ ನಿಂತ.

''ಇನ್ನೂ ಸರಿಯಾಗಿ ಬೆಳವಣಿಗೇನೇ ಆಗಿಲ್ಲ ಇದು'' ಅಂದ ಶೈ.

''ನಿಂತ ನಿಂತಲ್ಲೇ ಎಡವ್ತಾನೆ,'' ಅಂದ ಐ.

''ಅರ್ಥವೇ ಇಲ್ಲದ ಮಾತುಗಳಾಡ್ತಾನೆ. ಕೈ ಹಿಡಿದು ನಡಸರೋ ಅವನ್ನ'' ಇದುವರೆಗೂ ಮಾತೇ ಆಡಿರದಿದ್ದ ವೈ ಮಾತಾಡಿದ್ದ.

ಮೂವರ ಪೈಕಿ ವೈ ಸ್ವಲ್ಪ ಕುಳ್ಳ. ಆವಾಗಲೇ ಅವನು ಅವರನ್ನೆಲ್ಲ ಸರಿಯಾಗಿ ಗಮನಿಸಿದ್ದು. ಎಲ್ಲರ ಮೈ, ತೋಳು, ಹಣೆ ಮೇಲೂ ಚಿತ್ರ-ವಿಚಿತ್ರವಾದ ಗುರ್ತುಗಳು. ಹೊಟ್ಟೆ, ಎದೆ ಮೇಲೂ ಹಾಗೇ. ಸೀಮೆಸುಣ್ಣದಿಂದ ಬಳಕೊಂಡಿದ್ದು. ಮೈತುಂಬ ಎಳೆ-ಎಳೆ ನೂಲುದಾರ. ತಲೆತುಂಬ ಕೂದಲಿದ್ದರೂ ಹಿಂದುಗಡೆ ಒಂದು ಪೋನಿಟೈಲು. ಆ ಕುಳ್ಳ ಬಡ್ಡೀಮಗ ತುಂಬಾ ಚಾಲಾಕಿ ಅಂತ ಅನ್ನಿಸಿತು ಇವನಿಗೆ. ಅವನು ಹಾಗೆ ಯೋಚ್ನೆ ಮಾಡ್ತಾ ಇದ್ದಾಗಲೇ...

''ಏನೋ... ನಿನ್ ಹೆಸರು ?'' ತುಪಾಕಿ ಥರಾ ಕೇಳ್ತು ಆ ಕುಳ್ಳ.

''ಚನ್ನ:''

''ಚನ್ನ: !?'' ಆ ಕುಳ್ಳ ಅಸಹ್ಯದಿಂದ ರಿಪೀಟ್ ಮಾಡ್ದ.

ಮಿಕಿಮಿಕಿ ನೋಡ್ತಾ ಅವನು ಆ ಮೂವರನ್ನೂ ಹಿಂಬಾಲಿಸಿದ. ಅವರು ಅವನಿಗೆ ಯಾವುದೇ ಸೂಚನೆಯನ್ನೂ ಕೊಡದೇ ಧಡಕ್ಕನೆ ಬಂದೀಖಾನೆಯ ಬಾಗಿಲೊಂದರಲ್ಲಿ ತಳ್ಳಿದರು.

ಒಳಗೆ ಗಾಢಾಂಧಕಾರ. ಕತ್ತಲೊಳಗಿಂದ ಹಲವಾರು ಮುದಿ ದನಿಗಳು ನಾನಾ ರೀತಿಯ ಪ್ರಶ್ನೆಗಳನ್ನು ಇವನ ಮೇಲೆ ಹರಿಯಬಿಟ್ಟರು. ಇವನೂ ಪೆದ್ದ ಗುಂಡನ ಹಾಗೆ ದೊಡ್ಡ ಬೆಟ್ಟದಾಚೆಗಿನ ತಮ್ಮೂರಿನ ಬಗ್ಗೆ, ತಮ್ಮ ಜನಗಳ ಬಗ್ಗೆ ಏನೇನೋ ಬಡಬಡಿಸಿದ. ಅವರಿಗೇನೂ ಅರ್ಥವಾಗಲಿಲ್ಲ. ಅವರಿಗೆ ಅರ್ಥವಾಗುವುದೂ ಬೇಕಾಗಿರಲಿಲ್ಲ.

# ಓಟದ ಕಣದಲ್ಲಿ ಕಾಲ



ಓಟದ ಸ್ಪರ್ಧೆಯಲ್ಲಿ ನಿಂತಿದ್ದಾಳೆ ಪುಟ್ಟಿ
ಎಲ್ಲ ಹಿಂದಿಕ್ಕಿ ಓಡುವ
ಹುರುಪು ಮೈದುಂಬಿದೆ

'ಮಳೆಬಿದ್ದ ನೆಲ ಜಾರುತ್ತೇ ಮಗೂ'
ಅಮ್ಮನ ಕಳಕಳಿ ಬೆನ್ನು ಚುಚ್ಚುತ್ತದೆ

ಒಬ್ಬೊಬ್ಬರ ಭಾವ ಭಂಗಿಗಳೂ
ಬೇಟೆ ಮೇಲೆರಗುವ ಚಿರತೆಯಂತೆ
ಅಟ್ಟಾಡಿಸಿ ಕೊಲ್ಲಹೊರಟಂತಿವೆ
'ಖೋ' ಕೊಡುತ್ತ ಒಬ್ಬರಿಗೊಬ್ಬರು
ಮುಗಿಯದ ಆಟ ಶುರುವಾಗಿದೆ
''ಹುಶಾರು ಮಗಳೆ'' ಅಮ್ಮನ ಕನವರಿಕೆ
ಎದೆಯಲ್ಲಿ ಸಿಕ್ಕ ಅಗುಳಾಗುತ್ತದೆ

ಅಮ್ಮ,
ಪುಸ್ತಕದ ಘಮಕ್ಕೆ ನವಿರೆದ್ದು
ಅರಳುತ್ತ ಬಸವ ಕಮಲರ ಲೋಕದಲಿ
ಒಂದು ಎರಡು ಬಾಳೆಲೆ ಹರಡುತ್ತ
ಊಟದಾಟದಲಿ ಮಗ್ನಳಾದವಳು
ಸ್ರಾವದಬಟ್ಟೆ ಹಿಂಡಿಹಿಂಡಿ ಮೂಲೆಯಲಿ
ಬಚ್ಚಿಡಲು ಹೈರಾಣಾದವಳು
ದೊಗಲೆ ಲಂಗದಲಿ ಪುಳಕ ಮರೆಮಾಡಿದವಳು

ಮಗಳು,
ಕಣ್ಣು ತಿಕ್ಕುತ್ತ ಎದ್ದವಳೆ ಟ್ಯೂಶನ್ನಿಗೋಡುತ್ತ
ಗ್ರೇಡು – ರ್‍ಯಾಂಕುಗಳಲ್ಲಿ ಕಳೆದವಳು
ಬ್ರೆಡ್ ಜಾಮು ಫಿಜ್ಜಾಪೆಪ್ಸಿಗಳ
ರೆಡಿಮೇಡು ಲೋಕದ ವೇಗಕ್ಕೆ ಒಲಿದವಳು
ಪ್ಯಾಡಿನ ಮಡಿಕೆಯಲ್ಲಿ ಕಲೆಯ ಮುಚ್ಚಿಟ್ಟು
ಉಬ್ಬು ತಗ್ಗುಗಳ ತೆರೆದಿಟ್ಟು ಕೆಣಕುವ
ಒರಟು ಜೀನ್ಸಿನಲಿ ಕೇರ್‌ಫ್ರೀ ಆದವಳು

ಅಮ್ಮನ ಹುಸಿಭಾವುಕತೆ ಗೇಲಿಮಾಡುವ
ಹುಡುಗಿಯ ಗೋಲಿಕಣ್ಣುಗಳಲ್ಲಿ
ಜಗತ್ತನ್ನೇ ಗೋಲಿಮಾಡಿ
ಆಡುವ ಉನ್ಮಾದ
ನೇಪಥ್ಯದಲ್ಲಿ ಕೂತು ಕಾಯುವ
ಅಮ್ಮನಿಗೆ ಮಗಳೆಂದರೆ
ಬೆರಗು, ಭಯ, ಅನುಮಾನ
ಅಮ್ಮ ನಿಂತ ನೆಲ, ಮಗಳ ಓಟದ ಕಣ,
ಕಾಲು ನಿಲ್ಲುವುದಿಲ್ಲ, ಕಾಲವೂ !

ಗೀತಾ ವಸಂತ
ಕೇರಾಫ್ ಡಿ. ಸಿ. ಸಕ್ಕರಿ, ನಿರ್ಮಲ ನಗರ, ೧೧ನೇ ತಿರುವು, ಧಾರವಾಡ - ೫೮೦ ೦೦೩

ಐನೂರು-ಐನೂರು ವರ್ಷಗಳಿಂದ ಈ ಜನಗಳು ಹೀಗೇ ಕತ್ತಲ-ಜೀವನ ನಡೆಸಿ ಹೊರಗಿನ ಜಗತ್ತು ಹಾಗೂ ಕಾಣ್ಕೆಗೆ ಸಿಗುವ ಎಲ್ಲ ವಸ್ತುಗಳನ್ನೂ, ಅವುಗಳ ಹೆಸರುಗಳನ್ನೂ ತಮ್ಮ ಸ್ಮೃತಿಯಿಂದಲೇ ಆಚೆಗೆ ತಳ್ಳಿಬಿಟ್ಟಿದ್ದರು.

ಇವರು ಹೀಗೆಂದು ಅರ್ಥವಾಗುತ್ತಲೇ ಅವನು ತಾನು ಮಾತನಾಡುವುದನ್ನು ಕಡಿಮೆ ಮಾಡಿ ಸುಮ್ಮನೆ ಅವರ ಮಾತುಗಳನ್ನು ಕೇಳುತ್ತಾ ಕೂರುತ್ತಿದ್ದ. ಆ ಮುದಿಗಳು ಅವರ ವಿಶ್ವ – ಅಂದರೆ ಸಾಲು ಸಾಲು ಬಂದೀಖಾನೆಗಳು – ಸೃಷ್ಟಿಯಾದ ಬಗ್ಗೆ ಪುರಾಣ ಬಿಚ್ಚುತ್ತಿದ್ದರು. ಮೊದಲು ಬರೀ ಕೊಳ್ಳವಾಗಿದ್ದ ಜಾಗ ಅದು. ನಂತರ ಸ್ಪರ್ಶೇಂದ್ರಿಯವೇ ಇಲ್ಲದ ಜಡವಸ್ತುಗಳ ಸೃಷ್ಟಿಯಾಯ್ತು. ನಂತರ ಅತ್ತ ದನವೂ ಅಲ್ಲದ ಇತ್ತ ಎಮ್ಮೆಯೂ ಅಲ್ಲದ ತುಪ್ಪಳದ ಪ್ರಾಣಿಗಳು ಬಂದವು. ಆಮೇಲೆ ಮನುಷ್ಯರ – ಅಂದರೆ ಈ ಕತ್ತಲ ರೂಪದವರ – ಆಗಮನವಾಯ್ತು. ಕೊನೆಯಲ್ಲಿ ದೇವತೆಗಳು ಈ ವಿಶ್ವಕ್ಕೆ ಧುಮುಕಿದರು. ದೇವತೆಗಳೆಲ್ಲ ತುಂಬ ಚಂದವಾಗಿ ಹಾಡುತ್ತಿದ್ದರು, ಪರಪರ ಪತರಗುಟ್ಟುತ್ತಿದ್ದರು, ಯಾರೂ ಇವರ ಕೈಗೆ ಸಿಕ್ಕುತ್ತಲೇ ಇರಲಿಲ್ಲ; ಇತ್ಯಾದಿ ಇತ್ಯಾದಿ ವಿಶ್ವ ಸೃಷ್ಟಿಯ ಕುರಿತು ಭಯಂಕರ ಪ್ರವಚನ ನಡೆಯುತ್ತಿದ್ದಾಗ ಚಕಿತಗೊಂಡಿದ್ದ ಇವನಿಗೆ ಯಾಕೋ ಒಮ್ಮೆಲೆ ತಮ್ಮೂರಿನ ಕೆಂಬೂತ, ಮೈನಾ, ಪಾರಿವಾಳ, ಕಾಗೆ, ಗುಬ್ಬಿಗಳೆಲ್ಲ ನೆನಪಾದುವು !

ಮತ್ತೆ ಆ ಮುದಿಯರು ಮಾತು ಕೊಚ್ಚಲು ಸುರುವಿಟ್ಟರು. ಅವರ ಪಾಲಿಗೆ ತಂಪಾಗಿದ್ದರೆ ರಾತ್ರಿ; ವಾತಾವರಣ ಬಿಸಿಯಾಗಿದ್ದಾಗ ಹಗಲು. ಅಲ್ಲಿಯ ಜನ ಟೈಮನ್ನು ಅಳೆಯುತ್ತಿದ್ದುದೇ ಹಾಗೆ. ದನವೂ ಅಲ್ಲದ ಎಮ್ಮೆಯೂ ಅಲ್ಲದ ಆ ಗಿಡ್ಡ ತಳಿಯ ಪ್ರಾಣಿಯ ಹಾಲನ್ನು ಅವರೆಲ್ಲರೂ ಕುಡಿಯುತ್ತಿದ್ದರು. ಮುಂಚಿನ ದಿನಗಳಲ್ಲಿ ಆ ಪ್ರಾಣಿಯ ಮಾಂಸವನ್ನು ತಿನ್ನುತ್ತಿದ್ದು ನಂತರದಲ್ಲಿ ಯಾಕೋ ಏನೋ ಅದು ನಿಷಿದ್ಧವಾಯ್ತು. ಕಗ್ಗತ್ತಲಲ್ಲೇ ಕಲಸಿಟ್ಟ ಕೆಟ್ಟ ಹಳಸಿದ ಮುದ್ದೆಯೂ ಅಲ್ಲದ, ರೊಟ್ಟಿಯೂ ಅಲ್ಲದ ಒಂದು ತಿಂಡಿ. ಬದುಕಲು ಬೇರಾವ ಮಾರ್ಗವೂ ತಿಳಿಯದೆ ಹಸಿವು ಹಿಂಗಿಸಿಕೊಳ್ಳಲು ಅವನು ಅನಿವಾರ್ಯವಾಗಿ ಈ ಕತ್ತಲ ಪರಂಪರೆಗೆ ಸೇರಿಕೊಳ್ಳಬೇಕಾಯ್ತು.

''ಓ... ಹೋಯ್'' ಒಂದು ದನಿ ಕರೆಯಿತು. ಕತ್ತಲಲ್ಲೇ ಸಟ್ಟನೆದ್ದ ಅವನು ಕೋಣೆಯ ಬಾಗಿಲೆಡೆ ಸಾಗಿದ. ಕಣ್ಣಿದ್ದರೆ ಏನೆಲ್ಲ ನೋಡಬಹುದು ಅಂತ ಈ ದರಿದ್ರ ಕುರುಡ ನನ್ಮಕ್ಕಳಿಗೆ ತೋರಿಸಬೇಕು ಅಂತ ಅವನಿಗೆ ಅನ್ನಿಸಿತು. ಹಾಗೆಂದೇ ಬೇಕಂತ ಕಳ್ಳ ಹೆಜ್ಜೆಯಿಡುತ್ತಾ ಮುಖ್ಯರಸ್ತೆ ಬಿಟ್ಟು ಕಾಲುಹಾದಿಯಲ್ಲಿ ಬೆಕ್ಕಿನಂತೆ ಅಡಿಯಿಟ್ಟ.

''ಹುಲ್ಲನ್ಯಾಕೆ ತುಳಕೊಂಡು ನಡೀತೀಯಾ ಮುಟ್ಠಾಳ ? ಅದರ ಮೇಲೆ ಹೆಜ್ಜೆ ಇಡಬಾರದು ಅನ್ನೋ ಜ್ಞಾನ ಇಲ್ಲವಾ ನಿಂಗೆ ?'' ಅಬ್ಬರಿಸಿತು ಒಂದು ದನಿ. ಅತ್ಯಂತ ಅಚ್ಚರಿಯಿಂದ ತಬ್ಬಿಬ್ಬಾಗಿ ಅವನು ಅಲ್ಲೇ ಗಕ್ಕನೆ ನಿಂತುಬಿಟ್ಟ. ಅವರ ಆ ಸೂಕ್ಷ್ಮತೆಯನ್ನು ಮೆಚ್ಚಿಕೊಂಡ ಕೂಡ. ಆ ಗದರಿಕೆ ಕುಳ್ಳ ವ್ಯೆನಿಂದ ಬಂದಿದ್ದು. ಅವನು ಸೀದಾ ಇವನ ಬಳಿ ಬಂದು ಸಿಟ್ಟಿನಲ್ಲಿ ಇವನ ಎರಡೂ ಭುಜಗಳನ್ನು ಹಿಡಿದು,

''ನೀನೇನೂ ಎಳೇ ಮಗೂನಾ ? ಇಷ್ಟು ತಿಳಿಯೋದಿಲ್ವಾ ? ದಾರಿ ಕೇಳಿಸಲ್ವೇನೋ ನಿಂಗೇ ? ಲಾನ್ ತುಳೀಬಾರದು ಅನ್ನೋ ಸೆನ್ಸೇ ಇಲ್ಲವಲ್ಲ... ಥೂ !''

'ಅಬ್ಬಬ್ಬ ಇವರ ಸೊಕ್ಕೇ!' ಅಂತ ಅನ್ನಿಸಿದರೂ ಅವರ ಸೂಕ್ಷ್ಮತೆಗಳನ್ನ ಮೆಚ್ಚಿಕೊಳ್ಳದೇ ಇರಕ್ಕೆ ಇವನ ಕೈಲಿ ಸಾಧ್ಯವಾಗಲಿಲ್ಲ. ಆದರೂ ನಗುತ್ತಾ...

''ಅಯ್ಯೋ... ಸುಮ್ಮನಿರಿ ಸಾರ್... ನನಗೆಲ್ಲಾ ಕಾಣಿಸತ್ತೆ... ನೀವ್ ಸ್ವಲ್ಪ...''

''ಕಾಣಿಸತ್ತೆ ? ಹಂಗಂದ್ರೆ ಏನೋ ಮೂರ್ಖ ?'' ಆ ಕುರುಡ ಮುಂಡೇದು ಕೇಳ್ತು.

''ಹುಚ್ಚುಚ್ಚಾಗಿ ಮಾತಾಡ್ಬೇಡಾ. ನನ್ನ ಹೆಜ್ಜೆಗಳನ್ನೆ ಕೇಳಿಸಿಕೊಂಡು ನನ್ನ ಹಿಂದೆ ಬಾ. ತಿಳೀತಾ ?''

ಇದು ಸ್ವಲ್ಪ ಓವರ್ ಅಂತ ಅನ್ನಿಸಿ ಬೇಜಾರಾದ್ರೂ ಇವನು ಆ ಅಂಧಕಾಸುರನ ಹಿಂದೆ ಹೊರಟ. ಆದರೆ ಸುಮ್ಮನಿರಲಿಲ್ಲ.

''ನನಗೂ ಒಂದು ಕಾಲ ಬರತ್ತೇರೀ. ನಿಮಗ್ಯಾರೂ ಹೇಳಿಲ್ವ ? ಕುರುಡರ ರಾಜ್ಯದಲ್ಲಿ ಒಕ್ಕಣ್ಣಾನೇ ರಾಜಾಂತಾ ?''

''ಕುರುಡಾಂದ್ರೆ ?'' ಅಂತ ಆ ಕುರುಡ ಮುಂಡೇದು ಪದೇಪದೇ ಕೇಳ್ತಾನೇ ಇತ್ತು. ಪಾಪ ಹೇಗೆ ತಿಳಿಸೋದು !

* * *

ದಿನಗಳು ಉರುಳಿದ ಹಾಗೆ ಇವನಿಗೆ ಆ ಅಂಧರ ದಿನಚರಿ, ರೀತಿನೀತಿ, ಬದುಕು ಇತ್ಯಾದಿಗಳೆಲ್ಲ ಅರ್ಥವಾಗತೊಡಗಿದವು. ಯಾವಾಗಲೂ ಕೊಳಕು ಕೊಳಕಾಗಿ, ಹರಕುಮುರುಕಾಗಿ, ಯಾರಿಗೂ ಉಪಯೋಗವಿಲ್ಲದಂತೆ ಸುಮ್ಮನೇ ಉಧೋ ಲಕ್ಷ್ಮಿಕಾಂತ ಸಾಯೋವರೆಗೂ ಸುಮ್ನೆ ಬದುಕಿರೋ ಈ ದರಿದ್ರ ಜನಗಳು. ಆಶ್ಚರ್ಯ ಏನಪಾ ಅಂದ್ರೆ ಕಣ್ಣು ಕಾಣಲ್ಲ ಅನ್ನೋದೊಂದು ಬಿಟ್ಟರೆ ಇನ್ನೆಲ್ಲದರಲ್ಲೂ ಬಲೇ ಪಾಕಡಾ ನನ್ಮಕ್ಕಳು. ನಾಯಿಗಿಂತ ಮೂಗು ಚುರುಕು; ಬಾವಲಿಗಿಂತ ಕಿವಿ ಚುರುಕು ಬಡ್ಡಿ ಮಕ್ಕಳಿಗೆ. ಐವತ್ತು ಅಡಿ ದೂರದಲ್ಲೇ ಇದ್ದರೂ ಇನ್ನೊಬ್ಬರ ಎದೆಬಡಿತ ಕೇಳಿಸುತ್ತಿತ್ತು ಅವರಿಗೆ !

ಒಂದು ಬೆಳಿಗ್ಗೆ ಇವನ ಜೊತೆ ಐ ಮತ್ತು ಶೈ ಇಬ್ಬರೂ ನಿಂತಿದ್ದರು. ದೂರ... ಅಂದ್ರೆ

ಸಾಕಷ್ಟು ದೂರದಲ್ಲಿ ವೈ ನಡಕೊಂಡು ಬರ್‍ತಾ ಇದ್ದಿದ್ದು ಇವನಿಗೆ ಕಾಣಿಸಿತು. ಇವತ್ತು ಈ ಪೀಡೆಗಳಿಗೆ ಕಣ್ಣಿನ ತಾಕತ್ತು ಅಂದರೇನು ಅಂತ ತೋರಿಸಬೇಕೂಂತ ಇವನಿಗನ್ನಿಸಿತು.

''ಇನ್ನು ಮೂರೇ ನಿಮಿಷಗಳಲ್ಲಿ ವೈ ಇಲ್ಲಿಗೆ ಬರ್‍ತಾನೆ ನೋಡ್ತಾ ಇರಿ. ನನಗೆ ಹೇಗೆ ಗೊತ್ತೂಂತ ನಿಮಗ್ಗೊತ್ತಾ?'' ಅಂದ.

ಆಶ್ಚರ್ಯ! ಆದರೆ ಅದೇ ಗಳಿಗೆಯಲ್ಲಿ ಇವರಿದ್ದ ಕಡೆ ಬರ್‍ತಾ ಇದ್ದ ವೈ ಅನಾಮತ್ತಾಗಿ ನಿಂತು ತಿರುಗಿ ವಿರುದ್ಧ ದಿಕ್ಕಿಗೆ ನಡೆದು ಹೊರಟ! ಇವನಿಗೆ ಕಪಾಳಕ್ಕೆ ಹೊಡೆದ ಹಾಗನ್ನಿಸಿತು. ಐ ಮತ್ತು ಶೈ ಪಕಪಕ ನಗುತ್ತಿದ್ದರು.

ಅವಮಾನದಿಂದ ಕುದ್ದುಹೋದ ಅವನಿಗೆ ಈ ಸೂಳೇ ಮಕ್ಕಳನ್ನ ಚಚ್ಚಿ ಬಿಸಾಕೋ ಅಷ್ಟು ಕೋಪ ಬಂದು, ''ಇರಿ. ನಾನು ಯಾರು ಅಂತ ತೋರಿಸ್ತೀನಿ ಹಡಬೆ ನನ್ಮಕ್ಳಾ'' ಅಂದು ಪಕ್ಕದಲ್ಲಿ ಬಿದ್ದಿದ್ದ ಗುದ್ದಲಿಯನ್ನ ಕೈಗೆತ್ತಿಕೊಂಡ. ಸರಿಯಾಗಿ ಅದೇ ಗಳಿಗೆಯಲ್ಲಿ ಐ ಮತ್ತು ಶೈ ಒಳ್ಳೆ ಕರಾಟೆವೀರರ ಹಾಗೆ ಕಿವಿ ನಿಗುರಿಸಿಕೊಂಡು, ಕಾಲಗಲಿಸಿಕೊಂಡು, ಹಾಗೆಯೇ ಅವಡುಕಚ್ಚಿಕೊಂಡು ನಿಂತುಬಿಟ್ಟರು. ಅವರ ಅಬ್ಬರ ನೋಡಿದವನೇ ಇವನು ದಿಕ್ಕೆಟ್ಟುಹೋದ. ಕೆಲಸ ಕೆಟ್ಟಿತು ಎಂದವನೇ ಹುಲ್ಲುಗಾವಲಿನೆಡೆ ಓಡಲು ಪ್ರಾರಂಭಿಸಿದ. ಇವನು ಓಡುತ್ತಾ ತುಳಿದಂತೆಲ್ಲ ಹುಲ್ಲಿನ ಮೇಲೆ ಇವನ ಹೆಜ್ಜೆ ಮೂಡತೊಡಗಿತು. ಓಡಿ ಓಡಿ ಸಾಕಾಗಿ ಕಾಲುದಾರಿಯ ಪಕ್ಕದಲ್ಲೇ ಕುಕ್ಕರಿಸಿದ.

''ಚನ್ನಃ... ಎಲ್ಲಿಗೆ ಓಡ್ತೀಯ... ಚನ್ನಃ?'' ಖಂಡಿತವಾಗಿ ಆ ಪ್ರಚಂಡ ಕುಳ್ಳನದೇ ದನಿ. ಇವನು ಹೆದರಿ ಅವಾಕ್ಕಾಗಿ ನೋಡುತ್ತಾ ನಿಂತುಬಿಟ್ಟ. ಆ ಕುಳ್ಳನ ಕೈನಲ್ಲೂ ಒಂದು ಗುದ್ದಲಿ! ಐ, ವೈ, ಶೈ ಮೂರು ಜನ ಮಿಲಿಟರಿ ಶೂರರಂತೆ ಇವನ ಕಡೆ ಹೆಜ್ಜೆ ಹಾಕುತ್ತಿದ್ದರು. ಅವರ ಹಿಂದೆ ನೂರಾರು ಅಂಧಕಾಸುರರ ಸೈನ್ಯ! ಪ್ರತಿಯೊಬ್ಬನ ಕೈಲೂ ಕೋಲು, ಕುಡಗೋಲು, ಹಾರೆ, ಗುದ್ದಲಿ ಇತ್ಯಾದಿ ಇತ್ಯಾದಿ. ಹುಲ್ಲುಹಾಸಿನ ಮೇಲೆ ಮೂಡಿದ್ದ ಇವನ ಹೆಜ್ಜೆಗುರುತುಗಳನ್ನು ಮೂಸುತ್ತಾ, ಸವರುತ್ತಾ, ಕಿವಿ ನಿಗುರಿಸಿ, ನಾಯಿಗಳ ಹಾಗೆ ಮೂತಿ ಮೇಲೆತ್ತಿ ಹೊಳ್ಳೆ ಅರಳಿಸಿಕೊಂಡು ಇವನು ನಿಂತಿದ್ದೆಡೆಗೆ ದಾಳಿಯಿಟ್ಟರು. ಇವನು ನಿಂತಲ್ಲೇ ಉಸಿರುಕಟ್ಟಿ, ಬಾಯೊಣಗಿ, ಮರಗಟ್ಟಿ ಕಂಗಾಲಾಗಿಬಿಟ್ಟ. ಆದರೂ ಇದ್ದ ಧೈರ್ಯವನ್ನೆಲ್ಲ ಒಗ್ಗೂಡಿಸಿಕೊಂಡು ''ನೋಡ್ರೋ... ನನ್ಮಕ್ಳಾ... ನನಗೆ ಹ್ಯಾಗ ಬೇಕೋ ಹಾಗೆ ನನ್ನನ್ನ ಬದುಕಕ್ಕೆ ಬಿಡಿ... ಇಲ್ಲಾಂದ್ರೆ...''

ಕುರುಡರ ಯುದ್ಧದಲ್ಲಿ ಕಣ್ಣಿದ್ದವರು ಹೋರಾಡಿ ತಪ್ಪಿಸಿಕೊಳ್ಳೋದು ಎಷ್ಟು ಕಷ್ಟಾ ಅನುಭವಿಸಿದವರಿಗೇ ಗೊತ್ತು!

ನಿಮಿಷಾರ್ಧದಲ್ಲಿ ಅವರೆಲ್ಲರೂ ಕೈಲಿ ಕೋಲು, ಕುಡುಗೋಲು, ಪಿಕಾಸಿ, ಹಾರೆ ಇತ್ಯಾದಿಗಳನ್ನು ಒಡಿದು ಇವನ ಸುತ್ತ ಚಕ್ರವ್ಯೂಹ ರಚಿಸಿಬಿಟ್ಟಿದ್ದರು. ಇವನು ಉಸಿರುಬಿಟ್ಟ ಕಡೆ ಸುಯ್ ಅಂತ ಅವರು ಆಯುಧ ಬೀಸುತ್ತಿದ್ದರು. ಇವನು ಕೋಪ, ಭಯ, ಅಸಹಾಯಕತೆಗಳಿಂದ, ''ಬೇಡಾ ಕಣ್ರೋ. ಬೇಡಾ ಕಣ್ರೋ. ಸಾಯಿಸಿಬಿಡ್ತೀನಿ ನಿಮ್ಮನ್ನ. ಸಿಗಿದುಬಿಡ್ತೀನಿ'' ಅಂತ ಬೊಬ್ಬೆ ಹೊಡೆಯುತ್ತಾ ತನಗೆ ಅರಿವಿಲ್ಲದಂತೆ ಕತ್ತಲೆ ಕೋಣೆಯೊಂದರ ಬಾಗಿಲ ಬಳಿ ಎಡವಿ ಮುಗ್ಗರಿಸಿ ಧಡಾರನೆ ಬಿದ್ದು ತಲೆ ಘಟ್ಟಿಸಿಕೊಂಡು ನೋವಿನಲ್ಲಿ ಅಳುತ್ತಾ ಭೋರಿಡುತ್ತಾ ಬಿದ್ದುಕೊಂಡ.

ಹೀಗೆ ಅವನ ದಂಗೆಯ ಕತೆ ಮುಗಿಯಿತು. ಎರಡು ಹಗಲು, ಎರಡು ಇರುಳು ಅನ್ನ ನೀರಿಲ್ಲದೆ ಕೊರಗಿ ಕೊನೆಗೆ ತೆವಳಿಕೊಂಡೇ ಆ ಕೋಣೆಯ ಬಾಗಿಲಿಗೆ ಬಂದು ಲಬೋಲಬೋ ಎಂದು ಹುಯಿಲಿಟ್ಟ. ಇಬ್ಬರು ಅಂಧಕಾಸುರ ಧಾಂಡಿಗರು ಇವನೆಡೆಗೆ ಮೂಸುತ್ತಲೇ ಬಂದರು.

''ಕ್ಷಮಿಸಿ. ನಿಮ್ಮ ಜೊತೆ ಹುಚ್ಚುಚ್ಚಾಗಿ ನಡಕೊಂಡುಬಿಟ್ಟೆ. ತಪ್ಪಾಯ್ತು. ನಂಗೆ ಮೈ ಸರಿಯಿಲ್ಲ ಪ್ಲೀಸ್.''

ಪರವಾಗಿಲ್ಲ ಅನ್ನಿಸಿತು ಅವರಿಗೆ. ''ಈಗೇನಾದರೂ 'ಕಾಣಿಸತ್ತಾ' ನಿಂಗೆ?'' ಅಂದರು.

''ಇಲ್ಲ''... ಅವನು ಅಳುತ್ತಿದ್ದ. ಅವನಿಗೆ ನಿಜವಾಗಿ ಮೈ ಸರಿಯಿಲ್ಲದೆ ವೀಕಾಗಿ ಕಣ್ಣುಕತ್ತಲೆಯಾಗಿತ್ತು. ''ತಪ್ಪಾಯ್ತು. ದಯಮಾಡಿ ನಂಬಿ. ಆ ಪದಕ್ಕೇನೂ ಅರ್ಥವೇ ಇಲ್ಲ.''

ಕುರುಡರ ರಾಜ್ಯಕ್ಕೆ ಇವನೂ ಒಬ್ಬ ಹೊಸ ಪ್ರಜೆಯಾಗಿ ಸೇರಿಕೊಂಡ. ಅಲ್ಲಿಯ ಅಪರಿಚಿತರೆಲ್ಲ ಒಬ್ಬೊಬ್ಬರಾಗಿ ಸುಪರಿಚಿತರಾದರು. ವೈ ಮನೆಯಲ್ಲೇ ಇವನ ವಾಸ ಪ್ರಾರಂಭವಾಯ್ತು. ಇವನು ದಾಸ, ಅವನು ಒಡೆಯ! ಅವನಿಗೆ ಕೋಪ ಬಂದಾಗ ಮಾತ್ರ ಮಹಾನ್ ತಿಕ್ಕಲ. ಅವನ ಕಸೀನುಗಳಾದ ಐ ಮತ್ತು ಶೈ ಸ್ವಲ್ಪ ವಾಸಿ. ಆಮೇಲೆ... ಆಮೇಲೆ... ಅವಳು!

**'ರಕ್ತಚರಿತ್ರ' ವೀಕ್ಷಣೆ ಬೆನ್ನಲ್ಲೇ ಹಲ್ಲೆ**



**ಸಿನೆಮಾ ನೋಡಿ ಬಂದೆ ಅಂದ್ರೆ... ಬಟ್ಟೆ ಮೇಲಿನ ರಕ್ತದ ಕಲೆಯೂ ಅಲ್ಲಿನದ್ದೇ ಅಂದ್ಕೊಳ್ಳಬೇಡ್ವೇ...?!!**

ಅವಳು ವೈನ ಕೊನೇ ಮಗಳು. ಕುರುಡರ ಆ ಸಂಚದಲ್ಲಿ ಅವಳೊಬ್ಬ ಕುರೂಪಿ ಅನ್ನಬಹುದೇನೊ. ಏಕಂದ್ರೆ ಅವಳಿಗೆ ಕಣ್ಣಿಲ್ಲದಿದ್ದರೂ ನಿದ್ರಾ ಸುಂದರಿಗಿದ್ದಂತೆ ನೀಳವಾದ ರೆಪ್ಪೆಗಳಿದ್ದವು! ಅದೊಂದು ಕಾರ ಅವರ ಪ್ರಕಾರ. ಆದರೆ ಇವನಿಗೆ ಮಾತ್ರ ಆ ನಿದ್ರಾ ಸುಂದರಿ ತುಂಬ ಚೆಲುವೆಯಾಗಿ ಕಂಡಳು. ಅವಳು ನಿಜವಾಗಿ ಚೆಲುವೆ.

ಒಂದು ರಾತ್ರಿ. ಆಕಾಶದ ತುಂಬ ಮಿಣ ಮಿಣ ಮಿನುಗುತ್ತಿದ್ದ ನಕ್ಷತ್ರಗಳ ರಾಶಿ. ಅವಳು-ಅವನು ಏಕಾಂತೆಯಾಗಿ ಕುಳಿತಿದ್ದರು. ಇವನು ಧೈರ್ಯಮಾಡಿ ನಿಧಾನವಾಗಿ ಅವಳ ಕೈ ಬೆರಳುಗಳನ್ನು ಮೃದುವಾಗಿ ಅಮುಕಿದ. ಅವಳೂ ಹಾಗೇ ಮಾಡಿದಳು. ಹೀಗೇ ಒಂದಾರು ದಿನ ಅವರು ಪರಸ್ಪರ ಸೇರುತ್ತಿದ್ದರು.

ಒಂದು ದಿನ ಮನಸ್ಸು ಗಟ್ಟಿ ಮಾಡಿಕೊಂಡು ಅವಳಪ್ಪ ನಬಳಿ ಮದುವೆಯ ಪ್ರಸ್ತಾಪ ಮುಂದಿಟ್ಟ.

ಮೊದಲಿಗೆ ಎಲ್ಲರೂ ಸಿಡಿಸಿಡ ಎಂದು ಬೊಬ್ಬಿಟ್ಟರು. ಹಳ್ಳಿನ ಪಡ್ಡೆ ಹುಡುಗರೆಲ್ಲ ಇದೆಂಥಾ ಅನ್ಯಾಯ, ಅಧರ್ಮ, ಅನೀತಿ, ಪರಂಪರೆ, ಸಂಪ್ರದಾಯ ಸೋರೇ ಬುರುಡೆ ಅಂತ ನಿಗರಾಡಿದರು. ಕೊನೆಗೆ ಒಬ್ಬ ಮುದಿಯನಿಗೆ ಐಡಿಯಾ ಹೊಳೆದೇಬಿಟ್ಟಿತು.

''ಚನ್ನನ ಕಣ್ಣು'' ಮುದಿ ಉವಾಚ ''ಹಾಳಾಗಿ ಹೋಗಿರುವುದರಿಂದ ಅವನ ಮಿದುಳಿಗೆ ಭಾಳ ಧಕ್ಕೆಯಾಗಿದೆ. ಅದು ತೆಕ್ಕೊಂಡು-ಮುಚ್ಕೊಂಡು; ಮುಚ್ಕೊಂಡೂ-ತೆಕ್ಕೊಂಡೂ... ಥೂ... ಮುಟ್ಟಿದರೆ ಮುಲಮುಲಾಂತ ಅಲುಗಾಡಿ ತುಂಬ ಹೇಸಿಗೆಯಾಗತ್ತೆ... ಹೀಗೆ ಅಲುಗಾಡೋದರಿಂದಲೇ ಮೆದುಳು ಘಾಸಿಗೊಳ್ಳೋದು. ನನಗನ್ನಿಸತ್ತೆ... ನನಗೇನನಿಸತ್ತಪಾಂದ್ರೆ... ಒಂದು ಸಿಂಪಲ್ ಆಪರೇಷನ್ ಮಾಡಿ ಇವನ ಕಣ್ಣುಗುಡ್ಡೆಗಳನ್ನ ತೆಗೆದು ಮತ್ತೆ ಹೊಲೆದು ಬಿಟ್ರೆ... ನಮ್ಮ ಹಾಗೇ ನಾರ್ಮಲ್ ಆಗ್ತಾನೆ.''

ಅವಳು ತನ್ನ ಪ್ರೀತಿನೆಲ್ಲ ಧಾರೆಯೆರೆದು ಈ ಸಿಂಪಲ್ ಆಪರೇಷನ್‌ಗೆ ಅವನನ್ನ ಒಪ್ಪಿಸಿದಳು!

''ನಾನು ಕಣ್ಣು ಕಳಕೊಳ್ಳೋದು ನಿನಗಿಷ್ಟಾನಾ?'' ಅಂದ ಅವನು. ''ಈ ಸುಂದರವಾದ ಪ್ರಪಂಚಾನೇ ಕಾಣಿಸಲ್ಲ ಹುಡುಗಿ. ಗಿಡ, ಮರ, ಹೂ ಬಳ್ಳಿ, ಬೆಟ್ಟ ಗುಡ್ಡ, ನದಿ, ನೀರು, ಸೂರ್ಯೋದಯ, ಚಂದ್ರೋದಯ... ಎಲ್ಲಕ್ಕಿಂತ ಮಿಗಿಲಾಗಿ ನೀನು. ನೀನೂ ಕಾಣಿಸಲ್ಲ. ನಿನ್ನ ಮುದ್ದು ಮುಖ ನೋಡ್ದೆ ಹೇಗಿರಲಿ ನಾನು?''

''ಹೀಗೆ ಗುಗ್ಗು ಥರಾ ಮಾತಾಡ್ಬಾರ್ದು ನೀನು'', ಅಂದಳು ಅವಳು. ''ನಂಗೊತ್ತು ನಾನು ಮುದ್ದಾಗಿದೀನಿ ಅಂತ. ಆದರೂ...''

''ಹಾಗಾದ್ರೆ... ಇದನ್ನ ಒಪ್ಕೊಂಡು... ನಾನು ಕಣ್ಣು ಕಳಕೊಳ್ಳೋದೇ ಸರಿ ಅಂತಿಯಾ?'' ಅವಳು ಅವನ ಕೊರಳಿಗೆ ಮಲ್ಲಿಗೆ ಹಾರದಂತೆ ನೇತುಬಿದ್ದಳು.

''ಓಹ್... ನೀನು ಹಾಗೆ ಮಾಡಿದರೆ ಎಷ್ಟು ಚೆನ್ನಾಗಿರತ್ತೆ. ನನಗಾಗಿ... ಪ್ಲೀಸ್... ನನಗಾಗಿ... ಒಪ್ಕೊ...''

ವಾರ ಕಳೆದ ನಂತರ ಆಪರೇಷನ್ ಡೇಟ್ ನಿಗದಿಯಾಯ್ತು. ಇವನ ನಿದ್ರೆ ಹಾರಿಹೋಯ್ತು.

ಬಂತು ಆ ದಿನ. ಇನ್ನೂ ನಸುಗತ್ತಲ ಸಮಯ. ಹಗಲು ದೃಷ್ಟಿ ಕಳೆದುಹೋಗುವ ಮೊದಲು ತನ್ನ ಛಂದದ ಗೆಳತಿಯೊಡನೆ ಕೆಲವು ಗಳಿಗೆಗಳನ್ನು ಕಳೆದ. ''ನಾಳೆಯಿಂದ''... ನಡುಗುವ ದನಿಯಲ್ಲಿ ಅವನೆಂದ, ''ನಾನು ಏನನ್ನೂ ನೋಡಲಾಗುವುದಿಲ್ಲ.'' ಅವನ ಕೈ ಬೆರಳುಗಳನ್ನು ಮಿದುವಾಗಿ ಅಮುಕಿದಳು ಅವಳು.

''ಇದೇನೂ ಮೇಜರ್ ಆಪರೇಷನ್ ಅಲ್ಲ ಕಣೋ. ಸ್ವಲ್ಪವೂ ನೋವಾಗಲ್ಲ. ಅವರೆಲ್ಲ ದೊಡ್ಡ ಸ್ಪೆಷಲಿಸ್ಟುಗಳು. ಪ್ಲೀಸ್. ನನಗೋಸ್ಕರ ಇಷ್ಟೂ ಮಾಡಕ್ಕೆ ಆಗಲ್ವಾ?'' ಅವಳ ಮುದ್ದು ಮುಖವನ್ನೊಮ್ಮೆ ಕೊನೆಯ ಬಾರಿಗೆ ನೋಡಿದ. ಅವಳ ನೀಳ ರೆಪ್ಪೆಗಳಿಗೆ ಒಂದೂ ಮುತ್ತೊಂದ ಇಟ್ಟು, ''ಗುಡ್ ಬೈ'' ಎಂದುಸುರಿದ.

ಲೋಕದ ಸಕಲ ಚೆಲುವನ್ನೂ ಕಂಗಳಿಗೆ ಇಳಿಸಿಕೊಳ್ಳುವ ಸಲುವಾಗಿ ಏಕಾಕಿಯಾಗಿ ಸುಂದರವಾದ ಹುಲ್ಲುಹಾಸನ್ನು ದಾಟಿಕೊಂಡು, ಆಗತಾನೇ ಅರಳುತ್ತಾ ನಿಂತಿದ್ದ ಹೂಗಳನ್ನೆಲ್ಲ ಮನಸಾರೆ ನೋಡುತ್ತಾ ನಿಂತ. ಇನ್ನು ಬಲಿದಾನದ ಸಮಯ. ಅರಿವಿಲ್ಲದಂತೆ ಅವನ ಕಣ್ಣುಗಳು ಮುಚ್ಚಿಕೊಂಡವು.

ಮತ್ತೆ ನಿಧಾನವಾಗಿ ಅವನ ಕಣ್ಣುಗಳು ತೆರೆದುಕೊಂಡವು. ಮೂಡಣದಲ್ಲಿ ಎಂಥಾ ಅದ್ಭುತವಾದ ಬೆಳಗು! ಎಂಥಾ ಹೊಂಬಣ್ಣ ಅದರಿಂದ ಆಕರ್ಷಿತನಾಗಿ ಹಸಿರಮೇಲಿನ ಇಬ್ಬನಿಯನ್ನೇ ಹಿತವಾಗಿ ತುಳಿಯುತ್ತಾ... ತುಳಿಯುತ್ತಾ... ಬೆಟ್ಟವನ್ನೇರುತ್ತಾ ನಡೆದ.

ಅತ್ತಿತ್ತ ನಿಸರ್ಗದ ಚೆಲುವೆಲ್ಲವನ್ನೂ ಸವಿಯುತ್ತಾ ಹಗಲು ಕಳೆದು ಸಂಜೆಯಾಗಿ ನಿಧಾನವಾಗಿ ಸೂರ್ಯ ಪಡುವಣಕ್ಕೆ ಉರುಳಿಕೊಂಡಾಗಲೇ ಅವನು ಹಿಂದಿರುಗಿ ನೋಡಿದ್ದು. ಕುರುಡರ ಸೀಮೆಯಿಂದ ಬಲು ದೂರ... ಮೇಲೇರಿ ಬಂದಾಗಿಹೋಗಿದೆ. ಉಟ್ಟ ಬಟ್ಟೆಗಳೆಲ್ಲ ಹರಿದು ಚಿಂದಿಯಾಗಿವೆ. ಮೈ ಕೈಯೆಲ್ಲ ರಕ್ತಸಿಕ್ತವಾಗಿದೆ. ಆದರೆ ಮನಸ್ಸು ಮಾತ್ರ ಹಗುರಾಗಿ ಪ್ರಫುಲ್ಲಿತವಾಗಿತ್ತು. ಸೂರ್ಯ ಮುಳುಗಿ ಬಾನಂಚಿನಲ್ಲಿ ತಾರೆಗಳು ಸಂಭ್ರಮಿಸಿದವು. ಮೈ ಕೊರೆಯುವ ಚಳಿಯಲ್ಲೂ ಅಂಗಾತ ಮಲಗಿ ಆಕಾಶದ ಚಿತ್ತಾರವನ್ನು ಕಣ್ತುಂಬ ತುಂಬಿಕೊಳ್ಳುತ್ತಾ... ತಮೋ ದೀಕ್ಷೆಯನ್ನು ತಪ್ಪಿಸಿಕೊಂಡು ಹಾಯಾಗಿ ಉಸಿರೆಳೆದುಕೊಳ್ಳುತ್ತಾ ನಾಳೆಯ ಬೆಳಗಿಗಾಗಿ ತವಕಿಸಿದ.

### ಕತೆಯ ಕೊನೆಯಲ್ಲಿ ಸ್ವಲ್ಪ ಮಾಹಿತಿ

ಈ ಕತೆ ಸುಪ್ರಸಿದ್ಧ ಸಾಹಿತಿ ಎಚ್. ಜಿ. ವೆಲ್ಸ್‌ನ ಹೆಸರಾಂತ ಕತೆ 'ದಿ ಕಂಟ್ರಿ ಆಫ್ ದ ಬ್ಲೈಂಡ್'ಅನ್ನು ಆಧರಿಸಿದ್ದು ಇದು ಅನುವಾದ ಅಲ್ಲ; ರೂಪಾಂತರವೂ ಅಲ್ಲ ಭಾವಾಂತರ ಅಂತ ಹೇಳಬಹುದೇನೋ. ಈ ಅಸಾಧಾರಣ ಕತೆ ನಿಬ್ಬೆರಗಾಗಿಸುವ ಒಂದು ರೂಪಕ. ವೆಲ್ಸ್ ಸೈನ್ಸ್ ಫಿಕ್ಷನ್‌ಗಳನ್ನು ಬರೆಯುತ್ತಿದ್ದ. 'ಟೈಂ ಮೆಷೀನ್' ಎಲ್ಲರಿಗೂ ಗೊತ್ತಿರುವ ಕಾದಂಬರಿ. ಅವನ 'ದ ವಾರ್ ಆಫ್ ದ ವರ್ಲ್ಡ್' ಇನ್ನೊಂದು ಕತೆ. ಭೂಮಿಯ ಮೇಲೆ ಮಂಗಳ ಗ್ರಹದವರು ಮಾಡುವ ದಾಳಿ ಕುರಿತ 'ದ ವಾರ್ ಆಫ್ ದ ವರ್ಲ್ಡ್' ಒಂದು ಅದ್ಭುತ ಕೃತಿ. ಇದನ್ನೇ ಆಧರಿಸಿ ಇನ್ನೊಬ್ಬ ಶ್ರೇಷ್ಠ ರಂಗಭೂಮಿ ಕಲಾವಿದ ಆರ್ಸನ್ ವೆಲ್ಸ್ ಎಂಬುವನು ಅಕ್ಟೋಬರ್ ೩೦, ೧೯೩೮ರಂದು ಅಮೆರಿಕಾದ ಸಿಬಿಎಸ್ ರೇಡಿಯೋಗಾಗಿ ಮಾಡಿಸಿದ ಬಾನುಲಿ ನಾಟಕ ಸಾವಿರಾರು ಅಮೆರಿಕನ್ನರನ್ನು ಹೆದರಿಸಿ ಹಣ್ಣುಗಾಯಿ ಮಾಡಿಸಿ ಲೇವಡಿ ಮಾಡಿದ್ದು ಇವತ್ತಿನ ರಿಯಾಲಿಟಿ ಷೋಗಳ ಮೂಲ! ಎಚ್. ಜಿ. ವೆಲ್ಸನನ್ನು ಕುರಿತು ಎಲಿಯಟ್ ಈ ಮಾತುಗಳನ್ನು ಹೇಳುತ್ತಾನೆ – ''ಅವನ ಹೃದಯವಂತಿಕೆಯಿಂದಾಗಿಯೇ ಅವನು ಭೌತವಾದಿಯಾದವನು... ಅವನ ನೂರಾರು ಭಾವನೆಗಳು ಮತ್ತು ವಾಸ್ತವಾಂಶಗಳು ಅವನು ಸೃಷ್ಟಿಸಿದ ಮಾನವ ಜೀವಿಗಳ ಒರಟುತನ ಮತ್ತು ಒಡ್ಡೊಡ್ಡು ಚರ್ಯೆಗಳನ್ನು ಮುಚ್ಚಿಹಾಕಿದವು.''

ಧರ್ಮಾಂಧತೆ, ಮತಾಂಧತೆ, ಭಾಷಾಂಧತೆ, ಜಾತ್ಯಂಧತೆ ಇತ್ಯಾದಿ ಪದಗಳೆಲ್ಲವೂ ನಾವು ಸಾಮಾನ್ಯವಾಗಿ ಬಳಸುವಂಥವೇ. ಈಗಿನ ಮತಾಂತರ, ಧರ್ಮಾಂತರ, 'ಊರು - ಕೇರಿ'ಗಳಲ್ಲಿ ದೀಕ್ಷೆಗಳ ನಾಟಕದ ಸಂದರ್ಭದಲ್ಲಿ ಈ ಕತೆ ತುಂಬ ಮಹತ್ವಪೂರ್ಣವಾದುದು. ದೇವರು, ಧರ್ಮ, ಜಾತಿ, ಪ್ರೀತಿ, ಸಂಪ್ರದಾಯ, ಹಣ ಇತ್ಯಾದಿಗಳ ಆಮಿಷಗಳನ್ನೊಡ್ಡಿ ನಮ್ಮನ್ನು ಗೊಡ್ಡಾಗಿಸುವ, ಮೂಢರನ್ನಾಗಿಸುವ, ಕುರುಡಾಗಿಸುವ ಶಕ್ತಿಗಳನ್ನು ಕುರಿತು ಈ ಕತೆ ಎಚ್ಚರಿಸುತ್ತದೆ. ಮತ್ತೆ ಅದೇ ಕಾರಣಗಳಿಗಾಗಿ ಕುರುಡಾಗುವ ಬೆಪ್ಪುತಕ್ಕಡಿಗಳನ್ನೂ ತೋರಿಸುತ್ತದೆ. ಈ ಕತೆಯ ವ್ಯಕ್ತಿಗಳು, ಅವರ ಪ್ರಪಂಚ ನಮ್ಮ ಈ ಹೊತ್ತಿನ ಆಗುಹೋಗುಗಳಿಗೆ ಕನ್ನಡಿ ಹಿಡಿಯುತ್ತಾರೆ. ಇಲ್ಲಿಯ ಐ, ವೈ, ಶೈ ಗಳು ಇಂದಿನ ಮುಲ್ಲಾ, ಪಾದ್ರಿ, ಪೇಜಾವರಗಳ ಪ್ರತಿಬಿಂಬಗಳಂತೆ ತೋರುತ್ತವೆ.

ನನಗೆ ಹೊಳೆದ ಹಾಗೆ ಈ ಕತೆಯನ್ನು ಒಗ್ಗಿಸಿಕೊಂಡಿದ್ದೇನೆ. ಸ್ಪಷ್ಟವಾಗೇ ಇರುವ ಒಂದು ಸಂಗತಿಗಾಗಿ ದೇವನೂರು ಮಹಾದೇವ ಅವರಿಗೆ ಋಣಿಯಾಗಿದ್ದೇನೆ.

ವಿಜಯವಾಮನ
ಕೆ.ಹೆಚ್.ಬಿ. ಕಾಲನಿ, ಗಾಂಧಿನಗರ, ಸಾಗರ - ೫೭೭ ೪೦೧
ಶಿವಮೊಗ್ಗ ಜಿಲ್ಲೆ

# ಶಾಂತರಸ : ಕಡೆ ತನಕವೂ ಖಡಕತನ



## ಸಂದರ್ಶಕರು : ರಹಮತ್ ತರೀಕೆರೆ

*ಹೈದರಾಬಾದ್ ಕರ್ನಾಟಕ ಭಾಗದಿಂದ ಕಳೆದ ಅರ್ಧಶತಮಾನದಿಂದ ಸದಾ ಮೊಳಗುತ್ತಿದ್ದ ಪ್ರತಿಭಟನೆಯ ದನಿಗಳಲ್ಲಿ ಶಾಂತರಸರದೂ ಒಂದಾಗಿತ್ತು. ಅವರ ಮೂಲ ಹೆಸರು ಶಾಂತಯ್ಯ ಹಿರೇಮಠ. ಆದರೆ ಅವರು ಸದಾ ಅಶಾಂತರಾಗಿದ್ದರು. ಕರ್ನಾಟಕ ಏಕೀಕರಣಗೊಂಡರೂ ನಮಗೆ ನ್ಯಾಯ ಸಿಗಲಿಲ್ಲ ಎಂಬ ಆಕ್ರೋಶವನ್ನು ಉತ್ತರ ಕರ್ನಾಟಕದಿಂದ ಪಾಟೀಲ ಪುಟ್ಟಪ್ಪನವರು ರಾಜಕೀಯ ಆರ್ಥಿಕ ದನಿಯಲ್ಲಿ ಹೊರಡಿಸುತ್ತಿದ್ದರೆ, ಹೈದರಾಬಾದ್ ಕರ್ನಾಟಕದಿಂದ ಶಾಂತರಸರು ಸಾಂಸ್ಕೃತಿಕ ಅರ್ಥದಲ್ಲಿ ದನಿಯನ್ನು ಎಬ್ಬಿಸುತ್ತಿದ್ದರು. ಬೆಂಗಳೂರು-ಮೈಸೂರು ಭಾಗದ ಸಾಹಿತ್ಯಕ ವಲಯಗಳು, ತಮ್ಮ ಭಾಗದ ಬರೆಹಗಾರರಿಗೆ ಸಮಾನ ಸ್ಥಾನಮಾನ ಕೊಡುತ್ತಿಲ್ಲ ಎಂದು ಅವರು ಸದಾ ಪ್ರಕಟಿಸುತ್ತಿದ್ದ ಅಸಮಾಧಾನ ಒಂದು ಬಗೆಯ ಸಂಚಲನೆ ಹುಟ್ಟಿಸುತ್ತಿತ್ತು. ಈ ಪರಿಯ ಪ್ರತಿರೋಧವನ್ನು ಅವರು ಜೀವನದುದ್ದಕ್ಕೂ ಮಾಡಿಕೊಂಡು ಬಂದರು. ತಮ್ಮ ಭಾಗದ ಲೇಖಕರನ್ನು ತಿರಸ್ಕರಿಸುತ್ತಿದ್ದ ಪತ್ರಿಕೆಗಳಿಗೆ ಮನಗಾಣಿಸಲು 'ಮುಸುಕುತೆರೆ' (೧೯೪೭) ಎಂಬ ಪ್ರಾತಿನಿಧಿಕ ಸಂಕಲನ ಪ್ರಕಟಿಸಿದರು; ೧೯೭೦ರಲ್ಲಿ ಬಂದ 'ಹೊಸಕಾವ್ಯ' ಎಂಬ ಪ್ರಾತಿನಿಧಿಕ ಸಂಕಲನದಲ್ಲಿ ತಮ್ಮ ಭಾಗದ ಕವಿಗಳಿಗೆ ಪ್ರಾತಿನಿಧ್ಯ ಸಿಗಲಿಲ್ಲವೆಂದು ಪ್ರತಿಯಾಗಿ 'ಬೆನ್ನ ಹಿಂದಿನ ಬೆಳಕು' (೧೯೭೨) ಸಂಕಲನ ಪ್ರಕಟಿಸಿದರು. ತಮ್ಮ ಪ್ರತಿಭೆ, ಹಿರಿತನ, ಮುಂಗೋಪ ಹಾಗೂ ನೇರನುಡಿಗಳಿಂದ ಶಾಂತರಸರು ರಾಯಚೂರನ್ನು ಒಂದು ಸಾಂಸ್ಕೃತಿಕ ಕೇಂದ್ರವನ್ನಾಗಿ ರೂಪಿಸಿದರು. ಹೊಸ ತಲೆಮಾರಿನ ಅನೇಕ ಲೇಖಕರು ಆ ಭಾಗದಲ್ಲಿ ಬೆಳೆಯುವಂತೆ ನೋಡಿಕೊಂಡರು. ಆದರೆ ಅವರ ಸಾಂಸ್ಕೃತಿಕ ನಾಯಕತ್ವವು ಎಲ್ಲ ವರ್ಗದ ಲೇಖಕರನ್ನು ವ್ಯಾಪಿಸಿತೇ ? ಸಾಹಿತ್ಯಕ ತಾರತಮ್ಯಗಳ ವಿರುದ್ಧ ಗುಡುಗುತ್ತಿದ್ದ ಅವರ ಕೋಪ ಆ ಭಾಗದ ಸಾಮಾಜಿಕ, ರಾಜಕೀಯ ಅಸಮಾನತೆಗಳತ್ತ ಹೊರಳಿಕೊಂಡಿತೇ ? ಈ ಪ್ರಶ್ನೆಗಳಿಗೆ ಉತ್ತರಿಸುವುದು ಕೊಂಚ ಕಷ್ಟ.*

*ಉರ್ದು ಮಾಧ್ಯಮದಲ್ಲಿ ಶಿಕ್ಷಣ ಪಡೆದ ಶಾಂತರಸರು, ಉರ್ದುವಿನಿಂದ ಅನೇಕ ಕೃತಿಗಳನ್ನು ಅನುವಾದ ಮಾಡಿದರು. ಉರ್ದು ಸಾಹಿತ್ಯದ ಜನಪ್ರಿಯ ಪ್ರಕಾರವಾದ ಗಝಲಿನ ಶಾಸ್ತ್ರಬದ್ಧ ಪ್ರಯೋಗವನ್ನು ಕನ್ನಡದಲ್ಲಿ ಮಾಡಿದರು. ಅವರು ಗಝಲಿನ ಪರಿಣಾಮಕ್ಕಿಂತ ಅದರ ರೂಪದ ಬಗ್ಗೆ ಅಗತ್ಯಕ್ಕಿಂತ ಹೆಚ್ಚು ಸಂಪ್ರದಾಯವಾದಿ ಆಗಿದ್ದರೇನೊ ಅನಿಸುತ್ತದೆ. ಆದರೆ ಶರಣರನ್ನೂ ತತ್ವಪದಕಾರರನ್ನೂ ಅಧ್ಯಯನ ಮಾಡಿದ್ದ ಶಾಂತರಸರು, ವೈಚಾರಿಕತೆಯನ್ನು ಪ್ರತಿಪಾದಿಸುತ್ತಿದ್ದರು.*

*೨೦೦೮ರ ಕೊನೆಯ ದಿನಗಳಲ್ಲಿ ಶಾಂತರಸರು ಹಂಪಿಗೆ ಬಂದಿದ್ದರು - ಕನ್ನಡ ವಿಶ್ವವಿದ್ಯಾಲಯ ಕೊಡಮಾಡಿದ 'ನಾಡೋಜ' ಗೌರವ ಪದವಿಯನ್ನು ಸ್ವೀಕರಿಸಲು. ಆಗ ಅವರ ಜತೆ ಹೊಸಪೇಟೆಯ ಆಕಾಶವಾಣಿಗಾಗಿ ಈ ಸಂಕ್ಷಿಪ್ತವಾದ ಸಂದರ್ಶನ ಮಾಡಲಾಯಿತು. ಬಹುಶಃ ಇದು ಅವರ ಕೊನೆಯ ಸಂದರ್ಶನವಿರಬೇಕು. ಯಾಕೆಂದರೆ ಇದಾದ ಕೆಲವೇ ದಿನಗಳಲ್ಲಿ ಅವರು ತೀರಿಕೊಂಡರು. ಅನೇಕ ಕೋಲಾಹಲದ ವಿದ್ಯಮಾನಗಳು ಜರುಗಿದ ಹೈದರಾಬಾದ್ ಕರ್ನಾಟಕದ ರಾಜಕೀಯ ಸಾಮಾಜಿಕ ಚರಿತ್ರೆಯ ಬಗ್ಗೆ, ಅವರ ಸುದೀರ್ಘವಾದ ಸಂದರ್ಶನ ಮಾಡಬೇಕೆಂದು ನಾನು ಹವಣಿಕೆ ಮಾಡಿಕೊಂಡಿದ್ದೆ. ಆದರದು ಸಾಧ್ಯವಾಗಲಿಲ್ಲ. ವಿಶೇಷವೆಂದರೆ, ನಾನು ಈ ಸಂದರ್ಶನ ಮಾಡುವಾಗ ಅವರ ಜತೆ ಅವರ ನಿಡುಗಾಲದ ಗೆಳೆಯರಾದ ಚನ್ನಬಸಪ್ಪ ಬೆಟ್ಟದೂರು ಅವರೂ ಇದ್ದರು. ಶಾಂತರಸರು ನಿಧನರಾದಾಗ ಅವರೇ 'ಹೊಸತು'ಗಾಗಿ ಅವರ ಸ್ನೇಹಿತನ ಬಗ್ಗೆ ಲೇಖನ ಬರೆದಿದ್ದರು. ಬಳಿಕ ಚನ್ನಬಸಪ್ಪನವರೂ ತಮ್ಮ ಗೆಳೆಯನ ಹಿಂದೆಯೇ ನಿರ್ಗಮಿಸಿದರು. ಶರಣ ಮತ್ತು ಆರೂಢ ಪರಂಪರೆಯಲ್ಲಿ ರೂಪುಗೊಂಡಿದ್ದ ಶಾಂತರಸರು, ಕೊನೆಗಾಲದಲ್ಲಿಯೂ ತಮ್ಮ ವ್ಯಕ್ತಿತ್ವದಲ್ಲಿ ಖಡಕತನವನ್ನೂ, ಮಾತಲ್ಲಿ ಅಲಗು ಮುರಿಯದ ನಿಷ್ಠುರತೆಯನ್ನೂ ಉಳಿಸಿಕೊಂಡಿದ್ದರು. ಇದಕ್ಕೆ ಈ ಸಂದರ್ಶನವೂ ಸಾಕ್ಷಿಯಾಗಿದೆ.*

**ರಹಮತ್ ತರೀಕೆರೆ** : ನಿಮ್ಮನ್ನು ಲೇಖಕನಾಗಿ ರೂಪಿಸಿದ ಸಂಗತಿಗಳು ಯಾವುವು ?

**ಶಾಂತರಸ** : ಒಂದನೆಯದು – ನನ್ನ ಸುತ್ತಮುತ್ತ ರತಕ್ಕಂತಹ ವಾತಾವರಣ. ಈ ಶೋಷಣೆ, ಣ್ಣುಮಕ್ಕಳ ಮೇಲೆ ಆಗತಕ್ಕಂತಹ ಅನಾಚಾರ, ನಮ್ಮ ೀಳೆ ಆಳ್ವಿಕೆ ಮಾಡತಕ್ಕಂತ ಜನರ ದಬ್ಬಾಳಿಕೆ – ಇವೆಲ್ಲ ೋಡ್ತಾ ಚಿಕ್ಕಂದಿನಲ್ಲಿ ಮನಸ್ಸಿನ ಒಳಗೆ ಒಂದು ೕತಿಯ ಕಸಿವಿಸಿ ಆಗತಿತ್ತು. ಎರಡನೇದು – ೆನೆಯಲ್ಲಿದ್ದ ಬಡತನ. ಎಲ್ಲಿ ಊಟ ಸಿಕ್ತದೋ ಅಲ್ಲಿ ಸದಾ ಅಂದರೆ ಅಭ್ಯಾಸ ಮಾಡ್ಲಿಕ್ಕೆ ಹೋಗ್ತಾ ಇದ್ದೆ. ಮೂರನೇದು – ಏರುಪೇರು. ನಾವು ಹಿರೇಮಠದವರಾದ ಕಾರಣದಿಂದ, ಜನರು ಎಲ್ಲಿಯಾದರೂ ತಮ್ಮ ಮನೇನಲ್ಲಿ ಲಗ್ನಾ ಮೂರ್ತ ಆದರ, ನಮ್ಮನ್ನ ಕರೀತಿದ್ದರು. ಒಯ್ದು ಎತ್ತರದಲ್ಲಿ ಕೂರಿಸ್ತಾ ಇದ್ದರು. ಬೇರೆ ಜಂಗಮರಿಗೆ ಒಂದಾಣೆ ದಕ್ಷಿಣಾ ಕೊಟ್ಟರೆ ನಮಗೆ ಎರಡಾಣೆ ಕೊಡಬೇಕು ಅಂತಿತ್ತು. ಇದು ಯಾಕ ? ಈ ರೀತಿ ಯಾಕ ಮಾಡ್ತಾರವರು ಅಂತ ಅನಿಸತಿತ್ತು. ನಾಕನೇದು – ಬಹುಶಃ ನಮ್ಮ ಮನೆತನದ ಹಿನ್ನೆಲೆ. ನಮ್ಮ ಮನೆತನವೇ ವಿದ್ವಾಂಸರ ಮನೆತನ. ನಮ್ಮ ಪೂರ್ವಜರು ಸಂಸ್ಕೃತ ಲೇಖಕರೂ ವೀಣಾವಾದಕರೂ ಸಂಗೀತಗಾರರೂ ಆಗಿದ್ದರು. ನಮ್ಮ ತಾತ ಮಾತ್ರ ನಿರಕ್ಷರಕುಕ್ಷಿ. ಆಮೇಲೆ ನಮ್ಮ ತಂದೆ ಬಹಳ ದೊಡ್ಡ ವಿದ್ವಾಂಸರಾದರು. ಅವರು ಜ್ಯೋತಿಷಿ ಆಗಿದ್ದರು; ತತ್ವಪದಕಾರರಾಗಿದ್ದರು. ಇವೆಲ್ಲ ನನ್ನನ್ನ ರೂಪಿಸಿರ ಬಹುದು.

**ರ** : ತತ್ವಪದಕಾರರ ಪ್ರಭಾವ ನಿಮ್ಮ ಬರೆಹದ ಮೇಲೆ ಬಹಳ ಆಗಿದೆ. ಹ್ಯಾಗಾಯ್ತು ಈ ಸೆಳೆತ ?

**ಶಾಂ** : ನಮ್ಮ ತಂದೆ ತತ್ವಪದಗಳನ್ನ ಬಹಳ ಚೆನ್ನಾಗಿ ಹಾಡ್ತಾ ಇದ್ದರು. ಮನೆಯಲ್ಲಿ ತಿಂಗಳಿಗೊಮ್ಮೆ ಒಂದು ೨೦-೨೫ ಮಂದಿ ಸೇರತಾ ಇದ್ದರು. ಅವರಲ್ಲಿ ಎಲ್ಲ

ಜಾತಿಯವರು ಇದ್ದರು. ಅವರಲ್ಲಿ ನಮ್ಮಪ್ಪನ ಖಾಸಾ ಗೆಳೆಯರು ಮುಸಲ್ಮಾನರು, ಖಾಜಾನಾಯಕ ಮತ್ತು ಪೀರಾನಾಯಕ ಅಂಬೋರು ತತ್ವಪದಗಳನ್ನ ಹಾಡ್ತಾ ಇದ್ದರು. ಈ ತತ್ವಪದಗಳಲ್ಲಿ ರಾಂಪುರದ ಬಕ್ಕಪ್ಪನ ತತ್ವಪದಗಳು ಬಹಳ ಹಿಡಿಸ್ತಿದ್ದವು. ಆಮೇಲೆ ಘನಮಠದ ಶಿವಯೋಗಿಗಳ ತತ್ವಪದಗಳು ಬಹಳ ಹಿಡಿಸ್ತಾ ಇದ್ದವು. ಹಣೇಬರೆಹವನ್ನ ತತ್ವಪದಕಾರರು ನಂಬೋದಿಲ್ಲ. ನಾನಂತೂ ''ಹಣೇಮೇಲೆ ಏನೂ ಬರದಿಲ್ಲ. ಕೆತ್ತಿನೋಡ್ರಿ, ರಕ್ತ ಇದೆ ಹೊರ್ತಾಗಿ ಮತ್ತೇನು ಇರದಿಲ್ಲ'' ಅಂತ ವಾದ ಮಾಡತಿದ್ದೆ. ಘನಮಠದ ಶಿವಯೋಗಿಗಳು ಒಂದು ಮಾತು ಹೇಳ್ತಾರ: 'ದಿನಿಮಿಂದೇ ಹಣೆಯ ದುರ್ಲಿಖಿತಮಂ ತೊಡೆವಂಗೆ'. ಹಣೇಬರೆಹ ಒಂದು ಪಕ್ಷ ಇತ್ತೂ ಅಂದರ, ''ಇವತ್ತೇ ಅದನ್ನ ತೊಡೀಲಿಕ್ಕೆ ಒಳ್ಳೇ ಸಮಯ. ತೊಡೀರಿ ಅದನ್ನ'', ಅಂತಿದ್ದರು. ಇಂಥಾ ವಾತಾವರಣ ಮನೆಯಲ್ಲಿ ಇರೋದರಿಂದ ನನಗ ಬರೀಲಿಕ್ಕೆ ಸ್ವಲ್ಪ ಪ್ರೇರಣೆ ಸಿಕ್ತು.

**ರ :** ನೀವು ಉರ್ದು ಮಾಧ್ಯಮದಲ್ಲಿ ಕಲಿತಿರಿ. ಆ ಕಾಲದ ಒತ್ತಡ ಹೇಗಿತ್ತು?

**ಶಾಂ :** ಹೈದರಾಬಾದ್ ನವಾಬರ ಕಾಲಕ್ಕೇನೇ ಸರ್ವತ್ರ ಉರ್ದು ಆಯ್ತು. ಅಂದರ ಅದು ಕೋರ್ಟ್ ಭಾಷೆ ಆಯ್ತು, ರಾಜಕೀಯ ಭಾಷೆ ಆಯ್ತು. ಉರ್ದು ಕಲೀದೇ ಹೋದರೆ ನೌಕರಿ ಸಿಗೋದಿಲ್ಲ ಅಂತ ಹೇಳಿ, ಎಲ್ಲಾರೂ ಕಲೀಲಿಕ್ಕ ಹತ್ತಿದರು. ಆದರ ನಾವು ನೆನಪಿಡಬೇಕು - ಉರ್ದು ಕಲಿತರು ಅಂದರೆ ಉರ್ದುವನ್ನ ದ್ವೇಷ ಮಾಡಲಿಲ್ಲ. ಇದು ದೊಡ್ಡ ಮಾತು. ನಾನು ಮನೇನಲ್ಲಿ ಕನ್ನಡ ಕಲೀತಿದ್ದೆ. ನಮ್ಮ ತಂದೆ ಛಂದಸ್ಸು, ಅಲಂಕಾರ, 'ವೃಷಭೇಂದ್ರ ವಿಜಯ' ಇವನ್ನೆಲ್ಲ ಮನೇನಲ್ಲೇ ಓದಿಸಿದರು. ಶಾಲೆಯಲ್ಲಿ ಮಾತ್ರ ಒಂದು ಕನ್ನಡ ಪುಸ್ತಕ ಇರತಿತ್ತು. ಇರತಿತ್ತು ಅಂದರೆ ಅದಕ್ಕೆ ಬಹಳ ಮಹತ್ವ ಏನಿರಲಿಲ್ಲ. ಲೆಕ್ಕ, ಗಣಿತ, ಭೂಗೋಲ, ಇತಿಹಾಸ ಜ್ಞಾನ ಎಲ್ಲವೂ ಏನಪಾ ಅಂದರ, ಉರ್ದುನಲ್ಲೇ ನಾವು ಓದಿದ್ದು. ಉರ್ದು ಭಾಷೆ ಎಷ್ಟರಮಟ್ಟಿಗೆ ನಮಗೆ ಪ್ರಿಯವಾಗಿತ್ತು ಅಥವಾ ರಕ್ತಗತವಾಗಿತ್ತು ಅಂತಂದರೆ, ದೇವೇಂದ್ರಕುಮಾರ ಹಕಾರಿ, ಪಂಚಾಕ್ಷರಿ ಹಿರೇಮಠ, ಗೂಗಲ್ ಸೂಗಣ್ಣ, ಜಯತೀರ್ಥ ರಾಜಪುರೋಹಿತ ನಾವೆಲ್ಲ ಕೂಡಿದರೆ ಉರ್ದುನಲ್ಲೇ ಮಾತು ಸುರು. ನಮ್ಮ ಭಾವಮೈದನ ಅದಾನ ಜಂಗಮಶೆಟ್ಟಿ ಅಂತ, ''ಕ್ಯಾ ಮಾಸ್ತರ್'' ಅಂತ ಬರ್ತಾನೆ ಈಗಲೂ. ಉರ್ದು ಭಾಷೆ ನಮಗ ಎರಡನೇ ಮಾತೃಭಾಷೆ ಆಗಿತ್ತು ಅಂದರೆ ತಪ್ಪೇನು ಆಗಲಿಕ್ಕಿಲ್ಲ. ಆದರೆ ಆ ಭಾಷೆಯನ್ನ ಎಂದೂ ನಾವು ದ್ವೇಷ ಮಾಡಲಿಲ್ಲ. ಪ್ರೀತಿ ಮಾಡಿದಿವಿ. ಅದರಲ್ಲಿ ಇರತಕ್ಕಂತಹ ಸಾಹಿತ್ಯವನ್ನ ಅಭ್ಯಾಸ ಮಾಡಿದಿವಿ. ಆ ಕಾಲದಲ್ಲಿ ಪ್ರೇಮಚಂದರ ನೂರಾರು ಕತೆಗಳನ್ನ ನಮ್ಮ ಈ ಚನ್ನಬಸಪ್ಪನವರೇ ಅನುವಾದ ಮಾಡಿದರು. ಮಂಟೋನ ಕತೆಗಳು ನನಗ ಬಹಳ ಪ್ರಿಯವಾಗಿದ್ದವು. ಕೃಷ್ಣಚಂದರ್ ಅಗದೀ ನನ್ನ ಪ್ರೀತಿಯ ಸಾಹಿತಿಯಾಗಿದ್ದ.

**ರ :** ಕನ್ನಡ ನವೋದಯದ ಲೇಖಕರಿಂದ ಯಾವ ಪ್ರೇರಣೆ ಸಿಗಲಿಲ್ಲವಾ ?

**ಶಾಂ :** ಉರ್ದು ಸಾಹಿತ್ಯವನ್ನ ಅಭ್ಯಾಸ ಮಾಡಕೊಂಡು ನಾವು ಇರೋ ಕಾಲಕ್ಕ ಹಳೇ ಮೈಸೂರಲ್ಲಿ ನವೋದಯ ಸುರುವಾಗಿತ್ತು. ನಮ್ಮ ಪಠ್ಯಪುಸ್ತಕದಲ್ಲಿ ಕುವೆಂಪು ಅವರ 'ಕಿಂದರಿಜೋಗಿ' ಇರ್ತಿತ್ತು; 'ಕುಮಾರವ್ಯಾಸ ಹಾಡಿದನೆಂದರೆ ಕಲಿಯುಗ ದ್ವಾಪರವಾಗುವುದು' ಇರ್ತಿತ್ತು. ನಮ್ಮ ಪಠ್ಯಪುಸ್ತಕಗಳೆಲ್ಲ ಮೈಸೂರಿಂದ ಆಗಿ ಬರ್ತಾ ಇದ್ದವು. ಆದರೆ ನಮ್ಮ ಮಾಧ್ಯಮ ಉರ್ದು ಆಗಿದ್ದರಿಂದ ನಮಗ ಕನ್ನಡ ಸಾಹಿತಿಗಳು ಯಾರಂಬೋದು ಗೊತ್ತಿರಲಿಲ್ಲ. ಅವರ ಪುಸ್ತಕಗಳೇ ಸಿಗ್ತಾ ಇರಲಿಲ್ಲ.

**ರ :** ಬಿಎಂಶ್ರೀ ಆ ಕಾಲಕ್ಕೆ ಹೈದರಾಬಾದ್ ಕರ್ನಾಟಕದಲ್ಲಿ ಬಹಳ ತಿರಗಾಡ್ತಾ ಇದ್ದರು.

**ಶಾಂ :** ನಿಜ. ಶ್ರೀಕಂಠಯ್ಯನವರು ರಾಯಚೂರಿಗೆ ಬಹಳ ಸಾರಿ ಬಂದಿದ್ದರು. ಅವರು ಚಿಕ್ಕಮಕ್ಕಳಿಗೆ ತಿಳಿಯುವಂತೆ ಕನ್ನಡದಲ್ಲಿ ಭಾಷಣ ಮಾಡ್ತಾ ಇದ್ದರು; ಚಿಕ್ಕಮಕ್ಕಳಿಗೆ ತಿಳಿಯುವಂತೆ ಇಂಗ್ಲಿಷಿನಲ್ಲಿ ಮಾತಾಡ್ತಿದ್ದರು. ನಾನು ಉರ್ದುನಲ್ಲಿ ಓದ್ತಾ ಇದ್ದರೂ ಅವರ ಭಾಷಣವನ್ನ ಎಂದೂ ಮಿಸ್ ಮಾಡ್ತಾ ಇರಲಿಲ್ಲ. ಒಂದ್ಸಲ ಊರಿಗೆ ಹೋಗಿದ್ದೆ. ಬರೋದರ ಒಳಗಾಗಿ ಅವರ ಭಾಷಣ ಮುಗಿದಿತ್ತು. ಗಳಗಳ ಅತ್ತುಬಿಟ್ಟೆ ನಾನು. ''ಕಾಲ ಉರುಳಿದಂತೆ ಶಬ್ದಗಳು ತಮ್ಮ ಅರ್ಥ ಕಳಕೊಳ್ತವೆ. ಸಾಧಾರಣ ಈ 'ವಾಸನೆ' ಅನ್ನೊ ಶಬ್ದ. ಏನೋ ವಾಸನೆ ಬರ್ತಿದೆ ಅಂತಂದರೆ ದುರ್ವಾಸನೆ ಅಂತಲೇ ಅರ್ಥವಾಗ್ತದ. ಇದು ಯಾವಾಗಲೋ ತನ್ನ ಮೂಲಾರ್ಥ ಕಳೆದುಕೊಂಡದ'' ಅಂತ ಅವರು ಹೇಳ್ತಾ ಭಾಷಣ ಮುಗಿಸ್ತಾ ಇದ್ದರು. ಇಂತಹ ಎಷ್ಟು ಶಬ್ದಗಳ ಬಗ್ಗೆ ಹೇಳಿದ್ದರೋ ಗೊತ್ತಾಗಲಿಲ್ಲ.

**ರ :** ನೀವೂ ನಿಮ್ಮ ಸಮಕಾಲೀನರು ಕನ್ನಡದಲ್ಲಿ ಬರೆದಿರಿ. ಆದರೆ ನಿಮ್ಮ ಸಂಗಾತಿಗಳಲ್ಲಿ ಕೆಲವರು ಉರ್ದುನಲ್ಲೇ ಬರೆದರು. ಉದಾಹರಣೆಗೆ ಮುದ್ದಣ್ಣ ಮಂಜರ್.

**ಶಾಂ :** ನಮ್ಮ ಮುದ್ದಣ್ಣ! ಎಂಬಿಬಿಎಸ್ ಡಾಕ್ಟರಾಗಿದ್ದರು ಅವರು. ಬಹಳ ಒಳ್ಳೇ

ಕ್ಕರ್. ಉರ್ದು ಸಾಹಿತ್ಯವನ್ನು ಚೆನ್ನಾಗಿ ರಗಿಸಿಕೊಂಡಿದ್ದರು. ಉರ್ದುನಲ್ಲಿ ಸುಂದರವಾದ ಜ಼ಲ್ ಬರೀತಿದ್ದರು. ಅವರ ತಂದೆ ಪ್ರಭುರಾವ್ ತಿದ್ದರು. ಉರ್ದು, ಅರಬ್ಬಿ, ಫಾರಸಿ ಮೂರರಲ್ಲೂ ಡ್ಡ ಪಂಡಿತರು ಅವರು. ಕರ್ನಾಟಕದಲ್ಲಿ ಉರ್ದು ಗಲಿ, ಫಾರಸಿ ಆಗಲಿ, ಅರಬ್ಬಿಯಾಗಲಿ, ಏನೇ ಥಗಳು ಸರ್ಕಾರಕ್ಕೆ ಮಾನ್ಯ ಮಾಡಬೇಕಾಗಿತ್ತು ತಂದರೆ, ಪ್ರಭುರಾವ್ ಹತ್ತರಾನೇ ಬರ್ತಾ ಇದ್ದವು. ಮ್ಮ ತಂದೆಯ ಪ್ರಭಾವದಿಂದ ಮುದ್ದಣ್ಣ ಉರ್ದುವನ್ನ ಗೂಡಿಸಿಕೊಂಡರು. ಅವರು ರಾಯಚೂರಿಗೆ ದು ವಾಸ ಮಾಡ್ಲಿಕ್ಕೆ ಹತ್ತಿದರಲ್ಲ, ಆಗ ನಾವು ತ್ರಾಯ ಮಾಡಿ ''ಏ, ನಿಮ್ಮ ಮಾತೃಭಾಷೇನಲ್ಲಿ ಬರೀರಿ'' ತ ಕನ್ನಡದಲ್ಲಿ ಬರೆಸಿದೆವು. ಆದರೆ ಅವೇನು ಅಷ್ಟು ಯ ಪದ್ಯಗಳಾಗಲಿಲ್ಲ.

ರ: ನೀವು ಕನ್ನಡದಲ್ಲಿ ಗಜ಼ಲ್ ಪ್ರಯೋಗವನ್ನು ಡಿದವರು. ಗಜ಼ಲಿನ ವಿಶೇಷತೆ ಏನು ?

ಶಾಂ: 'ಗಜ಼ಲ್' ಅನ್ನುವದು ಅರಬ್ಬಿ ಶಬ್ದ. ಗಸರೊಡನೆ ಸರಸ ಸಲ್ಲಾಪ ಅಂತ ಅದರರ್ಥ. ರಬ್ಬರು ಯುದ್ಧ ಮಾಡಿ ಇರಾನ್ ದೇಶವನ್ನು ಗೆದ್ದು ನ್ನ ಆಳಿಕೆ ಮಾಡಿದರಲ್ಲ, ಆಗ ಗಜ಼ಲ್ ಅಂಬೋ ಇರಾನಕ್ಕೆ ಹೋಯ್ತು. ಇದು ಹೋಗೋ ಕಾಲಕ್ಕ, ಲ್ಲೊಂದು ಜನಪದ ಕಾವ್ಯ ಇತ್ತು - ಗಜ಼ಲಿಗೆ ಪವಾದದ್ದು. ಇರಾನದವರು ಅರಬ್ಬಿಯ ಈ ಜ಼ಲ್ ಶಬ್ದ ತಗೊಂಡು ಫಾರಸಿಯಲ್ಲಿ ಗಜ಼ಲ್ ಸೃಷ್ಟಿ ಡ್ಲಿಕ್ಕೆ ಆರಂಭ ಮಾಡಿದರು. ಶಬ್ದ ತಮ್ಮದಾದರೂ ರಬರಿಂದ 'ಗಜ಼ಲ್' ಕಾವ್ಯ ಸೃಷ್ಟಿಯಾಗಲಿಲ್ಲ. ಒಬ್ಬ ರ್ದು ವಿಮರ್ಶಕ ಒಂದು ಮಾತು ಹೇಳ್ತಾನ: ''ಈ ರಬ್ಬರು ಜಾಹಿಲರು. ಕಠಿಣ ಸ್ವಭಾವದವರು. ಅವರಿಗೆ ದುವಾದ ಗಜ಼ಲ್ ಒಲೀಲಿಲ್ಲ. ಅದು ನಿಜವಾಗಿ ಲಿದಿದ್ದು ಫಾರಸಿ ಜನಾಂಗದವರಿಗೆ'' ಅಂತ.

ರ: ಗಜ಼ಲಿನ ಲಕ್ಷಣ ಏನು?

ಶಾಂ: ಗಜ಼ಲಿನ ಮೊದಲನೇ ಲಕ್ಷಣ ಅಂತಂದರೆ, ಫಿಯಾ, ರದೀಫ್ ಅಂಬೋ ಎರಡು ಪ್ರಾಸಗಳು. ಫಿಯಾ ಹಿಂದಿಂದು. ರದೀಫ್ ಮುಂದಿಂದು. ಈಗ ದಲ ಸಾಲಿನಲ್ಲಿ 'ಬಂದಿತು' ಅಂಬೋ ಶಬ್ದ ದರೆ, ಇನ್ನೊಂದು ಸಾಲಿಗೆ 'ನಂದಿತು' ಅಂತ ಗಬೇಕು. ಶಬ್ದ ಬ್ಯಾರೆ ಆಗಬೇಕು. ಕೊನೇ ಅಕ್ಷರ ದೇ ಇರಬೇಕು. ಇದು ಕಾಫಿಯಾ. ಹೋದ ಬಂದ ದ - ಈ ಪ್ರಾಸಗಳೇನದಾವ ಇವು ರದೀಫ್. ಲಿನ ಎರಡನೇ ಲಕ್ಷಣ ಅಂತಂದರೆ, ಮುಸಲ್ಸಿಲ್ ತ್ತು ಗೈರ್ ಮುಸಲ್ಸಿಲ್. ಮುಸಲ್ಸಿಲ್ ಅಂದರೆ ಒಂದೇ ಯದ ವರ್ಣನೆ ಇರುವಂತಹ ಕವನ. ಗೈರ್ ಸಲ್ಸಿಲ್ ಅಂತಂದರೆ ಪ್ರತಿ ದ್ವಿಪದಿ ತನ್ನದೇ ಆದ ರ್ಥವನ್ನ ಇಟ್ಕೊಂಡು ಪ್ರತ್ಯೇಕ ಘಟಕ ರುವಂತಹದ್ದು. ಇಲ್ಲಿ ಒಂದು ದ್ವಿಪದಿಯಲ್ಲಿ ಪ್ರೇಮ ದರೆ ಇನ್ನೊಂದು ದ್ವಿಪದಿಯಲ್ಲಿ ಸಾವಿನ ಬಗ್ಗೆ ಳಬಹುದು. ಒಂದರಲ್ಲಿ ಹೊಳೆಯ ವರ್ಣನೆ ಡಿದರೆ, ಇನ್ನೊಂದರಲ್ಲಿ ಹೂವಿನ ವರ್ಣನೆ ಡಬಹುದು. ಗಜ಼ಲಿನ ನಿಜವಾದ ವೈಶಿಷ್ಟ್ಯ ೋದೇ ಗೈರ್ ಮುಸಲ್ಸಿಲ್‌ನಲ್ಲಿ.

ರ: ಕನ್ನಡದಲ್ಲಿ ಬೇರೆಬೇರೆ ಕವಿಗಳು ಗಜ಼ಲ್



ಬರೀತಾ ಇದಾರೆ. ಅವು ಹೇಗಿವೆ ?

ಶಾಂ : ನೋಡ್ರಿ, ಉರ್ದುನಲ್ಲಿ ಗಾಲಿಬ್ ಇದ್ದಾನ. ಇಕ್ಬಾಲ್ ಇದ್ದಾರ. ಉರ್ದು ಭಾಷೆ ಕಲ್ತಿದ್ದರಿಂದ ಬೇರೆಬೇರೆ ಕವಿಗಳ ಗಜ಼ಲುಗಳನ್ನು ನಾನು ಓದಿದೀನಿ. ಆಮೇಲೆ ಸಿನಿಮಾದಲ್ಲಿ ಆ ಕಾಲಕ್ಕ ಬರ್ತಕ್ಕಂತಹ ಗಜ಼ಲುಗಳನ್ನು ಕೇಳಿದೀನಿ. ಅವು ಬಹಳ ಸುಂದರವಾಗಿವೆ. ಹೀಗಿರುವಾಗ ಕೆಲವರು ಕನ್ನಡ ಶಾಯರಿ ಅಂತ ಬರದು ನನ್ನ ಮನಸ್ಸಿಗೆ ಒಂದು ಬಗೆಯಲ್ಲಿ ಕಸಿವಿಸಿ ಉಂಟುಮಾಡಿದರು. 'ಶಾಯರಿ' ಅಂತಂದರೇನೇ ಕಾವ್ಯ. ನೀವೇ ಹೇಳ್ರಿ 'ಕನ್ನಡ ಶಾಯರಿಗಳು' ಅಂದರೆ ಏನರ್ಥ ? ಕನ್ನಡ ಕವನಗಳು ಅಂತ ಅರ್ಥ. ಅವರು ಗಜ಼ಲನ್ನೇ ಪ್ರೇಮಕಾವ್ಯ ಅಂತ ಅರ್ಥ ಮಾಡಿಕೊಂಡಾರ. ಖಡಾಖಂಡಿತವಾಗಿ ಹೇಳ್ತೀನಿ. ಈ ಮಾತು ಕೇಳಿ ಅವರು ಪ್ರತಿಭಟನೆ ಮಾಡಿದರೆ ನಾನೇನು ಹೆದರೋದಿಲ್ಲ. ಹಿಂದಿ ಭಾಷೆಯ ಗಜ಼ಲುಗಳನ್ನು ಓದಿ ಅದರ ಸಾರ ತಕ್ಕೊಂಡು ಕನ್ನಡದಲ್ಲಿ ಶಾಯರಿ ತಿಳಕೊಂಡು ಬರೀತಾರ. ತಮ್ಮವಲ್ಲ ಅವು. ಆಮೇಲೆ ಕನ್ನಡದಲ್ಲಿ ಕೆಲವು ಕವಿಗಳು ಇದಾರಲ್ಲ, ಅವರು ಕೆಟ್ಟ ಪ್ರೇಮಗೀತೆಗಳನ್ನ ಬರದು ಅದಕ್ಕ ಗಜ಼ಲ್ ಅಂತಾರ. ಸಾಧಾರಣ ೧೯೮೪ರಲ್ಲಿ ಒಂದು ಟೀವಿ ಕಾರ್ಯಕ್ರಮ ಆಯ್ತು - ಬೆಂಗಳೂರಲ್ಲಿ, ಗೋಕಾಕರ ಅಧ್ಯಕ್ಷತೆಯಲ್ಲಿ. ಎಲ್ಲರೂ ಬಂದಿದ್ದರು. ಅಲ್ಲಿ ಒಂದು ಗಜ಼ಲ್ ಓದಿದೆ. ಓದಿ ಅಧ್ಯಕ್ಷರಿಗೆ ಹೇಳಿದೆ: ''ಇದು ಗಜ಼ಲ್. ಇಲ್ಲಿ ಕೂತಾರಲ್ಲ ಇವರು ಬರೀತಕ್ಕಂಥಾದ್ದು ಪ್ರೇಮಕಾವ್ಯ. ಗಜ಼ಲ್ ಅಲ್ಲ. ಇವರಲ್ಲಿ ಗಜ಼ಲಿನ ವೈಶಿಷ್ಟ್ಯ ಇಲ್ಲ. ಗಜ಼ಲಿನ ಚೌಕಟ್ಟಿಲ್ಲ. ಗಜ಼ಲಿನ ಪ್ರಾಸಗಳಿಲ್ಲ. ಗಜ಼ಲಿಗೆ ಏನೇನು ಬೇಕೊ ಅದು ಯಾವುದೂ ಇಲ್ಲ. ಇವರಿಗೆ ಗಜ಼ಲ್ ಅಂಬೋದೇ ಗೊತ್ತಿಲ್ಲ'' ಅಂತ. ಹೇಳಿಹೇಳಿ ಸಾಕಾಯ್ತುರಿ. ಬರೀಬ್ಯಾಡ್ರಿ ಅಂತಂದರೂ ಕೇಳಲ್ಲ.

ರ : ನಿಮ್ಮ ಅನುಭವ ಏನು, ಗಜ಼ಲ್ ಬರೆಯೋದರಲ್ಲಿ?

ಶಾಂ : ಈ ಗಜ಼ಲ್ ಮೇಲೆ ಗ್ರಿಪ್ ಸಿಗಬೇಕಾದರೆ, ೧೦ ವರ್ಷ ಅಭ್ಯಾಸ ಮಾಡಬೇಕಾಯಿತು ನಾನು. ಸುಮಾರು ೬೦ ಪುಸ್ತಕ ತರಿಸಿದ್ದೆ. ಯಾವಾಗ ಗ್ರಿಪ್ ಸಿಕ್ತು, ಆವಾಗ ಪ್ರಕಟ ಮಾಡ್ಲಿಕ್ಕ ಶುರುಮಾಡಿದೆ. ಅಂದರೆ ಹೆಮ್ಮೆಪಟ್ಟುಕೊಂಡು ಅಹಂಕಾರದಲ್ಲಿ ಹೇಳ್ತಾನ ಅಂತ ತಿಳೀಬ್ಯಾಡಿ. ಕನ್ನಡದಲ್ಲಿ ಮೊಟ್ಟಮೊದಲಿಗೆ ಉರ್ದುನಂತಹ ಶುದ್ಧ ಕನ್ನಡೀಕರಣ ಮಾಡಿ ಬರೆದವನು ನಾನೇ. ಇದರ ಜತೀಗೆ ನನ್ನ ಮಗಳು ಮುಕ್ತಾಯಕ್ಕ ಇದ್ದು. ನಾನು ಅಭ್ಯಾಸ ಮಾಡತಾ ಹೋದಂಗೆ ಆಕೀಗೂ ಅಭ್ಯಾಸ ಮಾಡಿಸಿದೆ. ನಮ್ಮ ಮನೆಯಲ್ಲಿ, ರಾಜಪುರೋಹಿತರ ಮನೆಯಲ್ಲಿ, ಮುದ್ದಣ್ಣನವರ ಮನೆಯಲ್ಲಿ ಮುಶಾಯಿರಗಳು ಆಗತಿದ್ದವು. ಹೈದರಾಬಾದ ಕರ್ನಾಟಕದಲ್ಲಿ ಈವತ್ತಿಗೂ ಗಜ಼ಲ್ಲಿನ ವಾತಾವರಣ ಅದ. ಈವತ್ತಿಗೂ ರಾಯಚೂರನಲ್ಲಿ, ಬೀದರನಲ್ಲಿ, ಕೊಪ್ಪಳದಲ್ಲಿ ಎಲ್ಲ ಕಡೆಗೂ ಮುಶಾಯಿರಗಳು ಆಗ್ತವ. ಉರ್ದುನಲ್ಲಿ ಒಳ್ಳೇಒಳ್ಳೇ ಗಜ಼ಲ್ ಓದ್ತಾರ. ನಮ್ಮೂರಲ್ಲಿ ಖುದ್ದೂಸ್ ಅಂತಿದ್ದರು. ಅವರ ಮನೀಗೆ ನಾನೂ ನನ್ನ ಮಗಳೂ ಹೋಗ್ತಾ ಇದ್ದಿವಿ. ಆಕಿಗೆ ಆ ಗಜ಼ಲ್ ಸಂಪ್ರದಾಯದ ಪ್ರಭಾವ ಆಗಿತ್ತು. ನಾನು ಹೇಳದಂಗೆಲ್ಲ ಅರಗಿಸಿಕೊಂಡು ಹೋದಳು. ಆಕಿಗೂ ಹಿಡಿತ ಬಂತು. ಮೊದಲು ಆಕೀವು ೪೦ ಗಜ಼ಲ್ ಪ್ರಕಟವಾದವು. ಆಮೇಲೆ ನನ್ನ ಗಜ಼ಲ್ ಪ್ರಕಟವಾದವು.

ರ : ಉರ್ದು ಮುಶಾಯಿರಗಳಿಗೂ ಕನ್ನಡದ ಕವಿಗೋಷ್ಠಿ ಗಳಿಗೂ ಏನು ವ್ಯತ್ಯಾಸ ?

ಶಾಂ : ಈ ಉರ್ದು ಮುಶಾಯಿರಗಳಲ್ಲಿ ಏನಾಗ್ತದ, ಅಲ್ಲಿ ಸಮ್ಮಿಶ್ರ ಕೇಳುಗರು ಬಂದಿರ್ತಾರ. ಹ್ಯಾಗೆ ಅಂತಂದರ, ಒಬ್ಬನು ಸಾಮಾನ್ಯವಾದ ಪದ್ಯಾನ ಅರ್ಥ ಮಾಡಿಕೊಳ್ತಾನ. ಇನ್ನೊಬ್ಬನು ಬಹಳ ಕಠಿಣವಾದ ಪದ್ಯಾನ ಅರ್ಥ ಮಾಡಿಕೊಳ್ತಾ ಇರ್ತಾನ. ಇದು ಉರ್ದು ಕವಿಗಳಿಗೆ ಗೊತ್ತು. ಅದಕ್ಕ ಅವರೇನು ಮಾಡ್ತಾರ, ಎಲ್ಲ ಮಟ್ಟದ ಕೇಳುಗರಿಗೂ ಅರ್ಥವಾಗುವ ಗಜ಼ಲ್‌ಗಳನ್ನೇ ಓದ್ತಾರ. ಈ 'ವ್ಹಾವ್ಹಾ' ಅಂತಾರಲ್ಲ, ಸುಮ್ಮಸುಮ್ಮಗ ಅನ್ನೋದಿಲ್ಲರಿ. ಮುಶಾಯಿರದಲ್ಲಿ 'ಮತ್ಲಾ' ಅಂತ ಮೊದಲನೇ ದ್ವಿಪದಿ ಬರ್ತದ. ಅದು ಬಂದ ಕೂಡಲೇ ಅಲ್ಲಿ ಕುಂತಕೊಂಡವನು ಅದನ್ನ ತಗೊಂಡು ರಿಪೀಟ್ ಮಾಡಬೇಕು. 'ಮತ್ಲಾ' ರಿಪೀಟ್ ಮಾಡದೇ ಇದ್ದರೆ ವಾಚನ ಮಾಡ್ತಾ ಇದ್ದ ಕವಿಗಳು ತಮಗಾದ ಅಪಮಾನ ಅಂತ ತಿಳ್ಕೋತಾರ. ಈ ಕಾರಣದಿಂದ ಅವರು ತಮ್ಮ ಗಜ಼ಲ್‌ನಲ್ಲಿರತಕ್ಕಂತಹ ಯಾವುದೇ ಒಂದು ಶೇರ್‌ನ ಹೇಳಬಹುದು. ಇಲ್ಲವೇ 'ಏಕ ಶೇರ್ ಕಹತಾ ಹ್ಞೂಂ' ಅಂತ ಅಲ್ಲೇದಲ್ಲೇ ಒಂದು ಹೊಸ ಶೇರ್ ಕಟ್ಟಿಬಿಡಬಹುದು.

ರ: ನಿಮ್ಮದೊಂದು ಶೇರ್ ಹೇಳಿ ಸಾರ್.

ಶಾಂ: ವಿಶ್ವಾಸದ್ರೋಹವನು ಗೈದ ಪ್ರೇಮಿಯ ಮರೆತು ಜೀವಿಸಿದರು,
ಆಳದಲ್ಲಿ ಎಲ್ಲಿಯೋ ಅವಳ ಕ್ಷೇಮದ ಚಿಂತೆ ನರಳುತಿಹುದು

ಇಂತಹ ಪದ್ಯಗಳು ಏನದಾವ, ಇವನ್ನ ಜನರು ಅರ್ಥ ಮಾಡಿಕೊಳ್ತಾರ. ಆದರೆ ಕನ್ನಡದ ಕವಿಗಳು ತಮ್ಮ ಪಾಂಡಿತ್ಯ ಪ್ರದರ್ಶನ ಮಾಡ್ಲಿಕ್ಕೆ, ನವ್ಯ ಕವನಗಳನ್ನು ಓದ್ತಾರ. ಯಾರಿಗೆ ಅರ್ಥವಾಗ್ತವು ಅವು ? ಅಡಿಗರ ಪದ್ಯಗಳು ಕವಿಸಮ್ಮೇಳನಗಳಲ್ಲಿ ಅರ್ಥ ಆಗೋದಿಲ್ಲ. ಹಿಂಗಾಗಿ ಕನ್ನಡದ ಕವಿಗೋಷ್ಠಿಗಳು ಸೋತುಹೋಗ್ತವ.

ಆದರೆ ಇತ್ತೀಚೆಗೆ ಕೆಲವರು ಅರ್ಥವಾಗುವ ಪದ್ಯಗಳನ್ನ ಓದ್ತಾ ಇದಾರ. ಈಗ ಶಿವರುದ್ರಪ್ಪನವರ ಪದ್ಯಗಳನ್ನ ಜನ ಅರ್ಥಮಾಡಿಕೊಳ್ತಾರ. ಪ್ರೀತಿ ಮಾಡ್ತಾರ.

**ರ :** ಕರ್ನಾಟಕದಲ್ಲಿ ರಾಷ್ಟ್ರಮಟ್ಟದಲ್ಲಿ ಖ್ಯಾತಿವೆತ್ತ ಉರ್ದು ಲೇಖಕರಿದ್ದಾರೆ. ಆದರೆ ಅವರಿಗೂ ಕನ್ನಡದ ಲೇಖಕರಿಗೂ ಸಂಬಂಧವೇ ಇದ್ದಂತಿಲ್ಲ. ಎರಡೂ ಭಾಷೆಗಳ ಅತ್ಯುತ್ತಮ ಸಾಹಿತ್ಯ ಕೂಡ ವಿನಿಮಯವಾಗ್ತಿಲ್ಲ. ಯಾಕಿಂಥ ಪರಿಸ್ಥಿತಿ ?

**ಶಾಂ :** ನಮ್ಮ ರಾಯಚೂರಿನಲ್ಲಿ ಕನ್ನಡದ ಕವಿಗಳಿಗೂ ಉರ್ದು ಕವಿಗಳಿಗೂ ಒಳ್ಳೇ ಸಂಬಂಧ ಇತ್ತು. ಪ್ರೀತಿಯಿಂದ ಒಬ್ಬರಿಗೊಬ್ಬರು ಕೂಡ್ತಾ ಇದ್ವಿವಿ. ಇತ್ತೀಚೆಗೆ ಯಾಕೋ ಸ್ವಲ್ಪ ದೂರ ಆಗೀವಿ. ಇದೊಂದು ರೀತಿಯಿಂದ ಅಕಾಡೆಮಿಗಳು ಸಹಕಾರದಿಂದ ಮಾಡ್ತಕ್ಕಂತಹ ಕೆಲಸ. ಈಗ ರಾಘವೇಂದ್ರರಾವ್ 'ಜಜ್ಬ' ಅನ್ನೋರು ಇದ್ದರು. ಉಸ್ಮಾನಿಯಾದಲ್ಲಿ ಕನ್ನಡ ಪ್ರೊಫೆಸರ್ ಆಗಿದ್ದರಲ್ಲ, ಡಿ. ಕೆ. ಭೀಮಸೇನರಾವ್, ಅವರ ತಮ್ಮ ಇವರು. ಒಬ್ಬ ಉರ್ದು ಶಿಕ್ಷಕರಾಗಿದ್ದ 'ಜಜ್ಬ' ಬಹಳ ಒಳ್ಳೇ ಕವಿ. ಅವರು 'ಸೋಮೇಶ್ವರ ಶತಕ'ವನ್ನ ಉರ್ದುನಲ್ಲಿ ಅನುವಾದ ಮಾಡಿದರು. ಇವತ್ತಿಗೂ ಅದು ಪ್ರಕಟವಾಗಿಲ್ಲ. ಸರ್ಕಾರವ್ರೂ ಮಾಡವಲ್ದು. ಜನರೂ ಮಾಡವಲ್ಲರು. ಯಾಕ ಅಂತಂಬೊ ಕಾರಣ ನನಗೆ ಗೊತ್ತಾಗವಲ್ಲದು. ಮುದ್ದಣ್ಣನೂ ತನ್ನ ಗಝಲಗಳನ್ನ ಅನುವಾದ ಮಾಡು ಅಂತ ನನಗ ಹೇಳಿದ. ನನಗೆ ಆಗಲಿಲ್ಲ.

**ರ :** ರಾಘವೇಂದ್ರರಾವ್, ತಮ್ಮ 'ಉರ್ದು ಮತ್ತು ಫಾರಸಿ ಸಾಹಿತ್ಯ' ಪುಸ್ತಕದಲ್ಲಿ ರಾಯಚೂರು ಸೀಮೆಯಲ್ಲಿದ್ದ ಬಿಜಲಿ ವಸ್ತಾದಿ ಬಗ್ಗೆ ಬರೀತಾರೆ. ಈ ಬಿಜಲಿಯ ವಿಶೇಷತೆ ಏನು ?

**ಶಾಂ :** ಬಿಜಲಿ ವಸ್ತಾದಿ ಕನ್ನಡ ಮತ್ತು ಉರ್ದು ಎರಡೂ ಬಲ್ಲವ. ಅವ ಸೂಫಿ ಸಂತ. ಈ ಸೂಫಿ ಸಂತರಿಗೆ ಯಾವುದೇ ಸಾಂಪ್ರದಾಯಿಕ, ಧಾರ್ಮಿಕ ತತ್ವಗಳ ಹಂಗಿರೋದಿಲ್ಲ. ಅವನ್ನೆಲ್ಲ ಮೀರಿ ನಿಂತಿರ್ತಾರ ಅವರು. ನಾನು ಯಡದೊರೆ ನಾಡಿನ ಅನುಭಾವಿ ಕವಿಗಳ ಮೇಲೆ ಸಂಶೋಧನೆ ಮಾಡೋ ಕಾಲಕ್ಕ, ನನಗ ಬಿಜಲಿ ವಸ್ತಾದಿ ಸಿಕ್ಕದ್ದು. ಅರವಲಿಯೊಳಗ ಅವನ ಮನೀಗೆ ಹೋಗಿದ್ದೆ ನಾನು. ಬಿಜಲಿ ವಸ್ತಾದಿ ಉರ್ದುಕಿಂತ ಕನ್ನಡದಲ್ಲಿ ಬಹಳ ಬರ್ದಿದಾನ. ಉರ್ದುನಲ್ಲಿ ಕೆಲವು ಸವಾಲ್ ಜವಾಬ್ ಬರದಾನ. ಬಹಳ ಚನ್ನಾಗವ. ಆ ಕಾಗದಗಳು ಹಿಂಗವ, ಮುಟ್ಟದರೆ ಮುರಿದು ಹೋಗ್ತಾವ. ನಾನು ಬಹಳ ಪ್ರಯತ್ನ ಮಾಡಿದೆ. ಪ್ರಯತ್ನ ಮಾಡಿದ ಪೈಕಿ ಕೆಲವು ಸವಾಲ್ ಜವಾಬ್ ಪದಗಳು ಸಿಕ್ಕವು. ಕೆಲವು ರಿವಾಯತ್‌ಗಳು ಸಿಕ್ಕವು. ಪ್ರಕಟಮಾಡಬೇಕು ಅಂತಂದರ ಆಗಲಿಲ್ಲ. ಆತನದು ಇನ್ನೊಂದು ಸ್ವಭಾವ ಏನಿತ್ತಂದರೆ, ಅಲ್ಲೇ ಅವನ ಊರು ಸಮೀಪ ಮಟಮಾರಿ ಅಂತ ಊರದ; ಅಲ್ಲಿನ ವೀರಭದ್ರ ದೇವರ ಮೇಲೆ ಆತ ಪದ್ಯ ಬರೀತಿದ್ದ. ಅದನ್ನ ಹಾಡ್ಕೊಂಡು ತನ್ನ ಶಿಷ್ಯಬಳಗವನ್ನ ಕಟ್ಕೊಂಡು ಜಾತ್ರೀಗೆ ಹೋಗತಿದ್ದ. ಬಿಜಲಿ ವಸ್ತಾದಿ ಬಹಳ ದೊಡ್ಡ ವ್ಯಕ್ತಿ ಅದು. ಬಿಜಲಿಯಂತಹ ಸೂಫಿ ಕವಿಗಳು, ನಮ್ಮ ಹೈದರಾಬಾದ್ ಕರ್ನಾಟಕದಲ್ಲಿ ಹೆಜ್ಜಿಗೊಬ್ಬರು ಸಿಕ್ತಾರ. ಸಂಶೋಧನೆ ಮಾಡಬೇಕು ಅದನ್ನ. ಅಲ್ಲ, ನೀವು 'ಕರ್ನಾಟಕದ ಸೂಫಿಗಳು' ಪುಸ್ತಕ ಬರದೀರಿ. ಆದರೂ ನೀವು ಬರೆದಿರೋದಕ್ಕಿಂತ ಹತ್ತುಪಟ್ಟು ಜನ ಸಿಗ್ತಾರ. ಗುಲಬರ್ಗ ಜಿಲ್ಲೆನಲ್ಲೇ ೧೬ ಜನ ಮುಸಲ್ಮಾನ ತತ್ವಪದಕಾರರು ಅದಾರ. ಅವರ ಪದ್ಯಗಳು ಎಷ್ಟು ಚಂದ ಅದಾವರೀ ! ಬಿಜಲಿ ವಸ್ತಾದೀದು 'ಜ್ಞಾನದಿಂದ ಶಿವಧ್ಯಾನವ ಮಾಡಣ್ಣ, ಅರವಲಿಗೆ ಬಂದು ಬಿಜಲಿಯ ಜತಿಗೆ ವಾಸ್ತವ್ಯ ಮಾಡಣ್ಣ' ಅಂತ ಬಹಳ ಸುಂದರ ಪದ್ಯ ಅದ. ಅದನ್ನ ಈ ಭಾಗದ ಭಜನಿಯವರು ಹಾಡ್ತಾರ. ಬಿಜಲಿ ವಸ್ತಾದಿ ಥರಾನೇ ನಮ್ಮ ಚನ್ನೂರ ಜಲಾಲಸಾಬರು, ಮೋಟ್ನಳ್ಳಿ ಹಸನಸಾಬರು ಕೂಡ ಬರದಾರ. ಅವರಿಗೆ ಪೈಗಂಬರರಾಗಲಿ ಹಿಂದುಗಳ ಸಾಧುಸಂತರೇ ಆಗಲಿ ಭಿನ್ನಭೇದವೇ ಇಲ್ಲ. ಒಟ್ಟು ನನಗನಿಸ್ತದ, ಈ ಸೂಫಿ ಕವಿಗಳು ಅದಾರಲ್ಲ, ಅವರು ಎಲ್ಲವನ್ನು ಮೀರಿನಿಂತು ಮಾನವತೆಯನ್ನ ಮೆರೆದವರು. ಅವರು ಈ ಕಡೆ ವೈದಿಕ ಧರ್ಮವನ್ನ ತಿರಸ್ಕಾರ ಮಾಡ್ತಾರ. ಆ ಕಡೆ ಮುಸಲ್ಮಾನ ಧರ್ಮವನ್ನ ತಿರಸ್ಕಾರ ಮಾಡಲ್ಲ, ಸರಳ ಮಾಡ್ತಾರ. ಆದರ ಸಂಪ್ರದಾಯ ಶರಣತೆಯನ್ನ ತಿರಸ್ಕಾರ ಮಾಡ್ತಾರ. ಸಾರ್ವತ್ರಿಕವಾಗಿ ಏನು ಜನರಿಗೆ ಬೇಕಾಗದೆಲ್ಲ, ಅದನ್ನ ಹೇಳ್ತಾರ. ಬಹುಶಃ ಜಂಬಲದಿನ್ನಿಯಾಗಲಿ, ಚನ್ನಬಸಪ್ಪನವರಾಗಲಿ ನಾನಾಗಲಿ ಬೆಳೆದಿದ್ದೇ ಸೂಫಿ ಸಂತರ ನಾಡಿನಲ್ಲಿ. ನಮಗೆ ಸೂಫಿಗಳ ಬಗ್ಗೆ ಹೆಚ್ಚು ಗೊತ್ತಿಲ್ಲದೇ ಇರಬಹುದು. ಆದರೂ ಕೂಡ, ಅವರ ತತ್ವಗಳು ನಮ್ಮ ಹೈದರಾಬಾದ್ ಕರ್ನಾಟಕದ ನಾಡಿನ ಜನರಲ್ಲಿ ಗಾಳಿಯಲ್ಲಿ ನೀರಿನಲ್ಲಿ, ನಮ್ಮ ಉಸಿರಿನಲ್ಲಿ ಅಡಗಿದಾವ.

**ರ :** ಧಾರವಾಡದ 'ಗೆಳೆಯರ ಬಳಗ'ದ ಹಾಗೆ ನೀವು 'ಸಂಗಡಿಗರ ಸಮಿತಿ' ಕಟ್ಟಿದಿರಿ. ಅದನ್ನು ಹುಟ್ಟಿಹಾಕುವಂಥ ಜರೂರು ಯಾಕೆ ಬಂತು?

**ಶಾಂ :** ಇಡೀ ಹೈದರಾಬಾದ್ ಕರ್ನಾಟಕದಲ್ಲಿ ಕನ್ನಡದ ಹೊಸಗಾಳಿಯನ್ನ ಬೀಸಿದ್ದು ನಮ್ಮ 'ಸಂಗಡಿಗರ ಸಮಿತಿ'. ಈ ಗಾಳಿ ಬೀಸುವಂತೆ ಮಾಡಿದ್ದು ನಾನೊಬ್ಬನೇ ಅಲ್ಲ. ನನ್ನ ಜತಿಗೆ ವಿಶ್ವನಾಥರೆಡ್ಡಿ ಮುದ್ನಾಳ್, ವೀರಣ್ಣಗೌಡ ನೀರಮಾನ್ವಿ, ಸಿದ್ಧರಾಮ ಜಂಬಲದಿನ್ನಿ, ಚನ್ನಬಸವಪ್ಪ ಬೆಟದೂರ, ಗೂಗಲ್ ಸೂಗಣ್ಣ - ಇನ್ನೂ ನಾಕಾರು ಮಂದಿ ಇದ್ದಿವಿ. ಅದೊಂದು ಏಕಮನಸ್ಸಿನ ಗುಂಪು. ಏನಾಗಿತ್ತು, ನಾವು ಪತ್ರಿಕೆಗಳಿಗೆ ಲೇಖನ, ಕವನ ಕಳಿಸಿದರೆ ಪ್ರಕಟವಾಗ್ತಿರಲಿಲ್ಲ; ವಾಪಸ್ಸೂ ಬರ್ತಾ ಇರಲಿಲ್ಲ. ಹಳೇ ಮೈಸೂರಿನವರಂತೂ ನಮ್ಮನ್ನ ಲೆಕ್ಕಕ್ಕೇ ಇಟ್ಟಿರಲಿಲ್ಲ. ಉತ್ತರ ಕರ್ನಾಟಕದವರೂ ಲೆಕ್ಕಕ್ಕಿಟ್ಟಿರಲಿಲ್ಲ. ಅದಕ್ಕ ನಾವೆಲ್ಲಾರೂ ಕೂಡಿ, ಇವರು ಯಾರೂ ಬ್ಯಾಡ ಅನ್ನೋ ಮಟ್ಟಿಗೆ ನಾವೇ ಬೆಳೆಯೋಣ ಅಂತ, 'ಮುಸುಕು ತೆರೆ' ಅಂತ ಒಂದು ಪುಸ್ತಕ ತಂದಿವಿ. ಅದರೊಳಗ ಹರಟೆಗಳದಾವ. ಕವನಗಳದಾವ. ಕತೆಗಳದಾವ. ನಮ್ಮ ಚನ್ನಬಸಪ್ಪನವರ 'ಕತ್ತೆ' ಇವತ್ತಿಗೂ ಪ್ರಸಿದ್ಧವಾಗಿದೆ. ಸಿದ್ಧಯ್ಯ ಪುರಾಣಿಕರು ಗೂಗಿ ಬಗ್ಗೆ ಬರದರು. ಆ ಪುಸ್ತಕವನ್ನ ವಿಮರ್ಶೆಗೆ ಕಳಿಸಿದರೆ, ಯಾವ ಪತ್ರಿಕೆ ನಾವು ಕಳಿಸಿದ ಲೇಖನಗಳನ್ನ ರಿಜೆಕ್ಟ್ ಮಾಡಿತ್ತೊ ಅದೇ ಪತ್ರಿಕೆ, 'ಇದರಲ್ಲಿ ಹೊಸ ಹೊಳಹುಗಳುಳ್ಳ ಲೇಖನಗಳು ಕವನಗಳು ಅದಾವ' ಅಂತ ವಿಮರ್ಶೆ ಮಾಡಿತು. ದುರ್ದೈವದ ಸಂಗತಿ. ಮುಂದ ಮುದ್ದಣ್ಣನವರ ಅಧ್ಯಕ್ಷತೆಯಲ್ಲಿ 'ಅನುಭವ ಮಂಟಪ' ಅಂತ ಒಂದು ಪ್ರಕಾಶನ ಸ್ಥಾಪನೆ ಮಾಡಿದಿವಿ. ಅಲ್ಲಿಂದ ಪುಸ್ತಕಗಳನ್ನ ತಂದಿವಿ. ಅಷ್ಟೆಲ್ಲ ಮಂದಿ ಇದ್ದರೂ ನಮ್ಮೊಳಗೆ ಭಿನ್ನಾಭಿಪ್ರಾಯ ಇದ್ದವು. ಆ ಭಿನ್ನಾಭಿಪ್ರಾಯಗಳ ಜತೀಗೆ ಬದುಕಿದಿವಿ. ಈಗ ಈ ನಮ್ಮ ಚನ್ನಬಸಪ್ಪನ ಸ್ನೇಹಕ್ಕೆ ೨೦ ವರ್ಷ ತುಂಬಿತು.

**ರ :** ಈಚೆಗೆ ನೀವೊಂದು ಹೇಳಿಕೆ ಕೊಟ್ಟಿರಿ. ''ಹೈದರಾಬಾದ್ ಕರ್ನಾಟಕದವರು ರಾಜಕೀಯಕ್ಕಿಂತ ಸಾಂಸ್ಕೃತಿಕವಾಗಿ ಹೆಚ್ಚು ಶೋಷಿತರು'' ಅಂತ. ಇದರ ಅರ್ಥ ಏನು ?

**ಶಾಂ :** ನೋಡ್ರಿ, ಇಡೀ ಹೈದರಾಬಾದ್ ಕರ್ನಾಟಕವನ್ನ ಆರ್ಥಿಕವಾಗಿ ಶೋಷಣೆ ಮಾಡ್ತಾ ಇದ್ದರು. ಸಹಿಸಿಕೊಂಡಿದ್ದಿವಿ. ಆದರ ಯಾವಾಗ ಇವರು ಸಾಂಸ್ಕೃತಿಕವಾಗಿ ಶೋಷಣೆ ಮಾಡ್ಲಿಕ್ಕೆ ಆರಂಭ ಮಾಡಿದರು, ಆಗ ಸಿಡಿದೆದ್ದಿವಿ. ನಮ್ಮನ್ನ, ನಮ್ಮ ಬದುಕನ್ನ ಯಾರೂ ಅರ್ಥ ಮಾಡಿಕೊಳ್ಳಲಿಲ್ಲ. ಶಾಂತರಸ ಯಾರು ಅಂದರೆ ಯಾರೋ ಇರಬೇಕು. ಚನ್ನಬಸಪ್ಪ ಬೆಟ್ಟದೂರು ಅಂದರೆ ಯಾರವರು ? ಗೊತ್ತಿಲ್ಲ. ಅವರ 'ಕತ್ತೆ'

ದರೆ ಎಲ್ಲಿದೆ ? 'ಮುಸುಕು ತೆಗೆ' ಅಂದರೆ ಏನದು - ಅಂತ ಕೇಳ್ತಾ ಇದ್ದರು. ನಮ್ಮನ್ನ ರೂ ಗುರುತಿಸಲಿಲ್ಲ 'ಹೊಸ ಕಾವ್ಯ' ಬಂದಾಗ್ಯೆ, ನಮ್ಮ ಭಾಗದಿಂದ ಚಂದ್ರಕಾಂತ ನೂರು ಒಬ್ಬರನ್ನ ತಗೊಂಡರು. ಅದಕ್ಕೆ ಬ್ಯಾರೆ ಕಾರಣಗಳು ಅದಾವ. ಸಕಾವ್ಯ'ವನ್ನ ನಾನು ಓದಿದೆ. ಅದರಲ್ಲೂ ಬೇಕಾದಷ್ಟು ಕಳಪೆ ಕವನಗಳದಾವ. ನ್ನ ಕಂಡು ಹೈದರಾಬಾದ್ ಕರ್ನಾಟಕದಿಂದ ನಾವ್ಯಾಕ ಮಾಡಬಾರದು ತಿಳಕೊಂಡು, ಬಳ್ಳಾರಿ ಸಹಿತವಾಗಿ ನಾಲ್ಕು ಜಿಲ್ಲೆಗಳ ಕವಿಗಳನ್ನ ಕಟ್ಕೊಂಡು, ಒಂದು ಕಲನ ತಂದೆ. ''ಬೆನ್ನ ಹಿಂದೆ ಕೂಡ ಬೆಳಕಿದೆ. ಸ್ವಲ್ಪ ಹಿಂದಿರುಗಿ ನೋಡಿರಿ'' ಅಂತ ದೆ. ಅದರೊಳಗೆ ೨೭ ಕವಿಗಳ ಪದ್ಯಗಳದಾವ. ಅವರೊಳಗ ಈ ಹೊತ್ತು ೧೭-೨೦ ದಿ ರಾಜ್ಯಮಟ್ಟದ ಕವಿಗಳಾಗಿ ಬೆಳದಾರ.

ರ : ನಿಮ್ಮ ಸಂಗಡಿಗರಲ್ಲಿ ಹೆಚ್ಚಿನವರು ಲೇಖಕರು. ಆದರೆ ಸಿದ್ಧರಾಮ ಜಂಬಲದಿನ್ನಿ ರು ಗಾಯಕರು. ಜಂಬಲದಿನ್ನಿ ಅವರ ಪ್ರತಿಭೆಯೆಲ್ಲ ವಚನಗಾಯನಕ್ಕೆ ಅಥವಾ ಗಳಿಗೆ ಸೀಮಿತವಾಯಿತು ಅನಸೋಲ್ಲವಾ ? ಅವರು ಮಲ್ಲಿಕಾರ್ಜುನ ಮನಸೂರ್ ಹ ರಾಷ್ಟ್ರಮಟ್ಟದಲ್ಲಿ ಯಾಕ ಬೆಳೀಲಿಲ್ಲ?

ಶಾಂ : ಜಂಬಲದಿನ್ನಿ ಅವರ ಪರಿಚಯ ಆಗಿದ್ದು ನನಗ ೧೯೪೫ರಲ್ಲಿ. ಅವರು ವಾರದಿಂದ ರಾಯಚೂರಿಗೆ ಬಂದಂಗೆಲ್ಲ ನನ್ನ ಮನಲ್ಲೇ ಉಳಕೋತಿದ್ದರು. ಅವರೊಂದು ಸಾರಿ ಗೀತ ಕಛೇರಿಯಲ್ಲಿ ವಚನ ಹಾಡಿದರು. ಬಹಳ ಡಿಸಿತು ನನಗ. ತತ್ವಪದ ಹಾಡಿದರು. ಬಹಳ ಡಿಸಿತು. ಆಮೇಲೆ ನಮ್ಮ 'ಸಂಗಡಿಗರ ಸಮಿತಿ'ಯ ಟ್ಟ ಸದಸ್ಯರೇ ಆಗಿಬಿಟ್ಟರು. ಅವರು ಯಾವುದೇ ಂದು ವಚನ ಹಾಡಬೇಕಾಗಿತ್ತು ಅಂದರ, ಅದನ್ನ ನಮ್ಮ ಗೆ ಚರ್ಚೆ ಮಾಡ್ತಿದ್ದರು. ಅದರ ಅರ್ಥ ತಮ್ಮ ದಯಕ್ಕೆ ಇಳಿಯೋವರೆಗೂ ಬಿಡ್ತಾ ಇರಲಿಲ್ಲ. ಅದರ ರ್ಥವನ್ನ ಸರಿಯಾಗಿ ತಿಳಕೊಂಡು ಹಾಡ್ತಾ ಇದ್ದರು. ಹುಶಃ ನನಗನಿಸ್ತದ, ಇನ್ನೂ ಸಾವಿರ ವರ್ಷ ಆದರೂ ಂತಹ ವಚನ ಸಂಗೀತಗಾರ ಹುಟ್ಟಲಿಕ್ಕಿಲ್ಲ. ಎಷ್ಟು ಣಾಮಾರಿ ಕುಂತ ಜನರಿಗೆ? ಅನೇಕ ಜನರು ಂಬಲದಿನ್ನಿ ಹಾಡಿದ ವಚನಗಳನ್ನ ಕೇಳಿ ತಮ್ಮ ಭಾವವನ್ನೇ ಬದಲಿ ಮಾಡ್ಕೊಂಡಾರ. ಕಛೇರಿ ಡಿದಾಗ್ಗೆ ಮೊದಲು ಅವರು ಖಯಾಲ್ ಹಾಡ್ತಿದ್ದರು - ಂಟಲು ಕಾಯಬೇಕು ಅಂತಿಳಕೊಂಡು. ಆ ಖಯಾಲ್ ಡಾದ ಕಾಲಕ್ಕೇನೇ ಜನ ವಚನ ಹಾಡಬೇಕು ಅಂತ ತುಬಿಡ್ತಿದ್ದರು. ಹೀಗಾಗಿ ಅವರು ಮಹಾರಾಷ್ಟ್ರಕ್ಕ ೋಗಲಿಲ್ಲ, ಕರ್ನಾಟಕದಲ್ಲೇ ಉಳಕೊಂಡರು. ಇನ್ನ ಅವರು ರಾಷ್ಟ್ರಮಟ್ಟಕ್ಕೆ ೋಗೋದು ದೂರ ಉಳೀತು. ರಾಷ್ಟ್ರಮಟ್ಟಕ್ಕ ಯಾಕ ಹೋಗಲಿಲ್ಲ ಅನ್ನೋಕೆ ೇರೆಬೇರೆ ಕಾರಣಗಳೂ ಅದಾವ. ಅವನ್ನ ಈಗ ಹೊರಗ ಹಾಕೋದು ಬ್ಯಾಡ.



ರೀ.. ಮಗುಗೆ ದೀಪಾವಳಿ ಹಬ್ಬಕ್ಕೆ ಪಟಾಕೆ ಬೇಡ್ವಂತೆ ನಿಮ್ಮ ಹತ್ರಾ ಇರೋ ಸೂಟ್‌ಕೇಸ್ ಬೇಕಂತೆ ಬೇಗ ಕಳಿಸಿ...

ರ: ನಿಮ್ಮ ಬರೆಹದಲ್ಲಿ ಮತ್ತು ವ್ಯಕ್ತಿತ್ವದಲ್ಲಿ ಬಸವಣ್ಣನ ಪ್ರಭಾವ ಬಹಳ ಇದ್ದ ಹಾಗಿದೆ.

ಶಾಂ : ನನ್ನ ಒಬ್ಬನ ವ್ಯಕ್ತಿತ್ವದ ಮೇಲಲ್ಲ, ನಮ್ಮ 'ಸಂಗಡಿಗರ ಸಮಿತಿ'ಯ ಎಲ್ಲ ದಸ್ಯರ ಎಲ್ಲ ಹೃದಯಕ್ಕೆ ಮುಟ್ಟಿರತಕ್ಕಂತಹವನು ಬಸವಣ್ಣ. ಮೊದಲನೇದಾಗಿ - ಸವಣ್ಣ ನಮಗ ಯಾಕ ಪ್ರಿಯವಾದ ಅಂತಂದರ, ವೈದಿಕ ಧರ್ಮದಲ್ಲಿ ಏನೇನು ಳುಕುಗಳಿದ್ದವು, ಜನರ ಬಾಳನ್ನ ಹಾಳು ಮಾಡುವಂತಹ ಅಪದ್ದಗಳಿದ್ದವು, ಅವನ್ನೆಲ್ಲ ಮೂಲಾಗ್ರವಾಗಿ ಕಿತ್ತಿ ಒಗದು ಪ್ರತಿಭಟನೆ ಮಾಡಿದವನು ಅವನು. ಎರಡನೇದಾಗಿ- ರ್ಲ್‌ಮಾರ್ಕ್ಸ್ ಏನು ತತ್ವ ಹೇಳಿದನಲ್ಲ, ಅದನ್ನೇ ೧೨ನೇ ಶತಮಾನದಲ್ಲಿ ಬಸವಣ್ಣ ೇಳಿದ. ತೌಲನಿಕ ದೃಷ್ಟಿಯಿಂದ ಅಭ್ಯಾಸ ಮಾಡ್ತಾ ಇದ್ದಾಗ ನಮಿಗೆ ಮಾರ್ಕ್ಸ್‌ಗಿಂತ ಸವಣ್ಣನೇ ಹೆಚ್ಚು ಪ್ರಿಯವಾದ. ಒಂದು ಮಾತು ಹೇಳ್ತೀನಿ. ಬಸವಣ್ಣ ಲಿಂಗಾಯತ ವೂ ಲಿಂಗಾಯತರು ಅಂತ ಅವನನ್ನ ನಾವು ಪ್ರೀತಿ ಮಾಡಲಿಲ್ಲ. ಬಸವಣ್ಣನಂತೆ ತನ್ನ ನಸನ್ನ, ತನ್ನ ಸ್ವಭಾವವನ್ನ ತನ್ನ ಹೃದಯವನ್ನ ಬಿಚ್ಚಿಟ್ಟವನು ಈ ಹೊತ್ತಿಗೂ ಗಾಂಧಿ ಬ್ಬನೇ. ತನ್ನನ್ನ ತಾನೇ ಏನಪ ಅಂತಂದರೆ ಬೈಕೊಳ್ಳೋದು ಯಾರು ಮಾಡ್ತಾರ? ನನ್ನ ನಸ್ಸು ಅತ್ತಿಯ ಹಣ್ಣಿನಂತೆ, ನನ್ನ ಮನಸ್ಸು ಮರ್ಕಟನಂತೆ ಅಂತ ಎಲ್ಲ ಪ್ರಾಣಿಗಳಿಗೆ ಸವಣ್ಣ ತನ್ನನ್ನ ಹೋಲಿಸಿಕೊಳ್ತಾನ. ಆ ಪ್ರಾಣಿಗಳ ಹಾಗೆ ಬಸವಣ್ಣ ಇದ್ದನೇನೋ ಅಂತ ನಿಸ್ತದ. ಇರಬೇಕು. ಕೆಟ್ಟಗುಣಗಳನ್ನ ಏನಂತಂದರೆ ಮೀರಲಿಕ್ಕೆ ಅವನಿಗೆ ಸಮಯ ಹಿಡಿದಿರಬೇಕು. 'ಬಸವಣ್ಣನವರ ಮಾನಸಗಳ್ಳಿ' ಅಂತ ನಂದೊಂದು ಲೇಖನ ಅದ. ಅದರಲ್ಲಿ ಚರ್ಚೆ ಮಾಡಿದೀನಿ ಬಸವಣ್ಣನಿಗೆ ಏನೇನಾಯ್ತು ಅಂತ. ಮೂರನೇದಾಗಿ - ಆತ ದಾಸೋಹ ತತ್ವ ಏನು ಹೇಳಿದ, ಅದರ ಮೂಲ ಅಸ್ತಿವಾರ ಕಾಯಕ. ಕಾಯಕದಿಂದ ಜಾತಿ ಇಲ್ಲ, ಮೇಲುಕೀಳು ಇಲ್ಲ. ಅಂತಂದರೆ ಮಚಗಾರನೂ ಒಬ್ಬವನೇ ಆಗ್ತಾನ. ಗುಡಿಯಲ್ಲಿ ಪೂಜೆ ಮಾಡ್ತಕ್ಕಂತಹವನೂ ಒಬ್ಬವನೇ ಆಗ್ತಾನ. ಕಾಯಕದಲ್ಲಿ ಭೇದಾನೇ ಇಲ್ಲವಲ್ಲ. ಈ ಕಾಯಕದಿಂದ ಮಾತ್ರ ಜಾತೀಯತೆ ಅಳಿಸಬಹುದು ಅಂತ ಇವತ್ತಿಗೂ ಅನಿಸ್ತದ ನನಗ. ಆವತ್ತಿನ ಕಾಲಕ್ಕ ಕಿನ್ನರಿ ಬೊಮ್ಮಯ್ಯ, ಮಡಿವಾಳ ಮಾಚಿದೇವ, ಡೋಹಾರ ಕಕ್ಕಯ್ಯ ಅಂತ ಅವರು ಹೆಸರು ಇಟ್ಟುಕ್ಕೊಳ್ಳಲಿಲ್ಲ ಅಂತಂದರೆ, ಇವತ್ತು ನಾವು ಬಹಳ ಕಷ್ಟಪಡಬೇಕಾಗಿತ್ತು. ಬರೀ ಚನ್ನಯ್ಯನ ವಚನಗಳು ಅಂತ ಇದ್ದಿದ್ದರೆ ಅವನು ಯಾವ ಜಾತಿಯವನಿದ್ದ, ಏನು ಕಾಯಕ ಮಾಡತಾ ಇದ್ದ ಅನ್ನೋದು ಅರ್ಥಾನೇ ಆಗ್ತಿರಲಿಲ್ಲ. ಬಸವಣ್ಣ ಕೆಳವರ್ಗವನ್ನ ಮೇಲೆ ಎತ್ತಲಿಕ್ಕೆ ಏನು ಪ್ರಯತ್ನ ಮಾಡಿದನಲ್ಲ, ಅದು ಬಹಳ ಮಹತ್ವದ್ದು.

ರ : ನೀವು ಪಂಡಿತ ತಾರಾನಾಥರು ಸ್ಥಾಪಿಸಿದ ಶಿಕ್ಷಣ ಸಂಸ್ಥೆಯಲ್ಲಿ ಶಿಕ್ಷಕರಾಗಿದ್ದಿರಿ. ತಾರಾನಾಥರು ದೊಡ್ಡ ವಿಚಾರವಾದಿ. ಹೋರಾಟಗಾರ. ಅವರ ಪ್ರಭಾವ ಆ ಭಾಗದಲ್ಲಿ ಯಾವ ತರಹ ಕೆಲಸ ಮಾಡಿತು ?

ಶಾಂ : ತಾರಾನಾಥರು ಮಂಗಳೂರಿನವರು. ಅಲ್ಲಿ ಅವರಿಗೆ ಅಷ್ಟು ಆರ್ಥಿಕವಾಗಿ ಭದ್ರತೆ ಇರಲಿಲ್ಲ ಅಂತ ಹೈದರಾಬಾದಿನಲ್ಲಿ ಬಂದು ನೆಲೆಸಿದರು. ಅಲ್ಲಿ ಅವರಿಗೆ ಬೀಗರಿದ್ದರು. ಅವರು ನಿಜಾಂ ಕಾಲೇಜಿನಲ್ಲಿ ಓದಿದರು. ಅಲ್ಲಿ ಓದ್ತಾ ಓದ್ತಾ ನಿಜಾಮರ ವಿರುದ್ಧ ಮಾತಾಡ್ತಿದ್ದರು. ಮಾತಾಡ್ತ ಮಾತಾಡ್ತಾ ನಿಜಾಮರ ಖಾಸಾ ವೈದ್ಯ ಏನಿದ್ದನಲ್ಲ, ಆತ ಸಮಗ್ರ ಆಯುರ್ವೇದ ಬಲ್ಲವನಾಗಿದ್ದ, ಆತನಿಂದಲೇ ವೈದ್ಯ ಕಲಿತರು. ಆಮೇಲೆ ಶಿಕ್ಷಕರಾಗಿ ಬೀದರಿಗೆ ಬಂದರು. ಗುಲಬರ್ಗಕ್ಕೆ ಬಂದರು. ರಾಯಚೂರಿಗೆ ೧೯೨೦ನೇ ಇಸವಿಯಲ್ಲಿ ಬಂದು ಹೈಸ್ಕೂಲ್ ಸ್ಥಾಪನೆ ಆರಂಭಿಸಿದರು. ಕನ್ನಡ ಮಾಧ್ಯಮದಲ್ಲಿ ಶಿಕ್ಷಣ ಕೊಡತೀನಿ ಅಂತ ಹೇಳಿದರು. ಇಡೀ ಊರಿನ ಜನರೇ ವಿರೋಧ ಮಾಡಿಬಿಟ್ಟರು - ನಮಗೆ ಕನ್ನಡ ಬೇಕಾಗಿಲ್ಲ, ಉರ್ದು ಕಲಿಸು ಇಲ್ಲವೇ ಇಂಗ್ಲಿಷ್ ಕಲಿಸು ಅಂತ. ನಿಜಾಮನ ಆಳ್ವಿಕೆ ಏನಿತ್ತಲ್ಲ, ಅದರ ಮೇಲೆ ಅವರು ಕಟುವಾದ ವಿಮರ್ಶೆ ಮಾಡ್ತಾ ಇದ್ದರು. 'ನಿಜಾಂ ಹಜಾಂ ಹೈ' ಅಂತ ಹೇಳ್ತಾ ಇದ್ದರು. ಸರ್ಕಾರ ಅವರಿಗೆ ಗಡಿಪಾರು ಮಾಡಿತು. ಗಡಿಪಾರು ಮಾಡಿದ ಮೇಲೆ ತುಂಗಭದ್ರಾದ ಆಚೆ ಹೋಗಿ 'ಪ್ರೇಮಾಯತನ' ಅಂತ ಆಶ್ರಮ ಕಟ್ಟಿದರು. ಹೊಳಿ ದಂಡಿಗೇ ಆಶ್ರಮ. ಅದು ಮದ್ರಾಸ್ ಸ್ಟೇಟಿಗೆ ಸೇರಿತ್ತು. ತಾರಾನಾಥರಿಗೆ ವೈದ್ಯಕೀಯ ಬರ್ತಿತ್ತು. ವಿಜ್ಞಾನ ಬರ್ತಿತ್ತು. ಸಂಗೀತ ಬರ್ತಿತ್ತು. ಅವರಿಗೆ ಬರಲಾರದ ಶಾಸ್ತ್ರಾನೇ ಇರಲಿಲ್ಲ. ಅನಕ್ಕ ಹೇಳ್ತಾರ: ಒಂದ್ಸಲ ಯಾವುದೊ ಒಂದು ಅಂಗಡಿಗೆ ಹೋಗಿ ಒಂದಿಪ್ಪತ್ತು ಪುಸ್ತಕ ತಗೊಂಡರಂತೆ. ಮನೀಗೆ ಬಂದು ರಾತ್ರಿಯೆಲ್ಲ ಓದಿದರಂತೆ. ಬೆಳಿಗ್ಗೆ ಎದ್ದು, ''ಏ ಕೃಷ್ಣಾ, ಈ ಪುಸ್ತಕಗಳೊಳಗೆ ಏನದ ಅಂತ ಕೇಳು. ಹೇಳ್ತೀನಿ'' ಅಂದರಂತೆ. ಅಂಥಾ ಪ್ರಖರ ಪ್ರತಿಭೆ ಅವರದು. ಸಂಗೀತ ಹಾಡಿದರೆ ಬೆಚ್ಚಿಬೀಳಬೇಕು. ನೋಡೋಕು ಅಷ್ಟೇ ಸುಂದರ. ಅವರ ಆಶ್ರಮಕ್ಕ ಕಾರಂತರು ಬರ್ತಾ ಇದ್ದರು. ಟಿ. ಪಿ. ಕೈಲಾಸಂ ಬರ್ತಾ ಇದ್ದರು. ಶ್ರೀರಂಗರು ಬರ್ತಾ ಇದ್ದರು. ಜೋಳದರಾಶಿ ದೊಡ್ಡನಗೌಡರು ಬರ್ತಾ ಇದ್ದರು. ನಟ ಬಳ್ಳಾರಿ ರಾಘವ ಬರ್ತಾ ಇದ್ದರು. ಅ. ನ. ಕೃಷ್ಣರಾಯರಂತೂ ಅವರ ಪೆಟ್ ಶಿಷ್ಯರಿದ್ದರು. ಕರ್ನಾಟಕದಲ್ಲಿ ಏನು ದೊಡ್ಡದೊಡ್ಡ ಸಾಹಿತಿಗಳು ಇದ್ದರು, ಅವರೆಲ್ಲ ಅಲ್ಲಿಗೆ ಬರ್ತಾ ಇದ್ದರು. ಕೆಲವರು ರೋಗನಿದಾನಕ್ಕೆ ಬರ್ತಾ ಇದ್ದರು. ಮತ್ತೆ ಕೆಲವರು ಅವರ ಜತೀಗೆ ಇರ್ಲಿಕ್ಕಂತ ಬರ್ತಾ ಇದ್ದರು. ತಾರಾನಾಥರು 'ಪ್ರೇಮ' ಅಂತಂಬೊ ಮಾಸಿಕವನ್ನು ಕನ್ನಡದಲ್ಲೂ ಇಂಗ್ಲಿಷಿನಲ್ಲೂ ತಗೀತಿದ್ದರು. ಇವತ್ತೂ ಅದನ್ನ ಮೀರಿಸತಕ್ಕಂತಹ ಪತ್ರಿಕೆ ಯಾವುದೂ ಇಲ್ಲ.

ರ : ರಜಾಕಾರರ ಮೇಲೆ ನೀವು ಕತೆಗಳನ್ನ ಬರೆದಿರಿ. ೧೯೪೭-೪೮ರ ಕಾಲದಲ್ಲಿ ಬಹಳ ಪ್ರಕ್ಷುಬ್ಧತೆಗೆ ಕಾರಣವಾದ ಚಾರಿತ್ರಿಕ ವಿದ್ಯಮಾನ ಅದು. ಅದರ ಸ್ವರೂಪ ಹೆಂಗಿತ್ತು?

**ಶಾಂ** : ಹೈದರಾಬಾದಿನ ನಿಜಾಂ ಉಸ್ಮಾನ್ ಅಲಿ ಖಾನ್ ಬಹಳ ಒಳ್ಳೇ ಮನುಷ್ಯ. ''ಹಿಂದು ಮುಸ್ಲಿಮರು ನನ್ನ ಎರಡು ಕಣ್ಣುಗಳು'' ಅಂತ ಹೇಳ್ತಾ ಇದ್ದರು. ಅದೇ ರೀತಿಯಿಂದ ಬಹಳಮಟ್ಟಿಗೆ ನಡಕೊಂಡರು ಕೂಡ. ಊರೂರಿಗೆ ಬಾವಿಗಳ ಕಟ್ಟಿಸಿದರು. ಅವರ ಆಳ್ವಿಕೆಯೊಳಗ ಏನು ಒಳ್ಳೇ ಒಳ್ಳೇ ಕೆಲಸ ಆದವಲ್ಲ, ಈಗಲೂ ಆಗಿಲ್ಲ. ಆದರೂ ರಾಜ್ಯದಲ್ಲಿ ಒಂದು ದೃಷ್ಟಿಯಿಂದ ಅನ್ಯಾಯಗಳು ಅಪರಾಧಗಳು ಅಪದ್ದಗಳು ನಡೀತಾ ಇದ್ದವು. ಅವು ಅವರ ಮಟ್ಟಕ್ಕ ಮುಟ್ತಾ ಇದ್ದವೋ ಇಲ್ಲವೋ ಗೊತ್ತಿಲ್ಲ. ಅದೇ ಕಾಲಕ್ಕ ಕಾಸಿಂ ರಜ್ವಿ ಅಂತ ಒಬ್ಬ ಸಾಮಾನ್ಯ ವಕೀಲ, ಲಾತೂರಿಂದ ಹೈದರಾಬಾದಿಗೆ ಬಂದ. ಎಲ್ಲದಕ್ಕೂ ಅವನೇ ಮೂಲ. ಆತ 'ಇತ್ತೆಹಾದ್ ಉಲ್ ಮುಸಲ್‌ಮೀನ್' ಅಂತ ಒಂದು ಸಂಸ್ಥೆ ತಗದ. ಅದರ ಮೂಲಕ ನಿಜಾಮರನ್ನ ಒಳಗ ಹಾಕ್ಕೊಂಡ. ಮತೀಯವಾಗಿ ಅವರ ತಲೆ ಕೆಡಿಸಿಬಿಟ್ಟ. ಊರೂರು ತಿರುಗಿ ರಜಾಕಾರರ ಪಡೆ ಕಟ್ಟಿದ. ರಜಾಕಾರ್ ಅಂದರ ಸ್ವಯಂಸೇವಕ ಅಂತರ್ಥ. ಅವರಿಗೆ ಎಂಥಾ ಶಿಕ್ಷಣ ಕೊಟ್ಟನರಿ ? ಅವರು ಯಾರನ್ನ ಕೊಲ್ಲಿದರೂ ಕೇಳಂಗಿರಲಿಲ್ಲ. ಹೈದರಾಬಾದ್ ಸಂಸ್ಥಾನ ಭಾರತದ ಒಕ್ಕೂಟದೊಳಗ ಸೇರಬಾರದು ಅನ್ನೋದು ಅವನ ಹಠ.



ಚನ್ನಬಸಪ್ಪ ಬೆಟ್ಟದೂರು

**ರ** : ರಜಾಕಾರರ ಕಾಲದ ಕಷ್ಟಗಳನ್ನ ನೀವೂ ಅನುಭವಿಸಿದಿರಿ. ನಿಮ್ಮ ಒಂದು ಅನುಭವ ಹಂಚಿಕೊಳ್ಳಿರಿ.

**ಶಾಂ** : ಆಗಸ್ಟ್ ಪಂದ್ರಾಕ್ಕ ಭಾರತಕ್ಕ ಸ್ವಾತಂತ್ರ್ಯ ಬಂತಲ್ಲ, ಅವತ್ತಿನ ದಿನ ನನ್ನೂರಾದ ಹೆಂಬೇರಾಳಿನಲ್ಲಿ ನಾನು, ರಂಗಣ್ಣ, ಸೂಗಣ್ಣ ಅಂತ ಮೂವರು. ತ್ರಿವರ್ಣ ಧ್ವಜ ಏರಿಸಿದಿವಿ. ಏರಿಸಿ ಮೂರು ತಾಸಾಗಿರಲಿಲ್ಲ, ಅಷ್ಟರೊಳಗ ಪೊಲೀಸಿನೋರು ಬಂದುಬಿಟ್ಟರು. ನಾನು ಬ್ಯಾರೆ ದಾರಿಯಲ್ಲಿ ರಾಯಚೂರಿಗೆ ಹೊರಟಿದ್ದೆ. ಸೂಗಣ್ಣ ಏನಂತಂದರ, ಅವನ ಹೊಲದ ಸುತ್ತ ಕಳ್ಳಿಸಾಲು ಇತ್ತು. ಅದರಾಗೆ ಹೊಕ್ಕೊಂಡರ ಯಾರಿಗೂ ಸಿಗತಾ ಇದ್ದಿದ್ದಿಲ್ಲ. ಪೊಲೀಸರು ಹುಡುಕಿದರೂ ಸಿಗಲಿಲ್ಲ. ಪೊಲೀಸರು ರಾಯಚೂರಿಗೆ ಬಂದರು. ರಂಗಣ್ಣನ ಹೆಂಡ್ತಿ ಮನಿ ರಾಯಚೂರಾಗ ಇತ್ತಲ್ಲ, ಅವ ಸಿಕ್ಕ. ಅವನನ್ನ ಹಿಡಿದು ಒಳಗ ಹಾಕಿದರು. ಸ್ಕೂಲಿಗೆ ಬಂದು ನನ್ನ ಕೇಳಿದರು. ನನ್ನ ಹೆಸರು ಶಾಂತಯ್ಯ ಅಂತ ಒಂದು ಕಡಿಗೆ, ಶಾಂತರಸ ಅಂತ ಇನ್ನೊಂದು ಕಡಿಗೆ ಇತ್ತು. ಶಾಲೆಯೊಳಗ ಶಾದಿ ಸಾಹೇಬರು ಅಂತ ಹೆಡ್ಮಾಸ್ಟರ್ ಇದ್ದರು. ತಾರಾನಾಥರ ಪಟ್ಟಶಿಷ್ಯರು ಅವರು. ಪೊಲೀಸರು ಬಂದು ಕೇಳದಾಗ ''ಹಮಾರೆ ಪಾಸ್ ಕೋಯಿ ಐಸ ಆದಮೀ ನಹಿ ಹೈ. ಚಲೇಜಾವ್'' ಅಂತ ಹೇಳಿ, ನನ್ನ ಉಳಿಸಿಬಿಟ್ಟರು. ಪೊಲೀಸರು ಮಾರನೇ ದಿನ ನನ್ನ ರೂಮಿಗೆ ಬಂದು ಹಿಡದುಬಿಟ್ಟರು. ಸ್ಟೇಶನ್‌ಗೆ ಹಾಕಿ ಒದ್ದರು. ಶಾದಿ ಸಾಹೇಬರಿಗೆ ಅದು ಗೊತ್ತಾಗಿ ಪೊಲೀಸ್ ಸ್ಟೇಶನ್ ಬಂದು ನನ್ನನ್ನ ಬಿಡಿಸಿದರು.

**ರ** : ರಜಾಕಾರರಿಗೆ ಪ್ರತಿರೋಧ ಒಡ್ಡೋದರಲ್ಲಿ ಅಥವಾ ಬೆಂಬಲ ಮಾಡೋದರಲ್ಲಿ ಯಾವ ಯಾವ ತರಹದ ಜನ ಸೇರಿಕೊಂಡಿದ್ದರು ?

**ಶಾಂ** : ರಜಾಕಾರರ ಹಾವಳಿ ಪ್ರತಿ ಊರಿಗೆ ಇತ್ತು. ಆದರೆ ಬರೇ ಮುಸಲ್ಮಾನರು ಮಾತ್ರ ರಜಾಕಾರ ರಾಗಿರಲಿಲ್ಲ. ಹಿಂದೂಗಳೂ ರಜಾಕಾರ ರಾಗಿದ್ದರು. ಅವರು ರಜಾಕಾರರ ಡ್ರೆಸ್ ಹಾಕ್ಕೊಂತ ಇದ್ದರು. ಕೊಳ್ಳಿಗೆ ತೋಟಾಗಳ ಸರಾ ಹಾಕ್ಕೊಂಡು ಬಂದೂಕ ಹಿಡ್ಕೊಂಡು ತಿರಗಾಡ್ತಾ ಇದ್ದರು. ಅವರು ಹಿಂದುಗಳಾಗಿದ್ದರೂ ಹಿಂದುಗಳನ್ನೇ ದೋಚತಿದ್ದರು. ನನ್ನ 'ನಾಯಿ ಮತ್ತು ಪಿಂಚಣಿ' ಕತೆಯೊಳಗ ರಂಗಣ್ಣ ಅಂತ ಬರ್ತಾನಲ್ಲ, ಅವನೂ ರಜಾಕಾರ ಆಗಿದ್ದ. ಇನ್ನು 'ಬಡೇಸಾಬು ಪುರಾಣ' ಕತೆಯೊಳಗೂ ಹಿಂದುಗಳು ರಜಾಕಾರರು ಆದರು ಅಂತ ಬರ್ತಾ ಇದೆಯಲ್ಲ. ಮತ್ತ ಶಯೀಬುಲ್ಲಾ ಖಾನ್ ಅಂತ ಹೈದರಾಬಾದ್‌ನಲ್ಲಿ ಬಹಳ ದೊಡ್ಡ ಪತ್ರಕರ್ತ ಇದ್ದ; ಆತ ನಿಜಾಮರ ವಿರುದ್ಧ ಬರೀತಾ ಇದ್ದ. ಭಾರತದ ಒಕ್ಕೂಟಕ್ಕ ಹೈದರಾಬಾದ್ ಸೇರಬೇಕು ಅಂತ ಹೇಳತಾ ಇದ್ದ. ಆದರೆ ಹಾಡಹಗಲೇ ೧೨ ಗಂಟೆಗೆ ರೋಡಿನಲ್ಲೇ ಅವನನ್ನ ಕೊಲ್ಲಿಸಿಬಿಟ್ಟರು.

**ರ** : ಬೀದರ್ ಸಾಹಿತ್ಯ ಸಮ್ಮೇಳನದಲ್ಲಿ ಜಾಗತೀಕರಣದ ಬಗ್ಗೆ ಕಟುವಾಗಿ ವಿಮರ್ಶೆ ಮಾಡಿದಿರಿ. ದೇಶೀ ಸಂಸ್ಕೃತಿ ಉಳೀಬೇಕು ಅಂತ ಹೇಳಿದಿರಿ. ನಿಮ್ಮ ಆತಂಕ ಏನು ?

**ಶಾಂ** : ಜಾಗತೀಕರಣ ನಮ್ಮ ಭಾಷೆ ಮೇಲೆ, ನಮ್ಮ ಸಂಸ್ಕೃತಿ ಮೇಲೆ ಕೆಟ್ಟ ಪರಿಣಾಮ ಮಾಡ್ಲಿಕ್ಕೆ ಹತ್ಯಾದ. ಬಹುರಾಷ್ಟ್ರೀಯ ಕಂಪನಿಗಳು ಇಂಗ್ಲಿಷಿಗೆ ಮಹತ್ವ ಕೊಡ್ಲಿಕ್ಕೆ ಹತ್ಯಾವ. ಈಗ ಕನ್ನಡ ಮಾಧ್ಯಮದಿಂದ ಶಿಕ್ಷಣ ಆರಂಭ ಆಗಬೇಕು ಅಂತ ಏನ ನಾವು ಹೇಳತೀವಲ್ಲ? ಆದರ ನೋಡ್ರಿ, ಇನ್ಫೋಸಿಸ್‌ದ ಅಧ್ಯಕ್ಷ ಪ್ರಥಮತಃ ಇಂಗ್ಲಿಷ್ ಮಾಧ್ಯಮದಲ್ಲೇ ಕಲಿಸಬೇಕು ಅಂತ ಸ್ಟೇಟಮೆಂಟ್ ಮಾಡ್ಯಾನ. ಆತ ಈ ಮಾತು ಹೇಳ್ತಾನ ಅಂದರ, ಜಾಗತೀಕರಣದಿಂದ ಭಾಷಾ ದೃಷ್ಟಿಯಿಂದ ಆಗತ್ಕಂತಹ ಅಪಾಯ ಏನು ಅಂತ ಗೊತ್ತಾಗ್ತದ. ಇವತ್ತು ಏನಾಗ್ಯೆತಿ, ಸಣ್ಣಸಣ್ಣ ವ್ಯಾಪಾರಿಗಳು ಚಿಕ್ಕಚಿಕ್ಕ ಅಂಗಡಿ ಇಟ್ಟುಕೊಂಡು ಆದಾರಲ್ಲ, ಅವರ ಬದುಕನೇ ಹಾಳ್ಯಾಗಿ ಹೋಗ್ಯಾದರೀ. ದೊಡ್ಡದೊಡ್ಡ ಬಹುರಾಷ್ಟ್ರೀಯ ಕಂಪನಿಗಳು ತಾವೇ ಇಳದಬಿಟ್ಟಾವ ಚಿಲ್ಲರ್ ವ್ಯಾಪಾರಕ್ಕ. ಟೊಮಾಟೇನೂ ಬಜಾರಕ್ಕೆ ತಾವೇ ತಂದು ಮಾರ್ಲಿಕ್ಕೆ ಹತ್ಯಾವ. ನಮ್ಮ ಮೂಲ ದೇಶೀಯ ಸಂಸ್ಕೃತಿ ನಮ್ಮ ದೇಶೀಯ ಕಾಯಕಗಳು ಇವುಗಳ ಮೂಲಕ್ಕೇನೇ ಕೈಹಾಕಿಬಿಟ್ಟಾರ. ನೀವು ಸಬ್ಸಿಡಿ ಕೊಡಬ್ಯಾಡ್ರಿ ಅಂತ ಹೇಳತಾರ ಅವರು. ತಮ್ಮಲ್ಲೇನವ ಅಂತಂದರ ಖಂಡಾಬಟ್ಟಿ ಸಬ್ಸಿಡಿ ಕೊಡ್ಲಿಕ್ಕ ಹತ್ಯಾರ. ನಾವು ರಫ್ತು ಏನು ಮಾಡ್ತೀವಲ್ಲ, ಅದರ ಮೇಲೆ ಕರ ಬಹಳ ಹೇರತಾರ. ತಾವೇನು ತರ್ತಾರಲ್ಲ ಅದನ್ನ ಫ್ರೀ ತರ್ತಾರ. ಇದೆಲ್ಲ ಏನು ? ನಮ್ಮ ವ್ಯಾಪಾರಿಗಳು ಎಲ್ಲಿ ಹೋಗಬೇಕು ? ಈ ದೃಷ್ಟಿಯಿಂದ ನಮ್ಮ ದೇಶೀ ಸಂಸ್ಕೃತಿ, ದೇಶೀ ಅರ್ಥಶಾಸ್ತ್ರ ಹಾಳಾಗಲಿಕ್ಕೆ ಹತ್ಯದೆ. ನಮ್ಮ ಸರ್ಕಾರ ಏನಪಾ ಅಂತಂದರ, ಅದಕ್ಕೆ ಉತ್ತೇಜನ ಕೊಡ್ಲಿಕ್ಕೆ ಹತ್ಯದೆ. ಏನ್ ಮಾಡಬೇಕು ಹೇಳ್ರಿ ?

ಸಂದರ್ಶಕರು : ರಹಮತ್ ತರೀಕೆರೆ
ಕನ್ನಡ ವಿಶ್ವವಿದ್ಯಾಲಯ, ಹಂಪಿ, ಅಂಚೆ : ವಿದ್ಯಾರಣ್ಯ - ೫೮೩೨೭೬
ಹೊಸಪೇಟೆ ತಾಲ್ಲೂಕು, ಬಳ್ಳಾರಿ ಜಿಲ್ಲೆ

# ಅಮರನಾಥನ ದರ್ಶನ ಮಾಡಿಸಿದ ಡೋಲಿ ಹೊತ್ತವರು

ಡಾ|| ಎಚ್. ಎಸ್. ಗೋಪಾಲ ರಾವ್



ಭಾರತೀಯನಾಗಿ ಸಮಗ್ರ ಭಾರತವನ್ನು ...ಮ್ಮೆಯಾದರೂ ಒಂದಷ್ಟು ಪರಿಚಯ ಮಾಡಿಕೊಳ್ಳುವ ... ಬಹಳ ದಿನಗಳದು. ಇತಿಹಾಸ ಮತ್ತು ಸಂಸ್ಕೃತಿಯ ...ರ್ಥಿಯಾಗಿ ಪುಸ್ತಕಗಳ ಮೂಲಕ ಮಾತ್ರ ತಿಳಿದಿದ್ದ ...ರತವನ್ನು ಕಣ್ಣಾರೆ ನೋಡುವ ಅವಕಾಶವನ್ನು ...ರ್ಥಯಾತ್ರೆಯ ನೆಪದಲ್ಲಿ ಮಾಡಿಕೊಳ್ಳಬೇಕಾಯ್ತು. ...ಗೆ ಐತಿಹಾಸಿಕವಾಗಿ/ಸಾಂಸ್ಕೃತಿಕವಾಗಿ ಮಹತ್ವ ...ಸಿದ ಸ್ಥಳಗಳು ಮುಖ್ಯವಾದರೆ ನನ್ನ ಹೆಂಡತಿಗೆ ...ರ್ಥಕ್ಷೇತ್ರಗಳು ಮುಖ್ಯ. ಅಂತೂ ಮಡದಿಯ ...ತೆಗೆ ೪೦ ದಿನಗಳ ಕಾಲ ಮಾಡಿದ ಉತ್ತರ ಭಾರತ ...ವಾಸದಲ್ಲಿ ನನ್ನ ನೆನಪಿನಲ್ಲಿ ಅಚ್ಚೊತ್ತಿದಂತೆ ...ಳಿದಿರುವುದು ಅಮರನಾಥ ದರ್ಶನ. ಮೊದಲೇ ...ವಾಸದ ವ್ಯವಸ್ಥಾಪಕರಿಗೆ ಅವರ ಪಟ್ಟಿಯಲ್ಲಿ ...ತಿಹಾಸಿಕ ಸ್ಥಳಗಳು ಎಷ್ಟಿವೆ ಎಂದು ಕೇಳಿ ತಿಳಿದು, ನನ್ನ ...ವಾಸಕ್ಕೂ ಒಂದು ಗುರಿ ಇದೆ ಎಂಬ ಸಮಾಧಾನ ...ದುಕೊಂಡಿದ್ದೆ. ಜೈಪುರ, ಫತೇಪುರ-ಸಿಕ್ರಿ, ಆಗ್ರಾ, ...ಯೋಧ್ಯೆ, ಬೋಧ್‌ಗಯಾ, ಸಾರನಾಥ್‌ಗಳ ...ತೆಗೆ ದೆಹಲಿಯನ್ನೂ ಮತ್ತೊಮ್ಮೆ ನೋಡುವುದು ...ಗೆ ಪ್ರಿಯವಾದರೆ, ನನ್ನ ಹೆಂಡತಿಗೆ ವಾರಣಾಸಿ, ...ಲಹಾಬಾದ್, ಗಯಾ, ಕಠ್ಮಂಡು, ಹರಿದ್ವಾರ ಇತ್ಯಾದಿ ...ರ್ಥಕ್ಷೇತ್ರಗಳನ್ನು ನೋಡುವ ಆಸೆ.

ನಮ್ಮ ಪ್ರವಾಸೀ ತಂಡ ಬಾಲ್‌ಟಾಲ್ ತಲುಪಿದಾಗ ...ಲೈ ೬ರ ಸಂಜೆ ೭-೩೦ ಗಂಟೆ. ಸೂರ್ಯ ಇನ್ನೂ ...ಶ್ಚಿಮದಲ್ಲಿ ಕಾಣುತ್ತಿದ್ದ, ರಾತ್ರಿಯಾಗಲು, ಅಂದರೆ ...ತ್ತಲೆ ಆಗಲು ಇನ್ನೂ ಒಂದು ಅಥವಾ ಒಂದೂವರೆ ...ಟೆ ಕಾಯಬೇಕಾಗಿತ್ತು. ಬಾಲ್‌ಟಾಲ್ ಚೆಕ್ ...ಸ್ಟ್‌ನಿಂದ ಸುಮಾರು ೨ ಕಿ.ಮೀ. ದೂರದಲ್ಲೇ ...ಸಗಿ ವಾಹನಗಳಿಗೆ ಪ್ರವೇಶವನ್ನು ನಿಷೇಧಿಸಲಾಗಿತ್ತು. ನಾವು ನಮ್ಮ ಲಗೇಜ್ ಸಾಗಿಸಿಕೊಂಡು ಅಲ್ಲಿನ ಚಿಕ್ಕ ವಾಹನಗಳಲ್ಲಿ ತಪಾಸಣಾ ದ್ವಾರವನ್ನು ತಲುಪಿದೆವು. ನಮ್ಮ ಜೊತೆಯ ಲಗೇಜನ್ನು ಸ್ಕ್ಯಾನ್ ಮಾಡಿ ಪರೀಕ್ಷಿಸಲಾಯಿತು. ಅದರಲ್ಲಿ ಅನುಮಾನ ಬರುವಂತಹ ಯಾವ ವಸ್ತುವಿದ್ದರೂ ಇಡಿಯಾಗಿ ಬ್ಯಾಗನ್ನು ತೆಗೆಸಿ ಅದನ್ನು ತಮ್ಮ ವಶಕ್ಕೆ ತೆಗೆದುಕೊಂಡು ಲಗೇಜನ್ನು ಹಿಂದಿರುಗಿಸಲಾಗುತ್ತದೆ. ಕಟ್ಟುನಿಟ್ಟಿನ ತಪಾಸಣೆ ಅನಿವಾರ್ಯ.

ತಪಾಸಣೆಯ ನಂತರ ಹೊರಬಂದು ನಮ್ಮ ವಸತಿಗೆ ಪ್ರವಾಸದ ವ್ಯವಸ್ಥಾಪಕರು ಅಣಿ ಮಾಡಿದರು. ಉರುಟುಗಲ್ಲುಗಳ ಏರಿಳಿತಗಳ ನೂರಾರು ಎಕರೆ ನೆಲದಲ್ಲಿ ಸಾವಿರಾರು ಟೆಂಟ್‌ಗಳನ್ನು ಹಾಕಲಾಗಿತ್ತು. ಒಂದೊಂದು ಟೆಂಟ್‌ನಲ್ಲೂ ನಾಲ್ಕು ಐದು ಜನ ಇರಲು ಅವಕಾಶವಿತ್ತು. ಸಾಮಾನ್ಯವಾಗಿ ಟೆಂಟ್‌ಗಳಲ್ಲಿ ಮಲಗಲು ಗಾದಿಗಳನ್ನು ಮತ್ತು ಹೊದೆಯಲು ರಜಾಯಿಗಳನ್ನು ಅಣಿಮಾಡಲಾಗಿತ್ತು. ಕೆಲವು ಟೆಂಟ್‌ಗಳಲ್ಲಿ ಮಾತ್ರ ಮಡಚುವ ಕಬ್ಬಿಣದ ಮಂಚಗಳಿದ್ದವು. ಬಾಲ್‌ಟಾಲ್ ಪ್ರವೇಶಿಸಿದಾಗಿನಿಂದ ನಾವು ಗೃಹರಕ್ಷಕ ದಳ ಮತ್ತು ಸೈನ್ಯದ ನೇರ ರಕ್ಷಣೆಯಲ್ಲಿದ್ದೆವು. ಅವರ ಕಣ್ಣು ತಪ್ಪಿಸಿ ಯಾವ ಕೆಲಸವೂ ಆಗುವಂತಿರಲಿಲ್ಲ. ದೇಶದ ರಕ್ಷಣೆಯ ಹಿನ್ನೆಲೆಯಲ್ಲಿ ಇಂತಹ ಎಚ್ಚರದ ಕ್ರಮ ಅವಶ್ಯಕವೆನ್ನಿಸಿತು. ಎಲ್ಲ ಟೆಂಟ್‌ಗಳಿಗೂ ಆಗುವಂತೆ ಸುಮಾರು ಹತ್ತು ತಗಡಿನ ಶೌಚಾಲಯಗಳು ಮತ್ತು ಅಷ್ಟೇ ಸಂಖ್ಯೆಯ ತಗಡಿನ ಸ್ನಾನದ ಮನೆಗಳಿದ್ದವು. ಇಷ್ಟು ಕಡಿಮೆ ಸಂಖ್ಯೆಯ ಶೌಚಾಲಯ ಮತ್ತು ಸ್ನಾನದ ಮನೆಗಳು ಸಾವಿರಾರು ಸಂಖ್ಯೆಯ ಟೆಂಟ್‌ಗಳಲ್ಲಿದ್ದವರಿಗೆ ಸಾಕಾಗುವುದಿಲ್ಲ ಎಂದು ಯಾರಿಗಾದರೂ ಅನಿಸುತ್ತಿತ್ತು. ನಾವು ಯಾವ ವಿಷಯದಲ್ಲೂ ಯಾರನ್ನೂ ಪ್ರಶ್ನೆ ಮಾಡದ ಸ್ಥಿತಿ ತಲುಪಿದ್ದೆವು. ಹೇಗೋ ನಾಳೆ ಒಂದು ದಿನ ಅನುಸರಿಸಿಕೊಂಡು ಹೋಗುವುದು ಅನಿವಾರ್ಯ ಎಂಬ ಅನುಸರಣೆಯ ಮಾತುಗಳನ್ನಾಡಿಕೊಂಡೆವು. ಪ್ರಕೃತಿಯ ಕರೆಯನ್ನು ಮೀರಿ ನಿಲ್ಲುವ ಪ್ರಯತ್ನ ಮಾಡುವುದು ಮತ್ತು ಅಸಹ್ಯಕರ ವಾತಾವರಣಕ್ಕೆ ಹೊಂದಿಕೊಳ್ಳುವುದು ಅನಿವಾರ್ಯ ಆಗಿತ್ತು. ಮಾರನೆಯ ದಿನ ಬೆಳಗಿನ ಜಾವವೇ ಅಮರನಾಥನ ದರ್ಶನಕ್ಕೆ ವ್ಯವಸ್ಥೆ ಆಗಬೇಕಾಗಿದ್ದುದರಿಂದ ಪ್ರವಾಸದ ವ್ಯವಸ್ಥಾಪಕರು ತಮ್ಮದೇ ವ್ಯವಸ್ಥೆ ಮಾಡಿಕೊಳ್ಳಲಿದ್ದವರನ್ನು ಹೊರತುಪಡಿಸಿ ಉಳಿದವರಿಗೆ ಅವರವರ ಅವಶ್ಯಕತೆಗೆ ತಕ್ಕಂತೆ ಡೋಲಿ ಅಥವಾ ಕುದುರೆಗಳ ವ್ಯವಸ್ಥೆ ಮಾಡಬೇಕಾಗಿತ್ತು. ಆ ವ್ಯವಸ್ಥೆಯನ್ನು ಒದಗಿಸಲಿದ್ದ ಗುತ್ತಿಗೆದಾರರ ಹಲವು ತಂಡಗಳು ಆಗಲೇ ನಮ್ಮ ಬೆನ್ನುಹತ್ತಿದ್ದವು. ನಮ್ಮ ಪ್ರವಾಸದ ವ್ಯವಸ್ಥಾಪಕರು ಯಾರೋ ಒಬ್ಬನೊಡನೆ ವ್ಯವಹರಿಸಿ ನಮಗಾಗಿ ತಲಾ ಏಳು ಸಾವಿರ ರೂಪಾಯಿಗಳಿಗೆ ಒಂದೊಂದು ಡೋಲಿಯ ವ್ಯವಸ್ಥೆ ಮಾಡಿದರು. ಮುಂಗಡ ಹಣವನ್ನು ಪಡೆದ ಡೋಲಿಯವರು ಬೆಳಗಿನ ಜಾವ ಎರಡೂವರೆ ಗಂಟೆಗೆ ಸಿದ್ಧರಾಗಿರಬೇಕೆಂಬ ಸೂಚನೆ ನೀಡಿ ಹೋದರು. ಆ ಹೊತ್ತಿಗಾಗಲೇ ರಾತ್ರಿ ೧೦ ಗಂಟೆ ಆಗಿತ್ತು.

ಮಾರನೆಯ ದಿನ ಬೆಳಗಿನ ಜಾವ ೨ ಗಂಟೆಗೇ ಡೋಲಿಯವರು ನಮ್ಮ ಟೆಂಟ್‌ಗೆ ಬಂದು ಬೇಗ ಹೊರಡಲು ವರಾತ ಮಾಡಿದರು. ಮಹಿಳೆಯರು



ಪ್ರವಾಸ - ಪ್ರಯಾಸ

ಸಾಮಾನ್ಯವಾಗಿ ಡೋಲಿ ಹೊರುವವರೆಲ್ಲರೂ ಮುಸಲ್ಮಾನರು ಮತ್ತು ಅವರ ಸೇವೆ ಸ್ಮರಣೀಯ. ತಿಂಡಿ ತಿಂದು ಟೀ ಕುಡಿಯಲು ಮಾತ್ರ ಡೋಲಿಯನ್ನು ಕೆಳಕ್ಕಿಳಿಸುವ ಆರೂ ಮಂದಿ ಉಳಿದಂತೆ ಯಾತ್ರಿಗಳಿಗೆ ಯಾವುದೇ ತೊಂದರೆ ಮತ್ತು ಆಯಾಸವೂ ಆಗದಂತೆ ಹೊತ್ತು ಗುರಿ ತಲುಪಿಸಿ ಸಂಭ್ರಮಿಸುವ ಪರಿಯನ್ನು ಕಂಡಾಗ ಇವರ ಸಂಸ್ಕೃತಿಯನ್ನು ಕಂಡು ಸಂತೋಷವಾಗುತ್ತದೆ. ನಾನು ಭಾರ ಎನಿಸುವಷ್ಟು ಬಟ್ಟೆ ತೊಟ್ಟು, ಶಾಲು ಹೊದ್ದು, ಹಣ ಇದ್ದ ಬ್ಯಾಗು ಮತ್ತು ಕ್ಯಾಮೆರಾವನ್ನೂ ಹೊತ್ತು ಪ್ರವಾಸ ಮಾಡುತ್ತಿದ್ದೆ. ನನ್ನ ಬಳಿ ಇದ್ದ ಎಲ್ಲ ವಸ್ತುಗಳ ಬಗ್ಗೆಯೂ ಎಚ್ಚರ ವಹಿಸಿ, ಯಾವುದೂ ತೊಂದರೆ ಆಗದಂತೆ ಏನೂ ಕಳೆಯದಂತೆ ಜೋಪಾನವಾಗಿ ಗುಹೆಗೆ ಕರೆದುಕೊಂಡು ಹೋಗಿ ಹಿಮಲಿಂಗದ ದರ್ಶನ ಮಾಡಿಸಿ ಸುರಕ್ಷಿತವಾಗಿ ಕರೆತಂದ ಡೋಲಿ ಹೊತ್ತ ಸ್ನೇಹಿತರ ಶ್ರಮ ಮತ್ತು ಪ್ರೀತಿಯನ್ನು ನಾನು ಎಂದೂ ಮರೆಯುವಂತಿಲ್ಲ.



ಮಂಜು ಕವಿದಾಗ



ನದಿಯ ಪಾತ್ರ ಮತ್ತು ಪ್ರವಾಸಿಗರ ಹಾದಿ

ದೇಹಬಾಧೆ ಮುಗಿಸಿಕೊಂಡು ಬರುವವರೆಗೂ ಕಾಯುವ ತಾಳ್ಮೆ ಅವರಿಗಿರಲಿಲ್ಲ. ಜನಜಂಗುಳಿಯ ನಡುವೆಯೇ ಕಷ್ಟದಿಂದಲೇ ಮಲ ಮೂತ್ರ ವಿಸರ್ಜನೆ ಮಾಡಿ ಮುಖವನ್ನೂ ತೊಳೆಯದೆ ಬೆಚ್ಚಗಿನ ಬಟ್ಟೆ ಹಾಕಿಕೊಂಡು ಬೂಟನ್ನು ಧರಿಸಿ ಸಿದ್ಧನಾದೆ. ಮುಖ ತೊಳೆಯದೆ ಎಂದೂ ಮನೆ ಬಿಟ್ಟು ಹೊರಡದ ನಾನು ಅಂದು ಬೇರೆ ದಾರಿ ಕಾಣದೆ ಕಾಲನ್ನೂ ತೊಳೆಯದೆ ಅಮರನಾಥನ ದರ್ಶನಕ್ಕೆ ಸಿದ್ಧನಾದೆ. ಮನುಷ್ಯರು ಹೊರುವ ಡೋಲಿಯಲ್ಲಿ ಕುಳಿತುಕೊಳ್ಳುವುದಿಲ್ಲ ಎಂದು ಚರ್ಚೆ ಮಾಡುತ್ತಿದ್ದ ನಾನು ಬೇರೆ ದಾರಿ ಕಾಣದೆ ಡೋಲಿಯಲ್ಲಿ ಕುಳಿತು ಪ್ರಯಾಣಿಸಲು ನಿರ್ಧರಿಸಿದ್ದೆ.

ಡೋಲಿ ಹೊರುವವರು ನಾಲ್ಕು ಜನ. ಅವರ ಜೊತೆಗೆ ಸಹಾಯಕ್ಕೆ ಇಬ್ಬರು ವ್ಯಕ್ತಿಗಳು. ಬಹುತೇಕ ಎಲ್ಲರೂ ಒಂದೇ ರೀತಿ ಇದ್ದರು. ಹೆಸರುಗಳೂ ನಮಗೆ ಅಪರಿಚಿತ. ಡೋಲಿ ಹೊರುವ ಮುಖ್ಯನ ಹೆಸರಿದ್ದ ಗುರುತಿನ ಚೀಟಿಯನ್ನು ನಮ್ಮ ಕೊರಳಿಗೆ ನೇತುಹಾಕುತ್ತಾರೆ. ದಾರಿಯಲ್ಲಿ ಯಾರಾದರೂ ತಪಾಸಣೆಗೆ ಬಂದರೆ ಅವರಿಗೆ ಈ ಗುರುತಿನ ಚೀಟಿಯನ್ನು ತೋರಿಸಬೇಕು. ಡೋಲಿ ಹೊತ್ತವರ ನಾಯಕನ ಬಳಿ ನಮ್ಮ ಗುರುತಿನ ಚೀಟಿ ಇರಬೇಕು. ಆದರೆ ನಮ್ಮ ಬಳಿ ಯಾವುದೇ ಗುರುತಿನ ಚೀಟಿ ಇರಲಿಲ್ಲ. ಆದರಿಂದ ದಾರಿಯಲ್ಲಿ ಡೋಲಿ ಹೊತ್ತವನಿಗೆ ತೊಂದರೆ ಆಯಿತು. ಸೈನಿಕ ಸಿಬ್ಬಂದಿ ಹೊಡೆದು ಅವನನ್ನು ದಂಡಿಸಿದರು.

ಟೆಂಟ್‌ನಿಂದ ಹೊರಬಂದು ರಕ್ಷಕ ದಳದವರ ತಪಾಸಣೆಯ ನಂತರ ಡೋಲಿಯಲ್ಲಿ ಕುಳಿತು ಹೊರಟಾಗ ಬೆಳಗಿನ ೩-೩೦ ಗಂಟೆ. ಬೆಳಕು ಹರಿಯಲು ಇನ್ನೂ ಕನಿಷ್ಠ ಒಂದೂವರೆ ಗಂಟೆ ಕಾಯಬೇಕಾಗಿತ್ತು. ಬೆಳಗಾಗುವ ಹೊತ್ತಿಗೆ ಆದಷ್ಟೂ ದೂರ ಸಾಗಬೇಕು ಎನ್ನುವುದು ಡೋಲಿ ಹೊತ್ತವರ ನಿರೀಕ್ಷೆ. ಕಡಿದಾದ ಏರುಹಾದಿ. ಒಂದೆಡೆ ಹರಿಯುವ ನದಿಯ ಸಪ್ಪಳ ಮಾತ್ರ ಕೇಳುತ್ತಿತ್ತು. ಆ ಧ್ವನಿ ಮತ್ತು ಡೋಲಿ ಹೊತ್ತವರ, ಕುದುರೆಯನ್ನು ನಡೆಸಿಕೊಂಡು ಹೋಗುವವರ ಮತ್ತು ನಡೆದು ಹತ್ತುವವರ ಜೈ ಭೋಲೇನಾಥ್ ಧ್ವನಿಯನ್ನು ಬಿಟ್ಟರೆ ಮತ್ತಾವ ಧ್ವನಿಯೂ ಕೇಳುವಂತಿರಲಿಲ್ಲ. ಬೆಳಗಿನ ಜಾವ ಐದು ಗಂಟೆಗೆ ಹಗಲಾಯಿತು ಎನಿಸಿತು. ಅದಕ್ಕೆ ಅರ್ಧ ಗಂಟೆ ಮೊದಲು ಪಶ್ಚಿಮದಲ್ಲಿ ಮೋಡಗಳ ನಡುವೆ ಕ್ಷಣ ಮಾತ್ರ ಪೂರ್ಣ ಚಂದ್ರನನ್ನು ಕಂಡೆ. ಡೋಲಿ ಹತ್ತಿದಾಗಿನಿಂದಲೂ ನಾನು ವೇದ ಮತ್ತು ಉಪನಿಷತ್ತುಗಳ ಕಾಲದಲ್ಲಿದ್ದಂತೆ ಭಾಸವಾಗುತ್ತಿತ್ತು. ಈ ಹಿತವಾದ ಅಪೂರ್ವ ವಾತಾವರಣದಲ್ಲೇ ವೇದ ಮತ್ತು ಉಪನಿಷತ್ತುಗಳ ರಚನೆ ಆಗಿದೆ ಎಂದು ನೆನಪಿಗೆ ಬಂದು ಖುಷಿಯಾಯಿತು. ಬೆಳಕು ಹರಿದ ನಂತರ ನೋಡಿದರೆ ನಾವು ಏರುತ್ತಿದ್ದುದು ಬಹಳ ಇಕ್ಕಟ್ಟಿನ ದಾರಿಯಲ್ಲಿ. ಅಗಲ ಕೆಲವೆಡೆ ಮಾತ್ರ ನಾಲ್ಕು ಅಡಿಗಳು. ಉಳಿದಂತೆ ಎರಡು ಅಡಿಗಳಷ್ಟೂ ಅಗಲವಿಲ್ಲದ ಕಿರಿದಾದ ದಾರಿ. ಅಷ್ಟು ಅಗಲದ ಹಾದಿಯಲ್ಲೇ ಏರುವ ಮತ್ತು ಇಳಿಯುವ ಯಾತ್ರಿಗಳು. ಯಾತ್ರಿಕರನ್ನು ಹೊತ್ತ ಕುದುರೆಗಳು ಮತ್ತು ಡೋಲಿ ಹೊತ್ತವರು. ಈ ಕತ್ತಲೆಯಲ್ಲಿ ಇವರೆಲ್ಲ ಹೇಗೆ ಹತ್ತಿ ಬಂದರು ಎಂಬ ಕುತೂಹಲ ನನಗೆ. ಹಗಲಿನ ಬೆಳಕಿನಲ್ಲಿ ನೋಡಿದರೆ ಒಂದೆಡೆ ಎತ್ತರದ ಕೋಟೆ ಗೋಡೆಯಂತಹ ಬೆಟ್ಟ ಸಾಲು. ಮತ್ತೊಂದೆಡೆ, ಸಾವಿರಾರು ಅಡಿ ಆಳದ ಪ್ರಪಾತದಲ್ಲಿ ನೀರ್ಗಲ್ಲುಗಳ ನಡುವೆ ಹರಿಯುವ ನದಿ. ಎಷ್ಟು ರುದ್ರ ರಮಣೀಯ ದೃಶ್ಯ! ಬೆಟ್ಟಗಳನ್ನು ಹಿಮ ಮುಚ್ಚಿಕೊಂಡಿತ್ತು. ಬೆಳ್ಳಗಿನ ಎತ್ತರದ ಬೆಟ್ಟ ಸಾಲು. ನಾವು ಅಮರನಾಥನ ಗುಹೆಯವರೆಗೆ ಕ್ರಮಿಸಬೇಕಾದ ಎತ್ತರ ಸುಮಾರು ೧೮ ಕಿ.ಮೀ. ಸುಮಾರು ೩೦೦೦ ಮೀಟರ್‌ಗೂ ಹೆಚ್ಚು ಎತ್ತರವನ್ನು ಏರಬೇಕಾಗಿತ್ತು. ಚಳಿಯಲ್ಲಿ ಮೈಬಿಡಲೂ ಆಗುತ್ತಿರಲಿಲ್ಲ. ಮೊದಲೇ ಎಚ್ಚರಿಕೆ ನೀಡಿದ್ದುದರಿಂದ ಕ್ಯಾಮೆರಾವನ್ನು ಒಳಗೆ ಇಟ್ಟುಕೊಂಡಿದ್ದೆ. ಎಲ್ಲ ದೃಶ್ಯಗಳನ್ನೂ ಕಣ್ಣುಗಳಲ್ಲಷ್ಟೇ ತುಂಬಿಕೊಳ್ಳಬೇಕಾಗಿತ್ತು. ಡೋಲಿ ಹೊತ್ತವರು ಮೊದಲಿಗೆ ಒಂದು ಕಡೆ ಇಳಿಸಿ ಬೆಳಗಿನ ನಾಷ್ಟಾ ಮಾಡಿ ಟೀ ಕುಡಿದ ನಂತರ ಮೊದಲೇ ಮಾತನಾಡಿದ್ದಂತೆ ಅವರ ಬಿಲ್ ಪಾವತಿ ಮಾಡುವಾಗ ನನ್ನ ಹೆಂಡತಿಯ ಬಳಿ ಹಣವೇ ಇಲ್ಲದಿದ್ದುದನ್ನು ನೆನಪು ಮಾಡಿಕೊಂಡು ಗಾಬರಿಯಾಯಿತು. ಹೊರಡುವ ಗಡಿಬಿಡಿಯಲ್ಲಿ, ಡೋಲಿ ಹೊರುವವರ ಒತ್ತಡದಿಂದ ನನ್ನ ಹೆಂಡತಿಗೆ ಹಾದಿಯ ಖರ್ಚಿಗೆ ಹಣ ಕೊಡದೆ ಬಂದದ್ದಕ್ಕೆ ಆತಂಕ ಆಯಿತು. ಅದನ್ನು ಡೋಲಿ ಹೊತ್ತವರ ಬಳಿ ಹೇಳಿ ಅಲವತ್ತುಕೊಂಡೆ. ಅವರು ಗಾಬರಿ ಬೇಡವೆಂದೂ ಹಿಂದಿರುಗಿದ ನಂತರ ಕೊಟ್ಟರೂ ಆಗುತ್ತದೆಂದು ಸಮಾಧಾನ ಹೇಳಿದರು. ಆತಂಕ ಕಡಿಮೆಯಾಯಿತು.

ಹಾದಿಯಲ್ಲಿ ಒಂದೆಡೆ ನನ್ನ ಹೆಂಡತಿಯನ್ನು ನೋಡಿದೆ. ಮಾತನಾಡುವಷ್ಟೂ ಅವಕಾಶ ಇರಲಿಲ್ಲ. ನನ್ನ ಡೋಲಿ ಹೊತ್ತವರು ನನ್ನ ಹೆಂಡತಿ ಇದ್ದ ಡೋಲಿ ಹೊತ್ತವರಿಗೆ ನನ್ನ ಆತಂಕವನ್ನು ಕೂಗಿ ಹೇಳಿ ಮುದುಕಿಯನ್ನು ಚೆನ್ನಾಗಿ ನೋಡಿಕೊಳ್ಳಿ ಎಂದು ಹಾಸ್ಯ ಮಾಡುತ್ತಾ, ''ಈ ಮುದುಕನಿಗೆ ಆ ಮುದುಕಿಯ ಬಗ್ಗೆ ಎಷ್ಟೊಂದು ಪ್ರೀತಿ ನೋಡು. ಮುದುಕರಾಗಿರುವಾಗಲೇ ಇಷ್ಟು ಪ್ರೀತಿಯಿದ್ದರೆ ಯೌವನದ ದಿನಗಳಲ್ಲಿ ಎಷ್ಟು ಪ್ರೀತಿ ಇದ್ದಿರಬೇಕು'' ಎಂದು ತಮ್ಮದೇ ಭಾಷೆಯಲ್ಲಿ ಛೇಡಿಸುತ್ತಿದ್ದುದು ಭಾವದಿಂದಲೇ ಅರ್ಥವಾಯಿತು. ಡೋಲಿಯವರು ಮತ್ತೂ ಒಂದು ಕಡೆ ಇಳಿಸಿ ಟೀ ಕುಡಿದರು. ಅಮರನಾಥ ಗುಹೆ (ಡೋಲಿ ಹೊತ್ತವರ ಮಾತಿನಲ್ಲಿ ಭವನ್)ಯನ್ನು ಸಮೀಪಿಸಿದಾಗ ಬೆಳಗು ೮.೩೦ ಗಂಟೆ. ಗುಹೆ ಇನ್ನೂ ಅರ್ಧ ಕಿ.ಮೀ. ಇದೆ ಎನ್ನುವ ಹೊತ್ತಿಗೆ ಡೋಲಿಯಿಂದ ಇಳಿಸಿ, ಇಬ್ಬರು ನೀರ್ಗಲ್ಲುಗಳ ಮೇಲೆ ಜಾರಿ ಬೀಳದಂತೆ ಎರಡೂ ಕಂಕುಳಿಗೆ ಕೈ ಹಾಕಿ ಹಿಡಿದುಕೊಂಡು ಗುಹೆಯನ್ನು ಸಮೀಪಿಸಿ ಆದಷ್ಟೂ ಸರದಿಯ ಸಾಲಿನಲ್ಲೇ ನಿಲ್ಲಿಸಿಕೊಂಡು ಗುಹೆಯ ಬಳಿಗೆ ಕರೆದೊಯ್ದರು. ಅಲ್ಲಿ ಕಾವಲಿದ್ದ ಸೈನ್ಯದ ಸಿಬ್ಬಂದಿ ವೃದ್ಧರಿಗೆ ಜಾಗ ಬಿಡಿ ಎಂದು ಮನವಿ ಮಾಡುತ್ತಿದ್ದರು. ಇದು ಜೊತೆ ಬಂದಿದ್ದ ಡೋಲಿ ಹೊತ್ತವರಿಗೆ ಸಂತೋಷದ ವಿಷಯ. 'ಬುಜುರ್ಗ್ ಲೋಗ್' ಎಂದು ಹೇಳುತ್ತಾ, ಗುಹೆಯ ಸಮೀಪಕ್ಕೆ ಕರೆತಂದರು. ಜೊತೆಗೆ ಬಂದಿದ್ದ ಇಬ್ಬರಲ್ಲಿ ಒಬ್ಬ ನನ್ನ ಬೂಟುಗಳನ್ನು ಕಳಚಿಸಿಕೊಂಡು ಇನ್ನೊಂದು ಬದಿಗೆ ಹೋಗಿ ನಿಂತ. ಜೊತೆಗೆ ಉಳಿದ ಇನ್ನೊಬ್ಬ ಕಂಕುಳಿನ ಹಿಡಿತವನ್ನು ಸಡಿಲಿಸದೆ ಮೆಟ್ಟಿಲುಗಳನ್ನು ಹತ್ತಿಸಿಕೊಂಡು ''ಭಗವಾನ್ ಕಾ ದರ್ಶನ್ ಕರೋ ಸಾಬ್'' ಎಂದು ಹೇಳಿದ. ಜೊತೆಗೆ ''ವಹಾಂ ಕಬೂತರೋಂ ಕೋ ದೇಖೋ ಸಾಬ್'' ಎಂದೂ ಹೇಳಿದ. ಗುಹೆಯ ಮೇಲ್ಭಾಗದಲ್ಲಿ ಎರಡು ಪಾರಿವಾಳಗಳು ಹಾರಾಡುತ್ತಿದ್ದವು. ಆ ಬಗ್ಗೆ ಒಂದು ಕಥೆಯೇ ಇದೆ. ಗುಹೆಯ ಒಂದು ಮೂಲೆಯಲ್ಲಿ ಸುಮಾರು ಆರು ಅಡಿಗಳಷ್ಟು ಎತ್ತರವಿದ್ದ ಶಿವಲಿಂಗ ಎಂದು ಕರೆಯಲಾಗುವ 'ಸ್ಟಾಲಗ್‌ಮೈಟ್' ಗುಹೆಯ ಮೇಲ್ಭಾಗದಲ್ಲಿ ಸ್ಟಾಲಗ್‌ಟೈಟ್ ಕೂಡ ಇರಬಹುದು ಅದು ನಮಗೆ ಕಾಣಿಸುವುದಿಲ್ಲ. ಈ ಪ್ರಕೃತಿಯ ಸಹಜ ಕ್ರಿಯೆಗೆ ನಾವು ಪವಾಡದ ಹೆಸರು ಕೊಟ್ಟು ಶಿವಲಿಂಗ ಎನ್ನುತ್ತೇವೆ. ತಪ್ಪೇನೂ ಇಲ್ಲ. ಈ ನೆಪದಿಂದಾದರೂ ಅಷ್ಟು ಎತ್ತರದ ಬೆಟ್ಟದ ಮೇಲೆ ಹೋಗಿ ಈ ಪ್ರಕೃತಿಯ ವಿಸ್ಮಯವನ್ನು ಕಾಣುವ ಶ್ರಮ ವಹಿಸುತ್ತೇವೆ. ಈ ಗುಹೆಯಲ್ಲಿ ಶಿವನು ಪಾರ್ವತಿಗೆ ಸೃಷ್ಟಿ ರಹಸ್ಯದ ಕಥೆ ಹೇಳಿದನಂತೆ. ಅದನ್ನು ಎರಡು ಪಾರಿವಾಳಗಳು ಕೇಳಿಸಿಕೊಂಡವಂತೆ; ಅವೇ ಎರಡು ಪಾರಿವಾಳಗಳ ಮುಂದುವರಿದ ಸಂತತಿ ಅಲ್ಲಿದೆ ಎಂಬ ನಂಬಿಕೆ ಭಕ್ತರಿಗೆ. ಬಹಳ ದೊಡ್ಡದು ಎನ್ನಬಹುದಾದ ಗುಹೆ. ಜನವಸತಿಗೆ ತಕ್ಕುದಾದ ನೆಲೆ.

ಪ್ರಚಲಿತರುವ ಮತ್ತೊಂದು ಕಥೆಯ ಪ್ರಕಾರ ಕಶ್ಯಪ ಮುನಿಯು ಕಾಶ್ಮೀರ ಕಣಿವೆಯ ಸಮುದ್ರವನ್ನು ಬರಿದು ಮಾಡಿದಾಗ ಹಿಮಾಲಯ ಪರ್ವತ ಪ್ರದೇಶದಲ್ಲಿ ಸಂಚರಿಸುತ್ತಿದ್ದ ಭೃಗು ಮಹರ್ಷಿಗಳು ಈ ಗುಹೆ ಮತ್ತು ಅದರಲ್ಲಿದ್ದ ಹಿಮಲಿಂಗವನ್ನು ಕಂಡರು. ಅಂದಿನಿಂದ ಇದು ಶಿವಭಕ್ತರ ನಿಷ್ಠೆಯ ನೆಲೆಯಾಯಿತು.

ಸಾಮಾನ್ಯವಾಗಿ ಯಾವುದೇ ದೇವಾಲಯಗಳನ್ನು ಪ್ರವೇಶಿಸದ ಮತ್ತು ವಿಗ್ರಹ ಭಂಜಕರು ಎಂಬ ಅಪನಂಬಿಕೆಗೆ ಪಾತ್ರರಾದ ಮುಸಲ್ಮಾನರು ಈ ದೇವರ ಸನ್ನಿಧಿಗೆ ಯಾವುದೇ ಮುಜುಗರವಿಲ್ಲದೆ ಹೇಗೆ ಬರುತ್ತಾರೆ ಎಂಬ ಅನುಮಾನ ಯಾರಿಗಾದರೂ ಬರಬಹುದು. ಆ ಅನುಮಾನದ ಪರಿಹಾರಕ್ಕೆ ಒಂದು ಕಾರಣವನ್ನು ಊಹಿಸಬಹುದು. ಈ ಸ್ಥಳಕ್ಕೆ ಸಂಬಂಧಿಸಿದ ಮತ್ತೊಂದು ಕಥೆಯ ಪ್ರಕಾರ ಬೂಟಾ ಮಲ್ಲಿಕ್ ಎಂಬ ಮುಸ್ಲಿಂ ಕುರುಬನಿಗೆ ಸಾಧುವೊಬ್ಬ ಒಂದು ಮೂಟೆ ಇದ್ದಿಲನ್ನು ಕೊಟ್ಟನಂತೆ. ತಲುಪಬೇಕಾದ ಸ್ಥಳವನ್ನು ತಲುಪಿದ ನಂತರ ಮೂಟೆಯನ್ನು ಬಿಚ್ಚಿನೋಡಿದರೆ ಅದರಲ್ಲಿ ಇದ್ದಿಲಿನ ಬದಲು ಚಿನ್ನ ಇತ್ತಂತೆ. ಅದರಿಂದ ಸಂತೋಷಗೊಂಡ ಬೂಟಾ ಮಲ್ಲಿಕ್ ಸಾಧುವಿಗೆ ಧನ್ಯವಾದ ಹೇಳಲು ಅವನನ್ನು ಕಂಡ ಜಾಗಕ್ಕೆ ಹೋದನಂತೆ; ಆದರೆ ಆ ಜಾಗದಲ್ಲಿ ಸಾಧು ಇರಲಿಲ್ಲವಂತೆ; ಅಲ್ಲಿ ಕೇವಲ ಗುಹೆ ಇತ್ತಂತೆ; ಅದೇ ಗುಹೆ ಮುಂದೆ ಅಮರನಾಥ ಗುಹೆ ಎಂದು ಪ್ರಸಿದ್ಧಿ ಪಡೆಯಿತಂತೆ. ಈಗಲೂ ಯಾತ್ರಿಗಳು ಕೊಟ್ಟ ಕಾಣಿಕೆಯ ಒಂದು ಭಾಗ ಬೂಟಾ ಮಲ್ಲಿಕ್‌ನ ವಂಶಸ್ಥರಿಗೆ ಸಂದಾಯವಾಗಿ ಉಳಿದ ಹಣ ಗುಹೆಯ ಮೇಲ್ವಿಚಾರಣೆ ನೋಡಿಕೊಳ್ಳುವ ದತ್ತಿ ಸಂಸ್ಥೆಗೆ ಸಂದಾಯವಾಗುತ್ತದಂತೆ. ಈ ಕಥೆಯ ಗುಟ್ಟು ಏನೇ ಇರಲಿ ಈ ಗುಹೆ ಮತ್ತು ಅಲ್ಲಿನ ವ್ಯವಸ್ಥೆಯ ಬಗ್ಗೆ ಮುಸಲ್ಮಾನರ ಪಾತ್ರವೂ ಇದೆ ಎನ್ನುವುದು ನಿಶ್ಚಯ. ಈ ಕಾರಣದಿಂದಲೂ ಮುಸಲ್ಮಾನರು ಈ ಗುಹೆಗೆ ಹೋಗಲು ಮುಜುಗರಪಡುವುದಿಲ್ಲ ಎನಿಸುತ್ತದೆ. ಅದು ಏನಾದರೂ ಇರಲಿ, ಇಲ್ಲಿ ಸಾಮಾನ್ಯವಾಗಿ ಡೋಲಿ ಹೊರುವವರೆಲ್ಲರೂ ಮುಸಲ್ಮಾನರು ಮತ್ತು ಅವರ ಸೇವೆ ಸ್ಮರಣೀಯ. ತಿಂಡಿ ತಿಂದು ಟೀ ಕುಡಿಯಲು ಮಾತ್ರ ಡೋಲಿಯನ್ನು ಕೆಳಕ್ಕಿಳಿಸುವ ಆರೂ ಮಂದಿ ಉಳಿದಂತೆ ಯಾತ್ರಿಗಳಿಗೆ ಯಾವುದೇ ತೊಂದರೆ ಮತ್ತು ಆಯಾಸವೂ ಆಗದಂತೆ ಹೊತ್ತು ಗುರಿ ತಲುಪಿಸಿ ಸಂಭ್ರಮಿಸುವ ಪರಿಯನ್ನು ಕಂಡಾಗ ಇವರ ಸಂಸ್ಕೃತಿಯನ್ನು ಕಂಡು ಸಂತೋಷವಾಗುತ್ತದೆ. ನಾನು ಭಾರ ಎನಿಸುವಷ್ಟು ಬಟ್ಟೆ ತೊಟ್ಟು ಶಾಲು ಹೊದ್ದು ಹಣ ಇದ್ದ ಬ್ಯಾಗು ಮತ್ತು ಕ್ಯಾಮೆರಾವನ್ನೂ ಹೊತ್ತು ಪ್ರವಾಸ ಮಾಡುತ್ತಿದ್ದೆ. ನನ್ನ ಬಳಿ ಇದ್ದ ಎಲ್ಲ ವಸ್ತುಗಳ ಬಗ್ಗೆಯೂ ಎಚ್ಚರ ವಹಿಸಿ, ಯಾವುದೂ ತೊಂದರೆ ಆಗದಂತೆ ಏನೂ ಕಳೆಯದಂತೆ ಜೋಪಾನವಾಗಿ ಗುಹೆಗೆ ಕರೆದುಕೊಂಡು ಹೋಗಿ ಹಿಮಲಿಂಗದ ದರ್ಶನ ಮಾಡಿಸಿ ಸುರಕ್ಷಿತವಾಗಿ ಕರೆತಂದ ಡೋಲಿ ಹೊತ್ತ ಸ್ನೇಹಿತರ ಶ್ರಮ ಮತ್ತು ಪ್ರೀತಿಯನ್ನು ನಾನು ಎಂದೂ ಮರೆಯುವಂತಿಲ್ಲ. ಇಳಿಜಾರಿನಲ್ಲಿ ಸಾಗುವಾಗ ಮುಮ್ಮುಖವಾಗಿ ಕುಳಿತಿದ್ದ ನನಗೆ ಕಾಲನ್ನು ಮುಂದಿನ ಹಗ್ಗದ ಕುಣಿಕೆಯಲ್ಲಿ ಭದ್ರವಾಗಿ ಇಟ್ಟುಕೊಳ್ಳಲು ಹೇಳುತ್ತಾ, ಏರುವಾಗ ದೇಹವನ್ನು ಸ್ವಲ್ಪವೇ ಮುಂದಕ್ಕೆ ಬಾಗಿಸುವಂತೆ ಹೇಳುತ್ತಾ ಪ್ರತಿಯೊಂದು ಹೆಜ್ಜೆಯನ್ನೂ ಎಚ್ಚರಿಕೆಯಿಂದ ಇಡುತ್ತಾ, ಯಾತ್ರಿಕರಿಗೆ ಅಮರನಾಥನ ದರ್ಶನ ಮಾಡಿಸುವುದು ತಮ್ಮ ಕರ್ತವ್ಯ ಎಂದು ಭಾವಿಸುವ ಡೋಲಿ ಹೊರುವ ಶ್ರಮಜೀವಿಗಳ ಸೇವೆಯನ್ನು ಎಷ್ಟು ಪ್ರಶಂಸಿಸಿದರೂ ಸಾಲದು ಎನಿಸುತ್ತದೆ.

ಏರುವಾಗ ಸುಮಾರು ೨ ಗಂಟೆಗಳ ಕಾಲ ಸರಿಯಾಗಿ ಕಾಣದಿದ್ದ ಹಾದಿ ಬರುವಾಗ ನಿಚ್ಚಳವಾಗಿ ಕಂಡಿತು. ನಾವು ಬಂದದ್ದು ಈ ದಾರಿಯಲ್ಲೇ ಎನ್ನುವಷ್ಟು ವಿಸ್ಮಯ ನನಗಾಯಿತು. ೧೧-೩೦ ಗಂಟೆಗೆ ಹಿಂದಿರುಗಲು ಅಣಿಯಾದೆವು. ಬರುವಾಗಲೂ ಎರಡು ಕಡೆ ಊಟ ಮತ್ತು ಟೀಗೆ ಡೋಲಿಯನ್ನು ಇಳಿಸಿದ್ದ ಸ್ನೇಹಿತರು ನನ್ನನ್ನು ನಮ್ಮ ಟೆಂಟ್ ಬಳಿ ಇಳಿಸಿದಾಗ ಮಧ್ಯಾಹ್ನ ೩-೩೦ ಗಂಟೆ ಆಗಿತ್ತು. ನನಗೆ ಅಮರನಾಥ ಎಂಬ ಹೆಸರಿನ ಶಿವಲಿಂಗ ಇದ್ದ ಗುಹೆಗಿಂತಲೂ, ಅಮರನಾಥ ಎಂಬ ಹೆಸರಿನ ಶಿವಲಿಂಗಕ್ಕಿಂತಲೂ ಹೆಚ್ಚು ಪ್ರಿಯರಾದದ್ದು ನನ್ನಂತಹ ಅನೇಕರನ್ನು ಹೊತ್ತು ಜೋಪಾನವಾಗಿ ಗುಹೆಗೆ ಕರೆದುಕೊಂಡು ಹೋಗಿ ಸುರಕ್ಷಿತವಾಗಿ ಕರೆದು ತರುವ ನಂಬಿಕಸ್ಥ ಶ್ರಮಜೀವಿಗಳು.

**ಡಾ॥ ಎಚ್. ಎಸ್. ಗೋಪಾಲ ರಾವ್**
೧೪೪, 'ಸ್ವಸ್ತಿಶ್ರೀ ಸ್ಕಂದ', ಐ.ವೈ.ಡಿ.ರಸ್ತೆ, ಅರಸಿನಕುಂಟೆ, ಬೆಂಗಳೂರು ಗ್ರಾಮಾಂತರ ಜಿಲ್ಲೆ - ೫೬೨ ೧೨೩

# ಕನ್ನಡ ಚಲನಚಿತ್ರರಂಗ - ಒಂದು ನೋಟ

## ಸಿ. ಆರ್. ಕೃಷ್ಣರಾವ್



**ಕ**ನ್ನಡ ಚಲನಚಿತ್ರ ಉದ್ಯಮಕ್ಕೆ ಎಪ್ಪತ್ತೈದು ವರ್ಷ ತುಂಬಿದೆ. ವಜ್ರಮಹೋತ್ಸವವನ್ನು ಚಿತ್ರರಂಗ ಸಾಕಷ್ಟು ವಿಜೃಂಭಣೆಯಿಂದಲೇ ಆಚರಿಸಿತು. ಮುಕ್ಕಾಲು ಶತಮಾನದ ಈ ಕಾಲಾವಧಿಯಲ್ಲಿ ಮೂರುಸಾವಿರಕ್ಕೂ ಹೆಚ್ಚು ಕನ್ನಡ ಚಿತ್ರಗಳು ತೆರೆ ಕಂಡಿವೆ. ಒಂದು ವರ್ಷದಲ್ಲಿ ಎರಡು ಮೂರು ಚಿತ್ರಗಳ ತಯಾರಿಕೆಯಿಂದ ಪ್ರಾರಂಭಗೊಂಡ ಈ ಉದ್ಯಮ ಇವತ್ತು ಹೆಚ್ಚು ಕಡಿಮೆ ವಾರಕ್ಕೆ ಎರಡು ಮೂರು ಚಿತ್ರಗಳನ್ನು ಬಿಡುಗಡೆ ಮಾಡುತ್ತಿದೆ. ಸಂಖ್ಯೆಯ ದೃಷ್ಟಿಯಿಂದ ಪ್ರಗತಿ ಕಂಡಿದ್ದರೂ ಯಶಸ್ವಿಗೊಂಡು ಹಣ ಗಳಿಸಿರುವ ಚಿತ್ರಗಳ ಸಂಖ್ಯೆ ಕಡಿಮೆಯೆ. ಕುಟುಂಬದ ಎಲ್ಲ ಸದಸ್ಯರೂ ನೋಡಿ ಆನಂದಿಸಬಹುದಾದ ಚಿತ್ರಗಳ ಸಂಖ್ಯೆ ವಿರಳ. ಇತರ ಭಾಷಾ ಚಿತ್ರಗಳಿಗೆ ಹೋಲಿಸಿದರೆ ಹೆಚ್ಚು ಅಷ್ಟೆ ಕನ್ನಡ ಚಲನಚಿತ್ರೋದ್ಯಮ ಒಂದು ಉದ್ಯಮವಾಗಿ ಸ್ಥಿರವಾದ ನೆಲೆಯನ್ನು ಕಂಡುಕೊಂಡಿದೆಯೇ ? ಇದು ನಿಜವಾಗಿಯೂ ಯಕ್ಷಪ್ರಶ್ನೆ. ಇತರ ಭಾಷಾಚಿತ್ರಗಳ ಸ್ಥಿತಿಯೂ ಇದಕ್ಕಿಂತ ಬೇರೆ ಇಲ್ಲ. ಏಳು-ಬೀಳುಗಳ ಮಧ್ಯೆ ನಡೆದುಕೊಂಡು ಹೋಗುವುದು ಅದರ ಜಾಯಮಾನ. ಬೇಕಾದಂಥ ಬಂಡವಾಳದ ಹಣ ಎಲ್ಲಿಂದಲೋ ಹರಿದು ಬರುತ್ತದೆ, ಎಲ್ಲೋ ಹರಿದು ಹೋಗುತ್ತದೆ. ಚಿತ್ರರಂಗದ ಗ್ಲಾಮರ್ ಮಾತ್ರ ಸ್ವಲ್ಪವೂ ಮಾಸುವುದಿಲ್ಲ. ಕೋಟಿ ಕೋಟಿ ಸಂಭಾವನೆ ಪಡೆದು ಮೆರೆಯುವ ತಾರೆಗಳೂ ಇದ್ದಾರೆ, ಒಂದು ಹೊತ್ತಿನ ಊಟಕ್ಕೆ ಲಾಟರಿ ಹೊಡೆಯುತ್ತಿರುವ ಕಲಾವಿದರೂ ಇದ್ದಾರೆ. ಇದು ಈ ಉದ್ಯಮದ ವೈಶಿಷ್ಟ್ಯ. ಸಾಲಸೋಲ ಮಾಡಿ ದುಬಾರಿ ಬಡ್ಡಿ ತೆತ್ತು ಚಿತ್ರ ತಯಾರಿಸಿ ದಿವಾಳಿ ಯಾದವರೂ ಇದ್ದಾರೆ. ಕೋಟಿಗಟ್ಟಲೆ ಸಂಪಾದಿ ಸುವವರೂ ಇದ್ದಾರೆ. ಹಾಗಾಗಿ ಈ ಚಲನಚಿತ್ರರಂಗ ಎಷ್ಟು ಗ್ಲಾಮರಸ್ಸೋ ಅಷ್ಟೇ ವಿಸ್ಮಯಕಾರಿ ಕೂಡ.



ಕನ್ನಡ ಚಿತ್ರರಂಗ ದಕ್ಷಿಣ ಭಾರತದ ಇತರ ಭಾಷಾ ಚಿತ್ರಗಳ ಜೊತೆಯಲ್ಲೇ ಹೆಜ್ಜೆ ಇರಿಸಿಕೊಂಡು ಬಂದಿದೆ. ಮೂಕೀ ಚಿತ್ರಗಳಿಂದ ಪ್ರಾರಂಭಗೊಂಡು ಟಾಕಿ ಚಿತ್ರಗಳು, ವರ್ಣಚಿತ್ರಗಳವರೆಗೆ ತಾಂತ್ರಿಕವಾಗಿ ಕನ್ನಡ ಚಿತ್ರರಂಗ ಹಂತಹಂತವಾಗಿ ಪ್ರಗತಿ ಕಂಡಿದೆ. ಕನ್ನಡ ಚಿತ್ರ ತಯಾರಿಕೆಗೆ ಮೊದಲ ತವರು ಮದರಾಸು (ಈಗಿನ ಚೆನ್ನೈ ನಗರ). ಪರಕೀಯ, ಪರಾವಲಂಬನೆಯೇ ಮೂಲ. ಎಪ್ಪತ್ತೈದು ವರ್ಷಗಳ ಅವಧಿಯಲ್ಲಿ ಸುಮಾರು ಅರ್ಧದಷ್ಟು ಕಾಲ ಕನ್ನಡ ಚಿತ್ರರಂಗ ನೆಲೆಸಿದ್ದುದು ಕನ್ನಡನಾಡಿನ ಹೊರಗೆ. ಕರ್ನಾಟಕದ ರಾಜಧಾನಿ ಬೆಂಗಳೂರಿನಲ್ಲಿ ನೆಲೆಯೂರಿದ್ದು ೧೯೭೦ರ ನಂತರವೇ. ೧೯೩೦ರ ದಶಕದಲ್ಲಿ ದಕ್ಷಿಣ ಭಾರತದಲ್ಲಿ ಚಿತ್ರೋದ್ಯಮಕ್ಕೆ ಮದರಾಸು ಕೇಂದ್ರ. ತಮಿಳು, ತೆಲುಗು, ಮಲೆಯಾಳಂ, ಕನ್ನಡ ಚಿತ್ರಗಳು ತಯಾರಾಗುತ್ತಿದ್ದುದು ಅಲ್ಲಿ ಸ್ಥಾಪನೆಗೊಂಡಿದ್ದ ಸ್ಟುಡಿಯೋಗಳಲ್ಲಿ. ಕಚ್ಚಾ ಫಿಲಂ ಹಂಚಿಕೆಯಿಂದ ಹಿಡಿದು ಚಿತ್ರ ತಯಾರಿಕೆಗೆ ಸಂಬಂಧಿಸಿದ ಎಲ್ಲ ಸೌಲಭ್ಯಗಳೂ, ಎಂದರೆ ರಿಕಾರ್ಡಿಂಗ್, ರೀರಿಕಾರ್ಡಿಂಗ್, ಆರ್ಕೆಸ್ಟ್ರಾ, ಸ್ಟುಡಿಯೋಗಳು, ಸೆಟ್‌ಗಳು ಹಾಗೂ ತಾಂತ್ರಿಕ ವರ್ಗ ಲಭ್ಯವಿದ್ದದ್ದು ಅಲ್ಲಿಯೇ. ಕನ್ನಡ ಚಿತ್ರರಂಗಕ್ಕೆ ಬಂಡವಾಳ ದೊರೆತದ್ದೂ ಕೂಡ ಹೊರಗಿನಿಂದಲೇ. ಈಗಲೂ ಈ ವಿಷಯದಲ್ಲಿ ಅವಲಂಬನೆ ಇಲ್ಲದಿಲ್ಲ. ಕನ್ನಡ ಚಿತ್ರೋದ್ಯಮದ ಮಟ್ಟಿಗೆ ಪರಾವಲಂಬನೆ ಯಾವತ್ತೂ ಅಧಿಕವೇ. ಚಿತ್ರ ತಯಾರಿಕೆಗೆ ಬಂಡವಾಳ ದಿಂದ ಹಿಡಿದು ಹಂಚಿಕೆ, ಪ್ರದರ್ಶನದವರೆಗೆ ಹೊರಗಿನವರ ಕೈವಾಡವೇ ಜಾಸ್ತಿ. ಇದು ಹಿನ್ನೆಲೆ.

ಕನ್ನಡ ಚಲನಚಿತ್ರರಂಗದ ಏಳೂವರೆ ದಶಕಗಳ











ಇತಿಹಾಸದಲ್ಲಿ ಮುಖ್ಯವಾದ ತಿರುವುಗಳನ್ನು ಗುರ್ತಿಸುವುದು ಈ ಲೇಖನದ ಉದ್ದೇಶ. ಚಿತ್ರರಂಗವನ್ನು ಹತ್ತು ವರ್ಷಗಳು ಹತ್ತಿರದಿಂದ ಕಂಡಿದ್ದ ಅನುಭವದಿಂದ ಕೆಲವು ಅಂಶಗಳನ್ನು ಓದುಗರ ಗಮನಕ್ಕೆ ತರುವುದಕ್ಕೆ ಪ್ರಯತ್ನಿಸಿದ್ದೇನೆ. (ಕನ್ನಡ ಚಲನಚಿತ್ರದ ಇತಿಹಾಸದ ಸ್ಥೂಲ ಪರಿಚಯ ಮಾಡಿಕೊಳ್ಳಬಯಸುವವರಿಗೆ 'ಕನ್ನಡ ಚಲನಚಿತ್ರ ಇತಿಹಾಸ'ದ ಎರಡು ಸಂಪುಟಗಳು ದಶಕದ ಹಿಂದೆಯೇ ಪ್ರಕಟವಾಗಿದ್ದರೂ ಕನ್ನಡ ಓದುಗರಿಗೆ ಅಲಭ್ಯವಾಗಿರುವುದು ದುರದೃಷ್ಟಕರ). ಕನ್ನಡದ ಮೊದಲ ವಾಕ್ಚಿತ್ರ ೧೯೩೪ರಲ್ಲಿ ತಯಾರಾದ 'ಸತಿ ಸುಲೋಚನಾ'. ಮೊದಲ ಹತ್ತು ವರ್ಷಗಳಲ್ಲಿ ತಯಾರಾದ ಚಿತ್ರಗಳ ಸಂಖ್ಯೆ ೧೫. ಇವುಗಳಲ್ಲಿ ೮ ಪೌರಾಣಿಕ ಚಿತ್ರಗಳು, ೨ ಜಾನಪದ, ಉಳಿದವು ಸಾಮಾಜಿಕ. ಈ ಸಾಮಾಜಿಕ ಚಿತ್ರಗಳು ಕೂಡ ಜನಪ್ರಿಯವಾಗಿದ್ದ ಕಂಪೆನಿ ನಾಟಕಗಳು – 'ಸದಾರಮೆ', 'ಸಂಸಾರ ನೌಕ' ಮೊದಲಾದುವು. ಹೆಚ್ಚು ಕಡಿಮೆ ಇತರ ಭಾಷೆಗಳಲ್ಲೂ ಪೌರಾಣಿಕ ಕಥಾವಸ್ತುಗಳಿಗೇ ಪ್ರಾಧಾನ್ಯತೆ ಇದ್ದುದರಿಂದ ಕನ್ನಡದಲ್ಲೂ ಹಾಗಾದ್ದು ಸಹಜ. ಮತ್ತೆ ಅಂಥ ಚಿತ್ರಗಳ ತಯಾರಿಕೆಗೆ ಸಿದ್ಧವಾಗಿರುತ್ತಿದ್ದ ಸೆಟ್‌ಗಳು ಸುಲಭವಾಗಿ ಲಭ್ಯವಾಗುತ್ತಿದ್ದುದರಿಂದ ಕಡಿಮೆ ವೆಚ್ಚದಲ್ಲಿ ಕನ್ನಡ ಚಿತ್ರಗಳ ತಯಾರಿಕೆಗೆ ಅನುಕೂಲವಾಗಿತ್ತು. ಪರಿಚಿತ ಕಥಾವಸ್ತುವಾಗಿದ್ದರಿಂದ ಜನ ಮುಗಿಬೀಳುತ್ತಿದ್ದರು. ಇನ್ನೊಂದು ಮುಖ್ಯವಾಗಿ ಗಮನಿಸಬೇಕಾದ ಅಂಶವೆಂದರೆ ಚಿತ್ರರಂಗಕ್ಕೆ ಪ್ರವೇಶಿಸಿದವರೂ ಕೂಡ ವೃತ್ತಿರಂಗಭೂಮಿಯ ಅಧ್ವರ್ಯುಗಳಾದ ಗುಬ್ಬಿ ವೀರಣ್ಣ, ಆರ್. ನಾಗೇಂದ್ರರಾವ್, ಸುಬ್ಬಯ್ಯ ನಾಯಿಡು ಮೊದಲಾದವರು. ಚಿತ್ರರಂಗ ಪ್ರವೇಶಿಸಿದ ಕಲಾವಿದರೂ ಅಷ್ಟೆ ಹೆಚ್ಚಿನವರು ವೃತ್ತಿರಂಗಭೂಮಿಯಿಂದ ಬಂದವರೆ. ತಾಂತ್ರಿಕವರ್ಗದವರೂ ಹೊರಗಿನವರೆ. ಎಡಿಟಿಂಗ್, ರಿಕಾರ್ಡಿಂಗ್, ರೀ - ರಿಕಾರ್ಡಿಂಗ್ ಎಲ್ಲದರಲ್ಲೂ



ಪರಾವಲಂಬನೆ. ಹಿನ್ನೆಲೆಗಾಯಕರೂ, ಆರ್ಕೆಸ್ಟ್ರಾದವರು ಕನ್ನಡೇತರರೆ. ತಾಂತ್ರಿಕವರ್ಗದಲ್ಲಿ ಇದ್ದ ಕನ್ನಡಿಗರೂ ಕೂಡ ಇತರ ಭಾಷಾ ಚಿತ್ರಗಳ ಮೇಲೇ ಅವಲಂಬಿತರಾಗಿದ್ದರು. ಮುಂದಿನ ಹತ್ತು ವರ್ಷಗಳಲ್ಲಿ ಚಿತ್ರ ತಯಾರಿಕೆಯ ಸಂಖ್ಯೆ ಅಷ್ಟೇನೂ ಗಣನೀಯವಾಗಿ ಏರಲಿಲ್ಲ. ಗಮನಾರ್ಹವಾದ ಬೆಳವಣಿಗೆ ಎಂದರೆ ಚಿತ್ರರಂಗಕ್ಕೆ ರಾಜಕುಮಾರ್, ಕಲ್ಯಾಣಕುಮಾರ್, ಉದಯಕುಮಾರ್ ಈ ಕುಮಾರತ್ರಯರ ಪ್ರವೇಶ. ೧೯೫೪ರಲ್ಲಿ 'ಬೇಡರ ಕಣ್ಣಪ್ಪ' ಚಿತ್ರದಿಂದ ಚಿತ್ರರಂಗಕ್ಕೆ ಪದಾರ್ಪಣೆ ಮಾಡಿದ ರಾಜಕುಮಾರ್ ಕೊನೆಯವರೆಗೂ ಕನ್ನಡ ಚಿತ್ರರಂಗದ ಅನಭಿಷಿಕ್ತ ಸಾರ್ವಭೌಮನಾಗಿ ಮೆರೆದರು. ನೂರಾರು ಚಿತ್ರಗಳಲ್ಲಿ ನಾಯಕನಟನಾಗಿ ವೈವಿಧ್ಯಪೂರ್ಣವಾದ ಪಾತ್ರಗಳಲ್ಲಿ ಅಭಿನಯಿಸಿ ದಾದಾಸಾಹೇಬ್ ಫಾಲ್ಕೆ ಪ್ರಶಸ್ತಿಯನ್ನು ಒಳಗೊಂಡಂತೆ ಹಲವು ಹತ್ತು ಪ್ರಶಸ್ತಿಗಳಿಗೆ ಭಾಜನರಾದರು. ಆನಂತರದ ದಶಕದಲ್ಲಿ (೧೯೫೫-೬೪) ತಯಾರಾದ ಚಿತ್ರಗಳ ಸಂಖ್ಯೆ ಸ್ವಲ್ಪ ಮಟ್ಟಿಗೆ ಹೆಚ್ಚಿತಾದರೂ ಉದ್ಯಮದ ಸ್ಥಿತಿ ಸುಧಾರಿಸಲಿಲ್ಲ. ಯಶಸ್ವಿಯಾಗಿ ಹಣ ಗಳಿಸಿದ ಚಿತ್ರಗಳು ಬೆರಳೆಣಿಕೆಯಷ್ಟು. ಅದ್ದೂರಿಯಾದ ಸೆಟ್‌ಗಳು, ಹೊರಾಂಗಣ ಚಿತ್ರೀಕರಣ, ಶ್ರೀಮಂತಿಕೆಯಿಂದ ಬೀಗುತ್ತಿದ್ದ ಅನ್ಯಭಾಷಾ ಚಿತ್ರಗಳ ಪೈಪೋಟಿಯಿಂದ ಕನ್ನಡ ಚಿತ್ರಗಳು ಸೊರಗಿದುವು. ಈ ಪ್ರಶ್ನೆ ಇಂದು ಕೂಡ ಇದ್ದೇ ಇದೆ. ಸಾಮಾಜಿಕ ಚಿತ್ರಗಳ ಸಂಖ್ಯೆ ಹೆಚ್ಚಿದರೂ ಗುಣಮಟ್ಟ ಸುಧಾರಿಸಲಿಲ್ಲ. ಡಬ್ಬಿಂಗ್ ಮತ್ತು ರೀಮೇಕ್



ಚಿತ್ರಗಳು ಕೂಡ ಇದಕ್ಕೆ ಕಾರಣ. ಒಟ್ಟಾರೆ ನೋಡಿದಾಗ ಮೂವತ್ತು ವರ್ಷಗಳಲ್ಲಿ ಕನ್ನಡ ಚಿತ್ರರಂಗದ ಪ್ರಗತಿ ಅಷ್ಟೇನೂ ಹೇಳಿಕೊಳ್ಳುವಂಥದ್ದಾಗಿರಲಿಲ್ಲ. ೧೬೫ ಚಿತ್ರಗಳು ತಯಾರಾಗಿದ್ದರೂ ಕನ್ನಡ ಚಿತ್ರರಂಗ ಇನ್ನೂ ಶೈಶವಾವಸ್ಥೆಯಲ್ಲೇ ಇತ್ತು ಎನ್ನಬಹುದು. ಕನ್ನಡ ಚಿತ್ರಗಳು ಕನ್ನಡತನ ಬೆಳೆಸಿಕೊಂಡು ಕನ್ನಡನಾಡಿನಲ್ಲಿ ತನ್ನದೇ ಆದ ಪ್ರೇಕ್ಷಕವೃಂದವನ್ನು ಹೊಂದುವುದರಲ್ಲಿ ವಿಫಲವಾಗಿತ್ತು. ಇದಕ್ಕೆ ಇತರ ಕಾರಣಗಳು ಏನೇ ಇರಲಿ, ಕನ್ನಡ ಚಿತ್ರ ತಯಾರಕರು ಕರ್ನಾಟಕದ ಸೀಮಿತ ಮಾರುಕಟ್ಟೆಯನ್ನು ಅರಿತುಕೊಂಡು ಕಾರ್ಯಪ್ರವೃತ್ತರಾಗದಿದ್ದುದು, ಇತರ ಭಾಷಾ ಚಿತ್ರಗಳ ಅನುಕರಣೆ ಮಾಡತೊಡಗಿದ್ದು ಒಂದು ಮುಖ್ಯಕಾರಣ ಎನ್ನಬಹುದು. ಕನ್ನಡಚಿತ್ರಗಳ ತಯಾರಿಕೆಯ ಸಂಖ್ಯೆ ಕಡಿಮೆ ಇದ್ದುದರಿಂದ ಬಹುತೇಕ ಕಲಾವಿದರು ಇತರ ಭಾಷಾಚಿತ್ರಗಳಲ್ಲಿ ಸಣ್ಣ ಪುಟ್ಟ ಪಾತ್ರಗಳನ್ನು ನಿರ್ವಹಿಸುತ್ತಲೋ, ಡಬ್ಬಿಂಗ್ ಕಲಾವಿದರಾಗಿಯೋ ಜೀವನ ಸಾಗಿಸಬೇಕಾಗಿತ್ತು. ಕೆಲವು ಕಲಾವಿದರು ಇತರ ಭಾಷೆಗಳಲ್ಲಿಯೂ ಹೆಸರು ಮಾಡಿದ್ದರು. ಕೆಲಸವಿಲ್ಲದಾಗ ಅನೇಕ ಮಂದಿ ಕಲಾವಿದರು ನಾಟಕಗಳಲ್ಲಿ ಪಾತ್ರವಹಿಸಲು ಹೋಗುತ್ತಿದ್ದರು. ೧೯೬೧ರಲ್ಲಿ ತಯಾರಾದ ಚಿತ್ರಗಳ ಸಂಖ್ಯೆ ಕೇವಲ ಎಂಟು. ಆ ಸಮಯದಲ್ಲಿ ಕಲಾವಿದರ ಸಹಕಾರದಿಂದ ತಯಾರಾದ ಚಿತ್ರ 'ರಣಧೀರ ಕಂಠೀರವ'. ಇದು ಕನ್ನಡ ಚಿತ್ರರಂಗದ ಏಕೈಕ ಸಹಕಾರಿ ಪ್ರಯೋಗ. ಅದು ಯಶಸ್ಸನ್ನೂ ಕಂಡಿತು. ಕಲಾವಿದರಿಗೆ ಅಭಿನಯಿಸಿದ ತೃಪ್ತಿ ಅಷ್ಟೆ ದೊರೆತದ್ದು. ಮದರಾಸಿನಲ್ಲಿ ಸ್ಟುಡಿಯೋ ಸ್ಥಾಪಿಸಿಕೊಂಡು, ವಿಕ್ರಂ ಪ್ರೊಡಕ್ಷನ್ಸ್ ಬ್ಯಾನರಿನಲ್ಲಿ ಚಿತ್ರಗಳನ್ನು ತಯಾರಿಸುತ್ತಿದ್ದ ಬಿ.ಎಸ್.ರಂಗ ಇವರ ಬೆಂಬಲದಿಂದ 'ರಣಧೀರ ಕಂಠೀರವ' ಚಿತ್ರ ತಯಾರಾಯಿತು. ಈ ಕಾಲಾವಧಿಯಲ್ಲಿ





ಗಮನ ಸೆಳೆದ ಚಿತ್ರಗಳೆಂದರೆ 'ಜಗನ್ಮೋಹಿನಿ', 'ಮೊದಲ ತೇದಿ', 'ಪ್ರೇಮದ ಪುತ್ರಿ', 'ಸ್ಕೂಲ್ ಮಾಸ್ಟರ್', 'ನಾಂದಿ' ಮೊದಲಾದವು. ಬಿ. ಆರ್. ಪಂತುಲುರವರ ಪದ್ಮಿನಿ ಪಿಕ್ಚರ್ಸ್, ಆರ್. ನಾಗೇಂದ್ರರಾಯರ ಆರೆನ್ನಾರ್ ಪ್ರೊಡಕ್ಷನ್ಸ್, ವಾದಿರಾಜ್-ಜವಹರ್ ಇವರ ಭಾರತೀ ಚಿತ್ರ – ಮುಂತಾದ ಬ್ಯಾನರ್‌ಗಳು ಅಸ್ತಿತ್ವಕ್ಕೆ ಬಂದದ್ದು ಒಂದು ಪ್ರಮುಖ ಬೆಳವಣಿಗೆ. ಪಂಢರಿಬಾಯಿ, ಲೀಲಾವತಿ, ಲಕ್ಷ್ಮೀದೇವಿ, ಹರಿಣಿ, ಬಾಲಕೃಷ್ಣ, ನರಸಿಂಹರಾಜು ಮೊದಲಾದ ಕಲಾವಿದರೂ ಆಗಲೇ ಜನಪ್ರಿಯರಾಗಿದ್ದರು. ಜಿ. ವಿ. ಅಯ್ಯರ್ ಕಲಾವಿದರಾಗಿ, ಲೇಖಕ, ಗೀತರಚನಕಾರರಾಗಿ, ನಿರ್ದೇಶಕರಾಗಿ ಹೆಸರು ಮಾಡಿದ್ದರು. ಪ್ರಯೋಗಶೀಲ ನಿರ್ದೇಶಕರಾಗಿ ಚಿತ್ರರಂಗ ಪ್ರವೇಶಿಸಿದವರು ಎಂ. ಆರ್. ವಿಠ್ಠಲ್, ಎನ್. ಲಕ್ಷ್ಮೀನಾರಾಯಣ್. ಹದಿನೈದು ಕನ್ನಡ ಚಿತ್ರಗಳು ರಾಷ್ಟ್ರಪ್ರಶಸ್ತಿ ಗಳಿಸಿದ್ದು ವಿಶೇಷ.

ಕನ್ನಡ ಚಿತ್ರರಂಗದ ಬಹುಮುಖ್ಯವಾದ ಕಾಲಘಟ್ಟ ಎಂದರೆ ೧೯೬೫ರಿಂದ ೧೯೭೫ರ ಹತ್ತು ವರ್ಷಗಳು. ಒಂದು ಬಗೆಯಲ್ಲಿ ಈ ದಶಕವನ್ನು ಕನ್ನಡ ಚಿತ್ರರಂಗದ ಸ್ವರ್ಣಯುಗ ಎಂದು ಕರೆಯಬಹುದು. ಕನ್ನಡ ಚಲನಚಿತ್ರಗಳಿಗೆ ಕರ್ನಾಟಕ ಸರಕಾರ ಪರಿಹಾರ ಧನ ನೀಡಿಕೆ ಪ್ರಕಟಿಸಿದ್ದು, ರಾಜ್ಯಪ್ರಶಸ್ತಿ ಪ್ರದಾನ ಪ್ರಾರಂಭಿಸಿದ್ದು, ಚಿತ್ರರಂಗ ಕ್ರಮೇಣ ಪರವಲಯದಿಂದ ತಾಯ್ನಾಡಿಗೆ ಬಂದು ನೆಲೆಗೊಳ್ಳಲು ಪ್ರಾರಂಭವಾದದ್ದು ಈ ಕಾಲಾವಧಿಯಲ್ಲಿ. ವರ್ಣಚಿತ್ರಗಳ ತಯಾರಿಕೆಗೆ ನಾಂದಿ, ಹೊಸ ಕಲಾವಿದರು, ನಿರ್ದೇಶಕರು, ಪ್ರಯೋಗಗಳು, ತಿರುವುಗಳು ಬಂದದ್ದು ಆಗಲೇ. ತಯಾರಾದ ಚಿತ್ರಗಳ ಸಂಖ್ಯೆ ಸುಮಾರು ೩೦೦. ಸಾಕಷ್ಟು ವೈವಿಧ್ಯತೆಯಿಂದ ಕೂಡಿದ್ದ ಚಿತ್ರಗಳು ಅವು. ರಾಷ್ಟ್ರ ಹಾಗೂ ಅಂತರರಾಷ್ಟ್ರೀಯ ಉತ್ಸವಗಳಲ್ಲಿ ಕನ್ನಡ ಚಲನಚಿತ್ರಗಳು ಪ್ರದರ್ಶನಗೊಂಡುವಲ್ಲದೆ, ಪ್ರಶಸ್ತಿಗಳನ್ನು ಗಳಿಸಿದವು. ಕಥಾವಸ್ತು ಮತ್ತು ನಿರ್ದೇಶಕರಿಗೆ ಹೆಚ್ಚಿನ ಪ್ರಾಧಾನ್ಯತೆ ದೊರೆಯಿತು. 'ಸಂಸ್ಕಾರ' ಚಿತ್ರದಿಂದ ಪ್ರಾರಂಭವಾದ ಹೊಸ ಅಲೆಯ ಚಿತ್ರಗಳು



ತೆರೆಗೆ ಬಂದು ಸದಭಿರುಚಿಯ ಪ್ರೇಕ್ಷಕವರ್ಗದ ಗಮನ ಸೆಳೆದವು. ಆದರೆ ವ್ಯಾಪಾರೀ ದೃಷ್ಟಿಯಿಂದ ಎಲ್ಲವೂ ಯಶಸ್ಸು ಕಾಣಲಿಲ್ಲ. ಈ ಬಗೆಯ ಚಿತ್ರಗಳಿಗೆ ಹಂಚಿಕೆದಾರರ ಹಿಂಜರಿಕೆ ಒಂದುಕಡೆಯಾದರೆ, ಪ್ರದರ್ಶನಕ್ಕೆ ಥಿಯೇಟರುಗಳ ಅಲಭ್ಯತೆ ಇನ್ನೊಂದು ತಲೆನೋವು. ಥಿಯೇಟರ್ ದೊರೆತರೂ ಬಾಡಿಗೆ ದುಬಾರಿ. ಹೀಗಾಗಿ ಪ್ರಯೋಗಶೀಲ, ಅರ್ಥಪೂರ್ಣ ಚಿತ್ರಗಳಿಗೆ ಬೇರೊಂದು ವ್ಯವಸ್ಥೆ ಆಗಬೇಕಾಗಿದೆ. ಈ ಸಮಸ್ಯೆ ಬಗೆಹರಿಸಲು ಉದ್ಯಮದೊಂದಿಗೆ ಸರಕಾರವೂ ಕೈಜೋಡಿಸಿ ಪ್ರದರ್ಶನಕ್ಕೆ ವಿಶೇಷ ಥಿಯೇಟರುಗಳ ವ್ಯವಸ್ಥೆ ಮಾಡಬೇಕಾಗಿದೆ.

ಈ ಅವಧಿಯಲ್ಲಿ ಗಮನ ಸೆಳೆದ ಚಿತ್ರಗಳು: ಎಂ. ಆರ್. ವಿಠ್ಠಲ್‌ರ ಮಿಸ್ ಲೀಲಾವತಿ; ಸಿದ್ದಲಿಂಗಯ್ಯ ನಿರ್ದೇಶನದ 'ಬೂತಯ್ಯನ ಮಗ ಅಯ್ಯು'; ಎಂ. ವಿ. ಕೃಷ್ಣಸ್ವಾಮಿಯವರ 'ಸುಬ್ಬಾಶಾಸ್ತ್ರಿ', 'ಪಾಪಪುಣ್ಯ'. ಪುಟ್ಟಣ್ಣ ಕಣಗಾಲರು 'ಬೆಳ್ಳಿಮೋಡ' ಚಿತ್ರದಿಂದ ನಿರ್ದೇಶಕರಾಗಿ ಪ್ರವೇಶಿಸಿ 'ಗೆಜ್ಜೆಪೂಜೆ', 'ನಾಗರಹಾವು', 'ಎಡಕಲ್ಲುಗುಡ್ಡದ ಮೇಲೆ', 'ಉಪಾಸನೆ', 'ರಂಗನಾಯಕಿ', 'ಕಥಾಸಂಗಮ' ಮೊದಲಾದ ಹಲವು ಚಿತ್ರಗಳನ್ನು ನಿರ್ದೇಶಿಸಿ ಕನ್ನಡ ಚಿತ್ರರಂಗದಲ್ಲಿ ವಿಶಿಷ್ಟವಾದ ಹೊಸತನ ತಂದು ಕೀರ್ತಿ ಗಳಿಸಿದರು. ಅವರ ಚಿತ್ರಗಳಲ್ಲಿ ವಿಶಿಷ್ಟವಾದ ಪ್ರಯೋಗಶೀಲತೆ, ಹೊಸಚಿಂತನೆಗಳಿಲ್ಲದಿದ್ದರೂ ಕಥಾನಿರೂಪಣೆಯಲ್ಲಿ ತಮ್ಮದೇ ಆದ ಛಾಪು ಮೂಡಿಸಿದರಲ್ಲದೆ ವಿಷ್ಣುವರ್ಧನ್, ಚಂದ್ರಶೇಖರ, ಆರತಿ, ಭಾರತಿ ಮೊದಲಾದ ಹೊಸಬರನ್ನು ಪರಿಚಯಿಸಿದರು. ಕಲ್ಪನಾಗೆ ಮಿನುಗುತಾರೆ ಪಟ್ಟ ಕಲ್ಪಿಸಿದರು. ಚಿತ್ರ ತಯಾರಕರಾದ ದೊರೆ-ಭಗವಾನ್ ಜೋಡಿ ಬಾಂಡ್ ಶೈಲಿಯ ಚಿತ್ರಗಳನ್ನು ತಯಾರಿಸಿದರು. ವರ್ಣಚಿತ್ರಗಳು ತಯಾರಾದ್ದು ಈ ಕಾಲಾವಧಿಯಲ್ಲೆ. ಬಿ. ಎಸ್. ರಂಗ ನಿರ್ದೇಶಿತ 'ಅಮರಶಿಲ್ಪಿ ಜಕಣಾಚಾರಿ', ಕನ್ನಡದ ಮೊದಲ ವರ್ಣಚಿತ್ರ. ಎರಡನೆಯದು ಪಂತುಲು ನಿರ್ದೇಶಿತ ಅದ್ದೂರಿಯ 'ಶ್ರೀಕೃಷ್ಣದೇವರಾಯ' ಚಿತ್ರ. ನಿರ್ದೇಶಕ ಎನ್. ಲಕ್ಷ್ಮೀನಾರಾಯಣ್‌ರವರ 'ಮುಕ್ತಿ', 'ಅಬಚೂರಿನ ಪೋಸ್ಟ್ ಆಫೀಸು', 'ಉಯ್ಯಾಲೆ' ಮೊದಲಾದ ಚಿತ್ರಗಳು ತೆರೆ ಕಂಡವು. 'ವಂಶವೃಕ್ಷ' ಚಿತ್ರದಿಂದ ನಿರ್ದೇಶಕರಾಗಿ ಪ್ರವೇಶಿಸಿದ ನಾಟಕಕಾರ











ಗಿರೀಶ್ ಕಾರ್ನಾಡ್ ಮತ್ತು ಬಿ. ವಿ. ಕಾರಂತ ಕನ್ನಡ ಚಿತ್ರರಂಗಕ್ಕೆ ಹೊಸ ಚೇತನವನ್ನು ಮೂಡಿಸಿದ್ದರು. 'ತಬ್ಬಲಿಯು ನೀನಾದೆ ಮಗನೆ' ಈ ಜೋಡಿ ನಿರ್ದೇಶಿಸಿದ ಇನ್ನೊಂದು ಚಿತ್ರ. ಖ್ಯಾತ ಕಾದಂಬರಿಕಾರ ಶಿವರಾಮ ಕಾರಂತರ 'ಚೋಮನ ದುಡಿ' ಚಿತ್ರ ರಾಷ್ಟ್ರಪ್ರಶಸ್ತಿ ಗಳಿಸಿ ಯಶಸ್ವಿಯಾದ ಚಿತ್ರವಾಯಿತು. ಇದರ ನಿರ್ದೇಶಕರು ಬಿ. ವಿ. ಕಾರಂತ. ಶಾಸ್ತ್ರೀಯ ಸಂಗೀತಪ್ರಧಾನ ವಾಗಿದ್ದ, ತರಾಸು ಕಾದಂಬರಿ ಆಧಾರಿತ 'ಹಂಸಗೀತೆ' ಚಿತ್ರದಿಂದ ಹೊಸ ತಿರುವನ್ನು ತೋರಿದ ಚಿತ್ರರಂಗದ ಅಧ್ವರ್ಯು ಜಿ. ವಿ. ಅಯ್ಯರ್ ಮುಂದೆ ಅಧ್ಯಾತ್ಮಕ್ಕೆ ಪ್ರಾಮುಖ್ಯತೆ ನೀಡಿ 'ಶಂಕರಾಚಾರ್ಯ', 'ಮಧ್ವಾಚಾರ್ಯ', 'ಭಗವದ್ಗೀತೆ' ಮೊದಲಾದ ಚಿತ್ರಗಳನ್ನು ತೆರೆಗೆ ಅರ್ಪಿಸಿದರು. ಮುಂದಿನ ನಾಲ್ಕು ವರ್ಷಗಳಲ್ಲಿ ೧೭೫ ಚಿತ್ರಗಳು ತಯಾರಾಗಿ ಹಿಂದಿನ ದಶಕದ ಪ್ರಗತಿಯೇ ಮುಂದುವರಿಯಿತು. ಹೊಸ ನಿರ್ದೇಶಕರುಗಳು ಹೊಸ ಪ್ರಯೋಗಗಳನ್ನು ಮಾಡಿ ಚಿತ್ರರಂಗವನ್ನು ಸಂಪದ ಗೊಳಿಸಿದರು. ಮುಂದೆ ಹೊಸ ಅಲೆಯ ಚಿತ್ರಗಳನ್ನು ಸತತವಾಗಿ ತೆರೆಗೆ ಅರ್ಪಿಸಿದ ನಿರ್ದೇಶಕ ಗಿರೀಶ ಕಾಸರವಳ್ಳಿ ಚಿತ್ರರಂಗ ಪ್ರವೇಶಿಸಿದ್ದು ಒಂದು ಗಮನಾರ್ಹ ವಿಷಯ. ಲೇಖಕ, ಪತ್ರಕರ್ತ ಪಿ. ಲಂಕೇಶರ 'ಪಲ್ಲವಿ', ವಿ. ಆರ್. ಕೆ. ಪ್ರಸಾದ್ ನಿರ್ದೇಶಿತ 'ಋಷ್ಯಶೃಂಗ', ಗಿರೀಶ್ ಕಾಸರವಳ್ಳಿ ನಿರ್ದೇಶಿತ 'ಘಟಶ್ರಾದ್ಧ', ಟಿ. ಎಸ್. ನಾಗಾಭರಣ ಇವರ 'ಗ್ರಹಣ', ಗಿರೀಶ್ ಕಾರ್ನಾಡರ 'ಒಂದಾನೊಂದು ಕಾಲದಲ್ಲಿ', ಚಂದ್ರಶೇಖರ ಕಂಬಾರರ 'ಕಾಡುಕುದುರೆ', ಎಂ. ಎಸ್. ಸತ್ಯು ಇವರ 'ಬರ', ಮೊದಲಾದುವು ತೆರೆಕಂಡ ಪ್ರಮುಖ ಚಿತ್ರಗಳು. 'ಹಂಸಗೀತೆ' ಚಿತ್ರಕ್ಕೆ ವಿನೂತನ ಸಂಗೀತ ನೀಡಿದ ಬಿ. ವಿ. ಕಾರಂತ ಹಲವು ಚಿತ್ರಗಳಿಗೆ ಸಂಗೀತ ನೀಡಿ ಉತ್ತಮ ಸಂಗೀತ ನಿರ್ದೇಶಕರೆಂದು ಹೆಸರು ಮಾಡಿದರು. ಅನಂತನಾಗ್, ಶಂಕರನಾಗ್, ಅಂಬರೀಷ್, ದ್ವಾರಕೀಶ್, ಆರತಿ, ಜಯಂತಿ, ಭಾರತಿ ಮೊದಲಾದವರು ಈ ಕಾಲದಲ್ಲೇ ಚಿತ್ರರಂಗದಲ್ಲಿ ತಾರಾಪಟ್ಟಕ್ಕೇರಿದರು.

೧೯೮೦-೧೯೯೦ರ ದಶಕದಲ್ಲಿ ತಯಾರಾದ ಚಿತ್ರಗಳ ಸಂಖ್ಯೆ ೬೮೮. ಸಂಖ್ಯೆಯ ದೃಷ್ಟಿಯಿಂದ ಇದು ಬಹುದೊಡ್ಡ ಜಿಗಿತ. ಚಿತ್ರರಂಗಕ್ಕೆ ಹಲವು ಮಂದಿ ಹೊಸ ನಿರ್ಮಾಪಕರು, ನಿರ್ದೇಶಕರು, ನಟನಟಿಯರು ಪ್ರವೇಶಿಸಿದರು. ಈ ವೇಳೆಗೆ ಕನ್ನಡ ಚಿತ್ರರಂಗ ಸಂಪೂರ್ಣವಾಗಿ ಬೆಂಗಳೂರಿನಲ್ಲಿ ನೆಲೆಗೊಂಡಿತ್ತು. ಚಿತ್ರ ತಯಾರಿಕೆಗೆ ಅಗತ್ಯವಾದ ಎಲ್ಲ ಸೌಲಭ್ಯಗಳೂ ರಾಜಧಾನಿಯಲ್ಲಿ ಸಜ್ಜುಗೊಂಡಿತ್ತು. ಹಲವು ವರ್ಷಗಳ ಕನ್ನಡ ಚಳವಳಿಯೂ ಕನ್ನಡ ಚಿತ್ರಗಳಿಗೆ ಒತ್ತಾಸೆಯಾಗಿತ್ತು. ಇಷ್ಟಾದರೂ ಚಿತ್ರೋದ್ಯಮದ ಸ್ಥಿತಿ ಯಾವತ್ತಿನಂತೆ ಅನಿಶ್ಚಿತತೆಯಿಂದ ಕೂಡಿತ್ತು. ಅದ್ದೂರಿಯ ಸೆಟ್‌ಗಳ ನಿರ್ಮಾಣ, ಸ್ಟುಡಿಯೋಗಳ ಅವಶ್ಯಕತೆ ಕಡಿಮೆಯಾಗಿ ದೊಡ್ಡ ಬಂಗಲೆಗಳಲ್ಲಿ ಬಹುತೇಕ ಬಿರುಸಾಗಿ ಚಿತ್ರೀಕರಣ ನಡೆಯಲಾರಂಭ ವಾಯಿತು. ಹೊಸ ತಂತ್ರಜ್ಞಾನದ, ಹೊಸ ಉಪಕರಣಗಳ ಬಳಕೆಯಿಂದ ಚಿತ್ರ ತಯಾರಿ ನಡೆಯತೊಡಗಿತು. ಹಾಗೇ ಚಿತ್ರ ತಯಾರಿಕೆಯ ವೆಚ್ಚವೂ ಕೂಡ ಬೆಳೆಯಿತು. ಇತರ ಭಾಷಾ ಚಿತ್ರಗಳಂತೆಯೇ ಕನ್ನಡ ಚಿತ್ರರಂಗವೂ ಕೂಡ ಒಂದು ರೀತಿಯಲ್ಲಿ ಪೈಪೋಟಿಗೆ ಇಳಿಯಿತು. ಹೆಚ್ಚಾಗಿ ಸಾಮಾಜಿಕ ಚಿತ್ರಗಳೇ ತಯಾರಾಗುತ್ತಿದ್ದವು. ಅಲ್ಲೊಂದು ಇಲ್ಲೊಂದು ಪೌರಾಣಿಕ ಚಿತ್ರಗಳು ಈ ಅವಧಿಯಲ್ಲಿ ತೆರೆ ಕಂಡಿದ್ದವು. ಸೆಕ್ಸ್ ಮತ್ತು ಕ್ರೈಮ್‌ಗಳಿಗೆ ಪ್ರಾಧಾನ್ಯತೆ ಬಂತು. ಚಿತ್ರರಂಗಕ್ಕೆ ಮಚ್ಚು, ಲಾಂಗ್, ಹೊಡಿಬಡಿ ಹಾಗೂ ಹಿಂದೆ ಕ್ಯಾಬರೇ ದೃಶ್ಯಗಳಿಗೆ ಸೀಮಿತವಾಗಿದ್ದ ತುಂಡು ಉಡುಪು ಈಗ ನಾಯಕ ನಟಿಯರ ದಿರಿಸಾಯಿತು. ಮುಂದಿನ ವರ್ಷಗಳಲ್ಲಿ ಈ ಪ್ರವೃತ್ತಿ ಇನ್ನಷ್ಟು ಹೆಚ್ಚು ಅಗ್ರೆಸಿವ್ ಆಗಿ ಮುಂದುವರಿಯಿತು.

ಪ್ರೇಮಾ ಕಾರಂತ್ ನಿರ್ದೇಶನದ 'ಫಣಿಯಮ್ಮ', ಟಿ. ಎಸ್. ನಾಗಾಭರಣ ಇವರ 'ಬ್ಯಾಂಕರ್ ಮಾರ್ಗಯ್ಯ', 'ಸಂತ ಶಿಶುನಾಳ ಶರೀಫ', ಎಸ್. ವಿ. ರಾಜೇಂದ್ರ ಸಿಂಗ್ ಬಾಬು ಇವರ 'ಬಂಧನ', 'ಮುತ್ತಿನ ಹಾರ', ಎನ್. ಲಕ್ಷ್ಮೀನಾರಾಯಣ ಇವರ 'ಬೆಟ್ಟದ ಹೂವು', ಗಿರೀಶ್ ಕಾಸರವಳ್ಳಿಯವರ 'ತಬರನ ಕಥೆ', 'ಬಣ್ಣದ ವೇಷ', 'ಮನೆ', ಸಂಗೀತಂ ಶ್ರೀನಿವಾಸರಾವ್ ಇವರ 'ಪುಷ್ಪಕವಿಮಾನ', ಉಮೇಶ ಕುಲಕರ್ಣಿಯವರ 'ಶಂಖನಾದ' ಮೊದಲಾದ ಚಿತ್ರಗಳು ಗಮನ ಸೆಳೆದುವು ಮತ್ತು ಪ್ರಶಸ್ತಿಗಳನ್ನು ಗಳಿಸಿದುವು.

೧೯೯೧ರಿಂದ ೨೦೦೦ದವರೆಗಿನ ಹತ್ತು ವರ್ಷಗಳಲ್ಲಿ ತಯಾರಾದ ಚಿತ್ರಗಳ ಸಂಖ್ಯೆ ಹಿಂದಿನ ದಶಕಕ್ಕಿಂತ ಸ್ವಲ್ಪ ಹೆಚ್ಚು (೭೦೭) ಮತ್ತು ಚಿತ್ರಗಳ ಧಾಟಿಯಲ್ಲಿ ಹಿಂದಿನಂತೆಯೇ ಮುಂದುವರಿಯಿತು ಎನ್ನಬಹುದು. ಭೂಗತ ಜಗತ್ತನ್ನು ವಿಜೃಂಭಿಸುವ

ಸುದ್ದಿ ಚಿತ್ರ



*'ಬೆಂಗಳೂರಿನ ಸೃಷ್ಟಿ ಕಲಾಲಯಂ ಮತ್ತು ಅನುಭವಶಾಲೆ', ಕನ್ನಡ ಕೃತಿಗಳ ಓದುಗರು ಮತ್ತು ಬರಹಗಾರರನ್ನು ಉತ್ತೇಜಿಸುವ ಕಾರ್ಯಕ್ರಮವನ್ನು ಹಮ್ಮಿಕೊಂಡಿತ್ತು – ಕರ್ನಾಟಕದ ಯಾವುದೇ ಭಾಗದಲ್ಲಿ ಕನ್ನಡ ಪುಸ್ತಕಗಳನ್ನು ಖರೀದಿಸುವವರು ಪಡೆದ ರಸೀದಿಗಳನ್ನು ತರಿಸಿಕೊಂಡು ಲಕ್ಕಿ ಡಿಪ್ ಮೂಲಕ ಬಹುಮಾನ ನೀಡುವ ಯೋಜನೆ. ೫-೧೨-೨೦೧೦ರಂದು ಬೆಂಗಳೂರಿನಲ್ಲಿ ನಡೆದ ಸಮಾರಂಭದಲ್ಲಿ ಹಲವು ಗಣ್ಯರು, ಪುಸ್ತಕ ಪ್ರಿಯರು ಭಾಗವಹಿಸಿದ್ದರು. ಗದಗಿನ ರೇಖಾ ಮಾಲತೇಶ್ ಅವರು 'ನವಕರ್ನಾಟಕ' ಪುಸ್ತಕ ಪ್ರದರ್ಶನದಲ್ಲಿ ಖರೀದಿಸಿದ ರಸೀದಿಗೆ ಪ್ರಥಮ ಬಹುಮಾನ (ನ್ಯಾನೋ ಕಾರು) ಪಡೆದರು. ಹಾಗೆಯೇ ಒಟ್ಟು ಹತ್ತು ಪ್ರಮುಖ ಬಹುಮಾನಗಳಲ್ಲಿ ನಾಲ್ಕು ಬಹುಮಾನಗಳು ನವಕರ್ನಾಟಕ ಮಳಿಗೆಗಳಿಂದ ಪುಸ್ತಕ ಖರೀದಿಸಿದವರಿಗೆ ಬಂದಿವೆ. ಇದು ಸಂತೋಷದ ವಿಷಯ.*

ಚಿತ್ರಗಳೇ ಹೆಚ್ಚಾಗಿ ಬಂದುವು. ವಿದೇಶಗಳಲ್ಲಿ ಚಿತ್ರೀಕರಣಕ್ಕೆ ಪ್ರಾಶಸ್ತ್ಯ ಬಂದಿತು. ಆರ್ಥಿಕವಾಗಿ ಚಿತ್ರರಂಗದ ಪರಿಸ್ಥಿತಿ ಅಭದ್ರವಾಗಿಯೇ ಇತ್ತು. ಅನೇಕ ಹೊಸ ಕಲಾವಿದರು ಚಿತ್ರರಂಗಕ್ಕೆ ಬಂದರು. ಮಾಲಾಶ್ರೀ, ರವಿಚಂದ್ರನ್, ರಾಜಕುಮಾರ್ ಪುತ್ರರಾದ ಶಿವರಾಜ್‌ಕುಮಾರ್, ರಾಘವೇಂದ್ರ, ಪುನೀತ್, ಲೋಕೇಶ್, ಗೀತಾ, ಉಮಾಶ್ರೀ, ಸುಹಾಸಿನಿ, ಜಯಮಾಲ, ಶಶಿಕುಮಾರ್, ತಾರಾ, ರಮೇಶ್ ಮೊದಲಾದವರನ್ನು ಇಲ್ಲಿ ಹೆಸರಿಸಬಹುದು.

ಲೋಕೇಶ್ ನಿರ್ದೇಶಿತ 'ಭುಜಂಗಯ್ಯನ ದಶಾವತಾರ', ನಾಗಾಭರಣ ಇವರ 'ಮೈಸೂರು ಮಲ್ಲಿಗೆ', ಸದಾನಂದ ಸುವರ್ಣ ಇವರ 'ಕುಬಿ ಮತ್ತು ಇಯಾಲ', ಕೆ. ಎಸ್. ಎಲ್. ಸ್ವಾಮಿ ನಿರ್ದೇಶಿತ 'ಸಂಗ್ಯಾ ಬಾಳ್ಯಾ', 'ಹರಕೆಯ ಕುರಿ', ಟಿ. ಎಸ್. ನಾಗಾಭರಣ ನಿರ್ದೇಶಿತ 'ಚಿನ್ನಾರಿ ಮುತ್ತ', ನಾಗತಿಹಳ್ಳಿ ಚಂದ್ರಶೇಖರ್ ಇವರ 'ಕೊಟ್ರೇಶಿ ಕನಸು', 'ಅಮೆರಿಕಾ ಅಮೆರಿಕಾ', ಗಿರೀಶ್ ಕಾಸರವಳ್ಳಿಯವರ 'ಕ್ರೌರ್ಯ', 'ತಾಯಿಸಾಹೇಬ', ಗಿರೀಶ್ ಕಾರ್ನಾಡರ 'ಕಾನೂರು ಹೆಗ್ಗಡತಿ', ಟಿ. ಎನ್. ಸೀತಾರಾಮ್ ಇವರ 'ಮತದಾನ', ಪಿ. ಶೇಷಾದ್ರಿ ಇವರ 'ಮುನ್ನುಡಿ' ಮೊದಲಾದವು ತೆರೆಕಂಡ ಪ್ರಮುಖ ಚಿತ್ರಗಳು.

ಮುಂದಿನ ಹತ್ತು ವರ್ಷಗಳಲ್ಲಿ ಬಿಡುಗಡೆಯಾದ ಚಿತ್ರಗಳ ಸಂಖ್ಯೆ ಒಂದು ಸಾವಿರವನ್ನು ದಾಟಿತು. ವಾರಕ್ಕೆ ಎರಡು ಮೂರು ಚಿತ್ರಗಳು ಬಿಡುಗಡೆಯಾಗ ತೊಡಗಿದುವು. ಚಿತ್ರಗಳಲ್ಲಿ ಹಿಂಸೆ, ಸೆಕ್ಸ್‌ಗಳಿಗೆ ಪ್ರಾಧಾನ್ಯತೆ. ಹೆಚ್ಚಿನ ಚಿತ್ರಗಳು ಸೋತು ನೆಲಕಚ್ಚಿದುವು. ಇದು ಚಿತ್ರರಂಗಕ್ಕೆ ಹೊಸದೇನಲ್ಲ. ಯಶಸ್ವಿಯಾಗಿ ಹಣಗಳಿಸಿದ ಚಿತ್ರಗಳು ಇಲ್ಲದಿರಲಿಲ್ಲ. ಉದಾಹರಣೆಗೆ 'ದುನಿಯಾ', 'ಮುಂಗಾರುಮಳೆ', ವಿಷ್ಣುವರ್ಧನ್ ಮತ್ತು ರವಿಚಂದ್ರನ್ ಅಭಿನಯಿಸಿದ ಚಿತ್ರಗಳು ಮುಂತಾದುವು. ಚಿತ್ರರಂಗಕ್ಕೆ ರಿಯಲ್ ಎಸ್ಟೇಟ್ ಹಣವೂ ಹರಿದುಬಂತು. ಹೊಸ ಹೊಸ ನಟನಟಿಯರು, ನಿರ್ದೇಶಕರು, ತಯಾರಕರು ಈ ಅವಧಿಯಲ್ಲಿ ಬಂದರು. ಗಿರೀಶ್ ಕಾಸರವಳ್ಳಿ ಎಂದಿನಂತೆ ಹೊಸ ಪ್ರಯೋಗಗಳನ್ನು ಮುಂದುವರಿಸಿದರು. 'ದ್ವೀಪ', 'ಹಸೀನ', 'ನಾಯಿನೆರಳು' ಮೊದಲಾದ ಚಿತ್ರಗಳನ್ನು ಕನ್ನಡ ಚಿತ್ರರಂಗಕ್ಕೆ ನೀಡಿದರು. ಈ ಕಾಲಾವಧಿಯಲ್ಲಿ ಚಿತ್ರರಂಗ ಪ್ರವೇಶಿಸಿದವರು ಲೇಖಕ ಬರಗೂರು ರಾಮಚಂದ್ರಪ್ಪ. ಅವರು ನಿರ್ದೇಶಿಸಿದ ಚಿತ್ರಗಳಲ್ಲಿ ಪ್ರಮುಖವಾದುವು ರಶಿಯಾ ಲೇಖಕ ಮಾಕ್ಸಿಮ್ ಗಾರ್ಕಿಯವರ ವಿಶ್ವವಿಖ್ಯಾತ ಕಾದಂಬರಿ ಆಧಾರಿತ 'ತಾಯಿ' ಚಿತ್ರ ಮತ್ತು ಶಾಂತಿ. ಗಮನ ಸೆಳೆದ ನಿರ್ದೇಶಕರುಗಳು ಕವಿತಾ ಲಂಕೇಶ್, ಪಿ. ಶೇಷಾದ್ರಿ, ಬಿ. ಸುರೇಶ್ ಮೊದಲಾದವರು.

ತಯಾರಾಗುವ ಚಿತ್ರಗಳ ಸಂಖ್ಯೆ ಅಧಿಕವಾಗಿದ್ದರೂ, ಯಶಸ್ಸು ಕಂಡು ಹಣ ಗಳಿಸಿದ ಚಿತ್ರಗಳ ಸಂಖ್ಯೆ ಕಡಿಮೆ. ಇದಕ್ಕೆ ಕಾರಣಗಳ ವಿಶ್ಲೇಷಣೆ ಈ ಲೇಖನದ ಉದ್ದೇಶವಲ್ಲ. ಚಿತ್ರರಂಗದ ಕೆಲವು ಮುಖ್ಯ ತಿರುವುಗಳನ್ನು ಮಾತ್ರ ಗುರ್ತಿಸಲು ಇಲ್ಲಿ ಪ್ರಯತ್ನಿಸಿದ್ದೇನೆ. ಕನ್ನಡ ಚಿತ್ರರಂಗದ ಇತರ ವಿಭಾಗಗಳನ್ನು, ಎಂದರೆ ಸಂಗೀತ ನಿರ್ದೇಶನ, ಹಿನ್ನೆಲೆ ಗಾಯನ, ಛಾಯಾಗ್ರಹಣ, ತಾಂತ್ರಿಕವರ್ಗ ಮುಂತಾದುವನ್ನು ಈ ಲೇಖನದಲ್ಲಿ ಪ್ರಸ್ತಾಪಿಸಿಲ್ಲ. ಕನ್ನಡ ಚಿತ್ರರಂಗ ಎದುರಿಸುತ್ತಿರುವ ಸಮಸ್ಯೆಗಳು ಹಲವು. ಅವನ್ನು ಕುರಿತು ಚರ್ಚಿಸಲು ಬೇರೆ ವೇದಿಕೆ ಬೇಕು. ಮುಖ್ಯವಾಗಿ ಇಷ್ಟು ವರ್ಷಗಳು ಕಳೆದರೂ ಸುಭದ್ರವಾದ, ಖಚಿತವಾದ ಮಾರುಕಟ್ಟೆ ನಿರ್ಮಾಣಗೊಂಡಿಲ್ಲ. ಅನ್ಯಭಾಷಾ ಪೈಪೋಟಿಯ ಕಾರಣವನ್ನು ಉದ್ಯಮದವರು ಮುಂದಿಡುತ್ತಾರೆ. ಇದು ಕರ್ನಾಟಕಕ್ಕಷ್ಟೇ ಸೀಮಿತವಾಗಿಲ್ಲ. ದಕ್ಷಿಣ ಭಾರತದ ಇತರ ಚಿತ್ರರಂಗಗಳಿಗೂ ಅನ್ವಯಿಸುತ್ತದೆ. ಸರಕಾರ ಸಬ್ಸಿಡಿಯ ಜೊತೆಗೆ, ಕನ್ನಡ ಚಿತ್ರಗಳಿಗೆ ತೆರಿಗೆ ರಿಯಾಯಿತಿಗಳನ್ನು ನೀಡಿದೆ. ಮತ್ತೆ ಛೇಂಬರ್‌ನ ವತಿಯಿಂದ ಅನ್ಯಭಾಷಾ ಚಿತ್ರಗಳ ಪ್ರದರ್ಶನಕ್ಕೆ ನಿರ್ಬಂಧಗಳನ್ನು ಹೇರಿದೆ. ಇಷ್ಟಾದರೂ ಪರಿಸ್ಥಿತಿ ಸುಧಾರಿಸಿಲ್ಲ. ಇದರ ಮೇಲೆ ಈಗ ನಕಲಿ ಅಡಕಬಿಲ್ಲೆ (ಸಿ.ಡಿ.) ಹಾವಳಿ ಬೇರೆ ಬಂದಿದೆ. ಒಟ್ಟಿನಲ್ಲಿ ಜನಸಾಮಾನ್ಯರ ಮೇಲೆ ಪ್ರಭಾವ ಬೀರುತ್ತಿರುವ, ಮನೋರಂಜನೆ ಒದಗಿಸುತ್ತಿರುವ ಈ ಸಮೂಹ ಮಾಧ್ಯಮ ಇನ್ನೂ ತನ್ನ ನೆಲೆ ಕಂಡುಕೊಂಡಿಲ್ಲ. ಚಿತ್ರಗಳ ಗುಣಮಟ್ಟದ ಸುಧಾರಣೆಯಾಗುವವರೆಗೆ ಯಥಾಸ್ಥಿತಿ ಮುಂದುವರಿಯುವುದು. ಚಿತ್ರರಂಗದಲ್ಲಿ ಇದೊಂದು ಪಿಷವರ್ತುಲ.

*(ಆಧಾರ : ಚಲನಚಿತ್ರ ಇತಿಹಾಸ, ಸಂ. ೧ ಮತ್ತು ೨. ಕರ್ನಾಟಕ ಕಲಾದರ್ಶನ ಸಂ. ೨)*

ಸಿ. ಆರ್. ಕೃಷ್ಣರಾವ್
ಜ್‌ಬೀನ್, ೮೪೯, ೬ನೇ ಕ್ರಾಸ್, ಬನಶಂಕರಿ ೩ನೇ ಹಂತ, ೨ನೇ ಬ್ಲಾಕ್, ಕತ್ರಿಗುಪ್ಪೆ, ಬೆಂಗಳೂರು - ೨೮






ತಾ|| ೧.೧.೨೦೧೧ರ ಶನಿವಾರ ಮಂಗಳೂರಿನಲ್ಲಿ ನವಕರ್ನಾಟಕದ ವಿಸ್ತರಿತ ಮತ್ತು ನವೀಕೃತ ಪುಸ್ತಕ ಮಳಿಗೆಯ ಉದ್ಘಾಟನೆ ನಡೆಯಿತು. ಚಿಂತಕ, ಲೇಖಕ ಜಿ. ರಾಜಶೇಖರ್ ಮಳಿಗೆಯ ಉದ್ಘಾಟನೆಯನ್ನು ನೆರವೇರಿಸಿದರು. ಹಿರಿಯ ಸಂಗಾತಿ ಅಡ್ಡೂರು ಶಿವಶಂಕರರಾಯರು ಮುಖ್ಯ ಅತಿಥಿಯಾಗಿ ಭಾಗವಹಿಸಿದ್ದರು. ನವಕರ್ನಾಟಕ ಸಂಸ್ಥೆಯ ವ್ಯವಸ್ಥಾಪಕ ನಿರ್ದೇಶಕ ಆರ್. ಎಸ್. ರಾಜಾರಾಮ್, ಪ್ರಧಾನ ವ್ಯವಸ್ಥಾಪಕ ಎ. ಆರ್. ಉಡುಪ ಮುಂತಾದವರಲ್ಲದೆ, ನವಕರ್ನಾಟಕದ ಓದುಗರ ಮತ್ತು ಲೇಖಕರ ಬಳಗದ ಅನೇಕ ಮಂದಿ ಸಮಾರಂಭದಲ್ಲಿ ಭಾಗವಹಿಸಿ ಕಾರ್ಯಕ್ರಮ ಯಶಸ್ಸಿಗೆ ಸಹಕರಿಸಿದರು.



# ಕನ್ನಡ: ರಾಜಕೀಯ ಶಕ್ತಿಯಾಗಬಹುದೆ?

## ಡಾ|| ರಂಗಾರೆಡ್ಡಿ ಕೋಡಿರಾಂಪುರ

ಪ್ರತಿವರ್ಷ ನವೆಂಬರ್ ತಿಂಗಳು ಬಂತೆಂದರೆ ರಾಜಕಾರಣಿಗಳು, ಸಾಹಿತಿಗಳು ಕನ್ನಡ ಪರ ಸಂಘಟನೆಗಳು ಪುಂಖಾನುಪುಂಖವಾಗಿ ಕನ್ನಡಾಭಿಮಾನವನ್ನು ಸುರಿಸುತ್ತಾರೆ. ಬೀದಿಬೀದಿಗಳು, ಬಸ್ಸು-ಆಟೋಗಳು ಕನ್ನಡ ಬಾವುಟವನ್ನು ಕಟ್ಟಿಕೊಂಡು ವಿಜೃಂಭಿಸುತ್ತವೆ. ಹಣಗಳಿಕೆಯ ಕೆಲ ಸಂಘಟನೆಗಳು ಶ್ರೀಮಂತಿಕೆಯ ತುದಿಗೇರಿ ಸನ್ಮಾನಗೊಳ್ಳುವ ಸಾಹಿತಿಗಳಿಂದಲೂ ವಸೂಲುಮಾಡುತ್ತವೆ. ಅಂತೂ ಅಬ್ಬರದ, ವೈಭವದ ರಾಜ್ಯೋತ್ಸವದ ನಾನಾ ಕಾರ್ಯಕ್ರಮಗಳು ನವೆಂಬರ್‌ನಲ್ಲಿ ನಡೆದು ಇತ್ತೀಚೆಗಿನ ವರ್ಷಗಳಲ್ಲಿ ಡಿಸೆಂಬರ್ ತಿಂಗಳಿಗೂ ವ್ಯಾಪಿಸುತ್ತಿವೆ. ಅಂತೂ ನವೆಂಬರ್ ಡಿಸೆಂಬರ್ ತಿಂಗಳುಗಳು ಅಬ್ಬರದ ವಾದ್ಯಸಂಗೀತದ ಅಮಲಿನಲ್ಲಿ ತೇಲುತ್ತವೆ.

ಜನವರಿ ತಿಂಗಳಿನ ಬಳಿಕ ಕನ್ನಡಾಭಿಮಾನ ನಿಸ್ತೇಜವಾಗುತ್ತದೆ. ಸಾಹಿತಿಗಳು ಮೂಲೆ ಸೇರುತ್ತಾರೆ. ಸಂಘಟನೆಗಳು ಬೇರೆ ಕಾರ್ಯಕ್ರಮಗಳಲ್ಲಿ ಮಗ್ನರಾಗುತ್ತಾರೆ. ಗಡಿಭಾಗದ ಊರುಗಳಲ್ಲಿ ಪರಭಾಷೆಯ ಚಿತ್ರಗಳು ಅನಾವರಣಗೊಳ್ಳುತ್ತವೆ. ಮಕ್ಕಳಿಗೆ ಇಂಗ್ಲಿಷ್ ಮಾಧ್ಯಮದ ಶಾಲೆಗಳಲ್ಲಿ ಪ್ರವೇಶ ಗಿಟ್ಟಿಸಲು ತಂದೆ-ತಾಯಿ ಪೈಪೋಟಿಗೆ ಇಳಿಯುತ್ತಾರೆ. ಸರಕಾರಿ ಕಚೇರಿಗಳಲ್ಲಿ ಇಂಗ್ಲಿಷಿನಲ್ಲಿ ವ್ಯವಹಾರ ನಡೆದರೆ ಮಾರುಕಟ್ಟೆಗಳಲ್ಲಿ ಅನ್ಯಭಾಷೆಗಳಲ್ಲಿ ವ್ಯವಹಾರ ಗರಿಗೆದರಿಕೊಳ್ಳುತ್ತದೆ.

ಕನ್ನಡ ಭಾಷಾ ಬಳಕೆಗೆ ಸಂಬಂಧಿಸಿದಂತೆ ಕರ್ನಾಟಕ ಸರಕಾರ ಸುಮಾರು ೩೦೦ ಆದೇಶಗಳನ್ನು ಹೊರಡಿಸಿದೆ. ಭಾಷಾಭಿವೃದ್ಧಿ ಹಾಗೂ ಬಳಕೆಗೆ ಸಂಬಂಧಿಸಿದಂತೆ ಸರಕಾರ ಕಾವಲು ಸಮಿತಿ, ಅಕಾಡೆಮಿಗಳು, ಸಂಸ್ಕೃತಿ ಇಲಾಖೆ ಇವೆಲ್ಲವುಗಳನ್ನು ಮಾಡಿದ್ದರೂ ರಾಜ್ಯದಾದ್ಯಂತ ಕನ್ನಡಮಯ ವಾತಾವರಣ ಉಂಟುಮಾಡುವಲ್ಲಿ ಸೋತಿವೆ. ಕನ್ನಡ ವಿರೋಧಿ ಧೋರಣೆಯ ಅಧಿಕಾರಿಯೊಬ್ಬನ ಮೇಲೆ ಶಿಸ್ತುಕ್ರಮ ಕೈಗೊಳ್ಳುವಲ್ಲಿ ಸಂಸ್ಕೃತಿ ಇಲಾಖೆಗಿಂತ ಕನ್ನಡ ಅಭಿವೃದ್ಧಿ ಪ್ರಾಧಿಕಾರಕ್ಕೆ ಅಧಿಕಾರ ಇದ್ದರೂ ಅದು ವರದಿಮಾಡುವ ಮಟ್ಟಕ್ಕೆ ಮಾತ್ರ ಇದೆ. ಸಕ್ರಿಯ ಅಧ್ಯಕ್ಷರೊಬ್ಬರು ಬಂದಾಗ ಇದು ಚೆನ್ನಾಗಿ ಕೆಲಸ ಮಾಡಿದರೂ ಅನಂತರ ನಿಷ್ಕ್ರಿಯ ಅಧ್ಯಕ್ಷರು ಬಂದಾಗ ಪ್ರಾಧಿಕಾರ ಮಲಗಿಬಿಡುತ್ತದೆ. ಶಿಸ್ತುಕ್ರಮ ಕೈಗೊಳ್ಳಲು ಒಬ್ಬ ಕನ್ನಡ ವಿರೋಧಿ ಬಗ್ಗೆ ವರದಿ ಮಾಡಿದರೆ ಅದು ಆಯಾ ಇಲಾಖೆಯ ಮುಖ್ಯಸ್ಥರಿಗೆ ಸಂಬಂಧಪಟ್ಟಿರುವುದರಿಂದ ಅವರು ರಾಜಕೀಯ ಒತ್ತಡಕ್ಕೆ ಮಣಿಯುವ ಸಾಧ್ಯತೆ ಇರುತ್ತದೆ. ಮತ್ತೆ ಕಾನೂನು ಪ್ರಕಾರ ವಿಚಾರಣೆ, ತನಿಖೆ ಸಮಿತಿ ಎಂದೆಲ್ಲಾ ಆಗಿ ಸಾಕಷ್ಟು ಸಮಯ ಹಿಡಿಯುತ್ತದೆ. ಸರಕಾರಿ ಕಚೇರಿಗಳಲ್ಲಿ ಈ ಬಗೆಯ ಒಂದು ನಿಯಂತ್ರಣವಿದ್ದರೂ ಸಾರ್ವಜನಿಕ ಕ್ಷೇತ್ರದಲ್ಲಿ ಬೇರೆ ಭಾಷಿಕರನ್ನು ನಿಯಂತ್ರಿಸುವ ಸಂದರ್ಭಗಳು ಬರುವುದೇ ಇಲ್ಲ.

ಬೆವರು ಬಸಿದು ಕೆಲಸ ಮಾಡುವಂಥ ಕ್ಷೇತ್ರಗಳಲ್ಲಂತೂ ಅನ್ಯಭಾಷೆಗಳ ಕೆಲಸಗಾರರೇ ತುಂಬಿದ್ದಾರೆ. ಉದಾಹರಣೆಗೆ ನಿರ್ಮಾಣ ಕ್ಷೇತ್ರವನ್ನು ಗಮನಿಸಿದರೆ ಅಲ್ಲಿ ಕೆಳಹಂತದ ಕೂಲಿಗಳೆಲ್ಲ ನೂರಕ್ಕೆ ತೊಂಬತ್ತೈದರಷ್ಟು ತಮಿಳರೇ ಆಗಿರುತ್ತಾರೆ. ಇವರಿಗೆ ಸ್ವಲ್ಪ ಸ್ವಲ್ಪ ಕನ್ನಡ ಭಾಷೆ ಬಂದರೂ ಅವರು ಅದನ್ನು ಬಳಸುತ್ತಾ ಅಭಿವೃದ್ಧಿಪಡಿಸಲು ಹೋಗುವುದೇ ಇಲ್ಲ. ಇವರೆಲ್ಲರನ್ನು ಕೆಲಸಕ್ಕೆ ಕರೆತಂದು ನಿಯಂತ್ರಿಸುವ ಮಧ್ಯವರ್ತಿಯೊಬ್ಬ ಅಚ್ಚ ಕನ್ನಡಿಗನೇ ಆಗಿದ್ದರೂ ಅವರ ಜೊತೆ ವ್ಯವಹರಿಸುವಾಗ ಆತ ತಮಿಳನ್ನೇ ಬಳಸುತ್ತಾನೆ. ಹಾಗೆ ರೈಲ್ವೆ ನಿರ್ಮಾಣ, ಮನೆಗಳ ನಿರ್ಮಾಣ, ಡ್ಯಾಂಗಳ ನಿರ್ಮಾಣ ಮುಂತಾದ ಯಾವ ಕ್ಷೇತ್ರಕ್ಕೇ ಹೋಗಲಿ ತಮಿಳರ ಪ್ರಾಬಲ್ಯ ಎದ್ದುಕಾಣುತ್ತದೆ. ತರಕಾರಿ ಮಾರುಕಟ್ಟೆ ಹಾಗೂ ಇನ್ನಿತರ ವ್ಯವಹಾರಕ್ಷೇತ್ರಗಳಲ್ಲೂ ತಮಿಳರೂ ಸೇರಿದಂತೆ ಇನ್ನಿತರ ಭಾಷಿಕರೇ ತುಂಬಿರುತ್ತಾರೆ. ಮೂಲಭೂತ ಅಗತ್ಯವಸ್ತುಗಳ ವಿತರಣಾ ಜಾಗದಲ್ಲಿ ಅನ್ಯ ಭಾಷಿಕರೇ ತುಂಬಿರುವುದರಿಂದ ಕನ್ನಡಿಗರು ಕೊಳ್ಳುವ ಗಿರಾಕಿಗಳು ಮಾತ್ರವಾಗಿ ಅವರ ಭಾಷೆಯನ್ನು ಇವರು ಕಲಿಯುತ್ತಾರೆಯೇ ವಿನಾ ಅನ್ಯಭಾಷಿಕರು ಕನ್ನಡ ಕಲಿಯುವುದಿಲ್ಲ. ಅವರು ಕನ್ನಡ ಕಲಿಯಬಾರದೆಂದೇನೂ ಹಠ ತೊಟ್ಟಿಲ್ಲ. ಆದರೆ ಅವರಿಗೆ ಕಲಿಯಲೇಬೇಕಾದ ಅಗತ್ಯ ಬೀಳುವುದಿಲ್ಲ. ಅಗತ್ಯ ಬಂದಾಗ ಎಲ್ಲರೂ ಎಲ್ಲಾ ಭಾಷೆಗಳನ್ನೂ ಎಲ್ಲೇ ಇದ್ದರೂ ಕಲಿಯುತ್ತಾರೆ.

ಭಾಷಾ ಕಲಿಕೆಗೆ ಸಂಬಂಧಿಸಿದಂತೆ 'ಅಗತ್ಯ ಬಿದ್ದಾಗ' ಎಂಬುದು ಬಹಳ ಮುಖ್ಯವಾಗುತ್ತದೆ. ಪರನಾಡಿನವನೊಬ್ಬ ಯಾರೇ ಆಗಲಿ ಇಂದು ತಮಿಳುನಾಡಿಗೆ ಆತ ಹೋದರೆ ವಾಪಸ್ಸು ಬರುವಾಗ ಶೇಕಡ ಹತ್ತರಷ್ಟಾದರೂ ತಮಿಳು ಕಲಿತೇ ಬರುತ್ತಾನೆ. ತಮಿಳು ಕಲಿಯದಿದ್ದರೆ ಆತನ ಕೆಲಸ ಕಾರ್ಯಗಳು ಆಗುವುದೇ ಇಲ್ಲ. ಕನ್ನಡಕ್ಕಾಗಿ ದುಡಿದು, ಕನ್ನಡಿಗರಿಗೆ ಒಳ್ಳೆಯ ಸಾಹಿತ್ಯ ನೀಡಿದ ಇಂಗ್ಲಿಷ್ ಪ್ರಾಧ್ಯಾಪಕ ಬಿ. ಎಂ. ಶ್ರೀಕಂಠಯ್ಯನವರಿಗೆ ಆದ ಒಂದು ಅನುಭವದಿಂದ ಅವರು ಕನ್ನಡಾಭಿಮಾನಿಗಳಾಗಿ ಬದಲಾದರು ಎಂದು ನಾವೆಲ್ಲ ವಿದ್ಯಾರ್ಥಿಗಳಾಗಿದ್ದಾಗ ಕೇಳಿದ್ದೆವು. ಬಿಎಂಶ್ರೀಯವರು ತಮಿಳುನಾಡಿನ ಅಂಚೆ ಕಚೇರಿಗೆ ಹೋಗಿ ಒಂದು ಪೋಸ್ಟ್ ಕಾರ್ಡ್ ಕೊಡಿ ಎಂದು ಇಂಗ್ಲಿಷಿನಲ್ಲಿ ಕೇಳಿದರೆ ಕೊಡಬೇಕಾದ ಅಂಚೆ ಇಲಾಖೆಯವರು ಕೇಳಿಸದವನಂತೆ ಸುಮ್ಮನೇ ಇದ್ದನಂತೆ. ಬಿಎಂಶ್ರೀ ಮತ್ತೆ ಮತ್ತೆ ಕೇಳಿದರೂ ಆತ ಸುಮ್ಮನೇ ಇದ್ದನಂತೆ. ಪಕ್ಕದವರೊಬ್ಬರು ತಮಿಳಿನಲ್ಲಿ ಕೇಳಿ ಕೊಡುತ್ತಾನೆ ಎಂದರಂತೆ. ಇವರು ತಮಗೆ ಗೊತ್ತಿದ್ದ ಹರಕುಮುರುಕು ತಮಿಳಿನಲ್ಲಿ ಕೇಳಿದಾಗ ತಕ್ಷಣ ಕೊಟ್ಟನಂತೆ. ಈ ಘಟನೆ ಅವರ ಮೇಲೆ ಪರಿಣಾಮ ಬೀರಿ ಅವರೂ ತಾಯಿ ಭಾಷೆಯ ಬಗ್ಗೆ ಕೆಲಸ ಮಾಡಬೇಕು ಎಂಬ ನಿರ್ಧಾರಕ್ಕೆ ಬಂದರಂತೆ. ಈ ನಿರ್ಧಾರ ಆಧುನಿಕ ಕನ್ನಡ ಸಾಹಿತ್ಯಕ್ಕೆ ನಾಂದಿಯಾಗಿರುವುದು ಎಲ್ಲರಿಗೂ ತಿಳಿದ ವಿಚಾರವೇ ಆಗಿದೆ.

ನಿರ್ಮಾಣ ಕ್ಷೇತ್ರವನ್ನು ಗಮನಿಸಿದರೆ ಅಲ್ಲಿ ಕೆಳಹಂತದ ಕೂಲಿಗಳೆಲ್ಲ ನೂರಕ್ಕೆ ತೊಂಬತ್ತೈದರಷ್ಟು ತಮಿಳರೇ ಆಗಿರುತ್ತಾರೆ. ಇವರಿಗೆ ಸ್ವಲ್ಪ ಸ್ವಲ್ಪ ಕನ್ನಡ ಭಾಷೆ ಬಂದರೂ ಅವರು ಅದನ್ನು ಬಳಸುತ್ತಾ ಅಭಿವೃದ್ಧಿಪಡಿಸಲು ಹೋಗುವುದೇ ಇಲ್ಲ. ಇವರೆಲ್ಲರನ್ನು ಕೆಲಸಕ್ಕೆ ಕರೆತಂದು ನಿಯಂತ್ರಿಸುವ ಮಧ್ಯವರ್ತಿಯೊಬ್ಬ ಅಚ್ಚ ಕನ್ನಡಿಗನೇ ಆಗಿದ್ದರೂ ಅವರ ಜೊತೆ ವ್ಯವಹರಿಸುವಾಗ ಆತ ತಮಿಳನ್ನೇ ಬಳಸುತ್ತಾನೆ. ಹಾಗೆ ರೈಲ್ವೆ ನಿರ್ಮಾಣ, ಮನೆಗಳ ನಿರ್ಮಾಣ, ಡ್ಯಾಂಗಳ ನಿರ್ಮಾಣ ಮುಂತಾದ ಯಾವ ಕ್ಷೇತ್ರಕ್ಕೇ ಹೋಗಲಿ ತಮಿಳರ ಪ್ರಾಬಲ್ಯ ಎದ್ದುಕಾಣುತ್ತದೆ. ತರಕಾರಿ ಮಾರುಕಟ್ಟೆ ಹಾಗೂ ಇನ್ನಿತರ ವ್ಯವಹಾರಕ್ಷೇತ್ರಗಳಲ್ಲೂ ತಮಿಳರೂ ಸೇರಿದಂತೆ ಇನ್ನಿತರ ಭಾಷಿಕರೇ ತುಂಬಿರುತ್ತಾರೆ. ಮೂಲಭೂತ ಅಗತ್ಯವಸ್ತುಗಳ ವಿತರಣಾ ಜಾಗದಲ್ಲಿ ಅನ್ಯ ಭಾಷಿಕರೇ ತುಂಬಿರುವುದರಿಂದ ಕನ್ನಡಿಗರು ಕೊಳ್ಳುವ ಗಿರಾಕಿಗಳು ಮಾತ್ರವಾಗಿ ಅವರ ಭಾಷೆಯನ್ನು ಇವರು ಕಲಿಯುತ್ತಾರೆಯೇ ವಿನಾ ಅನ್ಯಭಾಷಿಕರು ಕನ್ನಡ ಕಲಿಯುವುದಿಲ್ಲ. ಅವರು ಕನ್ನಡ ಕಲಿಯಬಾರದೆಂದೇನೂ ಹಠ ತೊಟ್ಟಿಲ್ಲ. ಆದರೆ ಅವರಿಗೆ ಕಲಿಯಲೇಬೇಕಾದ ಅಗತ್ಯ ಬೀಳುವುದಿಲ್ಲ. ಅಗತ್ಯ ಬಂದಾಗ ಎಲ್ಲರೂ ಎಲ್ಲಾ ಭಾಷೆಗಳನ್ನೂ ಎಲ್ಲೇ ಇದ್ದರೂ ಕಲಿಯುತ್ತಾರೆ.

ಈ ನಿರ್ಧಾರದ ಪರಿಣಾಮ ಸತ್ಯವೋ ಅಸತ್ಯವೋ ಎಂಬುದು ಮುಖ್ಯವಲ್ಲ; ಭಾಷೆಯನ್ನು ಬೆಳೆಸಬೇಕಾದ ವರಿಗಿರಬೇಕಾದ ಬದ್ಧತೆಯನ್ನು ತೋರಿಸುತ್ತದೆ. ಕೇಂದ್ರ ಸರಕಾರದ ಕಚೇರಿಯಾದ ಅಂಚೆ ಕಚೇರಿಯಲ್ಲಿ ತಮಿಳೊಂದೇ ಮುಖ್ಯವಲ್ಲ. ಎಲ್ಲಾ ಭಾಷೆಗಳಿಗೂ ಆದ್ಯತೆ ಇರಬೇಕು. ಅಂಥ ಕಡೆಯೇ ಮೊಂಡು ಹಠ ಮಾಡಿ ತಮಿಳನ್ನು ಕಲಿಯಲೇಬೇಕಾದ ಒತ್ತಡ ಹೇರುತ್ತಾರೆ ಎಂದಮೇಲೆ, ಮಾರುಕಟ್ಟೆಯಲ್ಲಿ ವಾಣಿಜ್ಯಮಳಿಗೆಗಳಲ್ಲಿ, ಬಸ್‌ಸ್ಟಾಂಡ್‌ಗಳಲ್ಲಿ, ಇನ್ನಿತರ ಸಾರ್ವಜನಿಕ ಸಂಪರ್ಕ ಕ್ಷೇತ್ರಗಳಲ್ಲಿ ತಮಿಳಿನ ಒತ್ತಡವನ್ನು ಇನ್ನೆಷ್ಟು ಹೇರಬಹುದು? ಹೀಗಾಗಿಯೇ ತಮಿಳುನಾಡಿಗೆ ಹೋಗಿ ಒಂದು ವಾರ ಕಾಲ ಇದ್ದು ಬಂದವರಿಗೆ ಒಂದಷ್ಟಾದರೂ ತಮಿಳು ಬರುತ್ತದೆ ಎಂದು ಹೇಳಿದ್ದು.



ಇಂಥ ವಾತಾವರಣ ನಿರ್ಮಾಣಕ್ಕೆ ಸಂಪೂರ್ಣ ವಿರುದ್ಧ ದಿಕ್ಕಿನಲ್ಲಿ ನಾವು ಕನ್ನಡಿಗರಿದ್ದೇವೆ. ಯಾರಾದರೂ ಏನಾದರೂ ಮಾಹಿತಿ ಕೇಳಿದರೆ ನಾವು ಅವರ ಭಾಷೆಯಲ್ಲಿ ಮಾತನಾಡಲು ಪ್ರಯತ್ನಿಸುತ್ತೇವೆಯೇ ಹೊರತು ಕನ್ನಡದಲ್ಲೇ ಉತ್ತರಿಸಲು ಹೋಗುವುದಿಲ್ಲ. ಆಗ ಅವರಿಗೆ ಕನ್ನಡ ಕಲಿಯಬೇಕಾದ ಪರಿಸ್ಥಿತಿ ಅಥವಾ ಒತ್ತಡ ಉಂಟಾಗುವುದಿಲ್ಲ. ಸಾಮಾನ್ಯ ಸಂದರ್ಭಗಳಲ್ಲಿ ಜನಸಾಮಾನ್ಯರ ಮಾತಂತಿರಲಿ, ರಾಜ್ಯದ ಮುಖ್ಯಮಂತ್ರಿಯಂಥ ಜವಾಬ್ದಾರಿ ಹೊಣೆ ಹೊತ್ತವರು ವರ್ತಿಸುವ ರೀತಿಯೂ ಹೀಗೇ ಇರುತ್ತದೆ: ಡಾ|| ರಾಜಕುಮಾರ್ ಅವರನ್ನು ಕಾಡುಗಳ್ಳ ವೀರಪ್ಪನ್ ಅಪಹರಿಸಿದ ಸಂದರ್ಭದ ಘಟನೆಯೊಂದು ನಮ್ಮ ಮುಖ್ಯಮಂತ್ರಿಗಳ ಭಾಷಾನಿರ್ಲಕ್ಷ್ಯಕ್ಕೆ ಉತ್ತಮ ಉದಾಹರಣೆ.

ಆಗ ಕರ್ನಾಟಕದಲ್ಲಿ ಸನ್ಮಾನ್ಯ ಎಸ್. ಎಂ. ಕೃಷ್ಣ ಮುಖ್ಯಮಂತ್ರಿ. ತಮಿಳುನಾಡಿನಲ್ಲಿ ಸನ್ಮಾನ್ಯ ಎಂ. ಕರುಣಾನಿಧಿ ಮುಖ್ಯಮಂತ್ರಿ. ಎಸ್. ಎಂ. ಕೃಷ್ಣರು ಅಪಾರ ಬುದ್ಧಿವಂತಿಕೆಯ ವಿನಯಶೀಲ ವ್ಯಕ್ತಿ. ಕನ್ನಡಕ್ಕಾಗಿ ಅಪಾರ ಕೆಲಸ ಮಾಡಿದ್ದಾರೆ. ಇದೆಲ್ಲವೂ ಸರಿ; ಆದರೆ ಕರ್ನಾಟಕದೊಳಗಡೆ ಕನ್ನಡದಲ್ಲಿ ಮಾತನಾಡುವುದಿಲ್ಲ. ರಾಜಕುಮಾರ್ ಅಪಹರಣದ ಸಂದರ್ಭದಲ್ಲಿ ಇವರು ತಮಿಳುನಾಡಿಗೆ ಹೋಗಿ ಅಲ್ಲಿ ಇಂಗ್ಲಿಷ್‌ನಲ್ಲಿ ಮಾತನಾಡುವುದು ಸರಿ. ಆದರೆ ಎಂ. ಕರುಣಾನಿಧಿ ಇಲ್ಲಿಗೆ ಬಂದಾಗ ಅವರಿಗೆ ಅರ್ಥವಾಗಲಿ ಎಂದು ಇಂಗ್ಲಿಷ್‌ನಲ್ಲಿ ಮಾತನಾಡುವುದು ಎಷ್ಟು ಸರಿ? ತಮಿಳುನಾಡಿನ ಮುಖ್ಯಮಂತ್ರಿ ಎಲ್ಲೇ ಇರಲಿ ತಮಿಳಿನಲ್ಲೇ ಮಾತನಾಡುವುದಾದರೆ ಕನ್ನಡ ಮಂತ್ರಿಗಳು ಏಕೆ ಕನ್ನಡದಲ್ಲೇ ಮಾತನಾಡಬಾರದು? ಇದು ನಮ್ಮ ರಾಜಕಾರಣಿಗಳ ಸಂವೇದನೆಗಳಿಗೆ ಸರಿಯಾಗಿ ಅರ್ಥವಾದ ದಿನ ಕನ್ನಡಕ್ಕೆ ಒಂದಿಷ್ಟು ಸ್ಥಾನ ಸಿಗುತ್ತದೆ. ಏನು ಮಾಡುವುದು, ನಮ್ಮ ರಾಜಕಾರಣಿಗಳಿಗೆ ಸಂವೇದನೆಗಳೇ ಇಲ್ಲವಲ್ಲ.

ತಮಿಳುನಾಡಿನಲ್ಲಿ ಒಬ್ಬ ಗೌರವಾನ್ವಿತ ಕೂಲಿಕಾರನಿಂದ ಹಿಡಿದು ಐಎಎಸ್ ಅಧಿಕಾರಿಗಳವರೆಗೂ, ಗ್ರಾಮಪಂಚಾಯ್ತಿ ಸದಸ್ಯನಿಂದ ಹಿಡಿದು ಕೇಂದ್ರ ಸರಕಾರದ ಮಂತ್ರಿಯವರೆಗೂ ತಮಿಳನ್ನೇ ಉಸಿರಾಟದಷ್ಟು ಸಹಜವಾಗಿ ಬಳಸುತ್ತಾರೆ. ಯಾಕೆಂದರೆ ಜನಸಾಮಾನ್ಯರು ತಮಿಳು ಎಂದರೆ ಭಾವಾವೇಶಕ್ಕೆ ಒಳಗಾಗುತ್ತಾರೆ. ನೆಲ, ಜಲ, ಭಾಷೆ ಬಗ್ಗೆ ಜನಸಾಮಾನ್ಯರು ತಮಿಳಿನ ಮೂಲಕ ಸ್ಪಂದಿಸುವುದರಿಂದ ಎಲ್ಲಾ ರಾಜಕೀಯ ಪಕ್ಷಗಳೂ, ವ್ಯಕ್ತಿಗಳೂ ತಮಿಳಿನ ಬಗ್ಗೆ ಸ್ಪಂದಿಸಲೇಬೇಕಾಗುತ್ತದೆ. ಅಲ್ಲಿ ಜಾತಿ, ಧರ್ಮ, ಪಕ್ಷಗಳು ನಗಣ್ಯವಾಗುತ್ತವೆ. ತಮಿಳಿನ ಬಗ್ಗೆ ಆಸಕ್ತಿಯನ್ನು, ಬದ್ಧತೆಯನ್ನು ತೋರಿಸಿದ ಕಾರಣಕ್ಕಾಗಿಯೇ ಮಲಯಾಳಂ ಭಾಷೆಯ ಎಂ. ಜಿ. ರಾಮಚಂದ್ರನ್, ಕನ್ನಡ ಭಾಷೆಯ ಜಯಲಲಿತ ಮುಖ್ಯಮಂತ್ರಿಗಳಾಗಲು ಅವಕಾಶಕೊಟ್ಟರು. ಜನಸಾಮಾನ್ಯರಲ್ಲಿ ಇಷ್ಟರಮಟ್ಟಿಗೆ ತಮಿಳು ಭಾಷಾಪ್ರಜ್ಞೆ ತುಂಬಿರಲು ಏನು ಕಾರಣ ಎಂಬುದನ್ನು ನಾವು ಅರ್ಥಮಾಡಿಕೊಂಡರೆ ನಮ್ಮಲ್ಲಿ ಆಗ ಭಾಷಾಭಿಮಾನ ಬೆಳೆಯಬಹುದೇನೋ!

ಇಡೀ ತಮಿಳುನಾಡಿನ ತುಂಬ ಇಷ್ಟೊಂದು ಭಾಷಾ ಪ್ರಜ್ಞೆ ತುಂಬಲು ಮುಖ್ಯಕಾರಣ ದ್ರಾವಿಡ ಚಳುವಳಿ. ಇದರಲ್ಲಿ ಇಂದು ಹಲವು ಕವಲುಗಳು ಉಂಟಾಗಿದ್ದರೂ ಆಗ ರೂಢಿಸಿಕೊಂಡ ಭಾಷಾ ಪ್ರೇಮಕ್ಕೇನೂ ಕೊರತೆಯಿಲ್ಲ. ಇದು ಸ್ವಾತಂತ್ರ್ಯಪೂರ್ವ ಕಾಲದಲ್ಲೇ ನಡೆದುದರಿಂದ ಆಗಿನ ಬ್ರಿಟಿಷ್ ಅಧಿಕಾರಿಗಳೂ ಇದಕ್ಕೆ ಸ್ಪಂದಿಸಿ ತಮಿಳುನಾಡಿಗೆ ಹೆಚ್ಚಿನ ಅನುಕೂಲ ಮಾಡಿದರು. ಇದರಿಂದ ಅವರ ಭಾಷಾಪ್ರಜ್ಞೆ ಇನ್ನೂ ಅಧಿಕವಾಗಿ ಪ್ರತಿಯೊಂದು ವಿಷಯಕ್ಕೂ ತಮಿಳನ್ನು ಸಾಧನವಾಗಿ ಮಾಡಿಕೊಳ್ಳುತ್ತಾ ಬಂದರು. ಸ್ವಾತಂತ್ರ್ಯಾನಂತರ ಕಾಂಗ್ರೆಸ್ ಪಕ್ಷಕ್ಕೆ ಬದಲಾಗಿ ದ್ರಾವಿಡ ಪ್ರಾದೇಶಿಕ ಪಕ್ಷವನ್ನು ಕಟ್ಟಿದರು. ರಾಷ್ಟ್ರೀಯ ಪಕ್ಷಗಳಿಂದ ಪ್ರಾದೇಶಿಕ ಅಭಿವೃದ್ಧಿ ಸಾಧ್ಯವಿಲ್ಲವೆಂಬ ಸತ್ಯವನ್ನು ಅಲ್ಲಿನ ಮುಂಚೂಣಿ ನಾಯಕರು ಅಂದೇ ಕಂಡುಕೊಂಡಿದ್ದರು. ಹೀಗಾಗಿ ರಾಷ್ಟ್ರೀಯ ಹಿತಚಿಂತನೆಯನ್ನು ಎರಡನೆಯದಾಗಿ ಪರಿಗಣಿಸಿ ಪ್ರಾದೇಶಿಕ ಹಿಂತಚಿಂತನೆಗೆ ಪ್ರಥಮ ಆದ್ಯತೆ ನೀಡಿದರು. ಇಂದು ಯಾವುದೇ ರಾಷ್ಟ್ರೀಯ ರಾಜಕೀಯ ಪಕ್ಷವಾದರೂ ತಮಿಳುನಾಡಿನಲ್ಲಿ ಪ್ರಾದೇಶಿಕ ಪಕ್ಷದ ಜೊತೆ ಹೊಂದಾಣಿಕೆ ಮಾಡಿಕೊಳ್ಳದಿದ್ದರೆ ಅವುಗಳಿಗೆ ಭವಿಷ್ಯವೇ ಇಲ್ಲವೆಂಬ ಸ್ಥಿತಿ ನಿರ್ಮಾಣವಾಗಿದೆ. ಅಂದರೆ ತಮಿಳು ಜನಸಾಮಾನ್ಯರಲ್ಲಿ ತಮಿಳು ಭಾಷೆಯ ಮೂಲಕ ನೆಲ, ಜಲ ಪ್ರಜ್ಞೆ ರಾಜಕೀಯ ಪ್ರಜ್ಞೆಯನ್ನು ದ್ರಾವಿಡ ಚಳುವಳಿಯ ನಾಯಕರು ಏಕಕಾಲಕ್ಕೆ ಮೂಡಿಸಿದರು. ಅವರು ಎಷ್ಟೇ ಇಂಗ್ಲಿಷಿನಲ್ಲಿ ಪ್ರಭುತ್ವ ಸಾಧಿಸಿದರೂ ತಮಿಳಿನಲ್ಲೇ ಮಾತನಾಡುವುದರ ಮೂಲಕ, ವ್ಯವಹರಿಸುವುದರ ಮೂಲಕ ತಮಿಳನ್ನು ರಾಜಕೀಯ ಶಕ್ತಿಯನ್ನಾಗಿಸಿದರು. ಇಂಥ ರಾಜಕೀಯ ಮತ್ತು ಭಾಷಿಕ ಆಂದೋಲನ ಕರ್ನಾಟಕದಲ್ಲಿ ನಡೆಯಲಿಲ್ಲ.

ಆಂಧ್ರದಲ್ಲೂ ರಾಷ್ಟ್ರೀಯ ಪಕ್ಷಗಳ ರಾಜಕೀಯ ಹುಚ್ಚಾಟಗಳಿಂದ ಭಾಷೆ ಮತ್ತು ಅಭಿವೃದ್ಧಿಯ ದೃಷ್ಟಿಯಿಂದ ಹಿನ್ನಡೆಯಾಗಿತ್ತು. ತಮಿಳುನಾಡಿನ ಮಾದರಿಯನ್ನು ಗಮನಿಸಿದ ಸಿನಿಮಾನಟ ಎನ್.ಟಿ. ರಾಮರಾವ್ ತೆಲುಗರ ಸ್ವಾಭಿಮಾನವನ್ನು ಬಡಿದೆಬ್ಬಿಸಿ ತೆಲುಗುದೇಶಂ ಪಕ್ಷವನ್ನು ಕಟ್ಟಿ ತೆಲುಗನ್ನು ರಾಜಕೀಯ ಶಕ್ತಿಯನ್ನಾಗಿಸಿದ ಮೇಲೆ ಆ ರಾಜ್ಯ ಕರ್ನಾಟಕಕ್ಕಿಂತ ಈಗ ಮುಂದಿದೆ. ತಮಿಳುನಾಡು ಕರ್ನಾಟಕದ ಮೇಲೆ ಜಗಳ ಮಾಡುವಂತೆ ಆಂಧ್ರದ ಮೇಲೆ ಮಾಡುವುದಿಲ್ಲ. ಮಹಾರಾಷ್ಟ್ರದಲ್ಲೂ ಶಿವಸೇನೆ ಬಂದ ಮೇಲೆ ಮರಾಠಿಯನ್ನು ರಾಜಕೀಯ ಶಕ್ತಿಯನ್ನಾಗಿಸಿದ್ದಾರೆ. ಕೇರಳದಲ್ಲಿ ಬುದ್ಧಿವಂತರೂ ಅಕ್ಷರಸ್ಥರೂ ಆದವರು ರಾಜಕೀಯ ಮುಂಚೂಣಿಯಲ್ಲಿದ್ದುದರಿಂದ ಆ ರಾಜ್ಯ ಸದ್ದಿಲ್ಲದೆ ತನ್ನ ಅಗತ್ಯಗಳನ್ನು ಪೂರೈಸಿಕೊಳ್ಳುತ್ತಿದೆ.

ಸುತ್ತಮುತ್ತಿನ ರಾಜ್ಯಗಳೆಲ್ಲ ತನ್ನ ಪ್ರಾದೇಶಿಕ ಭಾಷೆಯ ಮೂಲಕ ಪ್ರಾದೇಶಿಕ ಪಕ್ಷಗಳನ್ನು ಕಟ್ಟಿಕೊಂಡು ಮುನ್ನಡೆಯುತ್ತಿರುವಾಗ ಕರ್ನಾಟಕ ಮಾತ್ರ ಜಾತಿಯನ್ನು ರಾಜಕೀಯ ಶಕ್ತಿಯನ್ನಾಗಿಸಿಕೊಂಡಿದೆ. ತತ್ವ, ಸಿದ್ಧಾಂತ, ನೀತಿ ಮುಂತಾದವೆಲ್ಲ ನಮ್ಮ ಅನೇಕ ರಾಷ್ಟ್ರೀಯ ಮತ್ತು ಪ್ರಾದೇಶಿಕ ಪಕ್ಷಗಳಿಗಿಲ್ಲದಿದ್ದರೂ ಕನಿಷ್ಠ ಭಾಷಾಪ್ರೇಮದ ಮೂಲಕ ಅಭಿವೃದ್ಧಿಯ ಕಡೆ ಚಲಿಸುತ್ತಿವೆ. ಆ ಮೂಲಕ ಆಯಾ ಪ್ರಾದೇಶಿಕ ಭಾಷೆಗೆ ಉನ್ನತ ಗೌರವ ಸಲ್ಲಿಸುತ್ತಿವೆ. ಕರ್ನಾಟಕ ಮಾತ್ರ ಭಾಷೆಯನ್ನು ಕಡೆಗಣಿಸಿದೆ.

ಕನ್ನಡ, ತೆಲುಗು, ತಮಿಳು, ಮಲಯಾಳ ಭಾಷೆಗಳೆಲ್ಲ ದ್ರಾವಿಡ ಮೂಲದಿಂದ ವಿಕಾಸವಾಗಿದ್ದರೂ ದ್ರಾವಿಡರೆಂದು ಕರೆದುಕೊಳ್ಳಲು ಕರ್ನಾಟಕ, ಆಂಧ್ರ ಸಿದ್ಧವಾಗಿಲ್ಲ. ಜನಗಳಲ್ಲಿ ಬೇರುಮಟ್ಟದಲ್ಲಿ ಈ ಪ್ರಜ್ಞೆಯನ್ನು ಅಂದಿನ ರಾಜಕೀಯ ನಾಯಕರು ಮಾಡಬೇಕಿತ್ತು. ಬಸವಣ್ಣನವರ ಕಾಲದಲ್ಲಿ ಕನ್ನಡ ಒಂದು ರಾಜಕೀಯ ಶಕ್ತಿಯಾಗಿತ್ತು. ಅದರ ನಂತರ ಡಾ|| ರಾಜಕುಮಾರ್ ಅವರಿಗೆ ಕನ್ನಡವನ್ನು ರಾಜಕೀಯ ಶಕ್ತಿಯಾಗಿಸುವ ಸಾಮರ್ಥ್ಯವಿತ್ತು. ಕನ್ನಡಿಗರ ದೌರ್ಭಾಗ್ಯ: ಡಾ|| ರಾಜಕುಮಾರ್ ಆ ಸಾಹಸಕ್ಕಿಳಿಯಲಿಲ್ಲ; ಕಲಾವಿದರಾಗೇ ಉಳಿದುಬಿಟ್ಟರು.

**ಡಾ|| ರಂಗಾರೆಡ್ಡಿ ಕೋಡಿರಾಂಪುರ**
ನಂ. ೬೪೩, ಎರಡನೇ ಮಹಡಿ, ೨ನೇ ಮುಖ್ಯರಸ್ತೆ, ಹೆಬ್ಬಾಳ, ಬೆಂಗಳೂರು - ೨೪




## ನವಕರ್ನಾಟಕ ಪ್ರಕಾಶನದ ಕೆಲವು ಪ್ರಶಸ್ತಿ ಪುರಸ್ಕೃತ ಕೃತಿಗಳು

ಕಂದಾ ಒದುವೆಯಾ. ಭಾಗ-1 (7ನೇ ಮುದ್ರಣ) *ಜಿ. ಕೆ. ತಿರುಮಲಮ್ಮ* 25.00  
**(ಕನ್ನಡ ಪುಸ್ತಕ ಪ್ರಾಧಿಕಾರದ 'ಪುಸ್ತಕ ಸೊಗಸು' ಪ್ರಶಸ್ತಿ 1995)**

ಶಬ್ದಲೋಕ (8ನೇ ಮುದ್ರಣ) **(ಎನ್.ಸಿ.ಇ.ಆರ್.ಟಿ. ಪ್ರಶಸ್ತಿ 1996)** *ಗಾಯತ್ರಿ ಮೂರ್ತಿ* 28.00

ಕುಂಭಕರ್ಣನ ನಿದ್ದೆ **(ಕನ್ನಡ ಪುಸ್ತಕ ಪ್ರಾಧಿಕಾರದ 'ಪುಸ್ತಕ ಸೊಗಸು' ಪ್ರಶಸ್ತಿ 1996-97)** *ಎನ್. ಶ್ರೀನಿವಾಸ ಉಡುಪ* 22.00  
**(ಕರ್ನಾಟಕ ಸಾಹಿತ್ಯ ಅಕಾಡೆಮಿಯ 'ಶಿಶುಸಾಹಿತ್ಯ ಬಹುಮಾನ' 1996)**

ಬೆಳ್ಳಕ್ಕಿ ಮತ್ತು ಬುಲ್‌ಬುಲ್ (3ನೇ ಮುದ್ರಣ) *ಗಣೇಶ ಪಿ. ನಾಡೋರ* 30.00  
**(ಕರ್ನಾಟಕ ಸಾಹಿತ್ಯ ಅಕಾಡೆಮಿಯ 'ಮಕ್ಕಳ ಸಾಹಿತ್ಯ ಪ್ರಶಸ್ತಿ' 2003)**

ಚಿಟ್ಟೆ ಹಾಡು ಮತ್ತು ಇರುವೆ ಮದುವೆ *(ಸಂಗ್ರಹ - ರೂಪಾಂತರ : ಶಾಂತಾರಾಮ ಸೋಮಯಾಜಿ)* 40.00  
**(ಕರ್ನಾಟಕ ಬಾಲವಿಕಾಸ ಅಕಾಡೆಮಿಯ 'ಮಕ್ಕಳ ಚಂದಿರ' ಪ್ರಶಸ್ತಿ 2009-10)**

ಕಲಾವಿದ ಹೆಬ್ಬಾರರ ರೇಖಾಲಾವಣ್ಯ (2ನೇ ಮುದ್ರಣ) *ವ್ಯಾಸರಾಯ ಬಲ್ಲಾಳ* 90.00  
**(ಕನ್ನಡ ಪುಸ್ತಕ ಪ್ರಾಧಿಕಾರದ 'ಪುಸ್ತಕ ಸೊಗಸು' ಪ್ರಶಸ್ತಿ 1999)**

ನವಕರ್ನಾಟಕ ಜ್ಞಾನ-ವಿಜ್ಞಾನ ಕೋಶ *(ಪ್ರ.ಸಂ : ಎಂ. ಎ. ಸೇತುರಾವ್, ಕೆ. ಎಲ್. ಗೋಪಾಲಕೃಷ್ಣ ರಾವ್)* 1800.00  
**(ಕನ್ನಡ ಪುಸ್ತಕ ಪ್ರಾಧಿಕಾರದ 'ಪುಸ್ತಕ ಸೊಗಸು' ಪ್ರಶಸ್ತಿ 1998-99)**  
**(ಭಾರತೀಯ ಪ್ರಕಾಶಕರ ಒಕ್ಕೂಟದ 'ಅತ್ಯುತ್ತಮ ಮುದ್ರಣ ವಿನ್ಯಾಸ ಪ್ರಶಸ್ತಿ' 1998-99)**

ವಿಶ್ವವಿಖ್ಯಾತ ಸಂಶೋಧಕರು-ಸಾಧನೆಗಳು (10ನೇ ಮುದ್ರಣ) *ಸೂರ್ಯಕಾಂತ* 40.00  
**(ಭಾರತೀಯ ಪ್ರಕಾಶಕರ ಒಕ್ಕೂಟದ 'ಅತ್ಯುತ್ತಮ ಮುದ್ರಣ ವಿನ್ಯಾಸ ಪ್ರಶಸ್ತಿ' 1991-92)**

ನಮ್ಮ ಪುಟ್ಟ ಪ್ರಯೋಗಶಾಲೆ (3ನೇ ಮುದ್ರಣ) *ಎಲ್. ಎಸ್. ಶ್ಯಾಮಸುಂದರ ಶರ್ಮ* 40.00  
**(ಕನ್ನಡ ಪುಸ್ತಕ ಪ್ರಾಧಿಕಾರದ 'ಪುಸ್ತಕ ಸೊಗಸು' ಪ್ರಶಸ್ತಿ 2007)**

ವೈದ್ಯಲೋಕದ ಕೌತುಕಗಳು (4ನೇ ಮುದ್ರಣ)  
**(ಕರ್ನಾಟಕ ಸಾಹಿತ್ಯ ಅಕಾಡೆಮಿ ಪುರಸ್ಕಾರ 1993)** *ಡಾ|| ಎಚ್. ಡಿ. ಚಂದ್ರಪ್ಪ ಗೌಡ* 80.00

ಸ್ನೇಹಮಯಿ ವ್ಯಾಕ್ಸಿನುಗಳು *ಡಾ|| ಬಾಳ ಫೋಂಡ್ಕೆ (ಅನು : ಡಾ|| ಸಿ. ಆರ್. ಚಂದ್ರಶೇಖರ್)* 45.00  
**(ಕುವೆಂಪು ವೈದ್ಯಸಾಹಿತ್ಯ ಪ್ರಶಸ್ತಿ 2002)**

ಕಲ್ಪವೃಕ್ಷದ ಜಾಡು ಹಿಡಿದು **(ಕರ್ನಾಟಕ ಸಾಹಿತ್ಯ ಅಕಾಡೆಮಿ ಗೌರವ ಪ್ರಶಸ್ತಿ 2008)** *ಡಾ|| ಎಚ್. ಆರ್. ಕೃಷ್ಣಮೂರ್ತಿ* 95.00

ತೆಂಗು. ಸಸ್ಯ-ಸಂರಕ್ಷಣೆ (4ನೇ ಮುದ್ರಣ) **(ಕರ್ನಾಟಕ ರಾಜ್ಯ ವಿಜ್ಞಾನ ಪರಿಷತ್ತಿನ ಪ್ರಶಸ್ತಿ)** *ಜಿ. ಮಹಂತೇಶ್* 50.00

ಬಳ್ಳಿ ತರಕಾರಿಗಳು (7ನೇ ಮುದ್ರಣ) *ಡಾ|| ಪಿ. ನಾರಾಯಣಸ್ವಾಮಿ, ಡಾ|| ಎಲ್. ವಸಂತ* 30.00  
**(ಧಾರವಾಡ ಕೃಷಿ ವಿ.ವಿ. ಕನ್ನಡ ಸಂಘದ ಪಂಚವಾರ್ಷಿಕ 'ಕೃಷಿ ಸಾಹಿತ್ಯ ಶ್ರೀ' ಪ್ರಶಸ್ತಿ 1994-99)**

ಗಿಡಮೂಲಿಕೆಗಳಿಂದ ಸೌಂದರ್ಯ ಸಾಧನಗಳು (9ನೇ ಮುದ್ರಣ) *ಡಾ|| ಎಲ್. ವಸಂತ* 30.00  
**(ಭಾರತೀಯ ಪ್ರಕಾಶಕರ ಒಕ್ಕೂಟದ 'ಅತ್ಯುತ್ತಮ ಮುದ್ರಣ ವಿನ್ಯಾಸಕ್ಕಾಗಿ ಪ್ರಶಸ್ತಿ' 1994)**

ಹಲ್ಲಿನ ರಕ್ಷಣೆ (2ನೇ ಮುದ್ರಣ) **(ಕುವೆಂಪು ವೈದ್ಯಸಾಹಿತ್ಯ ಪ್ರಶಸ್ತಿ 2006)** *ಡಾ|| ಗುರುರಾಜ ಅರಕೇರಿ* 140.00  
**(ಡಾ|| ಪಿ. ಎಸ್. ಶಂಕರ್ ಪ್ರತಿಷ್ಠಾನದ 'ಶ್ರೇಷ್ಠ ವೈದ್ಯಸಾಹಿತ್ಯ ಪ್ರಶಸ್ತಿ' 2006)**

ನಮ್ಮ ಶರೀರ. 200 ಪ್ರಶ್ನೆಗಳು (5ನೇ ಮು.) **(ಕುವೆಂಪು ವೈದ್ಯಸಾಹಿತ್ಯ ಪ್ರಶಸ್ತಿ 2002)** *ಡಾ|| ಸಿ. ಆರ್. ಚಂದ್ರಶೇಖರ್* 45.00

ಶ್ರೀಸಾಮಾನ್ಯ ಮತ್ತು ವೈದ್ಯ (2ನೇ ಮುದ್ರಣ) *ಡಾ|| ಸ. ಜ. ನಾಗಲೋಟಿಮಠ* 28.00  
**(ಕರ್ನಾಟಕ ಸಾಹಿತ್ಯ ಅಕಾಡೆಮಿ ಪ್ರಶಸ್ತಿ 1998; ಕುವೆಂಪು ವೈದ್ಯಸಾಹಿತ್ಯ ಪ್ರಶಸ್ತಿ 1998)**

ಕಿವುಡು ಮಗು ಮಾತಾಡಬಲ್ಲದು **(ಕುವೆಂಪು ವೈದ್ಯಸಾಹಿತ್ಯ ಪ್ರಶಸ್ತಿ 2008)** *ಡಾ|| ಜಿ. ಪುರುಷೋತ್ತಮ* 35.00

ಆಪ್ತ ಸಲಹೆ ಸಮಾಧಾನ (6ನೇ ಮುದ್ರಣ) *ಡಾ|| ಸಿ. ಆರ್. ಚಂದ್ರಶೇಖರ್* 50.00  
**(ಭಾರತೀಯ ಪ್ರಕಾಶಕರ ಒಕ್ಕೂಟದ 'ಅತ್ಯುತ್ತಮ ಮುದ್ರಣ ವಿನ್ಯಾಸ ಪ್ರಶಸ್ತಿ' 1996)**

ಮಾನಸಿಕ ಸಮಸ್ಯೆಗಳಿಗೆ 'ಮನಸ್ಸು' ಇಲ್ಲದ ಮಾರ್ಗ (8ನೇ ಮುದ್ರಣ)  
**(ವರ್ಧಮಾನ ಪ್ರಶಸ್ತಿ 1993)** *ಡಾ|| ಮೀನಗುಂಡಿ ಸುಬ್ರಮಣ್ಯ* 180.00

ನೆನಪಿಗೊಂದು ಕೌನ್ಸೆಲಿಂಗ್ (ವರ್ತನಾ ವಿಮರ್ಶೆಯ ನೈಜ ಕಥಾಗುಚ್ಛ. 3ನೇ ಮುದ್ರಣ)  
**(ಅಕಲಂಕ ಪ್ರತಿಷ್ಠಾನದ 'ಅಕಲಂಕ ಪುಸ್ತಕ ಪುರಸ್ಕಾರ' 2009)** *ಗಂಗಾಧರ ಬೆಳ್ಳಾರೆ* 45.00

ಲೈಂಗಿಕ ವೈವಿಧ್ಯ **(ಕುವೆಂಪು ವೈದ್ಯಸಾಹಿತ್ಯ ಪ್ರಶಸ್ತಿ 2008)** *ಡಾ|| ಪದ್ಮಿನಿ ಪ್ರಸಾದ್* 65.00

ಲೈಂಗಿಕ ಆರೋಗ್ಯ (5ನೇ ಮುದ್ರಣ) *ಡಾ|| ಪದ್ಮಿನಿ ಪ್ರಸಾದ್* 75.00  
**(ಡಾ|| ಪಿ. ಎಸ್. ಶಂಕರ ಪ್ರತಿಷ್ಠಾನದ 'ಶ್ರೇಷ್ಠ ವೈದ್ಯಸಾಹಿತ್ಯ ಪ್ರಶಸ್ತಿ' 2003-04)**

ಲೈಂಗಿಕತೆ : ವಿವಿಧ ಆಯಾಮಗಳು (2ನೇ ಮುದ್ರಣ) *ಡಾ|| ವಿನೋದ್ ಛೆಬ್ಬಿ* 40.00  
**(ಡಾ|| ಪಿ. ಎಸ್. ಶಂಕರ ಪ್ರತಿಷ್ಠಾನದ 'ಶ್ರೇಷ್ಠ ವೈದ್ಯ ಸಾಹಿತ್ಯ ಪ್ರಶಸ್ತಿ' 2007)**

ನೀವು ಬಳಸುವ ಔಷಧಗಳು (ಪರಿಷ್ಕೃತ 4ನೇ ಮುದ್ರಣ) *ಡಾ|| ಸಿ. ಆರ್. ಚಂದ್ರಶೇಖರ್* 80.00  
**(ಡಾ|| ಪಿ. ಎಸ್. ಶಂಕರ ಪ್ರತಿಷ್ಠಾನದ 'ಶ್ರೇಷ್ಠ ವೈದ್ಯಸಾಹಿತ್ಯ ಪ್ರಶಸ್ತಿ' 2000)**

ಸೃಜನಶೀಲ ಸಂಶೋಧಕ ಚಿಂತಕ – ಲೂಯಿ ಪಾಶ್ಚರ್ (5ನೇ ಮುದ್ರಣ) *ತುಮಕೂರು ನಾಗಭೂಷಣ* 50.00  
**(ಭಾರತೀಯ ಪ್ರಕಾಶಕರ ಒಕ್ಕೂಟದ 'ಅತ್ಯುತ್ತಮ ಮುದ್ರಣ ವಿನ್ಯಾಸ ಪ್ರಶಸ್ತಿ' 1995)**

ಹಿತ-ಅಹಿತ. ವೃತ್ತಿ ಜೀವನದ 25 ವರ್ಷಗಳು *ಡಾ|| ಸಿ. ಆರ್. ಚಂದ್ರಶೇಖರ್* 125.00  
**(ಕನ್ನಡ ಸಾಹಿತ್ಯ ಪರಿಷತ್ತಿನ 'ಡಾ|| ಹಾ.ಮಾ.ನಾ. ಪ್ರಶಸ್ತಿ' 2002)**

ನನಗೆ 'ಬೈ-ಪಾಸ್' ಆಯಿತು (ಸ್ವಾನುಭವದ ಕಥನ) *ಡಾ|| ಎಚ್. ಡಿ. ಚಂದ್ರಪ್ಪ ಗೌಡ* 65.00  
**(ಡಾ|| ಪಿ. ಎಸ್. ಶಂಕರ ಪ್ರತಿಷ್ಠಾನದ 'ಶ್ರೇಷ್ಠ ವೈದ್ಯ ಸಾಹಿತ್ಯ ಪ್ರಶಸ್ತಿ' 2002)**

ಮನೋರೋಗ ಗೆಲ್ಲಬಹುದೇ ? (ಮನೋರೋಗಿಯ ಆತ್ಮಕಥೆ. 2ನೇ ಮುದ್ರಣ) *ಸ್ನೇಹಾ* 75.00  
**(ಕನ್ನಡ ಸಾಹಿತ್ಯ ಪರಿಷತ್ತಿನ ಪ್ರಶಸ್ತಿ 1996; ಕರ್ನಾಟಕ ಲೇಖಕಿಯರ ಪರಿಷತ್ತಿನ ಪ್ರಶಸ್ತಿ 1996)**

ಭಾಷೆಯ ಬೆಳಕು (2ನೇ ಮು.) **(ಕರ್ನಾಟಕ ಸಾಹಿತ್ಯ ಅಕಾಡೆಮಿ ಪ್ರಶಸ್ತಿ 2003)** *ಡಾ|| ಕೆ. ಎಲ್. ಗೋಪಾಲಕೃಷ್ಣಪ್ಪ* 70.00

ಫಲಜ್ಯೋತಿಷ ನಂಬುವಿರಾ ? (3ನೇ ಮುದ್ರಣ) ಡಾ॥ ಎಸ್. ಬಾಲಚಂದ್ರರಾವ್ 45.00
**(ಕನ್ನಡ ಸಾಹಿತ್ಯ ಪರಿಷತ್ತಿನ 'ಡಾ॥ ಎಚ್. ಎನ್. ದತ್ತಿನಿಧಿ' ಪ್ರಶಸ್ತಿ 2001)**
ಸಂಪ್ರದಾಯ, ವಿಜ್ಞಾನ ಮತ್ತು ಸಮಾಜ (6ನೇ ಮುದ್ರಣ) ಡಾ॥ ಎಸ್. ಬಾಲಚಂದ್ರರಾವ್ 35.00
**(ಕನ್ನಡ ಸಾಹಿತ್ಯ ಪರಿಷತ್ತಿನ 'ಡಾ॥ ಎಚ್. ಎನ್. ದತ್ತಿನಿಧಿ' ಪ್ರಶಸ್ತಿ 1988-89)**
ವೈಜ್ಞಾನಿಕ ಮನೋಧರ್ಮ (7ನೇ ಮುದ್ರಣ) ಜಿ. ಟಿ. ನಾರಾಯಣ ರಾವ್ 80.00
**(ಕರ್ನಾಟಕ ಸಾಹಿತ್ಯ ಅಕಾಡೆಮಿ ಗೌರವ ಪುರಸ್ಕಾರ 1990)**
**(ಕನ್ನಡ ಸಾಹಿತ್ಯ ಪರಿಷತ್ತಿನ 'ಡಾ॥ ಎಚ್. ಎನ್. ದತ್ತಿನಿಧಿ' ಪ್ರಶಸ್ತಿ 1992)**
ಮಾರ್ಕ್ಸ್ ಮತ್ತು ವಿಜ್ಞಾನ **(ಕನ್ನಡ ಸಾಹಿತ್ಯ ಪರಿಷತ್ತಿನ 'ಡಾ॥ ಎಚ್. ಎನ್. ದತ್ತಿನಿಧಿ' ಪ್ರಶಸ್ತಿ 2009)** ಡಾ॥ ಜಿ. ರಾಮಕೃಷ್ಣ 20.00
ದೇವರು, ದೆವ್ವ, ವಿಜ್ಞಾನ (11ನೇ ಮು.) ಡಾ॥ ಅಬ್ರಹಾಂ ಟಿ. ಕೋವೂರ್ (ಸಂ : ಪುರುಷೋತ್ತಮ ಬಿಳಿಮಲೆ) 85.00
ಭಗವದ್ಗೀತೆ. ಒಂದು ವೈಚಾರಿಕ ಒಳನೋಟ (2ನೇ ಮು.) ಪ್ರೊ॥ ಬಿ. ವಿ. ವೀರಭದ್ರಪ್ಪ 50.00
**(ಕನ್ನಡ ಸಾಹಿತ್ಯ ಪರಿಷತ್ತಿನ 'ಡಾ॥ ಎಚ್. ಎನ್. ದತ್ತಿನಿಧಿ' ಪ್ರಶಸ್ತಿ 1997)**
ಇದು ಮುಗಿಯದ ಕಥೆ (3ನೇ ಮುದ್ರಣ) ದೇವಿಪ್ರಸಾದ್ ಚಟ್ಟೋಪಾಧ್ಯಾಯ
**(ಅನುವಾದಕ್ಕಾಗಿ ಕರ್ನಾಟಕ ಸಾಹಿತ್ಯ ಅಕಾಡೆಮಿ ಪ್ರಶಸ್ತಿ 1998)** (ಅನು : ಜಿ. ಕುಮಾರಪ್ಪ) 60.00
ಧರ್ಮಪರೀಕ್ಷೆ (ರಾಜಕಾರಣ-ಧರ್ಮ-ಸಂಸ್ಕೃತಿ ಚಿಂತನೆಗಳು. 2ನೇ ಮುದ್ರಣ) ಡಾ॥ ರಹಮತ್ ತರೀಕೆರೆ 150.00
**(ಕನ್ನಡ ಸಾಹಿತ್ಯ ಪರಿಷತ್ತಿನ ಡಾ॥ ಹಾ.ಮಾ.ನಾಯಕ ಪ್ರಶಸ್ತಿ - 2008)**
**(ಕರ್ನಾಟಕ ಸಂಘ, ಶಿವಮೊಗ್ಗ – ಇದರ ಪಿ. ಲಂಕೇಶ್ ಪ್ರಶಸ್ತಿ - 2008)**
ಭೌತವಾದೀಯ ಚಿಂತನೆಗಳು ಡಾ॥ ಕೆ. ಎಲ್. ಗೋಪಾಲಕೃಷ್ಣಯ್ಯ 110.00
**(ಕನ್ನಡ ಸಾಹಿತ್ಯ ಪರಿಷತ್ತಿನ 'ಡಾ॥ ಎಚ್. ಎನ್. ದತ್ತಿನಿಧಿ' ಪ್ರಶಸ್ತಿ - 2008)**
ಪ್ರಾಚೀನ ಭಾರತದಲ್ಲಿ ಭೌತಿಕವಾದ (ಚಾರ್ವಾಕ/ ದೇವಿಪ್ರಸಾದ ಚಟ್ಟೋಪಾಧ್ಯಾಯ
ಲೋಕಾಯತ ದರ್ಶನದ ಒಂದು ಅಧ್ಯಯನ. 2ನೇ ಮುದ್ರಣ) (ಅನು : ಜಿ. ವಿ. ಕಕ್ಕಿಲ್ಲಾಯ) 80.00
**(ಅನುವಾದಕ್ಕಾಗಿ ಕರ್ನಾಟಕ ಸಾಹಿತ್ಯ ಅಕಾಡೆಮಿ ಪ್ರಶಸ್ತಿ 1989)**
ಲೋಕಾಯತ (ಚಾರ್ವಾಕ ದರ್ಶನ. 2ನೇ ಮುದ್ರಣ) (ಉಗ್ರಾಣ ಪ್ರಶಸ್ತಿ 1999) ಗೌರೀಶ ಕಾಯ್ಕಿಣಿ 45.00
ದಲಿತರು – ವಿಮೋಚನೆಯ ಹಾದಿ : ಒಂದು ಅವಲೋಕನ ನಾ. ದಿವಾಕರ 50.00
**(ಕನ್ನಡ ಸಾಹಿತ್ಯ ಪರಿಷತ್ತಿನ 'ಡಾ॥ ಎಲ್. ಬಸವರಾಜ ಅಮೃತ ಮಹೋತ್ಸವ ದತ್ತಿ' ಬಹುಮಾನ - 2009)**
ಕರ್ನಾಟಕ ಏಕೀಕರಣ ಇತಿಹಾಸ (ವಿಸ್ತೃತ 3ನೇ ಮು.) ಡಾ॥ ಎಚ್. ಎಸ್. ಗೋಪಾಲ ರಾವ್ 250.00
**(ಕರ್ನಾಟಕ ಸಾಹಿತ್ಯ ಅಕಾಡೆಮಿ ಪ್ರಶಸ್ತಿ 1997)**
ಸ್ವಾತಂತ್ರ್ಯಗಂಗೆಯ ಸಾವಿರ ತೊರೆಗಳು (6ನೇ ಮುದ್ರಣ) ಎನ್. ಪಿ. ಶಂಕರನಾರಾಯಣ ರಾವ್ 225.00
**(ಕರ್ನಾಟಕ ಸಾಹಿತ್ಯ ಅಕಾಡೆಮಿಯ ಗೌರವ ಪುರಸ್ಕಾರ 1991)**
ಪ್ರಾಚೀನ ಭಾರತ (5ನೇ ಮುದ್ರಣ) ಪ್ರೊ॥ ಆರ್. ಎಸ್. ಶರ್ಮ (ಅನು : ಎನ್. ಪಿ. ಶಂಕರನಾರಾಯಣ ರಾವ್) 200.00
**(ಉತ್ತಮ ಅನುವಾದಕ್ಕಾಗಿ ಕರ್ನಾಟಕ ಸಾಹಿತ್ಯ ಅಕಾಡೆಮಿ ಪ್ರಶಸ್ತಿ 1998)**
**(ಭಾರತೀಯ ಪ್ರಕಾಶಕರ ಒಕ್ಕೂಟದ 'ಅತ್ಯುತ್ತಮ ಮುದ್ರಣ ವಿನ್ಯಾಸ ಪ್ರಶಸ್ತಿ' 1998)**
ಮಲಯಾಳದ 10 ಕಥೆಗಾರ್ತಿಯರು ಸಂ : ಡಾ॥ ಶ್ರೀದೇವಿ ಕೆ. ನಾಯರ್ 95.00
**(ಕನ್ನಡ ಸಾಹಿತ್ಯ ಪರಿಷತ್ತಿನ 'ಮಲ್ಲಿಕಾ ದತ್ತಿ ಬಹುಮಾನ' 2004)**
ನೂರಿ **(ಕರ್ನಾಟಕ ಲೇಖಕಿಯರ ಸಂಘದ 'ಕಾಕೋಳು ಸರೋಜಮ್ಮ ದತ್ತಿ ನಿಧಿ' ಪ್ರಶಸ್ತಿ 2009)** ಡಾ॥ ಜಾನಕಿ ಸುಂದರೇಶ್ 140.00
ಯಾದ್ ವಶೇಮ್ (ನೂರು ಸಾವಿರ ಸಾವಿನ ನೆನಪು. 2ನೇ ಮುದ್ರಣ) ನೇಮಿಚಂದ್ರ 190.00
**(ಕರ್ನಾಟಕ ಸಾಹಿತ್ಯ ಅಕಾಡೆಮಿ ಗೌರವ ಪ್ರಶಸ್ತಿ 2007; ಶ್ರೀಮತಿ ಗಂಗಮ್ಮ ಸೋಮಪ್ಪ ಬೊಮ್ಮಾಯಿ ಪ್ರತಿಷ್ಠಾನದ 'ಅಕ್ಕ' ಪ್ರಶಸ್ತಿ 2009)**
ಮಯ್ಯಾದಾಸನ ವಾಡೆ ಹಿಂದಿ ಮೂಲ : ಭೀಷ್ಮ ಸಾಹನಿ (ಅನು : ದು. ನಿಂ. ಬೆಳಗಲಿ) 160.00
**(ಕನ್ನಡ ಸಾಹಿತ್ಯ ಪರಿಷತ್ತಿನ 'ಶ್ರೀ ಆರ್. ಎಸ್. ಹಬ್ಬು' ದತ್ತಿನಿಧಿ ಪ್ರಶಸ್ತಿ 2003)**
ಅಕ್ರಮ ಸಂತಾನ (3ನೇ ಮುದ್ರಣ) ಮರಾಠಿ ಮೂಲ : ಶರಣಕುಮಾರ ಲಿಂಬಾಳೆ
**(ಅನುವಾದಕ್ಕಾಗಿ ಉಮಾಪತಿ ಚುಕ್ಕಿ ಪ್ರತಿಷ್ಠಾನದ ಪ್ರಶಸ್ತಿ 1993)** (ಅನು : ದು. ನಿಂ. ಬೆಳಗಲಿ) 75.00
ಬಹಿಷ್ಕೃತ. ಒಂದು ನೆನಪು (2ನೇ ಮುದ್ರಣ) ಡಾ॥ ನರೇಂದ್ರ ಜಾಧವ್
**(ಕನ್ನಡ ಪುಸ್ತಕ ಪ್ರಾಧಿಕಾರದ 'ಪುಸ್ತಕ ಸೊಗಸು' ಪ್ರಶಸ್ತಿ 2005)** (ಅನು : ಸುಮಾ ದ್ವಾರಕಾನಾಥ್) 180.00
ಪಶ್ಚಿಮ ಮುಖಿ (ಸ್ಪೇನ್-ಫ್ರಾನ್ಸ್-ಪೋರ್ಚುಗಲ್ ಮತ್ತು ಇಟಲಿ ಪ್ರವಾಸದ ನೆನಪುಗಳು)
**(ಕರ್ನಾಟಕ ಸಾಹಿತ್ಯ ಅಕಾಡೆಮಿಯ ಗೌರವ ಪ್ರಶಸ್ತಿ 2008)** ಟಿ. ಆರ್. ಅನಂತರಾಮು 100.00
ಬದುಕು ಬದಲಿಸಬಹುದು (6ನೇ ಮುದ್ರಣ) ನೇಮಿಚಂದ್ರ 110.00
**(ಕರ್ನಾಟಕ ಸಂಘ, ಶಿವಮೊಗ್ಗ - ಇದರ ಡಾ॥ ಹಾ.ಮಾ.ನಾ. ಪ್ರಶಸ್ತಿ 2005)**
ಪೆರುವಿನ ಪವಿತ್ರ ಕಣಿವೆಯಲ್ಲಿ (3ನೇ ಮು.) **(ಕರ್ನಾಟಕ ಸಾಹಿತ್ಯ ಅಕಾಡೆಮಿ ಗೌರವ ಪ್ರಶಸ್ತಿ 2004)** ನೇಮಿಚಂದ್ರ 140.00
ಅಂಡಮಾನ್ ಕನಸು **(ಕರ್ನಾಟಕ ಸಾಹಿತ್ಯ ಅಕಾಡೆಮಿ ಗೌರವ ಪ್ರಶಸ್ತಿ 2002)** ಡಾ॥ ರಹಮತ್ ತರೀಕೆರೆ 60.00
ಮುಂಬೈ ಡೈರಿ **(ಕನ್ನಡ ಸಾಹಿತ್ಯ ಪರಿಷತ್ತಿನ ಅಂತರರಾಷ್ಟ್ರೀಯ ಮಹಿಳಾ ವರ್ಷ ಪ್ರಶಸ್ತಿ 2002)** ಉಮಾ ರಾವ್ 60.00
ಭಾನುವಾರವೆಂದರೆ **(ಪೆರ್ಲ ಕೃಷ್ಣಭಟ್ಟ ಕಾವ್ಯ ಪ್ರಶಸ್ತಿ - 1996)** ಸುಕನ್ಯಾ ಕಳಸ 20.00
ಹೊಕ್ಕಳಲ್ಲಿ ಹೂವಿದೆ (2ನೇ ಮುದ್ರಣ) ರಂಜಾನ್ ದರ್ಗಾ 25.00
**(ಭಾರತೀಯ ಪ್ರಕಾಶಕರ ಒಕ್ಕೂಟದ 'ಅತ್ಯುತ್ತಮ ಮುದ್ರಣ ವಿನ್ಯಾಸ ಪ್ರಶಸ್ತಿ' 1996)**
The Bhagavadgita – A Rational Enquiry
**(Karnataka Sahitya Academy Award 2004)** *Prof. B. V. Veerabhadrappa* 90.00
Phoenix & Four Other Mime Plays (2nd Print) *Chi. Srinivasaraju*
**(Karnataka Sahitya Academy Award 2005)** *(Translated by S. Sugata)* 40.00



# ದಿನದಿನದ ಗರಡಿಯಿದು



ರಾತ್ರಿ ಕಳೆದು ನಸುಕು ಹರಡುತ್ತಲೇ ಸೂರ್ಯರಶ್ಮಿ ಭೂಮಿಯ ಮೇಲೆ ಬೀಳುತ್ತಲೇ ಜೀವಜಗತ್ತಿನ ಚಟುವಟಿಕೆಯೂ ಪ್ರಾರಂಭವಾಗುತ್ತದೆ. ಹಕ್ಕಿ-ಪಕ್ಷಿಗಳು ಕಲಕಲ ಶುರುಮಾಡುತ್ತವೆ. ಸಾಕಿದ ನಾಯಿಯೋ ಬೀದಿ ನಾಯಿಯೋ ಯಾವುದೋ ಅದೂ ಧಿಗ್ಗನೆದ್ದು ಹೊರಡುತ್ತದೆ. ಮಾತು ಮೌನವಾಗಿದ್ದ ಮನುಷ್ಯ ಜಗತ್ತು, ನಿದ್ರೆ ತಿಳಿದೆದ್ದು ಕಾರ್ಯದಲ್ಲಿ ತೊಡಗುತ್ತದೆ. ಈ ಕಾರ್ಯಪ್ರವೃತ್ತವಾಗುವುದೇ ಬದುಕಿನ ಪ್ರಾರಂಭದ ಸೆಲೆ. ಈ ಸೆಲೆ ಒರತೆಯಾಗಿ, ಹಳ್ಳವಾಗಿ, ಹೊಳೆಯಾಗಿ ಮಹಾನದಿಯಾಗಿ ಸಮುದ್ರದಂತೆ ಎಲ್ಲೆ ಮೀರಿದ ಆಳ ಅಂತ್ಯವಿಲ್ಲದ ಬದುಕು ಅನಂತವಾಯಿತು. ಈ ಆಳದಲ್ಲಿ ಈಜಿ ಮುಳುಗಿ ಮೇಲೆದ್ದು ಕೊನೆಗೆ ಅಲ್ಲೇ ಲೀನವಾಗುತ್ತದೆ. ಹಾಗಾದರೆ ಈ ಬದುಕಿನ, ಜೀವಿಯ ಹೋರಾಟಕ್ಕೆ ಅರ್ಥವೇನು, ಉದ್ದೇಶವೇನು ? ಮುಖ್ಯವಾಗಿ ಕಾಣುವುದು ಜೀವಜಾಲದ, ಪ್ರವಾಹದ ನಿರಂತರ ಹರಿವು. ಒಂದು ಜೀವಿ ಹುಟ್ಟಿ ಬೆಳೆದು ತನ್ನ ಪಾಲಿನ ಕೆಲಸ ಮುಗಿಸುತ್ತದೆ. ಕೆಲಸ ನಿರ್ವಹಿಸುತ್ತಾ ನಶಿಸುತ್ತಾ ಕೊನೆಗೊಮ್ಮೆ ಇಲ್ಲವಾಗುತ್ತದೆ; ಪ್ರಾಣಪಕ್ಷಿ ಹಾರಿಹೋಗುತ್ತದೆ. ಸಸ್ಯ ಹುಟ್ಟುತ್ತದೆ, ಬೆಳೆಯುತ್ತದೆ, ಫಲವನ್ನೊ ಪುಷ್ಪವನ್ನೊ ನೀಡುತ್ತದೆ. ಜಗತ್ತಿನ ಅಂದಕ್ಕೆ ತನ್ನ ಅಂದವನ್ನೂ ಸೇರಿಸುತ್ತದೆ. ಹಾಗೇ ಅದು ತನ್ನ ಇರುವಿಕೆಯನ್ನು ಕಳೆದುಕೊಳ್ಳುತ್ತದೆ, ಅದರ ಜಾಗದಲ್ಲಿ ಮತ್ತೊಂದು ಬಂದು ನಿಲ್ಲುತ್ತದೆ.

ಈ ಹುಟ್ಟು ಅಥವಾ ಉಗಮ, ನಂತರ ನಾಶ ಅಥವಾ ಸಾವು, ಈ ನಡುವಿನ ಕಾಲ, ಚಟುವಟಿಕೆಯ ಕಾಲ, ಜಗತ್ತಿನ ಸುಂದರ ಕಾಲ, ಅದೇ ಜೀವನ, ಅದೇ ಬದುಕು. ಜೀವನ ಎಂದರೆ ನೀರು. ಈ ನೀರು ಹರಿಯುತ್ತದೆ, ಹರಿಯುತ್ತಲೇ ಇರುತ್ತದೆ. ಬೇಸಿಗೆಯಲ್ಲಿ ಒಣಗುತ್ತದೆ, ಮಳೆಗಾಲದಲ್ಲಿ ತುಂಬಿಕೊಳ್ಳುತ್ತದೆ. ಪಂಚಭೂತಗಳಲ್ಲಿ ಗಾಳಿಯಷ್ಟೆ ನೀರಿಗೂ ಮಹತ್ವವಿದೆ. ಗಾಳಿ ದೇಹದಲ್ಲಿನ ಪ್ರಾಣವನ್ನು ಹಿಡಿದಿಟ್ಟರೆ, ನೀರು ಆ ಪ್ರಾಣಕ್ಕೆ ತಂಪು ನೀಡುತ್ತದೆ, ಚೈತನ್ಯ ನೀಡುತ್ತದೆ. ಈ ಚೈತನ್ಯವೇ ಚೇತನವಾಗಿ ಜೀವವಾಗಿ ದೇಹದ ಕ್ರಿಯೆಗೆ ಒತ್ತುಕೊಡುತ್ತದೆ. ಪ್ರಾಣವಿರುವ ಶರೀರಿಗೆ, ಅದರ ಚಲನೆಗೆ, ಕ್ರಿಯೆಗೆ, ಇಂಧನ ಬೇಕು. ಅದೇ ಶಕ್ತಿ. ಸಸ್ಯದ ಬೇರು ಭೂಮಿಯ ಆಳಕ್ಕಿಳಿದು ಅಲ್ಲೆಲ್ಲೊ ಭೂಮಿಯ ಆಳದಲ್ಲಿ ಹುದುಗಿರುವ ನೀರನ್ನು ಹೀರಿ, ಮಣ್ಣಿನಲ್ಲಿರುವ ಸತ್ವವನ್ನು ಹೀರಿ, ಪೋಷಕಾಂಶ ಪಡೆದು ಬೆಳೆದು ಫಲಪುಷ್ಪ ನೀಡುವಂತೆ ಈ ಜೀವಿಗಳೂ ಚಟುವಟಿಕೆಯಿಂದಿರಲು ಶಕ್ತಿ ಸಂಪಾದಿಸಬೇಕು. ಅದೇ ಆಹಾರ ಸಂಪಾದನೆ, ಅನ್ನ ಸಂಪಾದನೆ. ಉದ್ಯೋಗ ಮಾಡದಿದ್ದರೆ ಜೀವಿಗಳಿಗೆ ಸಂಪತ್ತು ಅಂದರೆ ಆಹಾರ ದೊರೆಯದು.

ಮನುಷ್ಯರಾದಿ ಎಲ್ಲ ಪ್ರಾಣಿಗಳಿಗೂ ಆಹಾರಕ್ಕಾಗಿ ಪ್ರಕೃತಿ ನೀಡಿದ ಮಾರ್ಗ ಹಲವು. ಕೆಲವು ಪ್ರಾಣಿಗಳು ಉದರ ಪೋಷಣೆಗೆ ಶಾಕಾಹಾರವನ್ನು ಅವಲಂಬಿಸಿವೆ. ಕೆಲವು ಪ್ರಾಣಿಗಳು ಇನ್ನೊಂದನ್ನು ಕೊಂದು ತಿಂದು ಬದುಕಿದರೆ ಮನುಷ್ಯನದು ಹಲವು ಮಾರ್ಗ: ಒಬ್ಬ ದೈಹಿಕ ಶ್ರಮದಿಂದ ಅನ್ನ ಸಂಪಾದಿಸಿದರೆ, ಮತ್ತೊಬ್ಬ ಸಾಹಸಕಾರ್ಯದಿಂದಲೊ, ಇನ್ನೊಬ್ಬ ಬುದ್ಧಿಶಕ್ತಿಯಿಂದಲೊ ಅನ್ನ ಸಂಪಾದಿಸಿಕೊಳ್ಳಬಹುದು. ಜೀವ ಇರುವ ಪ್ರತಿ ಪ್ರಾಣಿಯೂ ಕೆಲಸ ಮಾಡುತ್ತಲೇ ಇರಬೇಕು; ಸುಮ್ಮನೆ ಕುಳಿತುಕೊಳ್ಳುವುದು ಸಾಧ್ಯವಿಲ್ಲ. ಇದೇ ಕರ್ಮ. ಈ ಎರಡು ಅಕ್ಷರ 'ಕರ್ಮ'ದ ಮೇಲೆ ಜಗತ್ತಿನ ಆಗುಹೋಗುಗಳು ನಿಂತಿವೆ. ಆಯಾ ಕರ್ಮದ ಫಲವೂ ಅದರ ಹಿಂದೆಯೇ ಇರುತ್ತದೆ. ಒಟ್ಟಾರೆ ಮಾಡುವ ಕರ್ಮ ಅಥವಾ ಕೆಲಸ ಯಾವುದೇ ಇರಲಿ, ಕೆಲಸ ಮುಗಿದ ಮೇಲೆ, ಕೆಲಸ ಮಾಡಿ ಬಳಲಿದ ಮೇಲೆ, ಹಸಿದ ಮೇಲೆ ''ಅನ್ನಕ್ಕೆ ಮಿಗಿಲು ಇನ್ನಿಲ್ಲ, ಜಗದೊಳಗೆ ಅನ್ನವೇ ಪ್ರಾಣ ಸರ್ವಜ್ಞ.'' ''ಅನ್ನ ದೇವರ ಮುಂದೆ ಇನ್ನು ದೇವರು ಉಂಟೆ !''

ಹಸಿದವ ರೈತನಾಗಿ ಹೊಲದಲ್ಲಿ ದುಡಿಯಲಾರ, ಹಸಿದವ ಶಿಕ್ಷಕನಾಗಿ ಮಕ್ಕಳಿಗೆ ಪಾಠ ಹೇಳಲಾರ, ಹಸಿದವ ವಿಜ್ಞಾನಿಯಾಗಿ ಸಂಶೋಧನೆ ಮಾಡಲಾರ, ಸತ್ಯಕ್ಕಾಗಿಯೂ ನ್ಯಾಯಕ್ಕಾಗಿಯೂ ಹಸಿದು ಹೋರಾಡಲಾರ. ಎಲ್ಲಾ ನದಿಗಳೂ ಕೊನೆಗೆ ಸಮುದ್ರವನ್ನೇ ಸೇರಿದಂತೆ ಎಲ್ಲ ಪ್ರಯತ್ನಗಳು, ಎಲ್ಲ ಚಟುವಟಿಕೆಗಳು, ಎಲ್ಲ ಅಭಿವೃದ್ಧಿಗಳು ಬಂದು ಬೀಳುವುದು ಹಸಿವಿನ ಹೊಂಡದಲ್ಲಿ. ಇದು ಹೊಂಡವಲ್ಲ, ಹಲವು ತೀರ್ಥಗಳ, ಹಲವು ಕರ್ಮಗಳ ಪುಷ್ಕರಿಣಿ. ಈ ಪುಷ್ಕರಿಣಿ ಯಾತ್ರೆಗೆ ಒಬ್ಬ ಕಾಲ್ನಡಿಗೆಯಲ್ಲಿ ಬರಬಹುದು. ಮಗದೊಬ್ಬ ವಿಮಾನದಲ್ಲೇ ಬರಬಹುದು. ಕೊನೆಗೆ ಬಂದು ಸೇರುವುದು ದುಡಿಮೆಯ ಪುಷ್ಕರಿಣಿಗೆ. ಇದು ಅಂತ್ಯವಿಲ್ಲದ ಕ್ರಿಯೆ. ಈ ಕ್ರಿಯೆಗೆ ಬಿಡುವಿಲ್ಲ, ಲಾಭನಷ್ಟಗಳ ಲೆಕ್ಕವಿಲ್ಲ. ಈ ಬದುಕೆಂದರೆ

ಎನಿತು ನೀಂ ಗೆಲಿದೆಯೆಂದೆನರು ಬಲ್ಲವರೆಂದುಮ್।<br>
ಎನಿತು ನೀಂ ಪೋರ್ದೆಯೆನಿತನು ಪೊತ್ತೆಯೆನುವರ್॥<br>
ಗಣನೆ ಸಲುವುದು ತೋರ್ದ ಪೌರುಷಕೆ, ಜಯಕಲ್ಲ।<br>
ದಿನದಿನದ ಗರಡಿಯಿದು - ಮಂಕುತಿಮ್ಮ॥

**ವಿ.ರಾಮಚಂದ್ರ ಶಾಸ್ತ್ರಿ**
ಬೆಂಗಳೂರು





# ಹಲವು ಹೊಳೆಗಳು

## ಕಾಂ॥ಜಗನ್ನಾಥ್ ಸರ್ಕಾರ್ ಅಭಿನಂದನಾ ಗ್ರಂಥ




ಸಂಗ್ರಹ : **ಗೌತಮ್ ಸರ್ಕಾರ್**
ಸಂಪಾದಕರು : **ಮಿತಾಲಿ ಸರ್ಕಾರ್**
ಪ್ರಕಾಶನ : **ಜಗನ್ನಾಥ್ ಸರ್ಕಾರ್ ಫೆಲಿಸಿಟೇಷನ್ ಕಮಿಟಿ**
ವಿಲ್ಲಾ ೧೪ಸಿ, ಶೋಭಾ ಲೋಟಸ್, ಬ್ರೂಕ್‌ಫೀಲ್ಡ್
ಕುಂದಲಹಳ್ಳಿ, ಬೆಂಗಳೂರು - ೩೭
ಪುಟ : ೧೦+೪೫೫  ಬೆಲೆ : ರೂ. ೩೯೫

ಶ್ರೀ ಜಗನ್ನಾಥ್ ಸರ್ಕಾರ್ ಅವರ ಆಯ್ದ ಬರಹಗಳು ಮತ್ತು ಅವರ ನೆನಪಿನ ಚಿತ್ರಗಳ ಈ ಸಂಕಲನವನ್ನು ಗೌತಮ್ ಸರ್ಕಾರ್ ಮತ್ತು ಮಿತಾಲಿ ಸರ್ಕಾರ್ ಅವರು ಸಂಪಾದಿಸಿ, ಬೆಂಗಳೂರಿನ 'ಜಗನ್ನಾಥ್ ಸರ್ಕಾರ್ ಸನ್ಮಾನ ಸಮಿತಿ'ಯ ಪರವಾಗಿ ಪ್ರಕಟಿಸಿದ್ದಾರೆ. ಜಗನ್ನಾಥ್ ಸರ್ಕಾರ್ ಅವರ ೯೧ನೇ ವಯಸ್ಸಿನಲ್ಲಿ (ಜನನ ೨೫ನೇ ಸೆಪ್ಟೆಂಬರ್, ೧೯೧೯), ಅವರು ಹೃದಯ ಸಂಬಂಧೀ ಕಾಯಿಲೆಯಿಂದ ಅಸ್ವಸ್ಥರಾಗಿರುವ ಸಂದರ್ಭದಲ್ಲಿ ಈ ಕೃತಿಯು ಪ್ರಕಟವಾಗಿದೆ. ಇಂಥದೊಂದು ಸಂಭಾವನಾ ಗ್ರಂಥವನ್ನು ಎರಡು ದಶಕಗಳ ಮುಂಚೆ, ಸರ್ಕಾರ್ ಅವರ ಆರೋಗ್ಯವು ಉತ್ತಮ ಸ್ಥಿತಿಯಲ್ಲಿದ್ದಾಗ ಸಿದ್ಧಪಡಿಸಿದ್ದರೆ ಅದನ್ನು ಇನ್ನಷ್ಟು ಪರಿಪೂರ್ಣವಾಗಿಸ ಬಹುದಾಗಿತ್ತು, ಆ ಕೆಲಸವು ಸಾಧ್ಯವಾಗದಿದ್ದುದಕ್ಕಾಗಿ ಮುನ್ನುಡಿ ಬರೆದ ಶೈಬಾಲ್ ಗುಪ್ತಾ ಅವರು (ಸದಸ್ಯ ಕಾರ್ಯದರ್ಶಿ, ಏಷ್ಯನ್ ಅಭಿವೃದ್ಧಿ ಸಂಶೋಧನಾ ಸಂಸ್ಥೆ, ಪಾಟ್ನಾ) ಕಸಿವಿಸಿಪಟ್ಟಿದ್ದಾರೆ. ಆದರೆ ಆಗ ಇನ್ನೊಂದು ಸಮಸ್ಯೆಯು ತಲೆ ಎತ್ತುತ್ತಿತ್ತು. ತಮ್ಮನ್ನು ತಾವು ಯಾವ ದೃಷ್ಟಿಯಿಂದಲೂ ಪ್ರಮುಖರೆಂದು ಪರಿಗಣಿಸದ, ಅತ್ಯಂತ ಸಂಕೋಚ ಸ್ವಭಾವದ ಜಗನ್ನಾಥ್ ಸರ್ಕಾರ್ ಇಂಥದೊಂದು ಸಂಭಾವನಾ ಗ್ರಂಥವನ್ನು ತಮಗೆ ಅರ್ಪಿಸಲು ಖಂಡಿತ ಒಪ್ಪುತ್ತಿರ ಲಿಲ್ಲವಂತೆ! ಹೀಗಾಗಿ ಅವರ ಕುಟುಂಬ ವರ್ಗದವರು ಅವರಿಂದ ಕದ್ದು-ಮುಚ್ಚಿ ಗ್ರಂಥವನ್ನು ಸಿದ್ಧಪಡಿಸ ಬೇಕಾಯಿತಂತೆ! ಮುನ್ನುಡಿಕಾರರು ಭಾವಿಸುವಂತೆ ಈ ಗ್ರಂಥವು ಜಗನ್ನಾಥ್ ಸರ್ಕಾರ್ ಅವರ ಸಾಧನೆಯ ಸಮಗ್ರ ಚಿತ್ರವನ್ನು ಪೂರ್ಣವಾಗಿ ಪ್ರತಿಬಿಂಬಿಸದಿದ್ದರೂ ಈಗಿರುವಂತೆಯೂ ಇಲ್ಲಿನ ಲೇಖನಗಳು ಸಾಕಷ್ಟು ಬೋಧಪ್ರದವಾಗಿವೆಯೆಂಬುದನ್ನು ಒಪ್ಪಬೇಕಾಗುತ್ತದೆ.

ಭಾರತೀಯ ಕಮ್ಯುನಿಸ್ಟ್ ಪಕ್ಷದ, ಅದರಲ್ಲೂ ಬಿಹಾರ ಶಾಖೆಯ ಬೆಳವಣಿಗೆಯಲ್ಲಿ ಜಗನ್ನಾಥ್ ಸರ್ಕಾರ್ ಅವರ ಪಾತ್ರವನ್ನು ಅರ್ಥಮಾಡಿಕೊಳ್ಳಲು ಸುಮಾರು ಐದು ದಶಕಗಳ ಹಿಂದಿನ ಬಿಹಾರದ ಸಂದರ್ಭವನ್ನು ಅರಿತುಕೊಳ್ಳುವುದು ಅಗತ್ಯ. ತೌಲನಿಕವಾಗಿ ನೋಡಿದರೆ ಇಡೀ ಹಿಂದೀ ಭಾಷಿಕ ಪ್ರದೇಶಗಳ ಪಟ್ಟಿಯಲ್ಲಿ ಸಾಮಾಜಿಕವಾಗಿ ಮುಕ್ತವಾಗಿದ್ದು ಹಲವು ಬಂಡಾಯಗಳಿಗೆ ತೆರೆದುಕೊಂಡಿದ್ದುದು ಬಿಹಾರವೊಂದೇ ಎನ್ನಬಹುದು. ಕಾಯಂ ಆಗಿ ನೆಲೆಗೊಂಡಿದ್ದ ಬಿಹಾರದ ಭೂಸ್ವಾಮ್ಯವನ್ನು ಅಸ್ಥಿರ ಗೊಳಿಸಿದ, ಸ್ವಾಮಿ ಸಹಜಾನಂದರ ಮುಂದಾಳತ್ವದ ರೈತ ಬಂಡಾಯವು ಬಿಹಾರದ ರಾಜಕೀಯವನ್ನು ಆಮೂಲಾಗ್ರವಾಗಿ ಪ್ರಭಾವಿಸಿತೆಂಬುದು ನಿಸ್ಸಂದೇಹ. ಬಿಹಾರ್ ರಾಜ್ಯದಲ್ಲಿ ನೆಲೆಗೊಂಡ 'ಸೋಷಲಿಸ್ಟ್' ಮತ್ತು 'ಕಮ್ಯುನಿಸ್ಟ್' ಪಕ್ಷಗಳೆರಡೂ ತಾತ್ವಿಕವಾಗಿ ರೈತ ಬಂಡಾಯದ ಸಂತಾನವೇ ಆಗಿವೆ.

ಕಾಂಗ್ರೆಸ್ ಪಕ್ಷವು ಕೂಡ ರೈತ ಬಂಡಾಯದ ಪ್ರಭಾವಕ್ಕೊಳಗಾಗದೆ ಉಳಿಯಲಿಲ್ಲ. ಇನ್ನಿತರ

**ಡಾ॥ ಕೆ. ಎಲ್. ಗೋಪಾಲಕೃಷ್ಣಯ್ಯ**

*ಪ್ರಸ್ತುತ 'ಸಂಭಾವನಾ ಗ್ರಂಥ'ವು ಬೇರೆಬೇರೆಯ ಸಂದರ್ಭಗಳಲ್ಲಿ ಸ್ವತಃ ಜಗನ್ನಾಥ ಸರ್ಕಾರ್ ಅವರೇ ಬರೆದ 49 ಲೇಖನಗಳನ್ನೂ, ಅವರ 'ಪರೋಕ್ಷ ಶಿಷ್ಯ'ರೂ, ಕುಟುಂಬ ವರ್ಗದವರೂ, ಆಪ್ತ ಸಂಗಾತಿಗಳೂ ಬರೆದ 39 ಲೇಖನಗಳನ್ನೂ ಒಳಗೊಂಡಿದೆ. ಈ ಲೇಖನಗಳನ್ನು 'ವಿಮರ್ಶೆ ಮಾಡುವುದು' ಒಂದು ನೆಲೆಯಲ್ಲಿ ಸಾಧ್ಯ. ಮುನ್ನುಡಿಯಲ್ಲಿ ಹೇಳಿರುವ ಮಾತುಗಳನ್ನಿಲ್ಲಿ ಉದ್ಧರಿಸಬಹುದು : "ಈ ಒಂದು ಸಂಪುಟವು ಜಗನ್ನಾಥ್ ಸರ್ಕಾರ್ ಅವರ ಸಮಗ್ರ ಸಾಧನೆಯ ಚಿತ್ರವನ್ನು ಕಟ್ಟಿಕೊಡಲಾರದು. ಆದರೆ ಅವರ ಸಮಕಾಲೀನವಾದ ತತ್ವಬದ್ಧ ರಾಜಕಾರಣ, ಪಕ್ಷ ಸಂಘಟನೆ ಮತ್ತು ಬಿಹಾರದ ಅಭಿವೃದ್ಧಿಗೆ ಸಂಬಂಧಿಸಿದ ಒಂದು ಇಣುಕುನೋಟವನ್ನು ಖಂಡಿತ ನೀಡಬಲ್ಲುದು. ವಿವಿಧ ಬಗೆಯ ಹಿನ್ನೆಲೆಯುಳ್ಳ ಅವರ ಸಮಕಾಲೀನರು ತಮ್ಮ ನೆನಪುಗಳನ್ನು ಚಿತ್ರಿಸಿರುವ ರೀತಿಯು ಆಪ್ತವಾಗಿದ್ದು, ಜಗನ್ನಾಥ್ ಸರ್ಕಾರ್ ಅವರ ಬಗೆಗೆ ಜನರ ಮೆಚ್ಚುಗೆ ಮತ್ತು ಗೌರವಗಳನ್ನು ಅಭಿವ್ಯಕ್ತಿಸುತ್ತದೆ."*

ಹಿಂದೀ ಭಾಷಿಕ ಪ್ರದೇಶಗಳಿಗಿಂತ ಭಿನ್ನವಾಗಿ ಕಾಂಗ್ರೆಸ್ ಪಕ್ಷದ ಬಿಹಾರ್ ಘಟಕವು ತೌಲನಿಕವಾಗಿ ಹೆಚ್ಚು ತೀವ್ರಗಾಮಿಯಾಯಿತು. ರಾಷ್ಟ್ರವು ರಾಜಕಾರಣದಲ್ಲಿ ವಲ್ಲಭಭಾಯ್ ಪಟೇಲ್ ಅವರು ಪ್ರತಿನಿಧಿಸುತ್ತಿದ್ದ ಬಲಪಂಥೀಯ ರಾಜಕಾರಣಕ್ಕಿಂತ ಹೆಚ್ಚಾಗಿ ಪಂಡಿತ್ ನೆಹರೂ ಪ್ರತಿನಿಧಿಸುತ್ತಿದ್ದ ಎಡಪಂಥೀಯ ರಾಜಕಾರಣದ ಕಡೆಗೆ ಹೆಚ್ಚು ವಾಲಿತು. ಎಲ್ಲಕ್ಕಿಂತ ಹೆಚ್ಚಾಗಿ ಜಗಜೀವನರಾಂ ನೇತೃತ್ವದಲ್ಲಿ ಕೃಷಿಕಾರ್ಮಿಕರ ಹಿತರಕ್ಷಣೆಯನ್ನು ಪ್ರೋತ್ಸಾಹಿಸುವ ಮೂಲಕ ಈ ವಿಚಾರದಲ್ಲಿ ಎಡಪಂಥೀಯರ ಸವಾಲನ್ನು ಎದುರಿಸಲು ಪ್ರಯತ್ನಿಸಿತು. ೧೯೩೦ರ ದಶಕದಷ್ಟು ಹಿಂದೆ, ದೇಶದ ರಾಜಕಾರಣದಲ್ಲಿ ಇಂತಹ ಪರಿಸ್ಥಿತಿಯಿದ್ದುದು ಬಿಹಾರವೊಂದರಲ್ಲೇ ಎಂದು ತೋರುತ್ತದೆ. ತತ್ವಬದ್ಧವಾದ ವಾದ-ಪ್ರತಿವಾದ ಸಂವಾದಗಳು ಅಂದಿನ ಬಿಹಾರ ರಾಜಕೀಯ ಚಟುವಟಿಕೆಯ ಒಂದು ಭಾಗವೇ ಆಗಿತ್ತು.

ಅಂದಿನ ರಾಜಕಾರಣದಲ್ಲಿ ಯಾವುದೇ ಪಕ್ಷವು ತನ್ನ ನೆಲೆಯನ್ನು ಕಂಡುಕೊಳ್ಳಬೇಕಿದ್ದರೆ ಗಂಭೀರವಾದ ವಿದ್ವತ್ತು ಮತ್ತು ಭದ್ರವಾದ ತತ್ವಬದ್ಧತೆಯುಳ್ಳ ನಾಯಕರ ಅಗತ್ಯವಿತ್ತು. ಜಯಪ್ರಕಾಶ್ ನಾರಾಯಣ್ ಮತ್ತು ಕರ್ಪೂರೀ ಠಾಕೂರ್ – ಇವರು ಸೋಷಲಿಸ್ಟ್ ಚಳುವಳಿಯ ದಾರಿದೀಪವಾಗಿದ್ದು ಇಡೀ ದೇಶದಲ್ಲಿ ವಿಶೇಷ ಗೌರವಕ್ಕೆ ಪಾತ್ರರಾಗಿದ್ದರು. ಕಾಂಗ್ರೆಸ್ ಪಕ್ಷದಲ್ಲಿ ಕೂಡ ಪಂಡಿತ್ ನೆಹರೂ ಅನುಯಾಯಿಗಳಾಗಿದ್ದ ಶ್ರೀಕೃಷ್ಣ ಸಿನ್ಹ, ಕೃಷ್ಣವಲ್ಲಭ ಸಹಾಯ್‌ರಂಥವರು ತಮ್ಮ ವಿದ್ವತ್ತಿನಿಂದಾಗಿ ಯಾವುದೇ ತತ್ವಬದ್ಧ ರಾಜಕೀಯ ಚರ್ಚೆಯಲ್ಲಿ ತಮ್ಮ ಅಭಿಪ್ರಾಯ ಗಳನ್ನು ಸಮರ್ಥಿಸಿಕೊಳ್ಳಬಲ್ಲವರಾಗಿದ್ದರು. ಇಂತಹ ರಾಜಕೀಯ ಧುರೀಣರ ನಡುವೆ ಜಗನ್ನಾಥ್ ಸರ್ಕಾರ್ ಅವರು ಇಂದ್ರದೀಪ್ ಸಿನ್ಹ, ಸುನಿಲ್ ಮುಖರ್ಜಿ ಮತ್ತು ಚಂದ್ರಶೇಖರ ಸಿನ್ಹರಂತಹ ಸಂಗಾತಿಗಳ ಜೊತೆಗೂಡಿ ಬಿಹಾರ್ ರಾಜ್ಯದಲ್ಲಿ ಭಾರತೀಯ ಕಮ್ಯುನಿಸ್ಟ್ ಪಕ್ಷಕ್ಕೆ ತನ್ನದೇ ಆದ ಒಂದು ಅನನ್ಯತೆಯನ್ನು ಗಳಿಸಿಕೊಟ್ಟರು. ಇದರಿಂದ ಪಕ್ಷಕ್ಕೆ ಸೂಕ್ತ ಲಾಭವೂ ದೊರೆಯದೆ ಹೋಗಲಿಲ್ಲ. ವಾಷಿಂಗ್‌ಟನ್ ವಿಶ್ವವಿದ್ಯಾನಿಲಯದ ಪಾಲ್ ಆರ್. ಬ್ರಾಸ್ ಹೇಳುವಂತೆ ಎಪ್ಪತ್ತರ ದಶಕದ ಆರಂಭದಲ್ಲಿ ಬಿಹಾರ ಶಾಸನಸಭೆಯಲ್ಲಿ ಭಾರತೀಯ ಕಮ್ಯುನಿಸ್ಟ್ ಪಕ್ಷವು ತನ್ನ ಪ್ರಾಬಲ್ಯವನ್ನು ಸತತವಾಗಿ ಅಭಿವೃದ್ಧಿಪಡಿಸಿಕೊಂಡು ಗಟ್ಟಿಗೊಳ್ಳುತ್ತಿತ್ತು. ಈ ಸಾಮರ್ಥ್ಯದಿಂದಾಗಿಯೆ ರಾಜ್ಯದಲ್ಲಿ ಜೆ.ಪಿ. ಚಳುವಳಿಯಂಥ ಸುಸಂಘಟಿತ ಮೇಲುವರ್ಗದ ಬಂಡಾಯವನ್ನು ಕೂಡ ಎದುರಿಸಿ ನಿಲ್ಲುವುದು ಸಾಧ್ಯವಾಯಿತು.

ಜಗನ್ನಾಥ್ ಸರ್ಕಾರ್ ಮತ್ತು ಇಂದ್ರದೀಪ್ ಸಿನ್ಹ ಮೊದಲಾದವರು ರಾಜ್ಯಮಟ್ಟದಲ್ಲಿ ಸಿಪಿಐ ಪಕ್ಷವನ್ನು ಕಟ್ಟುವುದರಲ್ಲಿ ತೊಡಗಿದ್ದರೆ, ಸುನಿಲ್ ಮುಖರ್ಜಿ ಮತ್ತು ಚಂದ್ರಶೇಖರ್ ಸಿನ್ಹ ಇವರಿಂದ ಲೋಕಸಭೆಯ ಶಾಸಕಾಂಗ ದಳವು ನಿರ್ಮಾಣವಾಗಿತ್ತು. ಇದೊಂದು ಅಭೂತಪೂರ್ವ ತಂಡ!... ಆದರೆ ಮುಂದೆ ಕೇಂದ್ರ ತಂಡವು ಒಡೆಯಿತು.

ಮೊದಲು, ಸ್ವಾತಂತ್ರ್ಯೋತ್ತರ ಭಾರತದ ಅತ್ಯುತ್ತಮ ಸಮೂಹ ನಾಯಕರಾಗಿದ್ದ ಚಂದ್ರಶೇಖರ ಸಿನ್ಹ ಅಕಾಲ ಮರಣಕ್ಕೀಡಾದರು. ಆಮೇಲೆ ಜಗನ್ನಾಥ್ ಸರ್ಕಾರ್ ಮತ್ತು ಇಂದ್ರದೀಪ್ ಸಿನ್ಹ ಇವರನ್ನು ಪಕ್ಷದ ಕೇಂದ್ರ ಸಮಿತಿಗೆ ತರಲಾಯಿತು. ಹೀಗಾಗಿ ರಾಜ್ಯದಲ್ಲಿ ಪಕ್ಷವನ್ನು ಮುನ್ನಡೆಸಲು ಉಳಿದುಕೊಂಡವರು ಡಾ|| ಸೇನ್ ಮತ್ತು ಸುನಿಲ್ ಮುಖರ್ಜಿ ಮಾತ್ರ.

ಎಂಬತ್ತನೇ ದಶಕವು ಕಾಲಿಡುತ್ತಿದ್ದಂತೆ ತತ್ವನಿಷ್ಠ ರಾಜಕಾರಣಕ್ಕೆ ತಿಲಾಂಜಲಿ ಬಿಟ್ಟಂತಾಯಿತು. ಬಿಹಾರದಲ್ಲಿ ಈ ಮೊದಲೇ ಜೆ.ಪಿ. ಚಳುವಳಿಯು ತಕ್ಕ ವಾತಾವರಣವನ್ನು ನಿರ್ಮಿಸಿತ್ತು. ಮುಕ್ತ ಆರ್ಥಿಕನೀತಿ ಮತ್ತು ಉದಾರೀಕರಣಗಳಿಂದಾಗಿ ಪ್ರಭುತ್ವ ಕೇಂದ್ರಿತ ರಾಜಕಾರಣವು ನಿಧಾನವಾಗಿ ಕೈಜಾರಿಹೋಗತೊಡಗಿತು. ಈಗೇನಿದ್ದರೂ ರಾಜಕಾರಣವು ಕೇಂದ್ರೀಕರಣಗೊಂಡುದು ಜಾತಿ-ಮತ, ಜನಾಂಗಗಳ ಭೇದಭಾವಗಳ ಸುತ್ತ. ಈ ನಿಟ್ಟಿನಲ್ಲಿ ಹೊಸ ಸಮೀಕರಣಗಳನ್ನು ಆಧರಿಸಿ ರಾಜಕಾರಣವು ಮುಂದುವರಿಯಲಾರಂಭಿಸಿತು. ಇಂಥ ಸಾಮಾಜಿಕ ಮತ್ತು ಜಾತೀಯ ಕಾರ್ಯಕ್ರಮಗಳು ದೇಶದ ಉದಾರೀಕರಣ ನೀತಿಗೆ ಯಾವುದೇ ಅಡ್ಡಿಯುಂಟುಮಾಡಲಿಲ್ಲ. ಏನೇ ಇರಲಿ; ರಾಜ್ಯದ ಕಮ್ಯುನಿಸ್ಟ್ ಚಿಂತಕರು, ಸೋಷಲಿಸ್ಟ್ ಚಳುವಳಿಯು ಎತ್ತಿ ತೋರಿಸುತ್ತಿದ್ದ ಸಾಮಾಜಿಕ ಶೋಷಣೆಗಿಂತಲೂ ಆರ್ಥಿಕ ಶೋಷಣೆಯ ವಿಚಾರಗಳಿಗೆ ಪ್ರಾಧಾನ್ಯ ಕೊಟ್ಟರು. ಕಮ್ಯುನಿಸ್ಟ್ ಚಳುವಳಿಯು ಭದ್ರವಾಗಿ ಬೇರೂರಿದ್ದ ಕೇರಳ ಅಥವಾ ಪಶ್ಚಿಮ ಬಂಗಾಳಗಳಲ್ಲಿ ಸಾಮಾಜಿಕ ಆಂದೋಲನವು ಬಹು ಹಿಂದೆಯೆ ಪೂರ್ಣಗೊಂಡಿತ್ತು. ಹೀಗಾಗಿ ಅಲ್ಲಿ ಸಾಮಾಜಿಕ ಸಮಸ್ಯೆಗಳ ಜೊತೆಗೆ ಸ್ಪರ್ಧಿಸಬೇಕಾದ ಅಗತ್ಯ ಏರಲಿಲ್ಲವಾಗಿ ಕಮ್ಯುನಿಸ್ಟ್ ಕಾರ್ಯಕ್ರಮವನ್ನು ಜಾರಿಗೊಳಿಸುವುದು ಸುಲಭವಾಯಿತು. ಬಿಹಾರದಲ್ಲಿ ಕಮ್ಯುನಿಸ್ಟ್ ಚಳುವಳಿಯು ಆರ್ಥಿಕ ಶೋಷಣೆಯ ವಿರುದ್ಧ ಕೆಚ್ಚಿನಿಂದ ಹೋರಾಡಿತಾದರೂ ಪ್ರಾಯಶಃ ಸಾಮಾಜಿಕ ಸಮಸ್ಯೆಗಳನ್ನು ಕಡೆಗಣಿಸಿದ್ದುದರಿಂದ ಇಲ್ಲಿನ ಕಮ್ಯುನಿಸ್ಟ್ ಪಕ್ಷವು ಪರಿಮಿತ ವ್ಯಾಪ್ತಿಯಲ್ಲೆ ಉಳಿಯಬೇಕಾಯಿತೆಂದು ತೋರುತ್ತದೆ.

ತತ್ವಾಧಾರಿತ ರಾಜಕಾರಣವು ಹಿಂದೆ ಸರಿದಂತೆ ಪಕ್ಷ ಸಂಘಟನೆಯೆಂಬುದು ಗತಕಾಲದ ಸಂಗತಿಯಾಯಿತು. ಇನ್ನು ಮುಂದಿನದೇನಿದ್ದರೂ ಅಪರಾಧಿಗಳು, ಪಾತಕಿಗಳು ನಿಯಂತ್ರಿಸುವ ರಾಜಕಾರಣ. ಇಂಥ ಸನ್ನಿವೇಶದಲ್ಲಿ ಏನೆಲ್ಲ ಪ್ರೇರಣೆಗಳ ಹೊರತಾಗಿಯೂ ಎಡಪಕ್ಷಗಳು ರಾಜಕೀಯವಾಗಿ ಅಪ್ರಸ್ತುತವೆನಿಸತೊಡಗಿದವು. ಇಷ್ಟಾದರೂ ಜಗನ್ನಾಥ್ ಸರ್ಕಾರ್ ಅವರು ಮಿದುಳಿನ ರಕ್ತಸ್ರಾವದಿಂದ ಅಸ್ವಸ್ಥರಾದ ೧೯೮೫ರಲ್ಲಿ ಬಿಹಾರದ ಸಿಪಿಐ ಎತ್ತರದ ಸ್ಥಾನದಲ್ಲಿಯೇ ಇದ್ದು ಮುಂದೆ ಕ್ರಮೇಣ ಕುಸಿಯತೊಡಗಿತು.

ಜಗನ್ನಾಥ್ ಸರ್ಕಾರ್ ಸಕ್ರಿಯ ರಾಜಕಾರಣದಿಂದ ನಿವೃತ್ತರಾಗಿ ವಿಶ್ರಾಂತಿ ಪಡೆಯುತ್ತಿರುವಾಗಲೂ ಮನೆಯಿಂದಲೇ ವ್ಯವಹರಿಸುತ್ತ ಪಕ್ಷದ ಕಾರ್ಯಕರ್ತರಿಗೆ ಅಗತ್ಯ ಮಾರ್ಗದರ್ಶನ ನೀಡುತ್ತಿರುತ್ತಾರೆ. ಪೂರ್ಣಾವಧಿಯ ಕಮ್ಯುನಿಸ್ಟ್ ಕಾರ್ಯಕರ್ತ



## ಎದೆಯ ಹೊಲದಲ್ಲಿ

**ವಾ**ಟೆ ನೆಲದಲ್ಲಿ ಎದೆ ಉಬ್ಬಿಸಿ ಬಿರುಗಾಳಿ
ಹನಿ ಹನಿ ಚದುರಿ ಗಡಿಬಿಡಿ ಎದೆಯಲ್ಲಿ
ದವಗುಟ್ಟು ನಡೆದಂತೆ ಗಡಿಯಾರ.
ಹೆಬ್ಬಂಡೆ ಉರುಳಿ ಅಂಗಲಾಚಿ
ನಾಲಿಗೆ ಚಾಚಿ
ಎಂಜಲ ಗುಟುಕ ಗುಟುಕಿಸಿ
ಮಣ್ಣಲ್ಲಿ ಬಿದ್ದು,
ಮಳೆ ಹದಕೆ ನೆಲದ ತೊಡೆ ಏರಿ ಬೀಜ
ಮೆಲ್ಲ ಮೆಲ್ಲನೆ ಎಸಳೆಸಳು
ಗರಿಗೆದರಿ ಹೂವು ಅರಳಿ
ಹಾಲುಗಾಳಿಗೆ ಚಿಲಿ ಪಿಲಿ ಮೋದ
ಎದೆಯ ಹೊಲದಲ್ಲಿ ಸೂರ್ಯಕಾಂತಿ

**ಆಲೂರು ದೊಡ್ಡಲಿಂಗಪ್ಪ**
ರಂಗಾಯಣ, ಕಲಾಮಂದಿರ ಆವರಣ
ಮೈಸೂರು - ೫೭೦೦೦೫

ಾಗಿದ್ದುಕೊಂಡೇ ಜಗನ್ನಾಥ್ ಸರ್ಕಾರ್ ಬಹುಬಗೆಯ ಸಾಂಸ್ಕೃತಿಕ ಚಟುವಟಿಕೆಗಳಲ್ಲಿ ಆಸಕ್ತಿ ತಾಳಿದರು. ಸ್ವತಃ ಸಿತಾರ್ ನುಡಿಸುವುದರಲ್ಲಿ ಒಳ್ಳೆಯ ಸಾಧನೆ ಮಾಡಿರುವ ಇವರು ಪಾಶ್ಚಾತ್ಯ ಮತ್ತು ಭಾರತೀಯ ಮಾರ್ಗ ಸಂಗೀತ ಕಲೆಗಳ ಸಂಕೀರ್ಣತೆಯನ್ನೂ, ಸೂಕ್ಷ್ಮತೆಗಳನ್ನೂ ಬಲ್ಲವರಾಗಿದ್ದಾರೆ. ಇಂತಹ ಬಹುಮುಖೀ ಆಸಕ್ತಿಗಳನ್ನು ಹೊಂದಿರುವ ಜಗನ್ನಾಥ್ ಸರ್ಕಾರ್ ಅವರನ್ನು ಒಬ್ಬ 'ಪುನರುಜ್ಜೀವನ ಕಾಲದ ವ್ಯಕ್ತಿ' ಎಂದು ವರ್ಣಿಸಬಹುದು. ರಾಜಕೀಯ, ಸಾಮಾಜಿಕ, ಸಾಂಸ್ಕೃತಿಕ ಕ್ರಿಯಾಶೀಲತೆಯ ನಡುವೆ ಇವರು ಕೌಟುಂಬಿಕ ಜವಾಬ್ದಾರಿಗಳನ್ನು, ವಾತ್ಸಲ್ಯವನ್ನು ಕಡೆಗಣಿಸಲಿಲ್ಲ. ತಮ್ಮ ವೃದ್ಧಾಪ್ಯದಲ್ಲಿ ಮೊಮ್ಮಕ್ಕಳಿಗೆ ಅಕ್ಕರೆಯ ಅಜ್ಜನಾಗಿದ್ದಾರೆ. ಅಸ್ಮಿತಾ, ಗೀತಾಂಜಲಿ, ಸುಜಾನರೆಂಬ ಮೂವರು ಮೊಮ್ಮಕ್ಕಳಲ್ಲಿ ಅವರ ಪ್ರೀತಿಯ ದೊಡ್ಡ ಪಾಲು ದೊರೆತುದು ಹಿರಿಯ ಮೊಮ್ಮಗಳು ಅಸ್ಮಿತಾಗೆ.

ಜಗನ್ನಾಥ್ ಸರ್ಕಾರ್ ಈಗ ರಾಜಕೀಯ ಮುಖ್ಯವಾಹಿನಿಯಿಂದ ದೂರವಾಗಿದ್ದು ಸಂಪೂರ್ಣ ವಿಶ್ರಾಂತಿ ಪಡೆಯುತ್ತಿರುವರಾದರೂ ಈ ಸಂಪುಟದಲ್ಲಿರುವ ಲೇಖನಗಳು ಇಡೀ ದೇಶದಲ್ಲಿ ಅವರು ಪಡೆದಿರುವ ಗೌರವಾದರಗಳಿಗೆ ನಿದರ್ಶನವಾಗಿವೆ. ಇಷ್ಟೊಂದು ಪ್ರಭಾವಶಾಲಿ ಆಗಿದ್ದರೂ ಸರ್ಕಾರ್ ಯಾವತ್ತೂ ತಮ್ಮ ಪ್ರಭಾವವನ್ನು ಸ್ವಾರ್ಥಕ್ಕೆ ಬಳಸಿಕೊಂಡವರಲ್ಲ.

ದೇಶದ ಪ್ರಧಾನಮಂತ್ರಿಗಳಿಂದ ಹಿಡಿದು ರಾಜ್ಯದ ಮುಖ್ಯಮಂತ್ರಿಗಳನ್ನು ಒಂದು ದೂರವಾಣಿ ಕರೆಯಿಂದ ಸಂಪರ್ಕಿಸಬಹುದಾದಷ್ಟು ಹತ್ತಿರವಿದ್ದರೂ ಆ ಸಂಪರ್ಕವನ್ನು ಯಾವತ್ತೂ ಅವರು ಸ್ವಂತಕ್ಕೆ ಬಳಸಿಕೊಳ್ಳಲಿಲ್ಲ. ಈ ಒಂದು ಸಂಕೋಚ ಪ್ರವೃತ್ತಿಯು ಅವರ ಕ್ರಿಯಾಶೀಲ ಬದುಕಿನ ಹಾಗೂ ವ್ಯಕ್ತಿತ್ವದ ಹೆಗ್ಗುರುತಾಗಿದೆ.

ಜಗನ್ನಾಥ್ ಸರ್ಕಾರ್ ಕಮ್ಯುನಿಸ್ಟ್ ಪಕ್ಷವನ್ನು ಸೇರಿದ್ದು ೧೯೩೯ರಲ್ಲಿ;ಅಂದರೆ ತಮ್ಮ ಇಪ್ಪತ್ತನೇ ವಯಸ್ಸಿನಲ್ಲಿ! ಪಶ್ಚಿಮ ಬಂಗಾಳದ ಪ್ರಖ್ಯಾತ ಮಾರ್ಕ್ಸ್‌ವಾದಿ ಜ್ಯೋತಿ ಬಸು ಅವರಿಗಿಂತ (೧೯೪೦) ಒಂದು ವರ್ಷ ಮುಂಚೆ. ಅಂದಿನ ಕಮ್ಯುನಿಸ್ಟ್ ಪಕ್ಷದ ಒಂದು ತಂಡವು ಇಂಗ್ಲೆಂಡಿಗೆ ಹೋಗಿ ಕಾನೂನು ವಿದ್ಯೆಯನ್ನು ಅಧ್ಯಯನ ಮಾಡಿ, ಮಾರ್ಕ್ಸ್‌ವಾದದ ದೀಕ್ಷೆ ಪಡೆದು ಭಾರತಕ್ಕೆ ಹಿಂದಿರುಗಿ ಹೈಕೋರ್ಟಿನಲ್ಲಿ ಬ್ಯಾರಿಸ್ಟರ್ ಆಗಿ ವೃತ್ತಿಯನ್ನಾರಂಭಿಸಿತು. ಜ್ಯೋತಿ ಬಸು ಮತ್ತು ಭೂಪೇಶ್ ಗುಪ್ತ ಲಂಡನ್ನಿನಲ್ಲಿದ್ದರೆ ಇಂದ್ರಜಿತ್ ಗುಪ್ತ ಕೇಂಬ್ರಿಡ್ಜ್‌ನಲ್ಲಿದ್ದರು. ಆದರೆ ಜಗನ್ನಾಥ್ ಸರ್ಕಾರ್ ಇಂಗ್ಲೆಂಡಿಗೆ ಹೋಗದೆ ಭಾರತದಲ್ಲಿಯೇ ಉಳಿದರು.

ಜ್ಯೋತಿ ಬಸು ಮತ್ತು ಸರ್ಕಾರ್ ನಿಡುಗಾಲದ ಸಹೋದ್ಯೋಗಿಗಳು. ಕಮ್ಯುನಿಸ್ಟ್ ಪಕ್ಷದ ರಾಷ್ಟ್ರೀಯ ಸಮಿತಿಯಲ್ಲಿ ಜಗನ್ನಾಥ್ ಸರ್ಕಾರ್ ಬಿಹಾರವನ್ನು ಪ್ರತಿನಿಧಿಸಿದರೆ, ಭೂಪೇಶ್ ಗುಪ್ತ ಮತ್ತು ಜ್ಯೋತಿ ಬಸು ಪಶ್ಚಿಮ ಬಂಗಾಳವನ್ನು ಪ್ರತಿನಿಧಿಸುತ್ತಿದ್ದರು. ಸಮಿತಿಯ ಸಭೆಗಳಿಗಾಗಿ ಈ ಮೂವರೂ ದೆಹಲಿಯಲ್ಲಿ ಒಟ್ಟುಗೂಡುತ್ತಿದ್ದರು.

**ಜಾತಿ**

ಬದುಕಿನಲ್ಲಿ ಮಾತ್ರವೆ?
ಸಾವಿನಲ್ಲೂ ಜಾತಿ:
ಪ್ರತಿ ಜಾತಿಗೂ
ಪ್ರತ್ಯೇಕ
ಶ್ಮಶಾನ ಪದ್ಧತಿ!

ಸಿ.ಪಿ.ಕೆ.
ಮೈಸೂರು

೧೯೬೪ರಲ್ಲಿ ಕಮ್ಯುನಿಸ್ಟ್ ಪಕ್ಷವು ವಿಭಜನೆಗೊಂಡಾಗ ಜ್ಯೋತಿ ಬಸು ಬಹುದಿನಗಳವರೆಗೆ ಮಾತೃ ಪಕ್ಷವನ್ನು ಬಿಡಬೇಕೆ ಬೇಡವೇ ಎಂಬ ಬಗೆಗೆ ಸಂದಿಗ್ಧದಲ್ಲಿದ್ದರಂತೆ. ಆದರೆ ವಿಭಜನೆಯ ಬಗೆಗೆ ಹೆಚ್ಚು ಮಾತಾಡುತ್ತಿರಲಿಲ್ಲ. ವಿಭಜನೆಯನಂತರ ಜಗನ್ನಾಥ್ ಸರ್ಕಾರ್ ಮತ್ತು ಭೂಪೇಶ್ ಗುಪ್ತ ಮೂಲ ಸಿಪಿಐನಲ್ಲಿ ಉಳಿದರು. ಜ್ಯೋತಿ ಬಸು, ಅಜಯ್ ಘೋಷ್ ಇತರರೊಂದಿಗೆ ಕೂಡಿ ವಿಭಜನೆಯನ್ನು ತಡೆಯಲು ಮಾತುಕತೆ ನಡೆಸುತ್ತಿದ್ದರಂತೆ. ಆದರೆ ಅಂತಿಮವಾಗಿ ಜ್ಯೋತಿ ಬಸು ಸಿಪಿಐ(ಎಂ) ಸೇರಿ ಪಾಲಿಟ್ ಬ್ಯೂರೋ ಸದಸ್ಯರಾದರು.

ಪಕ್ಷದ ವಿಭಜನೆಗೆ ಚೀನಾ-ಭಾರತ ಯುದ್ಧಕ್ಕಿಂತ ಬೇರೆಯಾದ ಕಾರಣವೇನಾದರೂ ಇತ್ತೇ – ಎಂಬ ಪ್ರಶ್ನೆಗೆ ಒಂದು ಕಡೆ ಜಗನ್ನಾಥ್ ಸರ್ಕಾರ್ ಹೀಗೆ ಉತ್ತರಿಸಿದ್ದಾರೆ: ಆರಂಭದಲ್ಲಿ ಸಿಪಿಐ(ಎಂ) ಪಕ್ಷವು ಕಟ್ಟುನಿಟ್ಟಾಗಿ ರೈತರು ಮತ್ತು ಕಾರ್ಮಿಕರು ಕ್ರಾಂತಿಯ ನಾಯಕತ್ವ ವಹಿಸುವುದರಲ್ಲಿ ನಂಬಿಕೆಯಿಟ್ಟಿತ್ತು. ಆದರೆ ಮುಂದೆ ಅದೂ ಕೂಡ ರಾಷ್ಟ್ರೀಯ ಪ್ರಜಾಪ್ರಭುತ್ವ ವಾದವನ್ನು ಒಪ್ಪಿಕೊಂಡು ಚುನಾವಣೆಗಳಲ್ಲಿ ಭಾಗವಹಿಸತೊಡಗಿತು. ಈ ಪರಿವರ್ತನೆಯು ಎರಡೂ ಪಕ್ಷಗಳನ್ನು ಹತ್ತಿರ ತಂದಿತು. ಈ ಸಂದರ್ಭದಲ್ಲಿ ಒಮ್ಮೆ ಜಗನ್ನಾಥ್ ಸರ್ಕಾರ್ ಅವರು 'ಪೀಪಲ್ಸ್ ಡೆಮಾಕ್ರಸಿ'ಯ ಸಂಪಾದಕರಾಗಿದ್ದ ಕಾಮ್ರೇಡ್ ಜ್ಯೋತಿ ಬಸು ಅವರಿಗೆ 'ತಮ್ಮಿಬ್ಬರ ಅಭಿಪ್ರಾಯಗಳಲ್ಲಿ ಹೆಚ್ಚು ವ್ಯತ್ಯಾಸವೇನಿಲ್ಲ' – ಎಂದು ಬರೆದಿದ್ದರಂತೆ. ಅದಕ್ಕೆ ಜ್ಯೋತಿ ಬಸು ಅವರು ಅದೇ ಪತ್ರಿಕೆಯ ಮೂಲಕ ಸಿಪಿಐನದು ಕಾಲದೇಶಗಳಿಗನುಗುಣವಾದ ರಣತಂತ್ರ (strategically made...)ವಾದರೆ ಸಿಪಿಐ(ಎಂ)ನದು ತತ್ವಬದ್ಧ ರಣತಂತ್ರ (ideological concept, tactical) ಎಂದು ಉತ್ತರಿಸಿದ್ದರಂತೆ. ಪ್ರಸ್ತುತ 'ಸಂಭಾವನಾ ಗ್ರಂಥ'ವು ಬೇರೆಬೇರೆಯ ಸಂದರ್ಭಗಳಲ್ಲಿ ಸ್ವತಃ ಜಗನ್ನಾಥ್ ಸರ್ಕಾರ್ ಅವರೇ ಬರೆದ ೪೯ ಲೇಖನಗಳನ್ನೂ, ಅವರ 'ಪರೋಕ್ಷ ಶಿಷ್ಯ'ರೂ, ಕುಟುಂಬ ವರ್ಗದವರೂ, ಆಪ್ತ ಸಂಗಾತಿಗಳೂ ಬರೆದ ೩೯ ಲೇಖನಗಳನ್ನೂ ಒಳಗೊಂಡಿದೆ.

ಈ ಲೇಖನಗಳನ್ನು 'ವಿಮರ್ಶೆ ಮಾಡುವುದು' ಈ ಲೇಖಕನ ಗ್ರಹಿಕೆಗೆ ಮೀರಿದ ವಿಚಾರ. ಆದ್ದರಿಂದ ಮುನ್ನುಡಿಯಲ್ಲಿ ಹೇಳಿರುವ ಮಾತುಗಳನ್ನಷ್ಟೇ ಇಲ್ಲಿ ಮತ್ತೆ ಉದ್ಧರಿಸಬಹುದು: ''ಈ ಒಂದು ಸಂಪುಟವು ಜಗನ್ನಾಥ್ ಸರ್ಕಾರ್ ಅವರ ಸಮಗ್ರ ಸಾಧನೆಯ ಚಿತ್ರವನ್ನು ಕಟ್ಟಿಕೊಡಲಾರದು. ಆದರೆ ಅವರ ಸಮಕಾಲೀನವಾದ ತತ್ವಬದ್ಧ ರಾಜಕಾರಣ, ಪಕ್ಷ ಸಂಘಟನೆ ಮತ್ತು ಬಿಹಾರದ ಅಭಿವೃದ್ಧಿಗೆ ಸಂಬಂಧಿಸಿದ ಒಂದು ಇಣುಕುನೋಟವನ್ನು ಖಂಡಿತ ನೀಡಬಲ್ಲುದು. ವಿವಿಧ ಬಗೆಯ ಹಿನ್ನೆಲೆಯುಳ್ಳ ಅವರ ಸಮಕಾಲೀನರು ತಮ್ಮ ನೆನಪುಗಳನ್ನು ಚಿತ್ರಿಸಿರುವ ರೀತಿಯು ಆಪ್ತವಾಗಿದ್ದು, ಜಗನ್ನಾಥ್ ಸರ್ಕಾರ್ ಅವರ ಬಗೆಗೆ ಜನರ ಮೆಚ್ಚುಗೆ ಮತ್ತು ಗೌರವಗಳನ್ನು ಅಭಿವ್ಯಕ್ತಿಸುತ್ತದೆ.'' ಇಂದಿನ ಪರಿಸ್ಥಿತಿಯಲ್ಲಿ ಸ್ವಾರ್ಥ ಸಾಧನೆಯು ಸರ್ವಸಾಮಾನ್ಯವಾಗಿಬಿಟ್ಟಿದೆ. ಇಂದಿನ ಯುವಕರಿಗೆ ಪೂರ್ವಸೂರಿಗಳ ಬಗೆಗೆ, ಆದರ್ಶ ರಾಜಕೀಯ ಕಾರ್ಯಕರ್ತರ ಬಗೆಗೆ ತಿಳಿಸಿಕೊಡಬಲ್ಲವರು ಇಲ್ಲವಾಗಿದ್ದಾರೆ. ಇಂಥ ಸಂದರ್ಭದಲ್ಲಿ ಜಗನ್ನಾಥ್ ಸರ್ಕಾರ್ ಅವರ ಜೀವನ ಮತ್ತು ಚಿಂತನೆಗಳು ಯುವ ಪೀಳಿಗೆಗೆ ಸ್ಫೂರ್ತಿದಾಯಕವಾಗಬಲ್ಲುದೆಂದು ಆಶಿಸೋಣ. ಇಂಥದೊಂದು ಸಂಪುಟವನ್ನು ಅತ್ಯಂತ ಶ್ರದ್ಧೆಯಿಂದ ಸಿದ್ಧಪಡಿಸಿದ ಮಿತಾಲಿ, ಅಭಿಜಿತ್ ಮತ್ತು ಗೌತಮ್ ಅವರನ್ನು ಹೃತ್ಪೂರ್ವಕವಾಗಿ ಅಭಿನಂದಿಸಬೇಕಾಗಿದೆ.

**ಡಾ|| ಕೆ. ಎಲ್. ಗೋಪಾಲಕೃಷ್ಣಯ್ಯ**
ನಂ. ೨೨೭೩, ೨೨ನೇ ಅಡ್ಡರಸ್ತೆ, ಬನಶಂಕರಿ ೨ನೇ ಹಂತ
ಬೆಂಗಳೂರು - ೫೬೦ ೦೭೦



# ಪೇಟೆ ಬಂಧನದೊಳಗೆ

ಸುನಂದಾ ಪ್ರಕಾಶ ಕಡಮೆ

ನೀಲವ್ವನ ಅಂಗಡಿಯ ಹೂಗಳೆಂದೂ ಬೇಗ ಬಾಡಿದ್ದೇ ಇಲ್ಲ. ನಿನ್ನೆಯ ಹೂಗಳನ್ನು ಇಂದಿನವರೆಗೂ ತಾಜಾ ಆಗಿ ಉಳಿಯುವಂತೆ ಹಸಿಯಾದ ಪತ್ತಿಬಟ್ಟೆಯಿಂದಲೇ ಹೇಗೆ ಮುಚ್ಚಿಡಬೇಕು, ಅದರ ಮೇಲೆ ಅರ್ಧ ಗಂಟೆಗೊಮ್ಮೆ ಯಾವ ಪ್ರಮಾಣದಲ್ಲಿ ತೆಳುವಾಗಿ ನೀರು ಚಿಮುಕಿಸಬೇಕು, ಕಟ್ಟಿದ ಮಾಲೆಗಳೇ ಉಳಿದುಬಿಟ್ಟರೆ ಅದನ್ನು ಪ್ಲಾಸ್ಟಿಕ್ಕಿನ ಚೀಲದಲ್ಲಿ ತುಂಬಿ ಗಾಳಿ ಆಡದ ಹಾಗೆ ಬಾಯಿಕಟ್ಟಿ ಇಟ್ಟು ಹೇಗೆ ಅದರ ತಾಜಾತನ ಕಾಪಾಡಬೇಕು, ಕೆಂಪು ಗುಲಾಬಿ ಮೊಗ್ಗುಗಳು ಎರಡು ದಿನಗಳಾದರೂ ಅರಳದೇ ಮೋಹಕ ಮೊಗ್ಗಾಗಿಯೇ ಕಂಗೊಳಿಸುವಂತೆ ಹೇಗೆ ಮುಚ್ಚಿಡಬೇಕು, ಇಂಥವುಗಳನ್ನೆಲ್ಲ ನೀಲಮ್ಮ ಇನ್ನೂ ಏಳೆಂಟು ವರ್ಷದ ಪೋರಿಯಾಗಿರುವಾಗ ತನ್ನ ಅವ್ವ ಲಕ್ಷ್ಮಮ್ಮನಿಂದಲೇ ಕಲಿತಿದ್ದಳು. ಮಾರನೇ ದಿನ ನಸುಕಿಗೇ ನಡೆವ ಕಾರ್ಯಕ್ರಮಗಳಿಗೆ ಮೊದಲ ದಿನ ರಾತ್ರಿಯೇ ಕೆಂಪು ಗುಲಾಬಿ ಮೊಗ್ಗುಗಳನ್ನು ಕೊಳ್ಳಲು ಬರುವ ಕಾಲೇಜು ಹುಡುಗಿಯರಿಗೆ, ಆ ಮೊಗ್ಗುಗಳು ಅರಳದಂತೆ ಇಡುವ ರಹಸ್ಯವನ್ನು ಅಪರೂಪಕ್ಕೆ ಗುಟ್ಟಾಗಿ ಹೇಳಿಕೊಡುತ್ತಿದ್ದಳು. ಆ ಗುಟ್ಟನ್ನು ಅವರು ನಡುರಸ್ತೆಯಲ್ಲಿಯೇ ''ನಾಳೆತಂಕ ಮೊಗ್ಗಾಗೇ ಇರಬೇಕಂದ್ರ ಗಟ್ಟಿ ಮುಚ್ಚಳಾ ಇರೋ ಸ್ಟೀಲಿನ ಡಬ್ಬದೊಳಗ ಹಾಕಿ ಕತ್ತಲದೊಳಗ ಇಡಬೇಕಂತ ನೋಡಲೇ'' ಅಂತೆಲ್ಲ ತಮ್ಮ ತಮ್ಮಲ್ಲೇ ಸಾರುತ್ತ ಸರಿದುಹೋಗುತ್ತಿದ್ದರು.

ಸುಮಾರು ಹದಿನೆಂಟಿಪ್ಪತ್ತರ ಈ ನೀಲಮ್ಮ ಹೂವಿನಂಗಡಿಯಲ್ಲಿ ತನ್ನ ಬಲಗಾಲು ಉದ್ದಕ್ಕೆ ಬಿಟ್ಟುಕೊಂಡು ಬಿಡಿ ಸೇವಂತಿಗೆ ಹೂಗಳನ್ನು ಪೇರಿಸಿ ಮಾಲೆ ಕಟ್ಟುತ್ತ ಕೂತು, ಅದಾಗ ಐದನೇಯತ್ತೆ ಕಲಿಯುತ್ತಿರುವ ತನ್ನ ತಮ್ಮ ಬಸ್ಯಾನ ಭವಿಷ್ಯದ ಕನಸು ಹೆಣೆಯುತ್ತಿದ್ದಳು. ಹೀಗೆ ಚಾಪೆಯಲ್ಲಿ ನೆಲಕ್ಕೆ ಕೂತಾಗ ನೀಲಮ್ಮನ ಎಡಗಾಲಿಗೆ ಪೋಲಿಯೋ ಹೊಡೆದು ಊನವಾಗಿದ್ದದ್ದು ಹೂವಿಗೆ ಬಂದ ಯಾವ ಗಿರಾಕಿಗೂ ಪತ್ತೆ ಹತ್ತುತ್ತಿರಲಿಲ್ಲ. ಯಾರಾದರೂ ಕಟ್ಟಿದ ಮಾಲೆಗಳನ್ನು ಕೊಳ್ಳಲು ಬಂದರೆ, ನೀಲವ್ವ ಪಕ್ಕದಲ್ಲಿಟ್ಟುಕೊಂಡ ತನ್ನ ಬಗಲ ಕೋಲನ್ನೇ ಎತ್ತಿ ಮೇಲೆ ಅಡ್ಡ ಕಟ್ಟಿದ ಬಿದಿರಿಗೆ ತೂಗು ಹಾಕಿದ ಸಣ್ಣ ದೊಡ್ಡ ಅಳತೆಯ ಮಾಲೆಗಳಲ್ಲಿ ಯಾವುದು ಬೇಕೆಂದು ಕೇಳಿ, ಅದರ ಪ್ರತ್ಯೇಕ ದರ ಹೇಳುತ್ತ, ಅವರು ತೋರಿದ ಒಂದು ಮಾಲೆಯನ್ನು ಅದೇ ಕೋಲಿನಿಂದ ಬೀಳದಂತೆ ತೆಗೆದು, ಕಾಗದದಲ್ಲಿ ಕಟ್ಟಿ ಕೊಡುವ ಚಾಣಾಕ್ಷತೆಯನ್ನು ಗಿರಾಕಿಗಳು ನೆಟ್ಟ ಕಣ್ಣು ನೆಟ್ಟಂತೆಯೇ ನೋಡುತ್ತ ನಿಲ್ಲುತ್ತಿದ್ದರು.

ಅಕ್ಕ ಪಕ್ಕ ಹಾಗೂ ಎದುರು ಇರುವ ಸಾಲು ಸಾಲು ಅಂಗಡಿ ಮಾಲಿಕರುಗಳು ಬೆಳಗ್ಗೆ ಒಂಭತ್ತರ ಹೊತ್ತಿಗೆ ಬಂದವರೇ ತಮ್ಮ ತಮ್ಮ ಅಂಗಡಿಗಳ ಸ್ವಚ್ಛತಾ ಕಾರ್ಯ ಮುಗಿಸಿ, ಗಲ್ಲೆಯ ಮೇಲೆ ನೇತು ಹಾಕಿಕೊಂಡಿರುವ ಗಣೇಶ, ಲಕ್ಷ್ಮಿಯರ ಅಥವಾ ತೀರಿಹೋದ ತಂದೆ ತಾಯಿಯರ ಫೋಟೋಗಳಿಗೆ ಹೊಸ ಹೂವಿನ ಮಾಲೆಗಳನ್ನು ಬದಲಿಸಲು ಈ ನೀಲಮ್ಮನ ಹೂವಿನಂಗಡಿ ಹುಡುಕಿ ಬರುತ್ತಿದ್ದರು. ನೀಲವ್ವ ಸಹ ಎಲ್ಲ ಸಾಲು ಅಂಗಡಿಯವರು ಬಂದು ಬಾಗಿಲು ತೆರೆವುದಕ್ಕೆ ಮೊದಲೇ ತನ್ನ ಹೂವಿನಂಗಡಿಯ ಬಾಗಿಲು ತೆರೆದು ಕೂತಿರುತ್ತಿದ್ದಳು. ರಾತ್ರಿ ಅವರೆಲ್ಲ ಅಂಗಡಿ ಮುಚ್ಚಿ ಹೊರಡುವ ಸಮಯದಲ್ಲಿ ನೀಲವ್ವ ನಿಧಾನ ಎದ್ದು ಉಳಿದ ಹೂವುಗಳನ್ನು ಚೀಲದಲ್ಲಿ ತುಂಬಿ ನೀರು ಚಿಮುಕಿಸಿಟ್ಟು ತನ್ನ ಮಳಿಗೆಗೆ ಬೀಗ ಹಾಕಿ, ತನ್ನ ಮನೆಯಿರುವ ನೇಕಾರ ಕಾಲನಿಯ ಕೊನೆಯ ಬಸ್ಸಿಗೆ ಮನೆಗೆ ಹೋಗುವ ತಯಾರಿ ನಡೆಸುತ್ತಿದ್ದಳು. ಹೀಗೆ ನಿಯಮಿತವಾಗಿ ತೆರೆದೇ ಇರುವ ಈ ನೀಲವ್ವನ ಅಂಗಡಿ, ಅಕ್ಕಪಕ್ಕದ ಅಂಗಡಿಕಾರರಿಗೆಲ್ಲ ಎಂದೂ ಮುಚ್ಚದ ಹೂವಿನಂಗಡಿಯಂತೆ ಭಾಸವಾಗುತ್ತಿತ್ತು.

ಮುಂಜಾನೆ ಏಳರಿಂದ ರಾತ್ರಿ ಒಂಭತ್ತರವರೆಗೆ ಈ ಹೂವಿನಂಗಡಿಯಲ್ಲೇ ಅವಳು ಪುರುಸೊತ್ತೇ ಇಲ್ಲದಂತೆ ಕಳೆದುಬಿಡುವಳು. ಮೊದಲಿನಂತೆ ಈಗ ಧಾರವಾಡ ರಸ್ತೆಯ



ಎಪಿಎಂಸಿಯ ಗೇಟಿನಲ್ಲಿ ನಿಲ್ಲುವ ಸೇವಂತಿಗೆ ಕೆಂಪು ಗುಲಾಬಿ ಟ್ರಕ್ಕುಗಳ ಸವಾಲು ಕರೆದು ಅಳೆದು ಕೊಟ್ಟ ಹೂವನ್ನು ತರುವ ತೊಂದರೆ ಇಲ್ಲ. ಹೂವಿನಂಗಡಿಯ ಎದುರೇ ಬಂದು ನಿಲ್ಲುವ ಹೂವಿನ ಗಾಡಿಗಳು ಯಾವುದು ಬೇಕೋ ಅವೇ ಅವೇ ಹೂವುಗಳನ್ನು ಎಷ್ಟು ಬೇಕೋ ಅಷ್ಟೇ ಕಟ್ಟಿದ ಮಾಲೆ ಬೇಕಾದರೆ ಅವನ್ನೇ ಇಳಿಸಿ ದುಡ್ಡು ಎಣಿಸಿಕೊಂಡು ಹೋಗಿಬಿಡುತ್ತಿದ್ದವು.

ಬಿಡಿ ಹೂಗಳನ್ನೇ ಕೊಂಡು ಅವುಗಳನ್ನೇ ಸ್ವತಃ ಮಾಲೆ ಕಟ್ಟಿ ಮಾರುವುದೇ ಹೆಚ್ಚಿನ ಆದಾಯ ತಂದು ಕೊಡುವುದರಿಂದ ನೀಲಮ್ಮ ಬಿಡಿ ಹೂಗಳನ್ನೇ ಜಾಸ್ತಿ ಕೊಳ್ಳುತ್ತಿದ್ದಳು. ಹೂವಿನ ಗಾಡಿಗಳು ನಸುಕಿನಲ್ಲೇ ಬರುತ್ತಿದ್ದುದರಿಂದ ಆರೂವರೆಯೆಂದರೆ ನೀಲವ್ವ ರೊಟ್ಟಿಯ ಬುತ್ತಿಯೊಂದಿಗೆ ಅಂಗಡಿಗೆ ಹಾಜರಾಗುತ್ತಿದ್ದಳು. ಅವ್ವನ ಸ್ಪರ್ಶವೂ ನೆನಪಿಲ್ಲದ ಬಸ್ಯಾಗೆ ಅಪ್ಪ ಅವ್ವ ಎಲ್ಲವೂ ಈ ನೀಲವ್ವನೇ ಆಗಿದ್ದಳು. ಅಪ್ಪ ಮಲ್ಲೇಶಿ ಗೌಂಡಿ ಕೆಲಸ ಮಾಡುತ್ತ ಯಾತಕ್ಕೋ ಜಗಳಾಡಿ ಜೋರು ಬಾಯಲ್ಲಿ ಕೂಗಾಡಿದ್ದಷ್ಟೇ ಆಗಾಗ ಮಸುಕು ಮಸುಕು ನೆನಪಾಗುತ್ತದೆ ನೀಲಮ್ಮನಿಗೆ. ಆದರೆ ಆ ನೇಕಾರ ಕಾಲನಿಯ ತಟ್ಟಿ ಗೋಡೆಯ ಮನೆಯಿಂದ ಅವ್ವನನ್ನು ಎತ್ತೊಯ್ಯುವಾಗ ಮಾತ್ರ ಪಕ್ಕದ ಮನೆಯ ಪಾರಜ್ಜಿ, ಒಂದು ಕೈಯಲ್ಲಿ ಬಸುವನ್ನು ಇನ್ನೊಂದು ಕೈಯಲ್ಲಿ ನೀಲಮ್ಮನನ್ನೂ ಬಿಗಿಯಾಗಿ ಹಿಡಿದುಕೊಂಡಿದ್ದು ಮಾತ್ರ ನೀಲಮ್ಮನಿಗೆ ಸರಿಯಾಗಿ ನೆನಪಿದೆ. ಅದೇ ಪಾರಜ್ಜಿ ಪುಟ್ಟ ಬಸ್ಯಾನಿಗೆ ಬಾಟಲಿ ಹಾಲು ಚೀಪಿಸಲು ನಂತರ ನುಚ್ಚಿನ ಗಂಜಿ ಬೇಯಿಸಿ ಕುಡಿಸಲು ಹೇಳಿಕೊಟ್ಟಿದ್ದಳು. ಅವೆಲ್ಲವನ್ನು ನೆನೆಸಿಕೊಳ್ಳಲು ಸಹ ಈಗ ಅವಳಿಗೆ ಸಮಯವಿಲ್ಲ. ಅಪ್ಪನಂತೆ ಬಸ್ಯಾನೂ ಕೂಲಿ ಕೆಲಸಕ್ಕೆ ಹೋಗುವುದು ಬೇಡವೆಂದು ನೀಲವ್ವ ಅವನಿಗೆ ಐದು ವರ್ಷ ತುಂಬುತ್ತಲೇ ಅಲ್ಲೇ ಸಮೀಪ ಇರುವ ಸರ್ಕಾರಿ ಶಾಲೆಗೆ ಕಳುಹಿಸುತ್ತಿದ್ದಳು. ಮೊದಮೊದಲು ಅವನನ್ನು ಎಬ್ಬಿಸಿ ರೊಟ್ಟಿ ತಿನ್ನಿಸಿ ಶಾಲೆಗೆ ಕಳುಹಿಸಿಯೇ ಈ ಹೂವಿನಂಗಡಿಗೆ ಬರುತ್ತಿದ್ದವಳು ಈಗೀಗ ಪಕ್ಕದ ಪಾರಜ್ಜಿಗೆ ಹೇಳಿ ಇತ್ತ ಬಂದುಬಿಡುತ್ತಿದ್ದಳು. ಬಸ್ಯಾ ಒಂದೊಂದು ದಿನ ಅಜ್ಜಿಗೆ 'ಈವತ್ತು ಶಾಲೀ ಇಲ್ಲಬೇ ಅಜ್ಜಿ' ಅಂತ ಸುಳ್ಳು ಹೇಳಿ ವಾರಕ್ಕೆರಡು ದಿನ ತಪ್ಪಿಸಿಯೇ ಬಿಡುತ್ತಿದ್ದ.

ಜನತಾ ಬಜಾರಿನಲ್ಲಿ ಅಂದು ಪ್ರತಿ ವರ್ಷದಂತೆ ದೀಪಾವಳಿ ಹಬ್ಬದಲ್ಲಿ ನಡೆವ ಲಕ್ಷ್ಮೀ ಪೂಜೆಯ ಸಂಭ್ರಮದ ವಾತಾವರಣ. ಸಾಲು ಸಾಲು ಅಂಗಡಿಗಳಿಗೆ ತಿಂಗಳ ಮೊದಲೇ ವರ್ಷಕ್ಕೊಂದಾವರ್ತಿ ಹೊಡೆಸುವ ಸುಣ್ಣ ಬಣ್ಣ, ಬಲ್ಬಿನ ಸರದಿಂದ ಶೃಂಗರಿಸಿ, ಗಲ್ಲೆಯ ಮೇಲೆ ಗೋಡೆಗೆ ಹಚ್ಚಿದ್ದ ಲಕ್ಷ್ಮಿಯ ಫೋಟೋ ತೆಗೆದು ಒರೆಸಿ ಹೂಮಾಲೆಗಳಿಂದ ಅಲಂಕರಿಸಿ ಪೂಜಿಸುತ್ತ ಬಂದ ಈ ಪೇಟೆಯ ಪದ್ಧತಿಗೆ ಅಲ್ಲೇ ಪಕ್ಕದಲ್ಲಿರುವ ಹೂವಿನಂಗಡಿಯ ನೀಲವ್ವ ಸಹ ಅತ್ಯಂತ ಉತ್ಸಾಹದಿಂದಲೇ ತೊಡಗಿಕೊಂಡಿದ್ದವಳು.

ಪಕ್ಕದ ಸ್ಟೇಷನರಿ ಅಂಗಡಿಯ ವೀರಣ್ಣ, ಇಂದಿನ ಪೂಜೆಗಾಗಿ ಹೂ ಕೊಳ್ಳುವುದು ಒತ್ತಟ್ಟಿಗಿರಲಿ, ಆವೇಶ ತುಂಬಿಕೊಂಡು ಬಂದು ಸಿಕ್ಕಾಪಟ್ಟೆ ಒದರಾಡಿ ಹೋದ ಆತಂಕಕ್ಕೆ ನೀಲವ್ವ ಆ ಕ್ಷಣ ಇಳಿದೇ ಹೋಗಿದ್ದಳು. ಎಷ್ಟು ಬೇಡಿಕೊಂಡರೂ ವೀರಣ್ಣ ನಂಬುವುದಿರಲಿ ಅವಳ ಮಾತಿಗೆ ಕಿವಿಗೊಡಲೇ ತಯಾರಿರಲಿಲ್ಲ. ಆದದ್ದು ಇಷ್ಟೇ. ವೀರಣ್ಣನ ಶಾಂತಿಕಾ ಫ್ಯಾನ್ಸಿಯ ಹಿಂದಿನ ಬಾಜು ಇರುವ 'ಕಿಶನ್ ಕಿಡ್ಸ್

## ಶ್ರೇಣಿ

ನಿಶ್ಶಬ್ದ,
ಏಕಶಬ್ದ,
ಏಕಾಕ್ಷರ,
ಏಕ ವಾಕ್ಯ...
ಮಹಾಕಾವ್ಯ :
ಹೀಗುಂಟು ಕಾವ್ಯಶ್ರೇಣಿ !

ಪಿ.ಪಿ.ಕೆ.
ಮೈಸೂರು

ವೇರ್'ನ ಮಾಲಿಕ ಅರವತ್ತರ ಹೊಸ್ತಿಲಲ್ಲಿರುವ ಸೇಟ್ಜಿ, ಅಂದು ನಡುರಾತ್ರಿಯೇ ಹಾಸಿಗೆಯಿಂದ ಎದ್ದೇಳದೇ ಅಲ್ಲೇ ತೀವ್ರ ಹೃದಯಾಘಾತವಾಗಿ ತೀರಿಹೋಗಿದ್ದರು. ವಿಷಯ ತಿಳಿದದ್ದೇ ದಿಗಿಲುಗೊಂಡು ಈ ಜನತಾ ಬಜಾರಿನ ಎಲ್ಲ ಅಂಗಡಿಕಾರರು ಸೇರಿ ಮಾತಾಡಿಕೊಂಡು ಆವತ್ತು ತಮ್ಮ ತಮ್ಮ ಅಂಗಡಿಗಳ ಬಾಗಿಲು ಹಾಕಿದವರೇ ಎದುರು ಹೂವಿನಂಗಡಿಯ ನೀಲವ್ವನ ಹತ್ತಿರವಿದ್ದ ಸೇವಂತಿಗೆ ಮಾಲೆಗಳನ್ನೂ ಕಾಗದದಲ್ಲಿ ಕಟ್ಟಿಸಿಕೊಂಡು, ಸೇಟ್ಜೀಯ ಅಂತ್ಯ ಸಂಸ್ಕಾರಕ್ಕೆ ತೆರಳಿದ್ದರು.

ಸೇಟ್ಜೀಯ ಸಂಬಂಧಿಕರು ಪರಿಚಿತರು ಸ್ನೇಹಿತರು ಹಾಗೂ ಈ ಅಂಗಡಿಕಾರರು ಇವರೆಲ್ಲ ಗೌರವಾರ್ಥವಾಗಿ ಕೈಯಲ್ಲಿ ಹಿಡಿದು ಬಂದ ಹೂ ಮಾಲೆಗಳ ರಾಶಿಯೇ ಸೇಟ್‌ಜೀಯವರ ದೇಹವನ್ನು ಅಖಂಡವಾಗಿ ಅಲಂಕರಿಸಿತ್ತು. ವೀರಣ್ಣನೂ ಅಂದು ಎಲ್ಲರಂತೆ ತಾನೂ ಒಂದು ಮಾಲೆ ಹಿಡಿದು ಹೋಗಿ ಸೇಟ್ಜೀಯವರಿಗೆ ಮನಸ್ಸಿನಲ್ಲೇ ವಂದಿಸಿ ಸುಮ್ಮನೆ ನಿಂತುಳಿದ. ಮಧ್ಯಾಹ್ನ ಎರಡರ ಹೊತ್ತಿಗೆ ದೂರದ ಗುಜರಾತಿನಲ್ಲಿದ್ದ ಸೇಟ್ಜೀಯವರ ಒಬ್ಬನೇ ಮಗ ವಿಮಾನಿನಲ್ಲೇನೋ ಬಂದಿಳಿದ ನಂತರ ಸಂಸ್ಕಾರದ ಕಾರ್ಯಗಳು ಶುರುವಾದವು. ಅಕ್ಕಪಕ್ಕದ ಅಂಗಡಿಕಾರರೆಲ್ಲ ಮಣ್ಣಿಗೆ ಹೋಗುವ ವಿಚಾರವಾಗಿ ಮಾತಾಡಿದಾಗ ಎಲ್ಲರಂತೆ ತಾನೂ ಒಪ್ಪಿಕೊಂಡ ವೀರಣ್ಣ ಅವರ ಜೊತೆ ನಡೆದ.

ಅಲ್ಲೇ ಹಳೇ ಬಸ್ ನಿಲ್ದಾಣದ ಹಿಂದುಗಡೆಯೇ ಇರುವ ಸ್ಮಶಾನಕ್ಕೆ ಅವರನ್ನು ಹೊತ್ತೊಯ್ದು, ಅಂತ್ಯಸಂಸ್ಕಾರದ ಕ್ರಿಯಾವಿಧಾನಗಳನ್ನು ಮಾಡಲು ಸೇಟ್ಜೀಯವರ ದೇಹವನ್ನು ಒಂದು ಮರದಡಿಯ ನೆರಳಿನಲ್ಲಿರಿಸಿ ಅವರ ಮೈಮೇಲೆ ಎತ್ತರಕ್ಕೆ ರಾರಾಜಿಸುತ್ತಿದ್ದ ನಾನಾ ವಿಧದ ಹೂವಿನ ಗಂಧದ ಮಾಲೆಗಳನ್ನೂ, ಬೊಕ್ಕೆಗಳನ್ನೂ ಎತ್ತಿ ಅದೇ ಮರದ ಬುಡದಲ್ಲಿ ಬಿಸಾಕಲಾಯಿತು. ಸ್ವಲ್ಪ ಹೊತ್ತಿನ ನಂತರ ಹತ್ತು ಹನ್ನೆರಡರ ವಯಸ್ಸಿನ ಮೂರ್ನಾಲ್ಕು ಜನ ಪೋರರು ಓಡಿ ಬಂದು ಅಲ್ಲಿ ಎತ್ತಿ ಹಾಕಿದ ಎಲ್ಲ ಹೂವಿನ ಮಾಲೆಗಳನ್ನೂ ಬಾಚಿಕೊಂಡು ಎತ್ತೊಯ್ದದ್ದು ವೀರಣ್ಣನಿಗೆ ಮಾತ್ರ ಕಂಡಿತು. ಈ ಹೂವನ್ನ ಇವರೆಲ್ಲ ಏನು ಮಾಡುತ್ತಾರೋ ಎಂದು ಯೋಚಿಸುವ ಹೊತ್ತಿನಲ್ಲಿ ಉಳಿದೆಲ್ಲರೂ ಆ ಬದಿ ತಿರುಗಿ ನಿಂತು ಗಂಭೀರವಾಗಿ ಸೇಟ್ಜೀಯ ಮಗ ಮಾಡುತ್ತಿದ್ದ ವಿಧಿ ವಿಧಾನಗಳನ್ನು ನೋಡುವಲ್ಲೇ ತಲ್ಲೀನರಾಗಿದ್ದರು.

ಹಾಗೆ ಹೂಗಳನ್ನು ಬಾಚಿಕೊಂಡು ಓಡಿದ ಹುಡುಗರಲ್ಲಿ ಒಬ್ಬನ ಮುಖ ಮಾತ್ರ ವೀರಣ್ಣನಿಗೆ ತೀರ ಪರಿಚಿತವಾಗಿ ಕಂಡುಬಿಟ್ಟಿತು. ತನ್ನ ಅಂಗಡಿಯೆದುರಿನ ಹೂವಿನಂಗಡಿಯ ನೀಲಮ್ಮನ ತಮ್ಮ ಬಸ್ಯಾ ಎಂದು ವೀರಣ್ಣ ತಕ್ಷಣ ಗುರುತಿಸಿಬಿಟ್ಟದ್ದೇ ಎಂಥದೋ ತಳಮಳ ಅವನನ್ನು ಕಾಡತೊಡಗಿತು. ಇನ್ನೊಮ್ಮೆ ಸರಿಯಾಗಿ ನೋಡಗೊಡದೇ ಅವ ಮುಖ ತಿರುವಿ ಓಡಿಬಿಟ್ಟಿದ್ದ. ಹೌದು ಅವನೇ ಅಂತ ಯಾಕೋ ವೀರಣ್ಣನಿಗೆ ತೀವ್ರವಾಗಿ ಅನಿಸಿಹೋಯಿತು. ಯಾಕೆಂದರೆ ವೀರಣ್ಣ ಹೂವಿನ ಬಜಾರಿನಲ್ಲಿ ಐದಾರು ಅಂಗಡಿಗಳಿದ್ದರೂ ಯಾವಾಗಲೂ ನೀಲವ್ವನ ಬಳಿಯೇ ಹೂ ಕೊಳ್ಳುತ್ತಿದ್ದ. ಅವಳೂ ಅಷ್ಟೇ ಅಕ್ಕರೆಯಿಂದ ಯಣ್ಣಾ ಅಂತ ಕರೆಯುತ್ತ, ವೀರಣ್ಣನ ಅಂಗಡಿಯಲ್ಲಿ ನಡೆವ ಇಂಥ ದೀಪಾವಳಿ ಹಬ್ಬದ ಲಕ್ಷ್ಮೀಪೂಜೆಗಂತೂ ಅವಳೇ ಸೇವಂತಿಗೆ ಮಾಲೆಗೆ ಮಧ್ಯೆ ಕೆಂಪು ಡೇರೆಗಳನ್ನು ಹಾಕಿ ಮನೋಹರವಾಗಿ ಕಟ್ಟಿ ಅಲಂಕರಿಸುವದಿತ್ತು. ಆಗೆಲ್ಲ ದುಡ್ಡಿನ ಮುಖ ನೋಡುತ್ತಿರಲಿಲ್ಲ. ವೀರಣ್ಣನೂ ತನ್ನ ಮಗನ ನಾಮಕರಣದ ದಿನ ತೊಟ್ಟಿಲನ್ನು ಶೃಂಗರಿಸಲು ಕೂಡ ನೀಲವ್ವನ ಅಂಗಡಿಯಿಂದಲೇ ಹೂ ಮಾಲೆ ಒಯ್ದಿದ್ದ.

ಹಾಗೆ ತೆಗೆದೊಗೆದ ಶವದ ಮೇಲಿನ ಮಾಲೆಗಳನ್ನು ಬಾಚಿ ಓಡುತ್ತಿದ್ದ ಬಸ್ಯಾನ ಚಿತ್ರ ವೀರಣ್ಣನ ಚಿತ್ತದಲ್ಲಿ ನೆಟ್ಟಿದ್ದೇ ತಕ್ಷಣ ಮೈ ಮನಸ್ಸೆಲ್ಲ ಆಡಲೂ ಬಾರದ ಆತಂಕದಲ್ಲಿ ಸಿಲುಕಿಕೊಂಡಿತ್ತು. ಹೆಂಡತಿಯ ಬಳಿ ಮಾತ್ರ ತಡೆಯಲಾರದೇ ಸೇಟ್ಜೀಯವರ ಸಂಸ್ಕಾರ ಮುಗಿಸಿ ಬಂದು ಸ್ನಾನದ ನಂತರ ಊಟಕ್ಕೆ ಕೂತಾಗ, ಗುಟ್ಟಾಗಿ ಈ ಹೂವಿನಂಗಡಿಯ ನೀಲವ್ವನ ತಮ್ಮ ಬಾಚಿಕೊಂಡು ಓಡಿದ ಹೂವಿನ

• ಶಾಸಕರ ರೆಸಾರ್ಟ್‌ವಾಸ •




ಸಾರ್-ಇಂಥದ್ದೊಂದು ರೆಸಾರ್ಟ್ ಕಟ್ಟಿಸಿಕೊಡಿ ಖಾಯಂಮ್ಮಾಗಿ ನಿಮ್ಮ ಪಕ್ಷದಲ್ಲೇ ಇರ್ತೀನಿ...

ವಿಚಾರವಾಗಿ ಹೇಳಿದ್ದ. ಅವಳೂ ಅದಕ್ಕೆ ಒಮ್ಮೆಲೇ ತಲೆಕೆಟ್ಟು ನಿಂತು ಅಯ್ಯೋ ಎಂಬ ಉದ್ಗಾರದೊಂದಿಗೆ ''ನೀವು ಮಾತ್ರ ಅವಳ ಅಂಗಡಿಯ ಹೂವನ್ನು ಇನ್ನು ಮುಂದೆ ಕೊಳ್ಳಲು ಹೋಗಬೇಡಿ'' ಎಂಬ ತೀರ್ಮಾನವನ್ನು ಮುಗ್ಧವಾಗಿಯೇ ಕೊಟ್ಟುಮುಗಿಸಿದ್ದಳು. ಅಂದರೆ 'ಬೇರೆಯವರು ಗೊತ್ತಿಲ್ಲದೇ ಕೊಂಡರೆ ಕೊಳ್ಳಲಿ' ಎಂಬ ಅರ್ಥ ಬರುವಂತೆ ಹೇಳಿದಳೇ ಎಂಬುದನ್ನೂ ಅವನು ಗಮನಿಸಿದ. ಯಾವುದು ತಪ್ಪು ಯಾವುದು ಸರಿ ಎಂಬ ಯೋಚನೆಯೇ ಅವನನ್ನು ಗೊಂದಲದಲ್ಲಿ ನೂಕಿತ್ತು. ನೀಲವ್ವ ಎಲ್ಲಿಂದ ಹೂಗಳನ್ನು ತಂದು ಇಲ್ಲಿ ಮಾರುತ್ತಾಳೆಂದೇ ಅವನಿಗೆ ಇಂದಿನವರೆಗೆ ಕೇಳುವ ಪ್ರಸಂಗವೇ ಬಂದಿರಲಿಲ್ಲ. ಅದು ಅಷ್ಟು ಮಹತ್ವದ್ದು ಅಂತಲೂ ಅವನಿಗೆ ಅನಿಸಿರಲಿಲ್ಲ.

ಹೊಸೂರಿನ ಕುಲಕರ್ಣಿ ಚಾಳದ ತನ್ನ ಎರಡೇ ಖೋಲಿಯ ಬಿಡಾರದಲ್ಲಿರುವ ಮೂವತ್ತರ ಹರೆಯದ ಈ ವೀರಣ್ಣ, ತನ್ನ 'ಶಾಂತಿಕಾ ಫ್ಯಾನ್ಸಿ' ಎಂಬ ಸ್ಟೇಷನರಿ ಅಂಗಡಿಯ ಬಾಗಿಲು ತೆರೆಯಲು ಎಂದಿಗಿಂತ ಅವಸರದಲ್ಲಿ ಇಂದು ಆಗಮಿಸಿದ್ದ. ಯಾಕೆಂದರೆ ಸೇಟ್ಜಿ ತೀರಿಹೋದ ದಿನವಾದದ್ದರಿಂದ ವಿಜೃಂಭಣೆಯಿಲ್ಲದೇ ಇಂದು ಸಂಜೆಯೇ ಶಾಸ್ತ್ರಕ್ಕಾದರೂ ಲಕ್ಷ್ಮೀ ಫೋಟೋಕ್ಕೆ ಸುಮ್ಮನೇ ಒಂದು ಕರ್ಪೂರದ ಆರತಿ ಮಾಡಿ ಮುಗಿಸಬೇಕಿತ್ತು. ಅತ್ತ ಸೇಟ್ಜೀಯವರಿಲ್ಲದ 'ಕಿಶನ್ ಕಿಡ್ಸ್ ವೇರ್' ಅನಾಥವಾದಂತೆ ತೋರಿತು. ಆದರ ಹಿಂದೆಯೇ ಎದುರಿನ ಹೂವಿನಂಗಡಿಯ ನೀಲವ್ವನ ತಮ್ಮ ಬಸು ನೆನಪಾಗಿಬಿಟ್ಟ. ಅಂಗಡಿ ಬಾಗಿಲು ತೆರೆವಾಗಲೇ ವೀರಣ್ಣನಿಗೆ ಅದೇ ದೃಶ್ಯ ಇನ್ನೊಮ್ಮೆ ಕಣ್ಣ ಮುಂದೆ ಹಾದುಹೋಯಿತು. ಅದೇ ಅಚ್ಚರಿಯಿಂದ ವೀರಣ್ಣನ ದೃಷ್ಟಿ ನೀಲವ್ವನ ಹೂವಿನಂಗಡಿ ಬದಿಯೂ ಹೊರಳಿತು. ಅಲ್ಲಿ ಅಡ್ಡ ಕಟ್ಟಿದ್ದ ಬೆತ್ತಕ್ಕೆ ತೂಗು ಹಾಕಿದ ಎಲ್ಲ ಸೇವಂತಿಗೆ ಮಾಲೆಗಳೂ ಅವೇ ಅವೇ ಅನಿಸಲು ಶುರುವಾಗಿಬಿಟ್ಟದ್ದೇ ನಿಂತಲ್ಲೇ ವೀರಣ್ಣ ನಡುಗಿಹೋದ. ಒಳಗೆಲ್ಲೋ ವಿಚಿತ್ರ ಕಸಿವಿಸಿ ಆವರಿಸಿಕೊಂಡಿತು.

ಹೇಗೆ ಕೇಳುವುದು, ಏನು ಹೇಳುವುದು, ಯಾವುದೂ ಒಮ್ಮೆಲೇ ಅವನಿಗೆ ಹೊಳೆಯಲಿಲ್ಲ. ಸುಮ್ಮನೇ ಶಟರ್ಸ್ ಏರಿಸಿ ಒಳಗಿನ ಧೂಳನ್ನೆಲ್ಲ ಝಾಡಿಸಿ ಕಸ ಹೊಡೆದು ಎದುರು ರಸ್ತೆಗೆ ನೀರು ಚಿಮುಕಿಸಿದ. ಆಗಲೇ ಜೋಡಿ ಜೋಡಿ ಹುಡುಗಿಯರು ಕ್ಲಿಪ್ಪು ಬಿಂದೀ ಪ್ಯಾಕೇಟು ಬಾಚಣಿಗೆ ಬಳೆಗಳಿಗಾಗಿ ನಿಧಾನ ಬರಲಾರಂಭಿಸಿದರು.

ಅತ್ತ ನೀಲವ್ವ ಮಾತ್ರ 'ಈ ಯಣ್ಣ ಯಾಕ ಇನ್ನೂ ತನ್ನ ಹಂತ್ಯೇಕ ಹೂವಿಗೆ ಬಂದಿಲ್ಲ, ನಮ್ಮ ಬೀದಿ ಸೇಟ್ಜೀಯವರ ಸಾವಿನ ಸೂತಕ ಆಚರಿಸಾಕ ಹತ್ತೇತೋ ಏನೋ' ಅಂದುಕೊಳ್ಳುತ್ತ ಎದುರು ರಾಶಿ ಹಾಕಿಟ್ಟುಕೊಂಡ ಹಳದೀ ಸೇವಂತಿಗೆ ಬಿಡಿ ಹೂಗಳನ್ನು ತನ್ಮಯಳಾಗಿ ಕಟ್ಟುತ್ತಿದ್ದಳು. ಇಷ್ಟೊತ್ತು ಬರಿ ಹುಡುಗಿಯರೇ ತುಂಬಿ ಹೋಗಿದ್ದ ವೀರಣ್ಣನ ಸ್ಟೇಷನರಿ ಅಂಗಡಿ ಸ್ವಲ್ಪ ಹೊತ್ತಿನ ನಂತರ ಕೊಂಚ ಖಾಲಿಯಾಗಿತ್ತು. ಈ ದಿನ ಯಾವ ಹೂವನ್ನೂ ಏರಿಸದ ಫೋಟೋಗಳನ್ನೇ ಒಮ್ಮೆ ದಿಟ್ಟಿಸಿದ ವೀರಣ್ಣ. ಫೋಟೋದಲ್ಲಿ ಕೂತ ತಂದೆಯ ಮುಖ ವಿಷಾದದಿಂದ ಏನನ್ನೋ ಹೇಳುತ್ತಿರುವಂತೆ ತೋರುತ್ತಿತ್ತು. ಶಾಂತಿಕಾ ಪರಮೇಶ್ವರಿಯ ಮುಖ ಕಪ್ಪಿಟ್ಟಂತಿತ್ತು. ಯಾವುದನ್ನು ಹೇಗೆ ಭರಿಸಬೇಕೋ ತಿಳಿಯದೆ ವೀರಣ್ಣ ಗಲಿಬಿಲಿಗೆ ಬಿದ್ದಿದ್ದ. ಇತ್ತ ನೀಲವ್ವ 'ಈ ಯಣ್ಣ ಈವತ್ತ ಯಾಕೋ ಹೂಮಾಲಿ ಮರತ ಬಿಟ್ಟಾನ' ಅಂತ ಆಗಾಗ ಅಂದುಕೊಳ್ಳುತ್ತ ಅದಾಗ ಬಂದು ಕೂತ ತಮ್ಮ ಬಸುವಿನ ಹತ್ತಿರವಾದರೂ ಹೂಮಾಲಿ ಕೊಟ್ಟು ಕಳಿಸಬೇಕು ಅಂದುಕೊಳ್ಳುತ್ತಲೇ ಸುಮ್ಮನೇ ಕೂತಿದ್ದಳು.

ಇದ್ದಕ್ಕಿದ್ದಂತೆ ವೀರಣ್ಣ, ನೀಲವ್ವನ ಅಂಗಡಿ ಎದುರು ಹೋಗಿ ನಿಂತ. ನೀಲವ್ವ ಅನುದಿನದಂತೆ ''ಯಾಕ ಯಣ್ಣಾ, ಪೂಜಿಗೀಜಿ ಮಾಡಂಗಿಲ್ಲೇನ ?'' ಅನ್ನುತ್ತ ನಿಧಾನ ಎದ್ದು ನಿಂತು ಬೆತ್ತದ ಅಡ್ಡಕೋಲಿಗೆ ಹಾಕಿದ ಮಾಲೆ ತೆಗೆಯತೊಡಗಿದಳು. ವೀರಣ್ಣ ಅವಳನ್ನು ತಡೆಯುತ್ತ ''ಆ ಮಾಲೀ ಬ್ಯಾಡ ತಗಿ, ನೀ ಕಟ್ಟಕೋತ ಕೂತಿದ್ದ ಬಿಡಿ ಹೂವಿಂದನ ಒಂದ ಮಾರು ಅಳತೀದು ಕೊಡು ಸಾಕು'' ಅಂದ ತುಸು ಕೋಪ ದಿಂದಲೇ. ''ಮಾಲೀ ಬ್ಯಾಡಾ ? ಯಾಕೋ ಯಣ್ಣಾ? ದಿನ ಅದ್ನ ಒಯ್ತಿದ್ದೀ ?''

ಅನ್ನುತ್ತ ನೀಲವ್ವ ವೀರಣ್ಣನನ್ನು ಪ್ರಶ್ನಾರ್ಥಕವಾಗಿ ನೋಡಿದಳು. ವೀರಣ್ಣ ಅನುಮಾನದಲ್ಲೇ ''ನೋಡವ್ವಾ ತಂಗೀ, ನಿನಗ ಗೊತ್ತೇತೋ ಗೊತ್ತಿಲ್ಲೋ, ನಿನ್ನ ಈ ತಮ್ಮ ಬಸ್ಯಾ ನಿನ್ನೆ ಸಂಜೀಮುಂದ ಆ ಸೇಟಜೀ ಶವದ ಮ್ಯಾಗಿನ ಮಾಲೀ ಬಾಚಿಕೊಂಡು ಬಂದಿದ್ದನ್ನ ನಾನ ಈ ಕಣ್ಣಾಗ ನೋಡೇನಿ, ಈ ಹೂ ದಿನಾ ನೀ ಎಲ್ಲಿಂದ ತರತೀ ಖರೇ ಹೇಳ ?'' ಅನ್ನುತ್ತ ನಿಂತೇ ಬಿಟ್ಟ. ''ಅಯ್ಯೋ ಯಾಕಣ್ಣ? ಹೀಂಗ ಏನೇನೋ ಹೇಳಿ ನನ್ನ ಹೊಟ್ಟೀ ಮ್ಯಾಗ ಕಲ್ಲ ಹಾಕತೀ'' ಅನ್ನುತ್ತ ಬಸ್ಯಾನನ್ನು ಕೆಕ್ಕರಿಸಿ ನೋಡುತ್ತ ''ಅಯ್ಯೋ ಇವನ ಮನಿ ಹಾಳಾಗಹೋಗ, ಹಲ್ಕಟಭಾಡ್ಯ, ಯಣ್ಣಾ ಹೇಳೂದು ಖರೆವೆನಲೆ ?'' ಕೋಪದಲ್ಲೇ ತಮ್ಮನ ಮೇಲೆ ನೀಲವ್ವ ಪಕ್ಕದಲ್ಲಿ ಇದ್ದ ಬೆತ್ತ ಎತ್ತಿದಳು. ''ಇಲ್ಲಬೇ ಯಕ್ಕ, ನಿನ್ನೆ ನಾ ಶಾಲಿಂದ ಬಂದ ಮ್ಯಾಗ ಮನೀ ಕಡೀನ ಅದೀನಿ, ಈ ಯಣ್ಣಾ ಯಾರೀಗ ನೋಡೀದ್ನೋ ಏನೋ'' ಅನ್ನುತ್ತ ಎದ್ದು ಅಂಗಡಿಯಿಂದ ಓಡಲು ನೋಡಿದ. ಅವನನ್ನು ಎಡಗೈಯಲ್ಲೇ ಹಿಡಿಯುತ್ತ ವೀರಣ್ಣ, ''ಸುಳ್ಳ ಹೇಳತೀಯಾಲೆ ಮಗನ ? ಇದ ಅಂಗಿ ಇದ ಚಡ್ಡೀಲೆ ಇದ್ದೀ ನನ್ನೇನ ಕುಡ್ಡಗಿಡ್ಡ ಅಂತ ಮಾಡಿಯೇನಲೆ ?'' ಅನ್ನುತ್ತ ಬೆನ್ನಿಗೆ ಎರಡು ತದಕಿಯೇ ಬಿಟ್ಟಿದ್ದ.

ಬಸ್ಯಾ ಅನಾಯಾಸ ಬಿದ್ದ ಆ ಹೊಡೆತಕ್ಕೆ ''ಪಾರಜ್ಜಿ ಕಡೀನ ಕೇಳು ಬೇಕಂದ್ರ, ಮುಂಜಾನಿಂದ ನಾ ಎಲ್ಲೂ ಹೋಗಿಲ್ಲಾ'' ಅನ್ನುತ್ತ ದೊಡ್ಡದಾಗಿ ಆರ್ಭಟಿಸುತ್ತ ವೀರಣ್ಣನ ಕೈಯಿಂದ ತಪ್ಪಿಸಿಕೊಂಡು ಓಡಿಬಿಟ್ಟಿದ್ದ. ''ನೋಡ್ರೀ ಯಣ್ಣಾ, ಯಾರ್ನರ ನೋಡಿ ಇಂವನ ಅಂತ ಭಾವಸೀರಿ, ಹೆಣಗಿಣ ಸತ್ತಮಂದಿ ಅಂದ್ರನ ಹೆದ್ರಕೋತನ ನನ ತಮ್ಮ, ಇರಲಿ ಬಿಡ್ರಿ, ನಾ ಮಾತ್ರ ಗಾಡೀಯೊಳಗ ತರೋ ಹೂವಲ್ಲದ ಮತ್ತ ಯಾರ ತಂದ ಕೊಟ್ಟ ಹೂನೂ ಮಾರಂಗಿಲ್ಲ, ಅಂವ ಅಂಥಂವ ಅಲ್ಲರೀ, ನನ್ನ ನಂಬರಿ ಯಣ್ಣಾ, ಅವ್ವ ಇಲ್ಲ ಅಂತ ಅಚ್ಛಾ ಮಾಡಿ ಬೆಳಸಿದ್ದಕ್ಕ ಹೀಂಗ ಒಂಚೂರು ಖಬರಗೇಡಿ ಆಗ್ಯಾನ ಅಷ್ಟ, ನಿಮ್ಮ ಕಾಲ ಹಿಡಕೋತೇನಿ, ಇದನ್ನ ಮಾತ್ರ ಯಾರ ಮುಂದೂ ಹೇಳಕ ಹೋಗಬ್ಯಾಡ್ರೀ ಯಣ್ಣಾ'' ಅನ್ನುತ್ತ ಒಮ್ಮೆಲೇ ನೀಲವ್ವನೂ ಚಡಪಡಿಸಿದಳು.



ಮಂತ್ರಿಗಳೆ... ಯಾವುದಾದರೊಂದು ಹಗರಣದಲ್ಲಿ ಸಿಕ್ಕಿದ್ದು ನನ್ ಹತ್ರಾ ಬನ್ನಿ. ನಿಮ್ಮಲ್ಲಿರೊ ಎಲ್ಲಾ ರೋಗಗಳನ್ನ ಹೊರಗೆ ಹಾಕ್ತೀನಿ...

ನೀಲವ್ವ ಆತಂಕದಿಂದಲೇ ಮೆಲ್ಲಗೆ ಕೈಯೂರಿ ಕೂತು ತಾನು ಕಟ್ಟುತ್ತಿದ್ದ ಮಾಲೆಯಲ್ಲೇ ಒಂದು ಮಾರು ಓಡಿದು, ಅದಕ್ಕೆ ಇನ್ನೊಂದು ಗೇಣು ಹೆಚ್ಚಿಗೆ ಸೇರಿಸಿ, ಪಕ್ಕ ಇರಿಸಿಕೊಂಡ ಸಣ್ಣ ಕತ್ತರಿಯಿಂದ ಕತ್ತರಿಸಿ, ವೀರಣ್ಣನ ಬೊಗಸೆಗೆ ಹಾಕಿ, ''ಯಣ್ಣ, ಗಿರಾಕಿ ಮುಂದ ಹೀಂಗ ನಂದೂ ನನ ಅಂಗಡೀದು ನನ ಹೂವಿಂದು ಮಾನಾ ತೆಗೀ ಬ್ಯಾಡ್ರೀಯಪ್ಪ'' ಅನ್ನುತ್ತ ಅಂಗಲಾಚಿದಳು. ವೀರಣ್ಣ ಸಿಟ್ಟಿನಿಂದ ದುಮುಗುಡುತ್ತಲೇ ಹೋದ. ನೀಲವ್ವ ಐದಾರು ವರ್ಷದಿಂದ ವ್ಯಾಪಾರ ಮಾಡುತ್ತಿದ್ದ ತನ್ನ ದಂಧೆಗೇ ಹೀಂಗ ಒಮ್ಮೆಗೇ ನಂಬಲೇ ಆಗದ ಮಸಿ ಅಂಟಿಕೊಂಡಿದ್ದಕ್ಕ ಮರುಗುತ್ತ ಇನ್ನಷ್ಟು ಆವೇಶದಲ್ಲಿ ಹೂ ಕಟ್ಟಿದಳು. ಬಜಾರು ಪೂಜೆ ಪುನಸ್ಕಾರ ಗಂಟೆ ಜಾಗಟೆ ಸದ್ದಿನಿಂದ, ಅಗರಬತ್ತಿ ಕರ್ಪೂರಗಳ ಸುವಾಸನೆಯಿಂದ, ಝಗಮಗಿಸುವ ವಿದ್ಯುದ್ದೀಪಗಳಿಂದ ಬೆಳಗುತ್ತಿತ್ತು. ನೀಲವ್ವನೂ ತನ್ನ ಅವ್ವನ ಫೋಟೋಕ್ಕೆ ಸಣ್ಣ ಮಾಲೆ ಹಾಕಿ ಕೈ ಮುಗಿದಳು.

ವೀರಣ್ಣನ ಕ್ಷಣ ಚಿತ್ತದ ವಿಲಕ್ಷಣ ಕೂಗಾಟ ಆ ಸಂಜೆಪೇಟೆಯ ಗದ್ದಲದಲ್ಲಿ ಕಳೆದೇಹೋಗಿತ್ತು. ವೀರಣ್ಣ ತುಚ್ಛವಾಗಿ ಮಾತಾಡಿ ಮುಟ್ಟದೇ ಬಿಟ್ಟು ಹೋದ ಆ ಮಾಲೆಗಳು ಎಂದಿಗಿಂತ ಹಸಿ ಹಸಿಯಾಗಿ ಕಂಗೊಳಿಸುತ್ತಿದ್ದವು. ಅಂದಿಡೀ ದಿನ ಎಡಬಿಡದೇ ನೀಲವ್ವನ ಚಾಲಾಕಿ ಕೈ ಬೆರಳುಗಳು ಒಪ್ಪ ಓರಣವಾಗಿ ಕಟ್ಟಿದ ಹಳದೀ ಸೇವಂತಿಗೆ ಮಾಲೆ ಇಡೀ ಪೇಟೆಯನ್ನೂ ತನ್ನಲ್ಲೇ ಬಂಧಿಸಿದಂತಿತ್ತು. ಮಾರನೇ ದಿನ ಅವಳ ಅಂಗಡಿಯಲ್ಲಿ ತೂಗುಬಿಟ್ಟ ಹಳದೀ ಮಾಲೆಗಳು ವೀರಣ್ಣನ ಅಂಗಡಿಯೊಂದನ್ನು ಹೊರತುಪಡಿಸಿ, ಅಕ್ಕಪಕ್ಕದ ಸಾಲು ಸಾಲು ಅಂಗಡಿಯ ದೇವರ ಫೋಟೋಗಳ ಮೇಲೆ ನೇತಾಡಿದವು. ಮೊದಲ ದಿನದ ಬಾಡಿ ಹೋದ ಮಾಲೆಗಳು ಯಥಾಪ್ರಕಾರ ಕಸದ ಬುಟ್ಟಿ ಸೇರಿದವು. ನೀಲವ್ವ ತಮ್ಮನನ್ನು ''ಅಂಗಡೀ ಕಡೆ ತಲೀ ಹಾಕಿದೀಯಂದ್ರ ಕಾಲ ಮುರಿತೀನಿ, ನಡೀ ಶಾಲೀಗೆ'' ಅಂತ ಗದರಿ ಗದರಿ ಅಟ್ಟಿದಳು. ವೀರಣ್ಣ ಎಂಥದೋ ಬಂಧನದೊಳಗೆ ಇನ್ನೂ ತಳಮಳಿಸುತ್ತಲೇ ಇದ್ದ.

ಸುನಂದಾ ಪ್ರಕಾಶ ಕಡಮೆ
ನಂ. ೯೦, ಕಾಳಿದಾಸ ನಗರ, ಹುಬ್ಬಳ್ಳಿ - ೫೮೦೦೩೧

## ಚಿತ್ರ ಸುದ್ದಿ

*ದಿನಾಂಕ ೨-೧೨-೨೦೧೦ರಂದು ಕನ್ನಡ ಸಾಹಿತ್ಯ ಪರಿಷತ್ತಿನಲ್ಲಿ ನಡೆದ ಸಮಾರಂಭದಲ್ಲಿ, ನವಕರ್ನಾಟಕ ಸಂಸ್ಥೆಗೆ ೨೦೧೦ರ ಅತ್ಯುತ್ತಮ ಪ್ರಕಾಶನ ಪ್ರಶಸ್ತಿ ಅಂಕಿತ ಪುಸ್ತಕ ಪುರಸ್ಕಾರ ನೀಡಲಾಯಿತು. ಚಿತ್ರದಲ್ಲಿ ಎಡದಿಂದ ಬಲಕ್ಕೆ ಡಾ|| ವಿಜಯಾ, ಡಾ|| ಸಿದ್ಧಲಿಂಗಯ್ಯ, ಪ್ರೊ|| ಮಲ್ಲೇಪುರಂ ಜಿ. ವೆಂಕಟೇಶ್, ಶ್ರೀ ಪ್ರಕಾಶ ಕಂಬತ್ತಳ್ಳಿ ಮತ್ತು ಡಾ|| ಆರ್. ಕೆ. ನಲ್ಲೂರು ಪ್ರಸಾದ್. ನವಕರ್ನಾಟಕದ ಪರವಾಗಿ ಶ್ರೀ ಎ. ಆರ್. ಉಡುಪ ಪ್ರಶಸ್ತಿ ಸ್ವೀಕರಿಸಿದರು.*



# OUR ADVERTISERS

# OUR ADVERTISERS

ಭೂದೃಶ್ಯ - ಹಳ್ಳಿಯ ಒಂದು ದೃಶ್ಯ





ಭೂದೃಶ್ಯ - ರೇಖಾಚಿತ್ರ. ಧಾರವಾಡದ ಒಂದು ಮನೆಯ ಚಿತ್ರ

ಭೂದೃಶ್ಯ - ರೇಖಾಚಿತ್ರ. ಧಾರವಾಡದ ಒಂದು ಮನೆಯ ಚಿತ್ರ



ಭೂದೃಶ್ಯ - ಹಳ್ಳಿಯ ಒಂದು ಮನೆ



ಭೂದೃಶ್ಯ - ಜಲವರ್ಣ



# ಯುವಪ್ರತಿಭೆ ಅಶೋಕ್ ಯು.

# ಕುಂಚಕಲೆಯಲ್ಲಿ ಪ್ರಕೃತಿಯ ಆರಾಧನೆ

ರೇಖಾಚಿತ್ರ, ವರ್ಣ ಮಾಧ್ಯಮಗಳಲ್ಲಿ ವಿಶೇಷವಾಗಿ ಪ್ರಕೃತಿ, ಭೂದೃಶ್ಯಗಳನ್ನೇ ಚಿತ್ರಿಸುವ ಚಿತ್ರಕಲಾವಿದ ಅಶೋಕ್. ಯು. ಅವರು ಕುಂಚಕಲೆಯ ಕ್ಷೇತ್ರದಲ್ಲಿ ಭರವಸೆಯ ಯುವ ಪ್ರತಿಭೆ. ಕಲಾಸಕ್ತರನ್ನು ಮೊದಲ ನೋಟಕ್ಕೇ ಆಕರ್ಷಿಸುವ 'ದೃಶ್ಯಭಾಷೆ'. ಅವರ ಕಲಾಕೃತಿಗಳಲ್ಲಿದೆ. ರೇಖೆ, ಬಣ್ಣಗಳ ರಸಾನುಭವ, ಕಲಾ ಸಂಯೋಜನೆಯ ಬೆಡಗನ್ನು ಅವರ ಕೃತಿಗಳಲ್ಲಿ ಆಸ್ವಾದಿಸಬಹುದು. ಕವಿಯೊಬ್ಬರ ಮಧುರ ಗೀತೆಗಳಂತೆ ಹಿತವಾದ ಅನುಭವ ಅಶೋಕ್ ಅವರ ಭೂದೃಶ್ಯ ಕಲಾಕೃತಿಗಳಲ್ಲಿವೆ.

ಪ್ರಸ್ತುತ ಬೆಂಗಳೂರಿನಲ್ಲಿರುವ ಅಶೋಕ್. ಯು ಅವರು ಬಳ್ಳಾರಿಯ ಭವಾನಿ ಫೈನ್ ಆರ್ಟ್ ಕಾಲೇಜಿನಲ್ಲಿ ಡ್ರಾಯಿಂಗ್ ಡಿಪ್ಲೋಮಾ, ೨೦೦೦ದಲ್ಲಿ ಬೆಂಗಳೂರಿನ ಕೆನ್ ಆರ್ಟ್ ಸ್ಕೂಲಿನಲ್ಲಿ ಪೇಂಟಿಂಗ್ ಡಿಪ್ಲೋಮಾ ಹಾಗೂ ೨೦೦೯ರಲ್ಲಿ ಧಾರವಾಡದ ಸೃಜನಾ ಕಲಾನಿಕೇತನದ ಮೂಲಕ 'ಬಿ.ಎಫ್.ಎ.' ಪದವಿ ಪಡೆದವರು.

೨೦೦೩ರಲ್ಲಿ ರಾಜ್ಯ ಮಟ್ಟದ ೭೬ನೇ 'ಅಫಿಕ್ಸ್' ಅವಾರ್ಡ್ ಇವರಿಗೆ ದೊರಕಿದೆ. ಕರ್ನಾಟಕದ ಲಲಿತಕಲಾ ಅಕಾಡೆಮಿಯು ಬೆಂಗಳೂರಿನಲ್ಲಿ ಆಯೋಜಿಸಿದ ಹಲವಾರು ಪ್ರದರ್ಶನಗಳಲ್ಲಿ ಇವರ ಕಲಾಕೃತಿ ಪ್ರದರ್ಶನಗೊಂಡಿದೆ. ಮೈಸೂರು ದಸರಾ, ಹಂಪಿ ಉತ್ಸವ, ಕಲಾಮೇಳಗಳಲ್ಲಿ ಚಿತ್ರಗಳ ಪ್ರದರ್ಶನವಾಗಿದೆ.

• ಜಿ. ಎಂ. ಬೊಮ್ನಳ್ಳಿ, ಬೊಮ್ನಳ್ಳಿ, ತಾ: ಶಿರಸಿ (ಉ.ಕ) - ೫೮೧ ೪೦೨

Printed by R. S. Rajaram at Navakarnataka Printers, No. 167 & 168, 10th Main, III Phase, Peenya Industrial Area, Bangalore - 560 058 and Published by him for Navakarnataka Publications (P) Ltd. Embassy Centre, Crescent Road, P. B. 5159, Bangalore - 560 001, Editor : Dr. G. Ramakrishna

